ಶ್ರೀವ್ಯಾಸರಾಜಗುರುಸಾರ್ವಭೌಮರಿಂದ ವಿರಚಿತ

# ಭೇದೋಜ್ಜೀವನ

(ಮೂಲ ಹಾಗೂ ಕಾಶಿಕಾಟಿಪ್ಪಣಿ ಅನುವಾದಸಹಿತ)

ಅನುವಾದಕರು

ವಿದ್ವಾನ್ ಹಯವದನ ಪುರಾಣಿಕರು

ಪ್ರಕಾಶಕರು

ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ

ಶ್ರೀರಾಘವೇಂದ್ರಸ್ವಾಮಿಗಳವರ ಮಠ,

ಮಂತ್ರಾಲಯಂ–518345

2016

ಶ್ರೀವ್ಯಾಸರಾಜಗುರುಸಾರ್ವಭೌಮರಿಂದ ವಿರಚಿತ

# ಭೇದೋಜ್ಜೀವನ

(ಮೂಲ ಹಾಗೂ ಕಾಶಿಕಾಟಿಪ್ಪಣಿ ಅನುವಾದಸಹಿತ)

ಅನುವಾದಕರು

ವಿದ್ವಾನ್ ಹಯವದನ ಪುರಾಣಿಕರು

ಪ್ರಕಾಶಕರು

ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ

ಶ್ರೀರಾಘವೇಂದ್ರಸ್ವಾಮಿಗಳವರ ಮಠ,

ಮಂತ್ರಾಲಯಂ–518345

2016

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ॥



ಸ್ವಸ್ತಿಶ್ರೀ ವಿಜಯಾಭ್ಯುದಯ ಗತಶಾಲಿವಾಹನಶಕೆ 1938 ನೇ
ಶ್ರೀದುರ್ಮುಖಿನಾಮ ಸಂವತ್ಸರ ಶ್ರಾವಣಮಾಸ ಶುಕ್ಲಪಕ್ಷ ನವಮಿ ಶುಕ್ರವಾರ ದಿನಾಂಕ 12.08.2016
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿ ವೇದವ್ಯಾಸದೇವ ದಿವ್ಯ ಶ್ರೀಪಾದಪದ್ಮಾರಾಧಕ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾನಾಧೀಶ್ವರರಾದ
ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಶ್ರೀಮತ್ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

# 1008 ಶ್ರೀ ಶ್ರೀಮತ್ಸುಬುಧೇಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹಸಂದೇಶ

ಮುನಿತ್ರಯದಲ್ಲಿ ಒಬ್ಬರಾದ ಶ್ರೀವ್ಯಾಸರಾಜಗುರುಸಾರ್ವಭೌಮರು ಬರೆದ ಗ್ರಂಥಗಳು ವಿದ್ವತ್ಪ್ರಪಂಚದಲ್ಲಿ ವಿಶಿಷ್ಟಸ್ಥಾನವನ್ನಲಂಕರಿಸಿವೆ. ಅವರಿಂದ ರಚಿತವಾದ ತರ್ಕತಾಂಡವ, ಚಂದ್ರಿಕಾ, ನ್ಯಾಯಾಮೃತವೆಂಬ ಮೂರು ಗ್ರಂಥಗಳು ಶ್ರೀನರಸಿಂಹದೇವರ ಮೂರು ಕಣ್ಣುಗಳಂತೆ ಪ್ರಸಿದ್ಧವಾಗಿವೆ ಎಂದು ಶ್ರೀವಾದೀಂದ್ರತೀರ್ಥರು ಗುರುಗುಣಸ್ತವನದಲ್ಲಿ ವರ್ಣಿಸಿರುತ್ತಾರೆ.

ಪ್ರಕೃತ ಭೇದೋಜ್ಜೀವನವೆಂಬ ಅವರ ಕೃತಿಯು ಶ್ರೀಮನ್ಮಧ್ವಮತದ ಪಂಚಭೇದಗಳನ್ನು ಸಮರ್ಥನೆ ಮಾಡಲು ರಚಿತವಾಗಿದೆ. ಆಕಾರದಲ್ಲಿ ಪುಟ್ಟದಾದರೂ ತ್ರಿವಿಕ್ರಮನಂತೆ ಅರ್ಥ ಗಾಂಭೀರ್ಯ ವುಳ್ಳದ್ದಾಗಿದೆ. ನವೀನನ್ಯಾಯಶೈಲಿಯಲ್ಲಿ ರಚಿತವಾದ ಈ ಕೃತಿಯಲ್ಲಿ ಅಭೇದವನ್ನು ಹೇಳುವ ಮತಗಳ ಅತ್ಯಂತರಹಸ್ಯ ವಿಚಾರಗಳನ್ನು ವ್ಯಕ್ತಪಡಿಸಿ ನಿರಾಕರಿಸಿರುತ್ತಾರೆ. ಇವರ ಪಾಂಡಿತ್ಯಪೂರ್ಣವಾದ ಈ ಗ್ರಂಥವನ್ನು ಕಂಡ ಪ್ರತಿಯೊಬ್ಬ ವಿದ್ವಾಂಸರೂ ಅದನ್ನು ಅಧ್ಯಯನ ಮಾಡಿ ಶಿರಸಾ ಇವರಿಗೆ ಗೌರವವನ್ನು ಸಲ್ಲಿಸುತ್ತಾರೆ. ಪ್ರಾಚೀನ ಗ್ರಂಥಗಳ ಅಧ್ಯಯನ ಪರಂಪರೆಯು ನಷ್ಟವಾಗುತ್ತಿರುವ ಈ ಸಂದರ್ಭದಲ್ಲಿ ಆ ಗ್ರಂಥಗಳನ್ನು ವಿವಿಧಭಾಷೆಗಳಲ್ಲಿ ಅನುವಾದಿಸುವುದ-ರಿಂದ ಅನುವಾದಿತಕೃತಿಗಳ ಮೂಲಕವಾದರೂ ಅಧ್ಯಯನವು ಮುಂದುವರೆಯಲಿ ಎಂಬ ಸದುದ್ದೇಶದಿಂದ ನಾವು ಪ್ರಾಚೀನಗ್ರಂಥಗಳ ಅನುವಾದಕಾರ್ಯಕ್ರಮವನ್ನು ವಿದ್ವಾಂಸರಿಂದ ಮಾಡಿಸಿ ಪ್ರಕಾಶನಗೊಳಿಸುವ ಯೋಜನೆಯನ್ನು ಹಾಕಿಕೊಂಡಿರುತ್ತೇವೆ. ಈ ನಿಟ್ಟಿನಲ್ಲಿ ನಮ್ಮ ಶ್ರೀಮಠದ ಆಸ್ಥಾನ ವಿದ್ವಾಂಸರೂ, ಉತ್ತಮ ಸಂಶೋಧಕರೂ, ಅನುವಾದಕರೂ ಆದ ಶ್ರೀ ಹಯವದನ ಪುರಾಣಿಕರು ಗಂಭೀರವಾದ ಈ ಕೃತಿಯನ್ನು ಕಾಶಿಕಾಟಿಪ್ಪಣಿಯೊಂದಿಗೆ ಮತ್ತು ಇದಕ್ಕೆ ಇರುವ ಇನ್ನುಳಿದ ಟಿಪ್ಪಣಿಗಳ ವಿಶೇಷ ವಿಚಾರಗಳನ್ನು ತಿಳಿಸುವುದರ ಮೂಲಕವಾಗಿ ಸುಲಭವಾಗಿ ಅನುವಾದಿಸಿ ಕೊಟ್ಟಿರುತ್ತಾರೆ. ಈ ಗ್ರಂಥವನ್ನು ಶ್ರೀಗುರುರಾಜರ 345ನೇ ಆರಾಧನಾ ಸಂದರ್ಭದಲ್ಲಿ ಬಿಡುಗಡೆಗೊಳಿಸುತ್ತಿರುವುದು ನಮಗೆ ಎಷ್ಟೋ ಆನಂದವನ್ನು ಮೂಡಿಸಿದೆ. ಅನುವಾದಕರಾದ ವಿದ್ವಾನ್ ಹಯವದನ ಪುರಾಣಿಕರಿಗೆ ಮತ್ತಷ್ಟು ಇಂಥಹ ಸಾರಸ್ವತ ಸೇವೆಯಲ್ಲಿ ತೊಡಗುವ ಶಕ್ತಿಯನ್ನು ದಯಪಾಲಿಸಲೆಂದು ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯ ಪ್ರಾಣಾಂತರ್ಗತ ಅಸ್ಮದುಪಾಸ್ಯಮೂರ್ತಿ ಶ್ರೀಮನ್ಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ಶುಭ ಸಂದೇಶ

ವಿದ್ಯಾಮಠವೆನಿಸಿದ ಶ್ರೀರಾಘವೇಂದ್ರ ಮಠದ ಅಧಿಪತಿಗಳೂ ನಮ್ಮ ಆತ್ಮೀಯರೂ ಆದ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಶ್ರೀಮನ್ನ್ಯಾಯಸುಧಾದಿ ಗ್ರಂಥಗಳ ಪಾಠ-ಪ್ರವಚನ ಮಾಡುವುದರ ಜೊತೆ ಸಮರ್ಥ ವಿದ್ವಾಂಸರಿಂದ ನ್ಯಾಯಾಮೃತ, ತರ್ಕತಾಂಡವ, ಭೇದೋಜ್ಜೀವನದಂತಹ ಶ್ರೀವ್ಯಾಸತೀರ್ಥರ ಕೃತಿಗಳನ್ನು ಕನ್ನಡದ ಅನುವಾದದೊಂದಿಗೆ ಪ್ರಕಾಶನಪಡಿಸುತ್ತಿರುವುದು ನಮಗೆ ಹೆಚ್ಚಿನ ಸಂತೋಷವನ್ನು ನೀಡಿದೆ.

ಪ್ರಸಕ್ತ, ನಮ್ಮ ನೆಚ್ಚಿನ ಶಿಷ್ಯರಾದ ವಿದ್ವಾನ್ ಹಯವದನ ಪುರಾಣಿಕರು ಭೇದೋಜ್ಜೀವನ ಗ್ರಂಥವನ್ನು ಕಾಶಿಕಾ ಟಿಪ್ಪಣಿಯೊಂದಿಗೆ ಕನ್ನಡದಲ್ಲಿ ಅನುವಾದ ಮಾಡಿ ನೀಡಿರುವುದು ನಮಗೆ ತುಂಬಾ ಸಂತಸ ನೀಡಿದೆ. ಭೇದೋಜ್ಜೀವನದ ಅನುವಾದವೇ ಅತ್ಯಂತ ಕ್ಲೇಶದಾಯಕವಾದುದು. ಕಾಶಿಕಾಟಿಪ್ಪಣಿಯ ಅನುವಾದವಂತೂ ಅತೀವ ಕಷ್ಟಸಾಧ್ಯವಾದುದು. ನಾಲ್ಕು ಶಾಸ್ತ್ರಗಳಲ್ಲಿ ಆಳವಾದ ಪರಿಶ್ರಮವನ್ನು ಹೊಂದಿದ, ವಿಶೇಷವಾಗಿ ವೇದಾದಂತದಲ್ಲಿ ಪ್ರಮಾಣ-ಪ್ರಮೇಯಶಾಸ್ತ್ರಗಳಲ್ಲಿ ನಿಷ್ಕೃಷ್ಟವಾದ/ಆಳವಾದ ಜ್ಞಾನವನ್ನು ಹೊಂದಿದ ಪುರಾಣಿಕರು ಈ ಕೃತಿಯ ಅನುವಾದ ನಡೆಸುವಲ್ಲಿ ಅತ್ಯಂತ ಸಮರ್ಥರು. ನಾವು ಅಲ್ಲಲ್ಲಿ ಅನುವಾದವನ್ನು ನೋಡಿ ಸಂತೋಷಪಟ್ಟಿದ್ದೇವೆ. ಎಲ್ಲ ವಿದ್ಯಾಪೀಠಗಳಲ್ಲೂ ಪಾಠ-ಪ್ರವಚನಕ್ಕಾಗಿ ಕಡ್ಡಾಯವಾಗಿ ಬಳಸುವ ಈ ಭೇದೋಜ್ಜೀವನ ಕೃತಿಯ ಕನ್ನಡಾನುವಾದ ಸಹಿತ ಪ್ರಕಾಶನದಿಂದ ವಿದ್ವಾಂಸರಿಗೂ ಹಾಗೂ ವಿದ್ಯಾರ್ಥಿಗಳಿಗೂ ಹೆಚ್ಚಿನ ಜ್ಞಾನಲಾಭವಾಗುವುದರಲ್ಲಿ ಸಂದೇಹವಿಲ್ಲ.

ಹಯವದನ ಪುರಾಣಿಗಳು ಇನ್ನೂ ಹೆಚ್ಚಿನ ಆರೋಗ್ಯಭಾಗ್ಯವನ್ನು ಪಡೆದುಕೊಂಡು ಶಾಸ್ತ್ರಸೇವೆಯನ್ನು ನಿರಂತರ ಮುಂದುವರಿಸಲು ಎಂದು ನಮ್ಮ ಆರಾಧ್ಯಮೂರ್ತಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತೇವೆ. ನಮ್ಮ ಪೂರ್ಣಪ್ರಜ್ಞ ವಿದ್ಯಾಪೀಠದ ಹಿರಿಯ ವಿದ್ವಾಂಸರನ್ನು ಬಳಸಿಕೊಂಡು ಹೆಚ್ಚಿನ ಶಾಸ್ತ್ರಸೇವೆಯನ್ನು ನೆರವೇರಿಸುತ್ತಿರುವ ಶ್ರೀಸುಬುಧೇಂದ್ರತೀರ್ಥ ಶ್ರೀಪಾದರನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇವೆ.

**ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರು**

ಪರ್ಯಾಯ ಶ್ರೀಪೇಜಾವರ ಅಧೋಕ್ಷಜ ಮಠ

ಶ್ರೀಕೃಷ್ಣಮಠ, ಉಡುಪಿ

# ಉಪೋದ್ಘಾತ

'ಜಗದೊಡೆಯನಾದ ಶ್ರೀವಿಷ್ಣುವಿಗೆ ಜಯವಾಗಲಿ!' ಎಂದು ಭಕ್ತರು ಸದಾ ಮೈಮನ ಉಬ್ಬಿ ಜಯಕಾರ ಮಾಡುತ್ತಾರೆ. ಆದರಲ್ಲಿಯೇ ಪರಮ ಸುಖ ಕಾಣುತ್ತಾರೆ.

ಆದರೆ, ಅಭೇದಮತದಲ್ಲಿ ಇದಕ್ಕೆ ಅವಕಾಶವಿಲ್ಲ. ಶ್ರೀಹರಿಯ 'ಜಯ'ವೆಂಬುದು ಕಾಲ್ಪನಿಕ. ಭಕ್ತರು ಕಲ್ಪಿಸಿಕೊಂಡಿದ್ದೆಂದು ಗ್ರಹಿಕೆ ಇದೆ. ಪೂರ್ಣ ವಿಶ್ವಾಸ ತುಂಬಿದ ಹೃದಯದಿಂದ ಅವರು ಜಯಾಶಂಸನ ಮಾಡಲಾರರು. ಅವರು ನೋಡುತ್ತಿರುವಂತೆ ನಿಃಸಂಕೋಚವಾಗಿ ಜಯಾಶಂಸನ ಮಾಡುವುದು ಭಕ್ತರಿಗೂ ಕಷ್ಟವೆ. ಇದನ್ನು ಕಂಡು ಶ್ರೀವ್ಯಾಸರಾಜರು ಶ್ರೀಪ್ರಹ್ಲಾದ ರಾಜರಂತೆ 'ಶ್ರೀವಿಷ್ಣುವಿಗೆ ಜಯವಾಗಲಿ' ಎಂದು ಗಟ್ಟಿಯಾಗಿ ಜಯಾಶಂಸನ ಮಾಡಿದರು. ಮತ್ತು ಅದರ ಸಮರ್ಥನೆಗಾಗಿ ಪಂಚಭೇದಗಳ ಉಜ್ಜೀವನ ಮಾಡಿದರು, ತಮ್ಮ 'ಭೇದೋಜ್ಜೀವನ' ಗ್ರಂಥದಲ್ಲಿ.

ದ್ವೈತವೇದಾಂತವೆಂಬ ಶ್ರೀನರಸಿಂಹನ ಮೂರುಕಣ್ಣುಗಳಂತಿರುವ, ವ್ಯಾಸತ್ರಯವೆಂದು ಪ್ರಸಿದ್ಧವಾದ, ನ್ಯಾಯಾಮೃತ ಚಂದ್ರಿಕಾ ತರ್ಕತಾಂಡವಗಳೆಂಬ ಮೂರು ಉದ್‌ಗ್ರಂಥಗಳನ್ನು ರಚಿಸಿ 'ನವೀನವ್ಯಾಸ'ರೆನಿಸಿದವರು ಶ್ರೀವ್ಯಾಸರಾಜರು. ತರ್ಕರಸಿಕರಿಗೆ ಆಪ್ಯಾಯಮಾನ ವಾಗುವಂತೆ ನವ್ಯ ನ್ಯಾಯದ ಪ್ರೌಢಶೈಲಿಯಲ್ಲಿ ಭೇದೋಜ್ಜೀವನವೆಂಬ ಸುಂದರವಾದ ಈ ಪುಟ್ಟ ಗ್ರಂಥವನ್ನೂ ರಚಿಸಿ ಅನುಗ್ರಹಿಸಿದ್ದಾರೆ. ಅಭೇದ ಮತದವರ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಒಂದನ್ನೂ ಬಿಡದೆ, ಅವರೂ ಮೆಚ್ಚುವಂತೆ, ನೋಡಿ ಅಚ್ಚರಿಪಡುವಂತೆ ಅನುವಾದ ಮಾಡಿ ಸಮರ್ಥವಾಗಿ ಖಂಡನ ಮಾಡಿದ್ದಾರೆ.

ನ್ಯಾಯಾಮೃತ ಗ್ರಂಥದ ಮೂಲಕ ನವ್ಯನ್ಯಾಯಭಾಷೆಯಲ್ಲಿ ವಾದ ಪ್ರತಿವಾದಗಳ ಪರಂಪರೆಯನ್ನು ಹುಟ್ಟುಹಾಕಿದ ವಿಭೂತಿಪುರುಷರು ಶ್ರೀವ್ಯಾಸರಾಜರು. ಪಂಡಿತ ಮಂಡಲಿ ಇಡೀ ಒಮ್ಮತದಿಂದ ಇವರಿಗೆ ತಲೆಬಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತಿದೆ.

ಭೇದೋಜ್ಜೀವನ ಗ್ರಂಥಕ್ಕೆ ಟಿಪ್ಪಣಿ ಬರೆದ ಮಹನೀಯರುಗಳನ್ನು ಕಾಲಕ್ರಮಾನುಸಾರ ಹೇಳುವುದಾದರೆ, ಮೊದಲಿಗರು **ಶ್ರೀ ಕುಂಭಾರಿ ವಾಸುದೇವಾಚಾರ್ಯರು.** ಕಾಲ ಸುಮಾರು ಕ್ರಿ.ಶ.1575. ಶ್ರೀಉತ್ತರಾದಿಮಠದ ಶ್ರೀಸತ್ಯನಿಧಿತೀರ್ಥರಿಗೆ ಪೂರ್ವಾಶ್ರಮದಲ್ಲಿ ಅಧ್ಯಾಪನ ಮಾಡಿದವರು. ಅವರು 'ಕುಂಭಾರಿ'ಗಳು ಹೇಗೆಂದರೆ 'ಮಾಯಿ ಮತ್ತೇಭಗಳ ಕುಂಭಗಳಿಗೆ ಅರಿ' ಎಂದು ಅವರೇ ಹೇಳಿದ್ದಾರೆ, ತಮ್ಮ ಭೇದಚಂದ್ರಿಕಾ ಟಿಪ್ಪಣಿಯಲ್ಲಿ–

ಮಾಯಿ ಮತ್ತೇಭಕುಂಭಾರಿರ್ವಾಸುದೇವೋ ಹರೇರ್ಮುದೇ ।
ಹರ್ಯಾಲಂಬೋ ವಿತನುತೇ ಭೇದೋಜ್ಜೀವನ ಟಿಪ್ಪಣಂ ॥

**ಶ್ರೀಮುದ್ಗಲಾನಂದತೀರ್ಥಾಚಾರ್ಯರು.** ಕಾಲ ಸುಮಾರು ಕ್ರಿ.ಶ. 1640. 'ಸತ್ತತ್ವರತ್ನ ಮಾಲಾ' ಗ್ರಂಥಕರ್ತೃಗಳಾದ ಶ್ರೀತಾಮ್ರಪರ್ಣೀ ಆನಂದತೀರ್ಥಾಚಾರ್ಯರ ಶಿಷ್ಯರು ಇವರು. ಭೇದೋಜ್ಜೀವನಕ್ಕೆ 'ಭೇದಚಿಂತಾರತ್ನ' ಟಿಪ್ಪಣಿಯನ್ನು ಬರೆದಿದ್ದಾರೆ.

**ಶ್ರೀಶರ್ಕರಾ ಶ್ರೀನಿವಾಸಾಚಾರ್ಯರು,** ಕಾಲ ಸುಮಾರು 1650. ಶ್ರೀ ಯಾದವಾರ್ಯರ ಶಿಷ್ಯರು, ಬಿದಿರಹಳ್ಳಿ ಶ್ರೀನಿವಾಸತೀರ್ಥರ ಸತೀರ್ಥ್ಯರು. ಇವರು ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತ ವಾದ ಶರ್ಕರಾ ಟಿಪ್ಪಣಿಗಳನ್ನು ತತ್ವಪ್ರಕಾಶಿಕಾ–ಭೇದೋಜ್ಜೀವನ–ತಂತ್ರಸಾರ–ಸದಾಚಾರಸ್ಮೃತಿಗಳಿಗೆ ಬರೆದಿದ್ದಾರೆ.

**ಶ್ರೀ ಭಗವಂತರಾಯರು.** ಕಾಲ ಕ್ರಿ.ಶ. 1783–1895. ಬಳ್ಳಾರಿಯವರು. ಸಂಸ್ಕೃತ ಆಂಗ್ಲ ಪಾರ್ಸಿಭಾಷೆಗಳನ್ನು ತಿಳಿದು ಲೌಕಿಕದಲ್ಲಿ ಸರಕಾರಿ ಹುದ್ದೆಯಲ್ಲಿದ್ದವರು. ಶ್ರೀಜಗನ್ನಾಥದಾಸರ ಸಂಪರ್ಕಪ್ರಭಾವದಿಂದ ಮಧ್ವಶಾಸ್ತ್ರಾಧ್ಯಯನ ಸಂಪನ್ನರಾಗಿ ಹದಿನಾರು ಗ್ರಂಥಗಳನ್ನು ರಚಿಸಿದ್ದಾರೆ. ಹರಿದಾಸ ದೀಕ್ಷೆ ಪಡೆದು ಶ್ರೀದಾಸರಿಂದ ಶ್ರೀಪ್ರಾಣನಾಥವಿಟ್ಠಲ ಅಂಕಿತವನ್ನೂ ಪಡೆದಿದ್ದಾರೆ. ಐತರೇಯ ಭಾಷ್ಯದ ಮೇಲಿನ ಶ್ರೀವಿಶ್ವೇಶತೀರ್ಥರ ಟೀಕೆಗೆ ವ್ಯಾಖ್ಯಾನ ಬರೆದಿದ್ದಾರೆ. ಬೃಹತೀಸಹಸ್ರಕ್ಕೂ ವ್ಯಾಖ್ಯಾನ ಬರೆದಿದ್ದಾರೆ. ಬ್ರಹ್ಮಸೂತ್ರ ಭಾಷ್ಯಕ್ಕೂ ಸರಳವಾದ ಟಿಪ್ಪಣಿ ಬರೆದಿದ್ದಾರೆ.

**ಮಹಾಮಹೋಪಾಧ್ಯಾಯ ಶ್ರೀ ಕಾಶೀತಿಮ್ಮಣ್ಣಾಚಾರ್ಯರು.** ಕಾಲ ಸುಮಾರು ಕ್ರಿ.ಶ. 1800. ಆಂಧ್ರಪ್ರದೇಶದ ಪೆನುಗೊಂಡೆಯವರು. ಕಾಶಿಯಲ್ಲಿ ಸಕಲ ಶಾಸ್ತ್ರಪಾರಂಗತರಾಗಿ ಕಾಶೀತಿಮ್ಮಣ್ಣಾಚಾರ್ಯರೆಂದು ಪ್ರಸಿದ್ಧರಾದರು. ಶ್ರೀಉತ್ತರಾದಿಮಠದ ಶ್ರೀಸತ್ಯಧರ್ಮತೀರ್ಥ ರಲ್ಲಿ ವೇದಾಂತಾಧ್ಯಯನ ಮಾಡಿದರು. ಆಗಿನ ಕಾಲದ ಎಲ್ಲ ಪೀಠಾಧಿಪತಿ ಯತಿಗಳು ಇವರಲ್ಲಿ ಅಧ್ಯಯನ ಮಾಡುತ್ತಿದ್ದರು. ಮುಮ್ಮಡಿ ಕೃಷ್ಣರಾಜಒಡೆಯರ ಆಸ್ಥಾನದಲ್ಲಿ ಪರವಾದಿಗಳನ್ನು ನಿಗ್ರಹಿಸಿ ದ್ವೈತವೇದಾಂತ ವಿಜಯಪತಾಕೆಯನ್ನು ಹಾರಿಸಿದರು. ಶ್ರೀಮನ್ನ್ಯಾಯಸುಧಾ ನ್ಯಾಯಾಮೃತಗಳಿಗೆ ಟಿಪ್ಪಣಿ ಬರೆದಿದ್ದಾರೆ. ತತ್ವೋದ್ಯೋತ ಟೀಕಾಖಂಡನೆಗಾಗಿ ಭಟ್ಟತ್ರ್ಯಂಬಕಶಾಸ್ತ್ರಿ ರಚಿತವಾದ ಗುರುಶ್ರುತಿಮತೋದ್ಯೋತಕ್ಕೂ ಲಘುಶ್ರುತಿಮತೋದ್ಯೋತಕ್ಕೂ ಇವರು ಕುಮತಖಂಡನವೆಂಬ ಪ್ರೌಢವಾದ ಗ್ರಂಥ ಬರೆದಿದ್ದಾರೆ. ಇವರ **ಭೇದೋಜ್ಜೀವನಕಾಶಿಕಾ ಗ್ರಂಥ** ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತವಾಗಿದೆ. ಕೂಲಂಕಷವಾದ ಅನ್ಯೂನ ಅನತಿರಿಕ್ತವಾದ ವಿಷಯ ವಿಮರ್ಶೆಗಳಿಂದ ಗರ್ಭಿತವಾಗಿದ್ದು ಅಧ್ಯಯನ ಪರಂಪರೆಯಲ್ಲಿ ಒಳ್ಳೆಯ ಸ್ಥಾನ ಪಡೆದು ಮಾನ್ಯವಾಗಿದೆ.

ಪ್ರಕೃತ ಗ್ರಂಥದಲ್ಲಿ ಇದರ ಸರಳ ಕನ್ನಡಾನುವಾದವಿದೆ.

**ಶ್ರೀಹುಲಿಗಿ ಶ್ರೀನಾಥಾಚಾರ್ಯರು.** ಕಾಲ ಸುಮಾರು ಕ್ರಿ.ಶ. 1825. ತತ್ವೋದ್ಯೋತಟೀಕೆಗೆ

ದ್ವೈತದ್ಯುಮಣಿ ಎಂಬ ಉದ್‌ಗ್ರಂಥ ಬರೆದಿದ್ದಾರೆ. ನ್ಯಾಯಾಮೃತ–ಅದ್ವೈತಸಿದ್ಧಿ–ತರಂಗಿಣೀ ಮುಂತಾಗಿ ಹರಿದುಬಂದ ದೀರ್ಘವಾದ ವಾದಪರಂಪರೆಯಲ್ಲಿ ಕೊನೆಗೆ ಬಂದ ಬ್ರಹ್ಮಾನಂದೀ ಲಘುಚಂದ್ರಿಕಾಕ್ಕೆ ದ್ವೈತದ್ಯುಮಣಿಯಲ್ಲಿ ಸಮರ್ಥವಾದ ಖಂಡನೆಗಳಿವೆ.

ಅದ್ವೈತ ಚಂದ್ರಿಕಾಚ್ಛದ್ಮತಮೋ ಹೃತ್ಪಾಟನೇ ಪಟುಃ ।
ಸನ್ಮನಃಪಂಕಜೋಲ್ಲಾಸೀ ಜೇಗೀಯಾದ್ ದ್ವೈತಭಾಸ್ಕರಃ ॥

'ಅದ್ವೈತಚಂದ್ರಿಕಾಗ್ರಂಥದ ಮಾರುವೇಷದಲ್ಲಿದ್ದ ಅಂಧಕಾರದ ಹೃದಯ ಭೇದನ ಪಟುವಾದ ದ್ವೈತಸೂರ್ಯನು ಈ ದ್ವೈತದ್ಯುಮಣಿ, ಚೆನ್ನಾಗಿ ಮೆರೆಯಲಿ' ಎಂದಿದ್ದಾರೆ. ಆದರೆ ಈ ಗ್ರಂಥದ ಪ್ರೌಢಿಮೆ ವಿಸ್ತಾರಗಳು ಎಲ್ಲರಿಗೆ ಎಟುಕಲಾರದಷ್ಟಿರುವುದರಿಂದ ಪ್ರಾಯಃ ಅಧ್ಯಯನ ಪರಂಪರೆಯಲ್ಲಿ ಯೋಗ್ಯಸ್ಥಾನ ಪಡೆಯುವುದರಲ್ಲಿ ಯಶಸ್ವಿಯಾಗದೆ ಹೋಯಿತು. ಅದ್ವೈತವಾದ ಗ್ರಂಥಗಳೆಲ್ಲವನ್ನೂ ಖಂಡಿಸಿ ದ್ವೈತವಾದ ಗ್ರಂಥಗಳೆಲ್ಲಕ್ಕೂ ಟಿಪ್ಪಣಿಯಾಗಿರುವುದು ದ್ವೈತ ದ್ಯುಮಣಿಯ ವೈಶಿಷ್ಟ್ಯ. ಇವರ 'ಭೇದಸಂಜೀವಿನಿ' ಎಂಬ ಭೇದೋಜ್ಜೀವನ ಟಿಪ್ಪಣಿಯಲ್ಲಿಯೂ ಬೇರೆ ಟಿಪ್ಪಣಿಗಳಲ್ಲಿ ಕಾಣಲು ಸಿಗದ ವಿಶೇಷಾಂಶಗಳಿವೆ ಎಂದು ಅವರೇ ಪ್ರಾರಂಭದಲ್ಲಿ ಹೇಳಿದ್ದಾರೆ. ಅವುಗಳಲ್ಲಿ ಕೆಲವೇ ವಿಶೇಷಾಂಶಗಳನ್ನು ಮಾತ್ರ ಪ್ರಕೃತ ಗ್ರಂಥದಲ್ಲಿ ಅನುಬಂಧದಲ್ಲಿ ನೀಡಲಾಗಿದೆ.

ವಾದಿಖದ್ಯೋತ ಭಾಸ್ಕರರೆನಿಸಿದ, ಶತಮಾನದ ಶಕಪುರುಷರಾದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀವಿದ್ಯಾಮಾನ್ಯತೀರ್ಥರು ಹಾಗೂ ಚಾರಿತ್ರಿಕ ಶ್ರೀಕೃಷ್ಣ ಪಂಚಮಪರ್ಯಾಯ ಪೀಠಾಧಿಪತಿಗಳಾಗಿ ಮೆರೆಯುತ್ತಿರುವ ವಿಶ್ವವಂದ್ಯರಾದ ಪರಮಪೂಜ್ಯ ಶ್ರೀವಿಶ್ವೇಶತೀರ್ಥರು ನಮ್ಮನ್ನು ಶ್ರೀಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪಂಜರದ ಗಿಣಿಯಂತೆ ಸಾಕಿ ಸಲಹಿ ಪರವಿದ್ಯೆ ನೀಡಿ ಪೂರ್ಣಾನುಗ್ರಹ ಮಾಡಿದ್ದಾರೆ. ಅವರ ಮೂಲಕ ಶ್ರೀವ್ಯಾಸರಾಜರ ಪರಮಾನುಗ್ರಹ ಧಾರೆ ನಮ್ಮ ಮೇಲೆ ಹರಿದು ಬಂದಿರುವುದರಿಂದ, ಶ್ರೀಮಂತ್ರಾಲಯ ಪ್ರಭುಗಳ ದಿವ್ಯಸನ್ನಿಧಿಯಲ್ಲಿ ಶ್ರೀಮಠದ ವಿದ್ಯಾಸಿಂಹಾಸನಾಧೀಶ್ವರರಾದ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರು ನೀಡಿದ ಆದೇಶದಂತೆ ಕನ್ನಡದ ಅಧ್ಯಾತ್ಮಬಂಧುಗಳಿಗಾಗಿ ಈ ಕನ್ನಡಾನುವಾದ ಕೃತಿಯನ್ನು ರಚಿಸಿ ಸಮರ್ಪಿಸುತ್ತಿದ್ದೇನೆ.

ಸಜ್ಜನ ವಿಧೇಯ
**ಕೆ.ಹಯವದನ ಪುರಾಣಿಕ**

।। श्रीमन्मूलरामो विजयते ।।



ಶ್ರೀದಿಗ್ವಿಜಯರಾಮದೇವರು ಶ್ರೀಮೂಲರಾಮದೇವರು ಶ್ರೀಜಯರಾಮದೇವರು



।। श्रीमध्वाचार्याः ।।

अभ्रमं भङ्गरहितं अजडं विमलं सदा ।

आनन्दतीर्थमतुलं भजे तापत्रयापहम् ।।



॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಾಃ ॥

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।

ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

।। श्रीमज्जयतीर्थाः ।।

यस्य वाक्कामधेनुर्नः कामितार्थान्प्रयच्छति ।
सेवे तं जययोगीन्द्रं कामबाणच्छिदं सदा ।।



॥ ಶ್ರೀ ಶ್ರೀಮಜ್ಜಯತೀರ್ಥಾಃ ॥

ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ಪ್ರಯಚ್ಛತಿ ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥

## ।। श्रीव्यासराज गुरुसार्वभौमाः ।।

अर्थिकल्पितकल्पोऽयं प्रत्यर्थिगजकेसरी ।
व्यासतीर्थगुरुर्भूयादस्मदिष्टार्थसिद्धये ।।




## ಶ್ರೀ ವ್ಯಾಸರಾಜಗುರುಸಾರ್ವಭೌಮರು

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ।

।। श्रीराघवेन्द्रतीर्थाः ।।



॥ ಶ್ರೀ ಶ್ರೀ ರಾಘವೇಂದ್ರತೀರ್ಥಾಃ ॥

चित्ते चेन्मृदुता शिरीषसदृशो हय्यङ्गवीनं शिला
गाम्भीर्यं यदि यस्य सोऽन्धुरुदधिः शास्त्रेषु चेन्यायिनो ।
आचार्यो विबुधेशितुः कल्प्यते विद्यार्थितामादरात्
औदार्यं यदि कल्पपादपमुखाः सम्भावयन्तेऽर्थिताम् ॥

।। श्रीसुजयीन्द्रतीर्थाः ।।



॥ ಶ್ರೀ ಶ್ರೀ ಸುಜಯೀಂದ್ರತೀರ್ಥಾಃ ॥

ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ॥

॥ श्रीसुयतीन्द्रतीर्थाः ॥



॥ ಶ್ರೀ ಶ್ರೀ ಸುಯತೀಂದ್ರತೀರ್ಥಾಃ ॥

ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಮ್ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ॥

॥ श्रीसुबुधेन्द्रतीर्थाः ॥



॥ ಶ್ರೀ 1008 ಶ್ರೀ ಸುಬುಧೇಂದ್ರತೀರ್ಥಾಃ ॥

ಪ್ರಸ್ತುತ ಪೀಠಾಧಿಪತಿಗಳು

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ.

# ಒಳಗೆ ಏನಿದೆ

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ

ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಶ್ರೀವ್ಯಾಸತೀರ್ಥವಿರಚಿತ

# ಶ್ರೀ ಭೇದೋಜ್ಜೀವನ – ಕಾಶಿಕಾ ಸಹಿತ

**ಮಂಗಳಾಚರಣೆ**

काशिका : जन्माद्यस्य यतः शास्त्रगम्यमन्वयतः पृथक् ।
परमं ब्रह्म विष्णवाख्यमधिकं तदुपास्महे ।।

ಯಾವ ಪರಬ್ರಹ್ಮನಿಂದಲೇ ಈ ಜಗತ್ತಿನ ಜನ್ಮಾದಿಗಳುಂಟಾಗುವುವೋ, ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಯಾವುದು ಶಾಸ್ತ್ರಗಳಿಂದ ಹಾಗೆ ವೇದ್ಯವೋ, ಆದರಿಂದ ಜಗತ್ತಿಗಿಂತ ಭಿನ್ನವೂ ಉತ್ತಮವೂ ಆಗಿರುವುದೋ ವಿಷ್ಣ್ವಾಖ್ಯವಾದ ಆ ಪರಬ್ರಹ್ಮವನ್ನು ಆರಾಧಿಸುತ್ತೇವೆ.

**भेदोज्जीवनम् : स्वभावतः स्वतंत्रत्वप्रमुखैर्निखिलैर्गुणैः ।**
**विभिन्नो विश्वतो विष्णुर्जयताज्जगदीश्वरः ।। १ ।।**

**ಸ್ವಾಭಾವಿಕವಾದ ಸ್ವಾತಂತ್ರ್ಯಾದಿ ನಿಖಿಲ ಧರ್ಮಗಳಿಂದ ಸಿದ್ಧವಾಗುವ ಸ್ವಾಭಾವಿಕವಾದ ಪ್ರಪಂಚಭೇದವುಳ್ಳ ಜಗದೀಶ್ವರ ವಿಷ್ಣುವು ಪ್ರಪಂಚಕ್ಕಿಂತ ಉತ್ತಮವಾಗಿ ನಮ್ಮ ಮನಸ್ಸಿನಲ್ಲಿ ಸದಾ ದೃಢವಾಗಿ ಗೋಚರಿಸುತ್ತಿರಲಿ.**

अखिलापेक्षितमोक्षप्रयोजकपरदेवतोत्कर्षप्रतिपत्तिप्रतिबन्धकभेदविप्रतिपत्तिप्रतिषेधपूर्वकविभेदव्यवस्थापनाय प्रकरणमारभमाणः श्रीमद्व्यासतीर्थमुनिर्निरन्तरायपरिसमाप्तये प्रचयाय च परमेश्वरं प्रार्थयते – **स्वभावत इति** । यद्यपि भगवत्पादैरेव सपरिकरं भेदो व्यवस्थापितः । तथापि स एवात्र सङ्गृह्य सङ्क्षेपेणोपपाद्यत इत्यवैयर्थ्यम् ।

ಸರ್ವರಿಗೂ ಅಪೇಕ್ಷಿತವಾದ ಮೋಕ್ಷಕ್ಕೆ ಪರದೇವತೆಯ ಉತ್ತಮತ್ವಜ್ಞಾನವೇ ಸಾಧನ. ಅಂಥ ಜ್ಞಾನಕ್ಕೆ ಪ್ರತಿಬಂಧಕವು ಭೇದವಿಷಯದಲ್ಲಿ ವಿವಾದ. ಈ ವಿವಾದವನ್ನು ಪರಿಹರಿಸಿ ಭೇದ ನಿರ್ಣಯ

ಮಾಡುವುದಕ್ಕೆ ಪ್ರಕರಣವನ್ನು ಪ್ರಾರಂಭಿಸುತ್ತ ಶ್ರೀವ್ಯಾಸತೀರ್ಥ ಮುನಿಗಳು ವಿಘ್ನಪರಿಹಾರಕ್ಕಾಗಿ, ಗ್ರಂಥ ಪ್ರಸಾರಕ್ಕಾಗಿ ಪರಮಾತ್ಮನನ್ನು ಪ್ರಾರ್ಥಿಸುತ್ತಾರೆ 'ಸ್ವಭಾವತಃ ಸ್ವತಂತ್ರತ್ವ' ಎಂಬ ಪದ್ಯದಿಂದ. ಯದ್ಯಪಿ ಭಗವತ್ಪಾದ ಮಧ್ವರೇ ಸಾಧಾರವಾಗಿ ಭೇದವನ್ನು ನಿರ್ಣಯ ಮಾಡಿಕೊಟ್ಟಿದ್ದಾರೆ. 'ತಥಾಪಿ ಸ ಏವಾತ್ರ' ಅದೇ ಸಾಧಾರವಾದ ಭೇದವನ್ನು ಸಂಕ್ಷೇಪವಾಗಿ ಈ ಪ್ರಕರಣದಲ್ಲಿ ವ್ಯಾಸರಾಜರು ಉಪಪಾದನ ಮಾಡುವುದರಿಂದ ಇದು ವ್ಯರ್ಥವಾಗುವುದಿಲ್ಲ.

**ಶ್ರೀವಿಷ್ಣುವಿಗೆ ಜಯಾಶಂಸನ ಅಯುಕ್ತವಲ್ಲ**

**विष्णुर्जयतात् विश्वोत्कर्षेण विज्ञातो वर्तताम् । नातो नित्यसिद्धविष्णूत्कर्षप्रार्थनानुपपत्तिः ।**

'ವಿಷ್ಣು ವಿಶ್ವಾಭಿನ್ನ' ಎಂಬ ದುರ್ವಾದವಿರುವುದರಿಂದ ಅವನ ಸರ್ವೋತ್ತಮತ್ವ ವಿಷಯದಲ್ಲಿ ಸಂದೇಹ ಬಂದೀತು. 'ವಿಷ್ಣುರ್ಜಯತಾತ್' 'ವಿಷ್ಣುವು ವಿಶ್ವಕ್ಕಿಂತ ಉತ್ತಮನಾಗಿ ನಮ್ಮ ಮನಸಿನಲ್ಲಿ ಸದಾ ದೃಢವಾಗಿ ಗೋಚರಿಸುತ್ತಿರಲಿ' ಎಂದರ್ಥ. ಅದರಿಂದ ವಿಶ್ವಕ್ಕಿಂತ ಸದಾ ಉತ್ತಮನೇ ಆಗಿರುವ ವಿಷ್ಣುವಿನ ಬಗ್ಗೆ 'ಅವನು ಉತ್ತಮನಾಗಲಿ' ಎನ್ನುವ ಹರಕೆ ಅಯುಕ್ತವೆನ್ನುವ ಆಕ್ಷೇಪಕ್ಕೆ ಎಡೆ ಇಲ್ಲ. ಲೋಕದರ್ಶನ ಭಾಷೆಯಿಂದ ಅದು ಯುಕ್ತವೆ.

**नन्वस्य विश्वोत्कर्ष एव कथमत आह – जगदीश्वर इति । नन्वनीश्वरजीवाद्यभिन्नस्य जगदीश्वरत्वमपि कथमत आह – विश्वतो विभिन्न इति । विश्वशब्दो जीवजडार्थः । तद्भेदस्यौपाधिकस्याप्रयोजकत्वात् स्वाभाविकत्वलाभाय विशब्दः ।**

ವಿಷ್ಣು ವಿಶ್ವಕ್ಕಿಂತ ಉತ್ತಮನೆನ್ನುವುದು ಹೇಗೆ ಎಂದರೆ 'ಜಗದೀಶ್ವರ'ನಾದ್ದರಿಂದ ಎನ್ನುತ್ತಾರೆ. ಇದು ಕೂಡ ಯುಕ್ತವಾಗುವುದಿಲ್ಲ. 'ಅನೀಶ್ವರವಾದ' ಅಶಕ್ತವಾದ ಜಗತ್ತಿನಿಂದ ಅಭಿನ್ನನಾದ ವಿಷ್ಣು ಸರ್ವಶಕ್ತ ಉತ್ತಮ ಹೇಗಾದಾನು? ಎಂಬ ಪ್ರಶ್ನೆ ಬರುತ್ತದೆ.

ಅದಕ್ಕೆ ಹೇಳುತ್ತಾರೆ—ವಿಶ್ವತೋ ವಿಭಿನ್ನಃ ಜೀವಜಡಾತ್ಮಕ ಪ್ರಪಂಚಕ್ಕಿಂತ ವಿಭಿನ್ನ ಎಂದು. ಪ್ರಪಂಚದ ಭೇದ ಔಪಾಧಿಕವಾಗಿದ್ದರೆ ಅದು ಉತ್ತಮತ್ವಕ್ಕೆ ಪ್ರಯೋಜಕವಾಗದು. ಭೇದ ಸ್ವಾಭಾವಿಕವೇ ಆಗಿದೆ ಎಂದು 'ವಿಭಿನ್ನಃ' ಎಂಬಲ್ಲಿ 'ವಿ' ಶಬ್ದ ಹೇಳುತ್ತದೆ.

**तादृशभेदवत्त्वे हेतुर्गुणैरित्यन्तम् । गुणैरसाधारणप्रमापकैः । इत्थंभूतलक्षणे तृतीया । तादृशगुणज्ञाप्यविश्वविभेदवानित्यर्थः ।**

**कानि तानि प्रमापकाणीत्यतः – स्वतन्त्रत्वप्रमुखैरिति ।**

**परानपेक्षसत्ताकत्वादिरूपस्वातन्त्र्यादेः कल्पितस्य स्वाभाविक-भेदसाधकत्वायोगादाह –स्वभावत इति । स्वाभाविकैरित्यर्थः ।**

ಸ್ವಾಭಾವಿಕ ಭೇದವತ್ವಕ್ಕೆ ಹೇತು 'ಸ್ವಭಾವತಃ ಸ್ವತಂತ್ರತ್ವ ಪ್ರಮುಖೈರ್ನಿಖಿಲೈರ್ಗುಣೈಃ' ಎಂದು. 'ಗುಣ'ಗಳೆಂದರೆ ವಿಶೇಷವಾಗಿ ಭೇದಕ್ಕೆ ಸಾಧಕಗಳಾದ ಧರ್ಮಗಳು. 'ಗುಣೈಃ ವಿಭಿನ್ನಃ' ಎಂಬಲ್ಲಿ ತೃತೀಯಾವಿಭಕ್ತಿ ಈ ಧರ್ಮಗಳು ಅಸಾಧಾರಣ ಸಾಧಕವಾದ ಚಿಹ್ನೆಗಳಾಗಿವೆ ಎಂದು ಹೇಳುತ್ತವೆ. ಇಂಥ ಸ್ವಾಭಾವಿಕ ಧರ್ಮಗಳಿಂದ ಸಿದ್ಧವಾಗುವ ಸ್ವಾಭಾವಿಕ ಪ್ರಪಂಚಭೇದ ಉಳ್ಳವನೆಂದರ್ಥ.

ಸಾಧಕವಾದ ಆ ಧರ್ಮಗಳಾವುವು ಎಂದರೆ 'ಸ್ವತಂತ್ರತ್ವ ಪ್ರಮುಖೈಃ' ಸ್ವತಂತ್ರತ್ವಾದಿ ಧರ್ಮಗಳು. ಸ್ವಾತಂತ್ರ್ಯವೆಂದರೆ ಇನ್ನೊಬ್ಬರ ಆಸರೆ ಇಲ್ಲದೆ ತನಗೆ ತಾನೇ ಸತ್ತಾ ಪ್ರಮಿತಿ ಪ್ರವೃತ್ತಿ ಉಳ್ಳವನಾಗಿರುವುದು.

ಈ ಸ್ವಾತಂತ್ರ್ಯವೂ ಕಲ್ಪಿತವಾಗಿದ್ದರೆ ಸ್ವಾಭಾವಿಕ ಭೇದಕ್ಕೆ ಸಾಧಕವಾಗಲಾರದೆಂಬ ಪ್ರಶ್ನೆಗೆ 'ಸ್ವಭಾವತಃ' ಎಂದಿದ್ದಾರೆ. 'ಸ್ವಾಭಾವಿಕವಾದ' ಎಂದರ್ಥ. ಕಲ್ಪಿತವಾಗದೆ ಸ್ವಾಭಾವಿಕವಾಗಿರುವ ಧರ್ಮಗಳು ಎಂದು ಹೇಳಿದಂತಾಗುವುದು.

**अनेन श्रोतृप्रवृत्त्यङ्गभूतविषयादिकमपि सूचितम् । विश्वविभेद-वद्विष्णुरेव विषयः । तस्य विश्वोत्कर्षज्ञानं प्रयोजनम्। तदिच्छुरधिकारी । यथायोगं सम्बन्ध इति ।**

**अत्राद्वैतवादी शङ्कते –नन्विति ।**

ಈ ಶ್ಲೋಕದಿಂದ ಶ್ರೋತೃಗಳಿಗೆ ಈ ಗ್ರಂಥದಲ್ಲಿ ಶ್ರವಣಾದಿ ಪ್ರವೃತ್ತಿಯಾಗಲು ಬೇಕಾಗುವ ವಿಷಯಾದಿಗಳೂ ಸೂಚಿತವಾಗಿವೆ. ಪ್ರಪಂಚಕ್ಕಿಂತ ಸ್ವಾಭಾವಿಕ ಭೇದವುಳ್ಳ ವಿಷ್ಣುವು ವಿಷಯ. ಅವನು ಪ್ರಪಂಚಕ್ಕಿಂತ ಉತ್ತಮನೆಂದು ಸಿದ್ಧಿಸುವುದು ಪ್ರಯೋಜನ. ಅದನ್ನು ಬಯಸುವವನೆ ಅಧಿಕಾರಿ. ಯಥಾಯೋಗ್ಯವಾಗಿ ಇವುಗಳಿಗೆ ಸಂಬಂಧವೂ ಇದೆ ಎಂದು.

ಇಲ್ಲಿ ಅದ್ವೈತವಾದಿ ಪೂರ್ವಪಕ್ಷ ಮಾಡುತ್ತಾನೆ–

2 **ननु कथं विष्णवाख्यस्य परब्रह्मणः स्वतश्चेतनाचेतनात्मक-विश्वभिन्नत्वम् । भेदे प्रमाणाभावात् । तथा हि । न**

**तावज्जीवेश्वरभेदे प्रत्यक्षं सम्भवति । ईश्वरधर्मिकस्येश्वर-प्रतियोगिकस्य वा भेदस्येश्वराप्रत्यक्षत्वेनाप्रत्यक्षत्वात्।**

**'ವಿಷ್ಣುನಾಮಕ ಪರಂಬ್ರಹ್ಮ ಸ್ವಾಭಾವಿಕವಾಗಿ ಚೇತನಾಚೇತನಾತ್ಮಕ ಪ್ರಪಂಚಕ್ಕಿಂತ ಭಿನ್ನ ಹೇಗೆ? ಭೇದದಲ್ಲಿ ಪ್ರಮಾಣವಿಲ್ಲ. ಮೊದಲಿಗೆ ಜೀವೇಶ್ವರಭೇದ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣ ಕೂಡುವುದಿಲ್ಲ. ಏಕೆಂದರೆ ಈಶ್ವರಧರ್ಮಿಕ ಭೇದವಾಗಲಿ, ಈಶ್ವರಪ್ರತಿಯೋಗಿಕ ಭೇದವಾಗಲಿ, ಈಶ್ವರನು ಪ್ರತ್ಯಕ್ಷಗೋಚರನಲ್ಲವಾದ್ದರಿಂದ, ಪ್ರತ್ಯಕ್ಷ ಗೋಚರವೆನಿಸಲಾರದು'.** (ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 1 ನೋಡಿರಿ)

**ಶ್ರೀವಿಷ್ಣುವಿಗೆ ಬ್ರಹ್ಮತ್ವವು ಹೇಗೆ**

परब्रह्मण,इत्यनेन भेदाङ्गीकारे वस्त्वपरिच्छेदरूपपरब्रह्मत्वानुपपत्तिं सूचयति ।

चेतनाचेतने जीवजडे । स्वभावत इत्यस्य भेद इत्यनेनापि सम्बन्धः ।

अत्रेश्वरधर्मिकभेदस्यैव प्रकृतत्वेऽपि विश्वशब्दसूचितजीव-जडभेदस्यापि सङ्ग्रहाय भेदमात्रग्रहणम् । प्रमाणाभावादिति । उक्तप्रमाणस्याभासत्वादित्यभिमानः । तदेवोपपादयति तथाहीत्यादिना सङ्क्षेप इत्यन्तेन ।

'ಪರಂಬ್ರಹ್ಮವಿಷ್ಣು ಭಿನ್ನ ಹೇಗೆ?' ಎಂಬಲ್ಲಿ 'ಪರಬ್ರಹ್ಮ' ಶಬ್ದದಿಂದ, ಭೇದಾಂಗೀಕಾರಪಕ್ಷದಲ್ಲಿ ವಸ್ತುಪರಿಚ್ಛೇದಾಭಾವ ಅಂದರೆ ಭೇದಾಭಾವರೂಪವಾದ ಪರಬ್ರಹ್ಮತ್ವವು ವಿಷ್ಣುವಿಗೆ ಕೂಡುವುದಿಲ್ಲ ಎಂದು ಆಕ್ಷೇಪ ಸೂಚಿತವಾಗುತ್ತದೆ.

ದ್ವೈತಿಗಳು ವಿಷ್ಣುವನ್ನೇ 'ಪರಂಬ್ರಹ್ಮ' ಎನ್ನುತ್ತಾರೆ. ಆದರೆ ಪರಬ್ರಹ್ಮತ್ವವೆಂದರೆ ದೇಶ–ಕಾಲ–ವಸ್ತುಗಳಿಂದ ಪರಿಚ್ಛೇದವಿಲ್ಲದಿರುವುದೆಂದು ಅದ್ವೈತಮತವಿದೆ. ದೇಶದಿಂದ ಪರಿಚ್ಛೇದವಿಲ್ಲದಿರುವುದೆಂದರೆ ಸರ್ವವ್ಯಾಪಿಯಾಗಿರುವುದು. ಕಾಲದಿಂದ ಪರಿಚ್ಛೇದವಿಲ್ಲದಿರುವುದೆಂದರೆ ನಿತ್ಯವಾಗಿರುವುದು. ವಸ್ತುವಿನಿಂದ ಪರಿಚ್ಛೇದವಿಲ್ಲದಿರುವುದೆಂದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬಂತೆ ಬ್ರಹ್ಮನಲ್ಲಿ ಯಾವುದೇ ಒಂದು ವಸ್ತುಭೇದವಿಲ್ಲದಿರುವುದು. ಪ್ರಪಂಚಕ್ಕಿಂತ ಭಿನ್ನನೆ ವಿಷ್ಣು

ಎನ್ನುವ ದ್ವೈತಮತ ಪ್ರಕಾರ ವಿಷ್ಣುವಿನಲ್ಲಿ ಈ ವಸ್ತುಭೇದವಿಲ್ಲದಿರುವುದು ಕೂಡುವುದಿಲ್ಲ, ಪರಬ್ರಹ್ಮತ್ವ ಕೂಡುವುದಿಲ್ಲ ಎಂದು ಆಕ್ಷೇಪ.

'ಚೇತನಾಚೇತನಾತ್ಮಕ ವಿಶ್ವ' ಎಂದರೆ ಜೀವಜಡರೂಪವಾದ ಪ್ರಪಂಚ ಎಂದರ್ಥ. 'ಸ್ವಭಾವತಃ' ಎಂಬುದನ್ನು ಭೇದ ಎಂಬಲ್ಲಿಯೂ ಅನ್ವಯಿಸಬೇಕು.

ಇಲ್ಲಿ 'ವಿಭಿನ್ನೋ ವಿಶ್ವತೋ ವಿಷ್ಣುಃ' ಎಂದು ಈಶ್ವರಧರ್ಮಿಕ ಭೇದಮಾತ್ರ ಪ್ರಕೃತವಾದರೂ 'ವಿಶ್ವ' ಶಬ್ದದಿಂದ ಜೀವಜಡ ಭೇದವೂ ಸೂಚಿತವಾಗುವುದರಿಂದ ಅದನ್ನೂ ಇಟ್ಟುಕೊಳ್ಳುವ ಅಭಿಪ್ರಾಯದಿಂದ 'ಭೇದೇ ಪ್ರಮಾಣಾಭಾವ' ಎಂದು ಭೇದಸಾಮಾನ್ಯಗ್ರಹಣ ಮಾಡಿದ್ದಾರೆ. 'ಭೇದದಲ್ಲಿ ಪ್ರಮಾಣವಿಲ್ಲದಿರುವುದರಿಂದ' ಎಂದು ಪೂರ್ವಪಕ್ಷಿ ಹೇಳುವುದು, ಭೇದಸಾಧಕವಾದ ಸ್ವತಂತ್ರತ್ವಾದಿ ಧರ್ಮಗಳು ಸರಿಯಾದ ಪ್ರಮಾಣಗಳಾಗಲಾರವು ಎನ್ನುವ ಅಭಿಮಾನದಿಂದ. ಪ್ರಮಾಣಗಳು ಸರಿಯಲ್ಲ ಎಂಬುದನ್ನೇ ಪೂರ್ವಪಕ್ಷಿಯು 'ತಥಾಹಿ' ಎಂದು ಮುಂತಾಗಿ, 'ಇತಿ ಪೂರ್ವಪಕ್ಷ ಸಂಕ್ಷೇಪಃ' ಎಂಬಲ್ಲಿವರೆಗೆ ಸಮರ್ಥಿಸಿಕೊಳ್ಳುತ್ತಾನೆ—

**न तावदिति । नन्विदमसङ्गतम् । स्वातन्त्र्यादिरूपविरुद्धधर्म-हेतुकानुमानस्यैवाद्यपद्योक्ततया तत्प्रतिक्षेपस्यैव कर्तव्यत्वात् । मैवम् । तत्र प्रमुखपदेन भेदग्राहिप्रत्यक्षागमविषयत्वस्यापि विवक्षितत्त्वेन प्रमाणत्रयस्यैव लाभात् ।**

**स्वभावतः प्रत्यक्षागमयोः प्राबल्येऽपि प्रकृते प्रत्यक्षस्येश्वरीयस्य साध्यतया सविवादत्वादागमस्य चोपपत्तिसापेक्षत्वादनुमानस्यैव प्राधान्येन परिग्रहात्, स्वभावप्राबल्यमेव पुरस्कृत्य प्रत्यक्षस्य प्रथमं प्रतिक्षेपात् । अत एव सिद्धान्तेऽपि प्रत्यक्षादिप्रमाणत्रयं प्रदर्शयिष्यते ।**

'ನ ತಾವಜ್ಜೀವೇಶ್ವರ ಭೇದೇ ಪ್ರತ್ಯಕ್ಷಂ ಸಂಭವತಿ' ಜೀವೇಶ್ವರ ಭೇದ ವಿಷಯದಲ್ಲಿ ಪ್ರತ್ಯಕ್ಷ ಕೂಡುವುದಿಲ್ಲ ಎಂದು ಪ್ರಾರಂಭಿಸುತ್ತಾನೆ. ಆದರೆ ಇದು ಅಸಂಗತ. ಮೊದಲಿನ ಪದ್ಯದಲ್ಲಿ ಸ್ವಾತಂತ್ರ್ಯಾದಿ ವಿರುದ್ಧಧರ್ಮ ಹೇತುಕ ಅನುಮಾನವನ್ನೇ ಹೇಳಿರುವಾಗ ಅದರ ನಿರಾಕರಣೆಯನ್ನೇ ಮೊದಲಿಗೆ ಮಾಡಬೇಕಾಗಿದೆ ತಾನೆ? ನಿಜ. ಆದರೂ 'ಸ್ವತಂತ್ರತ್ವಪ್ರಮುಖೈಃ' ಎಂದು 'ಪ್ರಮುಖ' ಶಬ್ದದಿಂದ ಭೇದಸಾಧಕವಾದ ಪ್ರತ್ಯಕ್ಷ ಆಗಮಗಳೂ ವಿವಕ್ಷಿತವಾಗಿರುವುದರಿಂದ ಮೂರೂ ಪ್ರಮಾಣಗಳು ಉಕ್ತವಾಗಿವೆ.

ಸ್ವಭಾವತಃ ಪ್ರತ್ಯಕ್ಷ ಆಗಮಗಳೇ ಪ್ರಬಲವಾಗಿದ್ದರೂ ಮೊದಲಿನ ಪದ್ಯದಲ್ಲಿ ಅವು ಸ್ಪಷ್ಟವಾಗಿ ಉಕ್ತವಾಗಿಲ್ಲ. ಏಕೆಂದರೆ ಪ್ರತ್ಯಕ್ಷವು ಪ್ರಕೃತದಲ್ಲಿ ಈಶ್ವರನಿಗೆ ಭೇದವಿಷಯದಲ್ಲಿ ಬರುವ ಪ್ರತ್ಯಕ್ಷ ವಿವಕ್ಷಿತ. ಅದು ಪೂರ್ವಪಕ್ಷಿಗೆ ಸಿದ್ಧವಾಗಿಲ್ಲ, ಸಾಧನೆ ಮಾಡಬೇಕು. ಅದರಿಂದ ವಿವಾದಾಸ್ಪದವೆಂದು ಅದನ್ನು ಮೊದಲಿಗೆ ಹೇಳದೆ ಬಿಟ್ಟಿದ್ದಾರೆ.

ಆಗಮವೂ ಕೂಡ ಉಪಕ್ರಮಾದಿ ಲಿಂಗಯುಕ್ತವಾದರೆ ಮಾತ್ರ ಭೇದಸಾಧಕ ವಾಗುವುದರಿಂದ ಅದನ್ನೂ ಬಿಟ್ಟು ಸ್ವಾತಂತ್ರ್ಯಾದಿ ಧರ್ಮಹೇತುಕ ಅನುಮಾನವನ್ನೇ ಪ್ರಧಾನವಾಗಿ ಸ್ಪಷ್ಟಶಬ್ದದಿಂದ ಹೇಳಿದ್ದಾರೆ.

ಆದರೆ ಪೂರ್ವಪಕ್ಷಿಯು ಸ್ವಭಾವಪ್ರಾಬಲ್ಯವನ್ನೇ ಪುರಸ್ಕರಿಸಿ ಮೊದಲಿಗೆ ಪ್ರತ್ಯಕ್ಷವನ್ನೇ ನಿರಾಕರಿಸುತ್ತಿದ್ದಾನೆ.

ಹೀಗೆ ಮೂರೂ ಪ್ರಮಾಣಗಳು ಮೊದಲಿನ ಪದ್ಯದಲ್ಲಿ ವಿವಕ್ಷಿತವಾದ್ದರಿಂದ ಸಿದ್ಧಾಂತ ದಲ್ಲಿಯೂ ಮುಂದೆ ಪ್ರತ್ಯಕ್ಷಾದಿ ಮೂರೂ ಪ್ರಮಾಣಗಳನ್ನು ತೋರಿಸುತ್ತಾರೆ.

**ಪೂರ್ವಪಕ್ಷ – ಜೀವೇಶ್ವರ ಭೇದವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲ**

**जीवेश्वरभेद इति । आत्मधर्मिकात्मान्तरप्रतियोगिकभेद इत्यर्थः। ईश्वरधर्मिकजीवभेदे जीवधर्मिकेश्वरभेदे मिथोजीवभेदे चेति यावत् । अत एव सामान्यत आत्मनानात्व साधकानुमाननिराकरणसङ्गतिः । ईश्वरेत्यात्मान्तरोपलक्षणम् ।**

'ಜೀವೇಶ್ವರಭೇದ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣ ಸಂಭವವಿಲ್ಲ' ಎಂಬಲ್ಲಿ 'ಜೀವೇಶ್ವರಭೇದ' ವೆಂದರೆ ಆತ್ಮಧರ್ಮಿಕ ಆತ್ಮಾಂತರ ಪ್ರತಿಯೋಗಿಕ ಭೇದ ಎಂದರ್ಥ. ಏಕೆಂದರೆ ಈಶ್ವರನೂ ಒಬ್ಬ ಆತ್ಮನೆ. ಜೀವನೂ ಜೀವಾತ್ಮನೆ. ಈಶ್ವರಧರ್ಮಿಕ ಜೀವಭೇದ ವಿಷಯದಲ್ಲಿಯೂ ಜೀವಧರ್ಮಿಕ ಈಶ್ವರಭೇದ ವಿಷಯದಲ್ಲಿಯೂ ಪರಸ್ಪರ ಜೀವಭೇದ ವಿಷಯದಲ್ಲಿಯೂ ಪ್ರತ್ಯಕ್ಷಪ್ರಮಾಣವಿಲ್ಲ ಎಂದು ಅಭಿಪ್ರಾಯ. ಅದರಿಂದಲೇ ಪೂರ್ವಪಕ್ಷಿ ಮುಂದೆ ಸಾಮಾನ್ಯವಾಗಿ ಆತ್ಮ ನಾನಾತ್ವ ಸಾಧಕ ಅನುಮಾನ ನಿರಾಕರಣ ಮಾಡುವುದು ಸಂಗತವಾಗುತ್ತದೆ. 'ಈಶ್ವರಧರ್ಮಿಕ ಭೇದವಾಗಲಿ ಈಶ್ವರ ಪ್ರತಿಯೋಗಿಕಭೇದವಾಗಲಿ ಪ್ರತ್ಯಕ್ಷಗೋಚರವಾಗ'ದೆಂದು ಹೇಳುವಲ್ಲಿಯೂ 'ಈಶ್ವರ' ಶಬ್ದದಿಂದ ಆತ್ಮಾಂತರವನ್ನು ಉಪಲಕ್ಷಣವಾಗಿಟ್ಟುಕೊಳ್ಳಬೇಕು.

**'ಭಿನ್ನ' ಎಂದರೆ ಭೇದಪ್ರತಿಯೋಗಿ ಅಲ್ಲ**

यत्तु— विष्णोर्विश्वतो भिन्नत्वं विश्वप्रतियोगिकभेदवत्त्वं

**विश्वनिष्ठभेदप्रतियोगित्वं वा स्यात् । तदुभयमपि न सम्भवतीत्याशयेन भेदद्वये प्रत्यक्षप्रतिक्षेप इति–तन्न । भिन्नशब्दस्य भेदप्रतियोग्यबोधकत्वेन तादृशविकल्पायोगात् । अन्यथा घटो घटभिन्न इति प्रयोगापत्तेः ।**

**व्यासज्यवृत्तिधर्मावच्छिन्नानुयोगिताक तदेकदेशप्रतियोगिताक भेदानुपगमेऽपि घटपटोभयं घटभिन्नमिति प्रयोगापत्तेश्च ।**

ಇಲ್ಲಿ ಕೆಲವರು 'ವಿಷ್ಣುವಿಗೆ ವಿಶ್ವತಃ ಭಿನ್ನತ್ವ' ಎಂದರೆ ವಿಶ್ವಪ್ರತಿಯೋಗಿಕ ಭೇದವತ್ತ್ವವೂ ಆಗಬಹುದು. ವಿಶ್ವನಿಷ್ಠ ಭೇದ ಪ್ರತಿಯೋಗಿತ್ವವೂ ಆಗಬಹುದು. ಅವೆರಡೂ ಅಸಂಭವ ಎಂಬ ಅಭಿಪ್ರಾಯದಿಂದ ಎರಡು ಭೇದಗಳ ವಿಷಯದಲ್ಲಿಯೂ ಪ್ರತ್ಯಕ್ಷವನ್ನು ಪೂರ್ವಪಕ್ಷಿ ನಿರಾಕರಣೆ ಮಾಡುತ್ತಿದ್ದಾನೆ' ಎನ್ನುತ್ತಾರೆ.

ಇದು ಸರಿಯಲ್ಲ. 'ಭಿನ್ನ' ಶಬ್ದಕ್ಕೆ ಭೇದಅನುಯೋಗಿ ಅರ್ಥ, ಹೊರತು ಭೇದಪ್ರತಿಯೋಗಿಯನ್ನು ಆ ಶಬ್ದ ಹೇಳಲಾರದು. ಅದರಿಂದ ಭೇದವತ್ತ್ವ-ಭೇದಪ್ರತಿಯೋಗಿತ್ವಗಳಲ್ಲಿ ಯಾವುದನ್ನಾದರೂ 'ಭಿನ್ನ' ಶಬ್ದ ಹೇಳಬಹುದೆನ್ನುವುದು ಯುಕ್ತವಲ್ಲ. ಹೇಳಬಹುದೆಂದು ಒಪ್ಪುವ ಪಕ್ಷದಲ್ಲಿ 'ಘಟವು ಘಟಭಿನ್ನ' ಎನ್ನುವ ಪ್ರಯೋಗ ಸಾಧುವಾಗಬೇಕಾದೀತು. ಘಟವು ಘಟಭೇದಕ್ಕೆ ಪ್ರತಿಯೋಗಿಯೇ ಆಗಿರುವುದರಿಂದ ಆ ಅರ್ಥದಲ್ಲಿ ಹಾಗೆ ಪ್ರಯೋಗ ಮಾಡಿದರೆ ತಪ್ಪಾಗಲಾರದು ತಾನೆ?

ವ್ಯಾಸಜ್ಯವೃತ್ತಿಧರ್ಮಾವಚ್ಛಿನ್ನಾನುಯೋಗಿಕ ತದೇಕದೇಶಪ್ರತಿಯೋಗಿಕ ಭೇದವನ್ನು ಒಪ್ಪುವುದಿಲ್ಲವಾದರೂ 'ಘಟಪಟ ಉಭಯವು ಘಟಭಿನ್ನ' ಎಂದು ಪ್ರಯೋಗಿಸಿದರೆ ಅದನ್ನೂ ಸಾಧುವೆಂದು ಒಪ್ಪಬೇಕಾದೀತು.

**ಉಭಯದಲ್ಲಿ ಪ್ರತ್ಯೇಕ ಭೇದವಿಲ್ಲ**

ವಿವರಣೆ : ವಸ್ತುತಃ ಘಟವು ಘಟಪಟ ಉಭಯಕ್ಕಿಂತ ಭಿನ್ನ. ಪಟವೂ ಘಟಪಟ ಉಭಯಕ್ಕಿಂತ ಭಿನ್ನವೇ. ಹೊರತು, ಘಟಪಟ ಉಭಯವು 'ಘಟಭಿನ್ನ'ವಲ್ಲ, 'ಪಟಭಿನ್ನ'ವೂ ಅಲ್ಲ. ಘಟವೂ ಆಗಿದೆ, ಪಟವೂ ಆಗಿದೆ. ಘಟಪಟಉಭಯತ್ವರೂಪವಾದ ವ್ಯಾಸಜ್ಯವೃತ್ತಿಧರ್ಮದಿಂದ ಅವಚ್ಛಿನ್ನ ಅನುಯೋಗಿತಾಕವಾದ ಭೇದವು ಏಕದೇಶವಾದ ಘಟಪ್ರತಿಯೋಗಿಕವಾಗುವುದಿಲ್ಲ. ಪಟಪ್ರತಿಯೋಗಿತಾಕವೂ ಆಗುವುದಿಲ್ಲ. ಏಕದೇಶಘಟಅನುಯೋಗಿಕವಾದ ಭೇದವು ವ್ಯಾಸಜ್ಯವೃತ್ತಿ ಉಭಯತ್ವಾವಚ್ಛಿನ್ನ ಪ್ರತಿಯೋಗಿಕವಾಗಬಹುದು. ಈಗ 'ಉಭಯಂ ಘಟಭಿನ್ನಂ' ಎಂದು ಹೇಳಿದಾಗ, 'ಭಿನ್ನ' ಶಬ್ದವು ಭೇದಪ್ರತಿಯೋಗಿಯನ್ನು ಹೇಳಿದರೆ, ಘಟಶಬ್ದವು ಭೇದಾನುಯೋಗಿಪರವಾದರೆ 'ಏಕದೇಶ ಘಟದಲ್ಲಿರುವ ಭೇದಕ್ಕೆ ಉಭಯವು ಪ್ರತಿಯೋಗಿ' ಎಂದಂತಾಗುವುದರಿಂದ

ಏಕದೇಶದಲ್ಲಿ ಉಭಯಭೇದವೇ ಈ 'ಭಿನ್ನ'ಶಬ್ದದಿಂದ ಉಕ್ತವಾಗುತ್ತದೆ. ಘಟದಲ್ಲಿರುವ ಭೇದಕ್ಕೆ ಉಭಯವು ಪ್ರತಿಯೋಗಿ ಎಂದು ಅಬಾಧಿತ ಅರ್ಥ ತಿಳಿದುಬರುತ್ತದೆ. ಅದರಿಂದ ಈ ಪ್ರಯೋಗವನ್ನು ಸಾಧುವೆಂದೇ ಒಪ್ಪಬೇಕಾಗುತ್ತದೆ. ಯಾರೂ ಇದನ್ನು ಒಪ್ಪುವುದಿಲ್ಲ. ಅದರಿಂದ 'ಭಿನ್ನ' ಶಬ್ದಕ್ಕೆ ಭೇದಾನುಯೋಗಿಯೇ ಅರ್ಥ ಹೊರತು, ಕೆಲವರು ಹೇಳುವಂತೆ ಭೇದಪ್ರತಿಯೋಗಿಯೂ ಅರ್ಥವಾಗಬಹುದೆಂದು ಒಪ್ಪಲಾಗದು.

ಅನೇಕ ವೃತ್ತಿಯಾಗಿರುವ ದ್ವಿತ್ವ ಉಭಯತ್ವಾದಿ ಧರ್ಮಗಳನ್ನು ಏಕವೃತ್ತಿಯಾಗಿ ವ್ಯವಹರಿಸುವುದಿಲ್ಲ. ಅನೇಕ ವೃತ್ತಿಯಾಗಿಯೇ ವ್ಯವಹರಿಸುತ್ತಾರೆ. 'ಒಂದು ಘಟವು ಎರಡು ಪದಾರ್ಥ' ಎನ್ನುವುದಿಲ್ಲ. 'ಘಟಪಟಗಳೆರಡು ಎರಡು ಪದಾರ್ಥಗಳು' ಎಂದೇ ವ್ಯವಹಾರ. ವಸ್ತುತಃ ಒಂದು ಘಟದಲ್ಲಿಯೂ ಒಂದು ಪಟದಲ್ಲಿಯೂ ದ್ವಿತ್ವವು ಪ್ರತ್ಯೇಕವಾಗಿ ಸಮವಾಯ ಸಂಬಂಧದಿಂದ ಇದೆ. ಆದರೂ ಘಟಪಟಗಳಲ್ಲಿ ಎರಡರಲ್ಲಿರುವ ಪರ್ಯಾಪ್ತಿ ಎಂಬ ಒಂದು ಸಂಬಂಧದಿಂದಲೆ ಒಂದು ದ್ವಿತ್ವದ ವ್ಯವಹಾರ ಮಾಡುತ್ತಾರೆ. ಈ ಪರ್ಯಾಪ್ತಿಯೂ ಪುನಃ ಎರಡರಲ್ಲಿಯೇ ಪರ್ಯಾಪ್ತಿ ಸಂಬಂಧದಿಂದ ಇದೆ. ಅದು, ಏಕಮಾತ್ರವೃತ್ತಿ ತದ್ವ್ಯಕ್ತಿತ್ವಾವಚ್ಛಿನ್ನವಾಗುವುದಿಲ್ಲ. ಉಭಯಗತ ಉಭಯತ್ವಾವಚ್ಛಿನ್ನವೇ ಆಗಿರುತ್ತದೆ. ಇಂಥ ಧರ್ಮ ವ್ಯಾಸಜ್ಯವೃತ್ತಿ ಎನಿಸುತ್ತದೆ.

**ಧರ್ಮಿಪ್ರತಿಯೋಗಿ ಪ್ರತ್ಯಕ್ಷವಿಲ್ಲದ್ದರಿಂದ ಈಶ್ವರಭೇದ ಪ್ರತ್ಯಕ್ಷವಿಲ್ಲ**

**अप्रत्यक्षत्वादिति ।** धर्मिप्रतियोगिप्रत्यक्षयोरभावप्रत्यक्षहेतुत्वादिति भावः ।

यद्यप्याद्यपद्योक्तमीश्वरधर्मिकविश्वप्रतियोगिकभेदसाधकानुमानमेवादौ प्रतिक्षेप्यम् । तथापि सामान्यतश्चेतनभेदसाधकानुमानस्याभासत्वे विशेषतस्तत्साधकस्य सुतरामाभासत्वमित्येतत्सूचनाय सामान्यतश्चेतनभेदसाधकानुमानानि तावद्दूषयति– **आत्मत्वम् इति ।**

'ಈಶ್ವರನು ಅಪ್ರತ್ಯಕ್ಷನಾದ್ದರಿಂದ ಈಶ್ವರಭೇದವು ಪ್ರತ್ಯಕ್ಷವಾಗುವುದಿಲ್ಲ' ಎಂದು ಪೂರ್ವಪಕ್ಷಿ ಹೇಳುತ್ತಿದ್ದಾನೆ. ಅಭಾವಪ್ರತ್ಯಕ್ಷಕ್ಕೆ ಧರ್ಮಿ ಪ್ರತಿಯೋಗಿಗಳ ಪ್ರತ್ಯಕ್ಷ ಕಾರಣ. ಅದರಿಂದ ಈಶ್ವರ ಧರ್ಮಿಕ ಅಥವಾ ಈಶ್ವರ ಪ್ರತಿಯೋಗಿಕ ಭೇದ ಪ್ರತ್ಯಕ್ಷವಾಗಲಾರದು ಎಂದು ಅಭಿಪ್ರಾಯ.

ಮೊದಲನೇ ಪದ್ಯದಲ್ಲಿ ಈಶ್ವರಧರ್ಮಿಕ ವಿಶ್ವಪ್ರತಿಯೋಗಿಕ ಭೇದಕ್ಕೆ ಸಾಧಕವಾದ ಸ್ವತಂತ್ರತ್ವಾದ್ಧಿ ವಿರುದ್ಧ ಧರ್ಮರೂಪ ಅನುಮಾನವೇ ಉಕ್ತವಾಗಿದೆ. ಅದನ್ನೇ ಪೂರ್ವಪಕ್ಷಿಯು

ಮೊದಲಿಗೆ ನಿರಾಕರಿಸಬೇಕಾಗಿತ್ತು. ಆದರೂ ಸಾಮಾನ್ಯವಾಗಿ ಚೇತನಭೇದಕ್ಕೆ ಸಾಧಕ ಅನುಮಾನವನ್ನು ನಿರಾಕರಿಸಿದರೆ ವಿಶೇಷವಾಗಿ ಅದನ್ನು ಸಾಧಿಸುವ ಅನುಮಾನ ಸುತರಾಂ ನಿರಾಕೃತವಾಗುತ್ತದೆ ಎಂದು ಸೂಚಿಸುವುದಕ್ಕಾಗಿ ಸಾಮಾನ್ಯವಾಗಿ ಚೇತನಭೇದಸಾಧಕವಾದ ಅನುಮಾನಗಳನ್ನು ಮೊದಲಿಗೆ ನಿರಾಕರಿಸುತ್ತಾನೆ 'ಆತ್ಮತ್ವಂ ನಾನಾ ವ್ಯಕ್ತಿನಿಷ್ಠಂ' ಎಂದು ಮುಂತಾಗಿ.

**ಆತ್ಮ ಒಂದೇ ಆದ್ದರಿಂದ ಆತ್ಮತ್ವ ಜಾತಿಯಲ್ಲ**

**नाप्यनुमानम् । आत्मत्वं नानाव्यक्तिनिष्ठं जातित्वात् पृथिवीत्ववदित्यस्यासिद्धेः । आत्मैक्यवादिना व्यक्तिभेदस्य बाधितत्वेनात्मत्वस्य जातित्वानङ्गीकारात् ।**

**ಅನುಮಾನವೂ ಭೇದ ಸಾಧಕವಾಗುವುದಿಲ್ಲ. ಆತ್ಮತ್ವವು ನಾನಾ ವ್ಯಕ್ತಿನಿಷ್ಠವಾಗಿದೆ. ಅದು ಜಾತಿಯಾದುದರಿಂದ, ಪೃಥಿವೀತ್ವದಂತೆ' ಎಂದು ಅನುಮಾನ ಹೇಳಿದರೆ ಅಸಿದ್ಧಿ ದೋಷವಿದೆ. ಏಕೆಂದರೆ ಆತ್ಮ ಒಂದೇ ಎನ್ನುವ ಅದ್ವೈತಿಮತದಲ್ಲಿ ವ್ಯಕ್ತಿಭೇದವೆಂಬುದು ಬಾಧಿತವಾದ್ದರಿಂದ ಆತ್ಮತ್ವವನ್ನು ಜಾತಿ ಎಂದು ಒಪ್ಪಿಲ್ಲ.**

आत्मपदप्रवृत्तिनिमित्तमित्यर्थः । तेनात्मत्वस्य जातिरूपस्य पक्षत्वे पक्षाप्रसिद्धिः । तद्व्यक्तित्वरूपस्य तथात्वे च बाध इति शंकानवकाशः ।

**ಜಾತಿಯ ನಾನಾ ವ್ಯಕ್ತಿನಿಷ್ಠತ್ವದ ಪರಿಷ್ಕಾರ**

**नानाव्यक्तिनिष्ठमिति ।** अनेकसमवेतमित्यर्थः । स्वाश्रयप्रतियोगिकभेदवद्वृत्तीति यावत् । न चैवमात्मत्वस्यात्मघटोभयसमवेतत्वसिद्ध्याऽर्थान्तरमिति वाच्यम् । आत्मत्वे घटादिसमवेतत्वस्य बाधितत्वेनासिद्धेः ।

सिद्धौ वाऽत्मत्वाश्रयनानात्वसिद्ध्योद्देश्यसिद्धेः।

एतच्च तार्किकरीत्या । सिद्धान्ते जातेरननुगतत्वादिति ध्येयम् ।

'ಆತ್ಮತ್ವ'ವೆಂದರೆ ಇಲ್ಲಿ 'ಆತ್ಮ' ಪದ ಪ್ರವೃತ್ತಿನಿಮಿತ್ತ ವಿವಕ್ಷಿತವಾಗಿದೆ. ಏಕೆಂದರೆ

ಜಾತಿರೂಪವಾದ ಆತ್ಮತ್ವವನ್ನು ಪಕ್ಷಮಾಡಿದರೆ, ಪಕ್ಷ ಅಪ್ರಸಿದ್ಧವಾಗುವುದು. ಆಯಾ ಆತ್ಮನಲ್ಲಿರುವ ತದ್‌ವ್ಯಕ್ತಿತ್ವವನ್ನು ಪಕ್ಷಮಾಡಿದರೆ ಅದು ನಾನಾ ವ್ಯಕ್ತಿನಿಷ್ಠವಲ್ಲವಾದ್ದರಿಂದ ನಾನಾವ್ಯಕ್ತಿನಿಷ್ಠತ್ವ ಸಾಧನೆ ಮಾಡುವಾಗ ಬಾಧ ದೋಷವು ಬರುವುದು. ಈ ಶಂಕೆಗಳಿಗೆ ಅವಕಾಶ ಕೊಡಬಾರದೆಂದು 'ಆತ್ಮತ್ವ'ವೆಂದರೆ 'ಆತ್ಮಪದ ಪ್ರವೃತ್ತಿನಿಮಿತ್ತ' ಎಂದೇ ವಿವಕ್ಷೆ ಮಾಡಲಾಗಿದೆ.

'ನಾನಾ ವ್ಯಕ್ತಿನಿಷ್ಠ'ವಾಗಿದೆ ಎಂದರೆ ಅನೇಕ ವ್ಯಕ್ತಿಗಳಲ್ಲಿ ಸಮವೇತವಾಗಿದೆ ಎಂದರ್ಥ. ಸ್ವಾಶ್ರಯ ಪ್ರತಿಯೋಗಿಕ ಭೇದವದ್ ವೃತ್ತಿಯಾಗಿದೆ ಎಂದು ಪರಿಷ್ಕಾರ. 'ಸ್ವ' ಎಂದು ಆತ್ಮತ್ವ ವಿವಕ್ಷಿತವಾಗಿದೆ. 'ಸ್ವಾಶ್ರಯ' ಆತ್ಮತ್ವಾಶ್ರಯ ಒಬ್ಬ ಆತ್ಮ. 'ಸ್ವಾಶ್ರಯ ಪ್ರತಿಯೋಗಿಕ ಭೇದ' ಆ ಒಬ್ಬ ಆತ್ಮನಿಗಿಂತ ಇನ್ನೊಬ್ಬ ಆತ್ಮ ಬೇರೆಯಾಗಿದ್ದಾನೆ ಎಂದು ಭೇದ. ಭೇದ ಉಳ್ಳ ಆ ಇನ್ನೊಬ್ಬ ಆತ್ಮನಲ್ಲಿಯೂ 'ಸ್ವ' ಎನಿಸಿದ ಆತ್ಮತ್ವವಿದೆ. ಅದರಿಂದ ಒಂದು ಆತ್ಮತ್ವವು ಅನೇಕ ಆತ್ಮಗಳಲ್ಲಿ ಸಮವೇತವಾಗಿ ಇದೆ ಎಂದಂತಾಗುವುದು.

'ಅನೇಕ ಸಮವೇತ' ಎಂಬಲ್ಲಿ 'ಅನೇಕ'ಗಳು ಆತ್ಮಗಳೇ ಆಗಬೇಕೆಂದೇನೂ ಹೇಳಿಲ್ಲ. ಅಂದರೆ, ಒಂದು ಆತ್ಮತ್ವವು ಸ್ವಾಶ್ರಯವಾದ ಆತ್ಮನಿಗಿಂತ ಬೇರೆಯಾದ ಘಟದಲ್ಲಿದ್ದರೂ ಸ್ವಾಶ್ರಯ ಪ್ರತಿಯೋಗಿಕ ಭೇದವದ್ ವೃತ್ತಿಯೇ ಆಗುವುದು. ಅದರಿಂದ ಆತ್ಮ ಅನೇಕ ಎಂದು ಸಿದ್ಧವಾಗುವುದಿಲ್ಲ, ಎಂಬ ಶಂಕೆ ಬರಬಹುದು. ಆದರೆ ಆತ್ಮತ್ವವು ಘಟದಲ್ಲಿ ಬಾಧಿತವಾದ್ದರಿಂದ 'ಘಟ ಮತ್ತು ಆತ್ಮ' ಎಂಬ ಈ ಅನೇಕ ವ್ಯಕ್ತಿಗಳಲ್ಲಿ ಆತ್ಮತ್ವವು ಈ ಅನುಮಾನದಿಂದ ಸಿದ್ಧವಾಗಲಿ, ಎನ್ನುವಂತಿಲ್ಲ. 'ಒಬ್ಬ ಆತ್ಮ ಮತ್ತು ಇನ್ನೊಬ್ಬ ಆತ್ಮ' ಎಂಬ ಅನೇಕ ವ್ಯಕ್ತಿಗಳಲ್ಲಿಯೇ ಆತ್ಮತ್ವ ಅಬಾಧಿತವಾದ್ದರಿಂದ ಈ ಅನುಮಾನದಿಂದ ಸಿದ್ಧವಾಗುವುದು. ಆತ್ಮರಿಗೆ ಭೇದ ಸಿದ್ಧವಾಗುವುದು.

ಒಂದು ವೇಳೆ ಘಟದಲ್ಲಿ ಆತ್ಮತ್ವವು ಈ ಅನುಮಾನದಿಂದ ಸಿದ್ಧವಾದರೂ ದ್ವೈತಿಗಳಿಗೆ ಅವರ ಉದ್ದೇಶ ನೆರವೇರಿದಂತಾಗುವುದು. ಏಕೆಂದರೆ 'ಆತ್ಮತ್ವವು ಅನೇಕ ವ್ಯಕ್ತಿಗಳಲ್ಲಿ ಇರುತ್ತದೆ' ಎಂದು ಸಾಧಿಸುವುದೇ ಅವರ ಈಗಿನ ಉದ್ದೇಶ್ಯ. ಅದ್ವೈತಿಗಳು ಆತ್ಮತ್ವವನ್ನು ಅನೇಕ ವ್ಯಕ್ತಿಗಳಲ್ಲಿ ಅಂಗೀಕರಿಸಿಲ್ಲ.

ಈ ಅನುಮಾನ ತಾರ್ಕಿಕ ರೀತಿಯಿಂದ ಉಕ್ತವಾಗಿದೆ. ದ್ವೈತಸಿದ್ಧಾಂತದಲ್ಲಿ ಆತ್ಮತ್ವವು ಜಾತಿಯಾದರೂ ಅನೇಕ ವ್ಯಕ್ತಿಗಳಲ್ಲಿರುವುದಿಲ್ಲ. ಒಬ್ಬೊಬ್ಬ ಆತ್ಮನಲ್ಲಿ ಇರುವ ಆತ್ಮತ್ವಗಳೂ ಬೇರೆ ಬೇರೆಯೆ.

**वस्तुतो निरुक्तभेदवद्वृत्तित्वं तादृशभेदवद्वृत्तिभेदप्रतियोगितायां स्वरूपतोऽनवच्छेदकत्वम् ।**

**आत्मत्वस्य च प्रतिव्यक्ति भिन्नत्वेऽप्ययमात्मा नात्मेत्यादिप्रतीत्यभावेन स्वरूपतस्तत्तदात्मवृत्तिभेदप्रतियोगितानवच्छेदकत्वान्न दोषः ।**

स्वरूपत इति विशेषणात्तत्तद्व्यक्तित्वेनात्मत्वस्यात्मान्तरवृत्ति-भेदप्रतियोगितावच्छेदकत्वेऽपि न क्षतिः । एवमग्रेऽप्यूह्यम् ।

हेतूकृतं जातित्वं च न नित्यानेकसमवेतत्वम् । नित्यत्ववैयर्थ्यात् । साध्याविशिष्टत्वाच्च । किं त्वखण्डोपाधिर्जातिपदवाच्यत्वं वेति ध्येयम् ।

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 2 ನೋಡಿರಿ.)

ವಸ್ತುತಃ 'ಸ್ವಾಶ್ರಯಪ್ರತಿಯೋಗಿಕ ಭೇದವದ್ ವೃತ್ತಿತ್ವ'ವನ್ನು ಇನ್ನೂ ಪರಿಷ್ಕಾರ ಮಾಡಿ, 'ಸ್ವಾಶ್ರಯ ಪ್ರತಿಯೋಗಿಕ ಭೇದವದ್ ವೃತ್ತಿ ಭೇದ ಪ್ರತಿಯೋಗಿತಾಯಾಂ ಸ್ವರೂಪತಃ ಅನವಚ್ಛೇದಕತ್ವಂ' ಎಂದು ಹೇಳಬೇಕು. ಆಗ ಸಿದ್ಧಾಂತ ರೀತಿಯಿಂದಲೂ ಈ ಅನುಮಾನವು ಆತ್ಮಭೇದ ಸಾಧಕವಾಗುತ್ತದೆ. ಏಕೆಂದರೆ ಆತ್ಮತ್ವವು ಪ್ರತಿ ಆತ್ಮರಲ್ಲಿ ಬೇರೆ ಬೇರೆಯೇ ಇದ್ದರೂ 'ಈ ಆತ್ಮನು ಆತ್ಮನೆ ಅಲ್ಲ' ಎಂದು ಪ್ರತೀತಿ ಯಾರಿಗೂ ಇಲ್ಲ. 'ಈ ಆತ್ಮನು ಆ ಆತ್ಮನಲ್ಲ' ಎಂದೇ ಭೇದಪ್ರತೀತಿ. ಆಗ ಭೇದ ಪ್ರತಿಯೋಗಿತಾದಲ್ಲಿ 'ಆ ಆತ್ಮತ್ವ'ವೇ ಅವಚ್ಛೇದಕ ಹೊರತು ಕೇವಲ 'ಆತ್ಮತ್ವ'ವು ಸ್ವರೂಪದಿಂದ ಅವಚ್ಛೇದಕವಾಗುವುದಿಲ್ಲ.

ಸ್ವರೂಪದಿಂದ ಅವಚ್ಛೇದಕವಾಗುವುದೆಂದರೆ 'ಆ' ಆತ್ಮ 'ಈ' ಆತ್ಮ ಎಂದು ಮುಂತಾಗಿ ವಿಶೇಷಣಗಳೇನೂ ಇಲ್ಲದೆ 'ಆತ್ಮ' ಎಂದೇ ಭೇದಕ್ಕೆ ಪ್ರತಿಯೋಗಿಯಾಗಬೇಕು. 'ಆತ್ಮನಲ್ಲ' ಎಂದೇ ಪ್ರತೀತಿ ಇರಬೇಕು. ಹಾಗೆ ಪ್ರತೀತಿ ಇಲ್ಲ. ಸ್ವರೂಪದಿಂದ ಆತ್ಮತ್ವವು ಅವಚ್ಛೇದಕವಾಗಿಲ್ಲ. ಅದರಿಂದ 'ಸ್ವರೂಪತಃ' ಅನವಚ್ಛೇದಕತ್ವಂ ಎಂದು ವಿಶೇಷಣ ಹಾಕಿ ಪರಿಷ್ಕಾರ ಮಾಡಬೇಕು. ಸ್ವರೂಪತಃ ಅವಚ್ಛೇದಕತ್ವವಿಲ್ಲ ಎಂದರ್ಥ. 'ಆ ಆತ್ಮ ಈ ಆತ್ಮ' ಎಂದು ವಿಶೇಷಣ ಸಹಿತವಾಗಿಯೇ ಆತ್ಮತ್ವವು ಸ್ವಾಶ್ರಯಪ್ರತಿಯೋಗಿಕ ಭೇದವದ್ ವೃತ್ತಿಭೇದ ಪ್ರತಿಯೋಗಿತೆಯಲ್ಲಿ ಅವಚ್ಛೇದಕವಾಗುವುದು, ಅಂದರೆ ಆ ಆತ್ಮ ಈ ಆತ್ಮ' ಎಂದೇ ಅನೇಕ ಆತ್ಮವ್ಯಕ್ತಿಗಳಲ್ಲಿ ಆತ್ಮತ್ವವು ಈ ಅನುಮಾನದಿಂದ ಸಿದ್ಧವಾಗುವುದು, ಆತ್ಮರಿಗೆ ಭೇದ ಸಿದ್ಧವಾಗುವುದು.

ವ್ಯಾಸಜ್ಯವೃತ್ತಿಯಾದ ಒಂದು ಪ್ರತಿಯೋಗಿತಾವಚ್ಛೇದಕತಾವು ಎರಡರಲ್ಲಿ ಪರ್ಯಾಪ್ತಿ ಸಂಬಂಧದಿಂದ ಇದೆ ಎಂದು ಒಂದು ಮತ. ಎರಡು ಬೇರೆಬೇರೆ ಅವಚ್ಛೇದಕತಾಗಳು ಸ್ವರೂಪ ಸಂಬಂಧದಿಂದ ಇವೆ ಎಂದು ಇನ್ನೊಂದು ಮತ.

ಇಲ್ಲಿ ಆತ್ಮತ್ವದೊಂದಿಗೆ ಆದರ ವಿಶೇಷಣವೂ ಪ್ರತಿಯೋಗಿತಾದಲ್ಲಿ ಅವಚ್ಛೇದಕವಾಗಿರುತ್ತದೆ. ಅಂದರೆ ಎರಡೂ ಪ್ರತಿಯೋಗಿತಾವಚ್ಛೇದಕಗಳು ಎಂದು ಎಂದು ಪಕ್ಷ. ಆತ್ಮತ್ವವು ವಿಶೇಷಣ ಯುಕ್ತವಾದಾಗಲೇ ಅವಚ್ಛೇದಕವಾಗುವುದು, ಅಂದರೆ ಆತ್ಮತ್ವ ಮಾತ್ರದಲ್ಲಿರುವ ಅವಚ್ಛೇದಕತಾದಲ್ಲಿ ವಿಶೇಷಣವು ಅವಚ್ಛೇದಕ ಹೊರತು ವಿಶೇಷಣವು ನೇರವಾಗಿ ಪ್ರತಿಯೋಗಿತಾದಲ್ಲಿ ಅವಚ್ಛೇದಕ

ವಾಗುವುದಿಲ್ಲ, ಆತ್ಮತ್ವನಿಷ್ಠ ಅವಚ್ಛೇದಕತಾವೇ ವಿಶೇಷಣ ನಿಷ್ಠ ಅವಚ್ಛೇದಕತಾಕ್ಕೆ ನಿರೂಪಕ ಹೊರತು ಅದಕ್ಕೆ ಪ್ರತಿಯೋಗಿತಾವು ನಿರೂಪಕವಲ್ಲ ಎಂದು ಇನ್ನೊಂದು ಪಕ್ಷ.

ಮೊದಲನೇ ಪಕ್ಷದಲ್ಲಿ ಎರಡು ಅವಚ್ಛೇದಕತಾಗಳಿಗೆ ಒಂದು ಪ್ರತಿಯೋಗಿತೆಯೆ ನಿರೂಪಕ. ವಿಶೇಷಣ ನಿಷ್ಠ ಅವಚ್ಛೇದಕತೆಗೆ ನಿರೂಪಕವಾದ ಪ್ರತಿಯೋಗಿತೆಯಿಂದಲೇ ಆತ್ಮತ್ವನಿಷ್ಠ ಅವಚ್ಛೇದಕತೆಯೂ ನಿರೂಪಿತವಾಗುತ್ತದೆ. ಅವಚ್ಛೇದಕತೆಗಳು ಎರಡೂ ಪರಸ್ಪರ ಸ್ವನಿರೂಪಕ ನಿರೂಪಿತವಾಗುತ್ತವೆ ಎಂದರ್ಥ. ಆತ್ಮತ್ವ ನಿಷ್ಠ ಅವಚ್ಛೇದಕತೆಯು 'ಸ್ವನಿರೂಪಕ ನಿರೂಪಿತತ್ವ' ಸಂಬಂಧದಿಂದ ವಿಶೇಷಣನಿಷ್ಠ ಅವಚ್ಛೇದಕತೆಯಿಂದ ವಿಶಿಷ್ಟವಾಗಿದೆ ಎಂದಂತಾಯಿತು.

ಆತ್ಮತ್ವನಿಷ್ಠ ಅವಚ್ಛೇದಕತೆಯು ಹೀಗೆ ವಿಶೇಷಣನಿಷ್ಠ ಅವಚ್ಛೇದಕತೆಯಿಂದ ವಿಶಿಷ್ಟವಾಗದೆ, 'ವಿಶಿಷ್ಟಾನ್ಯ'ವೇ ಆದರೆ ಆ ಅವಚ್ಛೇದಕತೆಯು 'ಸ್ವರೂಪತಃ ಅವಚ್ಛೇದಕತೆ' ಎನಿಸುತ್ತದೆ.

ಎರಡನೇ ಪಕ್ಷದಲ್ಲಿ ವಿಶೇಷಣನಿಷ್ಠ ಅವಚ್ಛೇದಕತೆಗೆ ಪ್ರತಿಯೋಗಿತೆಯು ನಿರೂಪಕವಲ್ಲ, ಆತ್ಮತ್ವನಿಷ್ಠ ಅವಚ್ಛೇದಕತೆಯೇ ನಿರೂಪಕ. 'ಸ್ವನಿರೂಪಕತ್ವ' ಸಂಬಂಧದಿಂದ ವಿಶೇಷಣನಿಷ್ಠ ಅವಚ್ಛೇದಕತೆಯಿಂದ ಆತ್ಮತ್ವನಿಷ್ಠ ಅವಚ್ಛೇದಕತೆಯೆ ವಿಶಿಷ್ಟವಾಗುತ್ತದೆ. ಹೀಗೆ ಆತ್ಮತ್ವನಿಷ್ಠ ಅವಚ್ಛೇದಕತೆಯು ವಿಶೇಷಣನಿಷ್ಠ ಅವಚ್ಛೇದಕತೆಯಿಂದ ವಿಶಿಷ್ಟವಾಗದೆ, 'ವಿಶಿಷ್ಟಾನ್ಯ'ವೇ ಆದರೆ ಆಗ ಆ ಅವಚ್ಛೇದಕತೆಯು 'ಸ್ವರೂಪತಃ ಅವಚ್ಛೇದಕತೆ' ಎನಿಸುತ್ತದೆ.

ಮೇಲಿನ ಯಾವುದೇ ಪಕ್ಷದಲ್ಲಿ ಆತ್ಮತ್ವನಿಷ್ಠ ಅವಚ್ಛೇದಕತೆಯು 'ಸ್ವರೂಪತಃ ಅವಚ್ಛೇದಕತೆ' ಎನಿಸಬಾರದು. ಎರಡೂ ಪಕ್ಷಗಳಿಗೆ ಅನುಸಾರವಾಗಿ ಈ ಸ್ವರೂಪತೋಽವಚ್ಛೇದಕತೆಯನ್ನು—

ಸ್ವನಿರೂಪಕ ನಿರೂಪಿತತ್ವ – ಸ್ವನಿರೂಪಕತ್ವ – ಅನ್ಯತರ ಸಂಬಂಧೇನ
ಅವಚ್ಛೇದಕತಾ ವಿಶಿಷ್ಟಾನ್ಯಾವಚ್ಛೇದಕತ್ವಂ ಸ್ವರೂಪತೋಽವಚ್ಛೇದಕತ್ವಂ
ಎಂದು ಒಂದು ಮಾತಿನಲ್ಲಿ ಹೇಳಬಹುದಾಗಿದೆ.

ಇಲ್ಲಿ 'ಘಟವು ಆತ್ಮವಲ್ಲ' ಎಂಬ ಭೇದವಿಟ್ಟುಕೊಂಡು, ಸ್ವಾಶ್ರಯಪ್ರತಿಯೋಗಿಕ ಭೇದವತ್ತೆಂದು ಘಟವಿಟ್ಟುಕೊಂಡು, ತದ್‌ವೃತ್ತಿಭೇದಪ್ರತಿಯೋಗಿತಾದಲ್ಲಿ ಆತ್ಮತ್ವವು ಸ್ವರೂಪೇಣ ಅವಚ್ಛೇದಕವೇ ಆಗಿದೆ, ಹೀಗಾಗಿ ಬಾಧ ಎನ್ನಬಾರದು. ಭೇದವತ್‌ಯಾವತ್ ಇಲ್ಲಿ ವಿವಕ್ಷಿತವಲ್ಲ, 'ಯಾವತ್' ಪದ ನಿವೇಶ ಮಾಡಿಲ್ಲ. ಯಾವತ್ತಿನಲ್ಲಿ ಕೇವಲಾನ್ವಯಿ ಅಭಿಧೇಯತ್ವಾದಿ ಮಾತ್ರ ಬಂದೀತು, ಜಾತಿ ಯಾವುದೂ ಬಾರದು. ಭೇದವತ್ತಾದ ಯತ್‌ಕಿಂಚಿದ್ ಇತರ ಆತ್ಮಗಳಲ್ಲಿಯೇ ಆತ್ಮತ್ವವಿದೆ ಎಂದು ತನ್ನಿಷ್ಠ ಭೇದಪ್ರತಿಯೋಗಿತಾದಲ್ಲಿ ಆತ್ಮತ್ವವು ಸ್ವರೂಪೇಣ ಅನವಚ್ಛೇದಕವೆನ್ನಬೇಕು.

ಬಾಧ ಭಯದಿಂದ 'ಸ್ವಸಾಮಾನಾಧಿಕರಣ್ಯ–ಸ್ವನಿರೂಪಿತ ಪ್ರತಿಯೋಗಿತಾ ನಿರೂಪಿತ ಸ್ವರೂಪತೋಽವಚ್ಛೇದಕತ್ವಾಭಾವವತ್ವ ಉಭಯ ಸಂಬಂಧೇನ ಭೇದವೈಶಿಷ್ಟ್ಯ'ವನ್ನು ಆತ್ಮತ್ವದಲ್ಲಿ

ಹೇಳಿದರೆ, ಅದು ನಾನಾವ್ಯಕ್ತಿ ನಿಷ್ಠತ್ವದ ಪರಿಷ್ಕಾರವೆ ಆಗುವುದಿಲ್ಲ. 'ಗಗನಂ ಘಟಭಿನ್ನಂ' ಇಲ್ಲಿ ಭೇದಸಾಮಾನಾಧಿಕರಣ್ಯ ಗಗನತ್ವದಲ್ಲಿ ಬರುತ್ತದೆ. ಈ ಭೇದ ಪ್ರತಿಯೋಗಿತಾ ನಿರೂಪಿತ ಸ್ವರೂಪತೋಽವಚ್ಛೇದಕತ್ವವು ಗಗನತ್ವದಲ್ಲಿಲ್ಲ. ಅವಚ್ಛೇದಕತ್ವಾಭಾವವೆ ಬಂದಿದೆ, ಎಂದು ಗಗನತ್ವ ನಾನಾವ್ಯಕ್ತಿ ನಿಷ್ಠವೆಂದಾದೀತು.

'ಆತ್ಮತ್ವಂ ನಾನಾ ವ್ಯಕ್ತಿನಿಷ್ಠಂ ಜಾತಿತ್ವಾತ್' ಎಂದು ಜಾತಿತ್ವವನ್ನು ಹೇತುವಾಗಿ ಮಾಡಿದ್ದಾರೆ. ಈ 'ಜಾತಿತ್ವ'ವು ಜಾತಿಯಲ್ಲಿದೆ, ಜಾತಿಯು ತಾರ್ಕಿಕರ ಪ್ರಕಾರ, 'ನಿತ್ಯಮೇಕಮನೇಕಾನುಗತಂ ಸಾಮಾನ್ಯಂ' ಎನ್ನುವಂತೆ, 'ನಿತ್ಯವಾಗಿದ್ದು ಅನೇಕ ಸಮವೇತವಾದ ಧರ್ಮ. ಇಲ್ಲಿ ಆತ್ಮತ್ವವು ನಾನಾ ವ್ಯಕ್ತಿನಿಷ್ಠವೆಂದು ಸಾಧನೆ ಮಾಡಲು ಜಾತಿಯಲ್ಲಿರುವ ಅನೇಕ ಸಮವೇತತ್ವ ಮಾತ್ರವೇ ಸಾಕು. ನಿತ್ಯತ್ವವಿಶೇಷಣವು ವ್ಯರ್ಥ. ನಾನಾವ್ಯಕ್ತಿನಿಷ್ಠವಾಗಲು ನಿತ್ಯತ್ವ ಆವಶ್ಯಕವೇನಲ್ಲ. ಹೇತು ಘಟಕವಾಗಿದ್ದೂ ವ್ಯಭಿಚಾರವಾರಕವಾಗಿಲ್ಲದಿರುವುದರಿಂದಲೂ ನಿತ್ಯತ್ವ ವಿಶೇಷಣ ವ್ಯರ್ಥ. ಅದನ್ನು ಬಿಟ್ಟು ಅನೇಕ ಸಮವೇತತ್ವವನ್ನೇ ಹೇತುವಾಗಿ ಮಾಡಿದರೆ, ಸಾಧ್ಯಾವಿಶಿಷ್ಟತಾ ದೋಷ. ಸಾಧ್ಯವು ನಾನಾ ವ್ಯಕ್ತಿ ನಿಷ್ಠತ್ವ, ನಿಷ್ಠತ್ವವು ಸಮವಾಯ ಸಂಬಂಧದಿಂದ ವಿವಕ್ಷಿತ. ಹೀಗಾಗಿ ಅನೇಕ ಸಮವೇತತ್ವವೇ ಸಾಧ್ಯ. ಅದೇ ಹೇತುವಾದರೆ ಸಾಧ್ಯಾವಿಶಿಷ್ಟವಾಯಿತು, ಹೇತು. ಸಾಧ್ಯದಿಂದಲೇ ಸಾಧ್ಯವನ್ನು ಸಾಧನ ಮಾಡುವುದುಂಟೆ?

ಅದರಿಂದ 'ಜಾತಿತ್ವ'ವು ನಿತ್ಯತ್ವಸಹಿತ ಅನೇಕ ಸಮವೇತತ್ವ ರೂಪವಾದ ಸಖಂಡ ಉಪಾಧಿಯಲ್ಲ. ಏನೂ ವಿಶೇಷಣದಿಂದ ಘಟಿತವಾಗಿರದ 'ಅಖಂಡೋ ಪಾಧಿ' ವಿವಕ್ಷಿತವೆನ್ನಬೇಕು. ಅದು ನಿರ್ವಚನ ಮಾಡಲಾಗದ ಅಖಂಡವಾದ ಧರ್ಮ. ಜಾತಿಯು ಅನೇಕ ಸಮವೇತವಾಗಿರಲು ಈ ಧರ್ಮವು ಪ್ರಯೋಜಕವಾದ್ದರಿಂದ ಹೇತುವೆನಿಸಬಹುದು.

ಅಥವಾ 'ಜಾತಿತ್ವ'ವೆಂದರೆ ಇಲ್ಲಿ ಜಾತಿಪದ ವಾಚ್ಯತ್ವವು ವಿವಕ್ಷಿತವಾಗಿದೆ. 'ಜಾತಿ' ಪದದಿಂದ ವಾಚ್ಯವಾದ್ದರಿಂದ, 'ಆತ್ಮತ್ವವು ಒಂದು ಜಾತಿ' ಎಂದು ವ್ಯವಹಾರವಿರುವುದರಿಂದ, ನಾನಾ ವ್ಯಕ್ತಿನಿಷ್ಠವಾಗಿರುತ್ತದೆ ಎಂದು ಸಾಧನೆ ಮಾಡುತ್ತಾರೆ.

**इत्यस्यासिद्धेरिति ।** इति न्यायप्रतिपाद्यहेतोरसिद्धेरित्यर्थः । व्यक्तिभेदस्य स्वाभाविकात्मभेदस्य । गगनत्वादेर्जातित्ववारणाय स्वाभाविकव्यक्तिभेदस्य जातिनियामकत्वादिति भावः ।

इदमुपलक्षणम् । साध्यशरीरे पारमार्थिकत्वविशेषितभेदनिवेशे साध्याप्रसिद्धिः । तदविशेषितभेदनिवेशे चापारमार्थिकभेदमादाय सिद्धसाधनमित्यपि बोध्यम् ।

'ಆತ್ಮತ್ವವು ನಾನಾ ವ್ಯಕ್ತಿನಿಷ್ಠ, ಪೃಥಿವೀತ್ವದಂತೆ ಜಾತಿಯಾಗಿರುವುದರಿಂದ' ಎನ್ನುವುದು 'ಅಸಿದ್ಧ'ವೆಂದು ಪೂರ್ವಪಕ್ಷಿ ಹೇಳುತ್ತಾನೆ. ಅಸಿದ್ಧಿಯು ಹೇತುವಿಗೆ ಬರಬಹುದಾದ ದೋಷ. ಪಕ್ಷ ಸಾಧ್ಯ ಹೇತು ದೃಷ್ಟಾಂತ ಈ ನಾಲ್ಕನ್ನು ಜೊತೆಯಾಗಿ ಹೇಳಿ 'ಇವು ಅಸಿದ್ಧ' ಎನ್ನಲಾಗದು. ಪಕ್ಷ ಸಾಧ್ಯ ಹೇತು ದೃಷ್ಟಾಂತ ವಚನವು 'ನ್ಯಾಯ' ಎನಿಸುತ್ತದೆ. ನ್ಯಾಯದಿಂದ ಪ್ರತಿಪಾದ್ಯವಾದುದು ಹೇತು, ಈ ಹೇತುವು ಅಸಿದ್ಧ ಎಂದು ಪೂರ್ವಪಕ್ಷಿ ಹೇಳುತ್ತಿದ್ದಾನೆ ಎಂದಿಟ್ಟುಕೊಳ್ಳಬೇಕು.

'ಅದ್ವೈತ ಮತದಲ್ಲಿ ವ್ಯಕ್ತಿಭೇದವು ಬಾಧಿತವಾದ್ದರಿಂದ ಆತ್ಮತ್ವವು ಜಾತಿಯಲ್ಲ' ಎಂದು ಪೂರ್ವಪಕ್ಷಿ ಹೇಳುತ್ತಿದ್ದಾನೆ. ಇಲ್ಲಿ 'ವ್ಯಕ್ತಿಭೇದವು ಬಾಧಿತ' ಎಂದರೆ 'ಸ್ವಾಭಾವಿಕ ಆತ್ಮಭೇದ ಬಾಧಿತ' ಎಂದು ವಿವಕ್ಷಿತವಾಗಿದೆ. ಔಪಾಧಿಕ ಆತ್ಮಭೇದವನ್ನು ಅದ್ವೈತಿ ಅಂಗೀಕರಿಸಿದ್ದಾನೆ. ಆದರೆ ಔಪಾಧಿಕಾತ್ಮಭೇದವು ಆತ್ಮತ್ವಕ್ಕೆ ಜಾತಿತ್ವನಿಯಾಮಕವಾಗುವುದಿಲ್ಲ. ಆಕಾಶದಲ್ಲಿ ಘಟಾಕಾಶ ಮಠಾಕಾಶ ಎಂದು ಮುಂತಾಗಿ ಔಪಾಧಿಕ ವ್ಯಕ್ತಿಭೇದವಿದ್ದರೂ ಆಕಾಶತ್ವವು ಜಾತಿ ಎನಿಸುವುದಿಲ್ಲ. ಜಾತಿಯೆನಿಸಬೇಕಾದರೆ ಸ್ವಾಭಾವಿಕ ವ್ಯಕ್ತಿಭೇದವೇ ಬೇಕು. ಅದಿಲ್ಲವೆಂದು ಅದ್ವೈತಿ ಹೇಳುತ್ತಿದ್ದಾನೆ. ಸ್ವಾಭಾವಿಕಾತ್ಮ ಭೇದವಿಲ್ಲದ್ದರಿಂದ 'ಆತ್ಮತ್ವ'ರೂಪ ಪಕ್ಷದಲ್ಲಿ ಜಾತಿತ್ವವೆಂಬ ಹೇತು ಅಸಿದ್ಧ ಎನ್ನುತ್ತಿದ್ದಾನೆ.

ಈ ಅಸಿದ್ಧಿದೋಷ ಉಪಲಕ್ಷಣ. ಸಾಧ್ಯದಲ್ಲಿ, 'ಸ್ವಾಶ್ರಯಪ್ರತಿಯೋಗಿಕ ಭೇದವದ್ ವೃತ್ತಿತ್ವ'ದಲ್ಲಿ ಸೇರಿರುವ ಭೇದವನ್ನು ಪಾರಮಾರ್ಥಿಕ ಭೇದವೆಂದು ವಿವಕ್ಷೆ ಮಾಡಿದಲ್ಲಿ ಅದ್ವೈತಮತದಲ್ಲಿ 'ಪಾರಮಾರ್ಥಿಕಭೇದ' ಎನ್ನುವುದೇ ಅಪ್ರಸಿದ್ಧವಾದ್ದರಿಂದ ಸಾಧ್ಯಾಪ್ರಸಿದ್ಧಿ ದೋಷ. ಹಾಗೆ ವಿವಕ್ಷೆ ಮಾಡದಿದ್ದಲ್ಲಿ, ಅಪಾರಮಾರ್ಥಿಕ ಭೇದವನ್ನು ಆತ್ಮನಲ್ಲಿ ಅದ್ವೈತಿ ಅಂಗೀಕರಿಸಿರುವುದರಿಂದ 'ಭೇದ' ಶಬ್ದದಿಂದ ಅಪಾರಮಾರ್ಥಿಕಭೇದವಿಟ್ಟುಕೊಂಡು ಸಾಧ್ಯವು ಮೊದಲೇ ನನಗೆ ಸಿದ್ಧ ಎನ್ನುತ್ತಾನೆ, ಹೇತುವಿಗೆ ಸಿದ್ಧಸಾಧನವೆಂಬ ದೋಷವನ್ನು ಹೇಳುತ್ತಾನೆ.

**आत्मा आत्मप्रतियोगिकभेदाधिकरणं द्रव्यत्वात् घटवदित्यस्याप्यसिद्धेः ।**

**'ಆತ್ಮನು ಆತ್ಮಪ್ರತಿಯೋಗಿಕ ಭೇದಕ್ಕೆ ಅಧಿಕರಣನಾಗಿದ್ದಾನೆ. ದ್ರವ್ಯನಾಗಿರುವುದರಿಂದ ಘಟದಂತೆ' ಎಂಬ ಅನುಮಾನವೂ ಭೇದದಲ್ಲಿ ಪ್ರಮಾಣವಾಗದು. ಏಕೆಂದರೆ ಇಲ್ಲಿಯೂ ಅಸಿದ್ಧಿ ದೋಷವಿದೆ.**

**आत्मेति ।** अत्र घटादिभेदसिद्ध्याऽर्थान्तरवारणायाऽत्मप्रतियोगिकेति । आत्मत्वव्याप्यरूपावच्छिन्नप्रतियोगिताकेत्यर्थः । तेनात्मघटोभयभेदमादाय नार्थान्तरम् ।

आत्मप्रतियोगिकप्रतियोग्यवृत्तिभेदः साध्य इत्यप्याहुः ।

यद्यप्यत्र प्रमेयत्वादेरपि हेतुत्वं सम्भवति । तथापि तद्धेतुकानुमानस्य द्रव्याद्रव्यसाधारणबहुतरभूयोदर्शनाधीनतया न सुकरत्वमित्याशयेन द्रव्यत्वस्यैव हेतुत्वमनुसृतम् ।

ಇಲ್ಲಿ 'ಆತ್ಮನು ಭೇದಕ್ಕೆ ಅಧಿಕರಣ' ಎಂದು ಮಾತ್ರ ಹೇಳಿದರೆ ಘಟಾದಿಭೇದಕ್ಕೆ ಅಧಿಕರಣವೆಂದು ಸಿದ್ಧವಾದೀತು. ಆತ್ಮಭೇದಕ್ಕೆ ಅಧಿಕರಣವೆಂದು ಸಿದ್ಧವಾಗದೆ ಹೋದೀತು. ಉದ್ದೇಶ ಸಿದ್ಧಿಯಾಗದೆ ಬೇರೆ ಏನೋ ಸಿದ್ಧವಾಗುತ್ತಿದ್ದರೆ ಇದು ಅರ್ಥಾಂತರವೆಂಬ ದೋಷ. ಆದರಿಂದ 'ಆತ್ಮನು ಆತ್ಮಪ್ರತಿಯೋಗಿಕ ಭೇದಾಧಿಕರಣ' ಎಂದು ಸ್ಪಷ್ಟ ಹೇಳಿದ್ದಾರೆ. ಇದನ್ನು ಇನ್ನೂ ಸ್ಪಷ್ಟವಾಗಿ 'ಆತ್ಮತ್ವ ವ್ಯಾಪ್ಯರೂಪಾವಚ್ಛಿನ್ನಪ್ರತಿಯೋಗಿತಾಕ ಭೇದಾಧಿಕರಣ' ಎನ್ನಬೇಕು. ಇಲ್ಲದಿದ್ದರೆ, ಆತ್ಮಘಟ ಉಭಯ ಭೇದವು ಆತ್ಮಪ್ರತಿಯೋಗಿಕವಾದ್ದರಿಂದ 'ಆತ್ಮ ಭೇದ' ಶಬ್ದದಿಂದ ಅದನ್ನಿಟ್ಟುಕೊಂಡು ಪಕ್ಷದಲ್ಲಿ ಸಾಧ್ಯ ಸಿದ್ಧವಾಗಿದೆ, ನಿಮ್ಮ ಉದ್ದೇಶ ಸಿದ್ಧವಾಗಿಲ್ಲ ಎಂದು ಪೂರ್ವಪಕ್ಷಿ ಹೇಳಬಹುದು, ಅರ್ಥಾಂತರವೆಂಬ ದೋಷ ಸಿದ್ಧಾಂತಿಗೆ ಬರಬಹುದು. ಉಭಯಭೇದವು ಉಭಯತ್ವಾವಚ್ಛಿನ್ನ ಪ್ರತಿಯೋಗಿತಾಕವಾಗಿರುವುದರಿಂದ ಆತ್ಮತ್ವಕ್ಕೆ ವ್ಯಾಪ್ಯವಲ್ಲದ ಆತ್ಮಘಟಉಭಯತ್ವದಿಂದ ಪ್ರತಿಯೋಗಿತೆಯು ಅವಚ್ಛಿನ್ನವಾಯಿತು ಹೊರತು ಆತ್ಮತ್ವವ್ಯಾಪ್ಯರೂಪದಿಂದ ಅವಚ್ಛಿನ್ನವಾಗಿಲ್ಲ, ಆತ್ಮತ್ವವ್ಯಾಪ್ಯ ರೂಪಾವಚ್ಛಿನ್ನ ಪ್ರತಿಯೋಗಿತಾಕ ಭೇದಾಧಿಕರಣತ್ವವೆಂಬ ಸಾಧ್ಯವು ಉಭಯಭೇದದಿಂದ ನಿರ್ವಾಹವಾಗುವುದಿಲ್ಲವೆಂದು ಪರಿಹಾರ ಹೇಳಬೇಕು.

ಆತ್ಮಪ್ರತಿಯೋಗಿಕ ಪ್ರತಿಯೋಗ್ಯವೃತ್ತಿ ಭೇದವೇ ಸಾಧ್ಯವೆಂದು ಕೆಲವರು ಪರಿಹಾರ ಹೇಳುತ್ತಾರೆ. 'ಆತ್ಮಭೇದ' ಶಬ್ದದಿಂದ ಆತ್ಮಘಟ ಉಭಯಭೇದವನ್ನು ಇಟ್ಟುಕೊಳ್ಳಲಾಗುವುದಿಲ್ಲ. 'ಆತ್ಮವು ಆತ್ಮಘಟ ಉಭಯಭಿನ್ನ' 'ಘಟವು ಆತ್ಮಘಟ ಉಭಯಭಿನ್ನ' ಎಂದು ಈ ಉಭಯಭೇದವು ಪ್ರತಿಯೋಗಿಯಾದ ಆತ್ಮದಲ್ಲಿಯೂ ಘಟದಲ್ಲಿಯೂ ಇರುವುದರಿಂದ ಪ್ರತಿಯೋಗ್ಯವೃತ್ತಿ ಭೇದವೆನಿಸುವುದಿಲ್ಲ. ಉಭಯ ಭೇದವಿಟ್ಟುಕೊಂಡು ಅರ್ಥಾಂತರ ಹೇಳಲು ಅವಕಾಶವಿಲ್ಲ ಎಂದು ಹೇಳುತ್ತಾರೆ.

ಇಲ್ಲಿ 'ದ್ರವ್ಯತ್ವಾತ್' ಎಂದು ದ್ರವ್ಯತ್ವವನ್ನು ಹೇತುವೆಂದಿದ್ದಾರೆ. ಪ್ರಮೇಯತ್ವ ಅಭಿಧೇಯತ್ವ ಮುಂತಾದ ಕೇವಲಾನ್ವಯಿ ಧರ್ಮವನ್ನು ಹೇತು ಮಾಡಲು ಸಾಧ್ಯವಿದೆ. ವ್ಯತಿರೇಕಿಯಾದ ದ್ರವ್ಯತ್ವವನ್ನೇ ಹೇತುಮಾಡುವ ಆವಶ್ಯಕತೆ ಇಲ್ಲ. ಆದರೂ ಪ್ರಮೇಯತ್ವ ಮುಂತಾದ ಧರ್ಮ ಬಹಳ ವ್ಯಾಪಕವಾಗಿದ್ದು ದ್ರವ್ಯಗುಣಕರ್ಮಾದಿ ಬಹು ಪದಾರ್ಥಗಳಲ್ಲಿ ಮತ್ತೆ ಮತ್ತೆ ಹೇತು ಸಾಧ್ಯಗಳಿಗೆ ಸಹಚಾರವನ್ನು ಕಂಡೇ ವ್ಯಾಪ್ತಿ ನಿಶ್ಚಯ ಮಾಡಬೇಕಾಗುತ್ತದೆ. ಅದು ಕಷ್ಟ. ಕೇವಲ ದ್ರವ್ಯಗಳಲ್ಲಿಯೇ

ದ್ರವ್ಯತ್ವವಿರುವುದರಿಂದ ದ್ರವ್ಯಗಳಲ್ಲಿ ಮಾತ್ರ ಸಹಚಾರ ದರ್ಶನ ಮಾಡಿದರೂ ಸುಲಭವಾಗಿ ವ್ಯಾಪ್ತಿ ನಿಶ್ಚಯವಾಗುವುದು. ಆದರಿಂದ ಪ್ರಮೇಯತ್ವಾದಿಗಳನ್ನು ಬಿಟ್ಟು ದ್ರವ್ಯತ್ವವನ್ನೇ ಹೇತುವೆಂದಿದ್ದಾರೆ.

**ಆತ್ಮ ನಿರ್ಗುಣನಾದ್ದರಿಂದ ದ್ರವ್ಯವಲ್ಲ**

**आत्मनो निर्गुणस्यास्माभिर्गुणाश्रयत्वलक्षणद्रव्यत्वानङ्गीकारात् ।**

**ಅಸಿದ್ಧಿ ಏಕೆಂದರೆ ನಿರ್ಗುಣನಾದ ಆತ್ಮನಲ್ಲಿ ಗುಣಾಶ್ರಯತ್ವರೂಪವಾದ ದ್ರವ್ಯತ್ವವನ್ನು ಅದ್ವೈತಮತದಲ್ಲಿ ಅಂಗೀಕರಿಸಿಲ್ಲ.**

द्रव्यत्वस्य जातित्वे विवादात् गुणाश्रयत्वलक्षणेत्युक्तम् । गुणाश्रयत्वस्याश्रयत्वापेक्षया गुरुतया हेतुत्वानङ्गीकारे तु आश्रयतया गुणस्यैव हेतुत्वं बोध्यम् । गुणाश्रयत्वं लक्षणमभिज्ञकं यस्येत्यर्थाद् द्रव्यत्वजातेरेव हेतुत्वमित्यपि वदन्ति ।

ತಾರ್ಕಿಕ ಮತದಲ್ಲಿ 'ದ್ರವ್ಯತ್ವ'ವು ಜಾತಿ. ಗುಣಾಶ್ರಯತ್ವರೂಪ ಧರ್ಮವಲ್ಲ. ಆದರೂ ದ್ರವ್ಯತ್ವವು ಜಾತಿಯೆಂದು ಕೆಲವರು ಒಪ್ಪುವುದಿಲ್ಲ. ಜಾತಿಯು ಅನುಗತವಾದ ಸದೃಶವಾದ ಆಕೃತಿಯಿಂದ ವ್ಯಂಗ್ಯವಾಗಿರುತ್ತದೆ. ಮನುಷ್ಯರಲ್ಲಿ ಮನುಷ್ಯತ್ವದಂತೆ, ಘಟಗಳಲ್ಲಿ ಘಟತ್ವದಂತೆ. ಅನುಗತ ಆಕಾರವಿಲ್ಲದ ನೀರು ಗಾಳಿ ಬೆಂಕಿ ಮುಂತಾದವುಗಳಲ್ಲಿ ದ್ರವ್ಯತ್ವ ಜಾತಿಯು ವ್ಯಂಗ್ಯವಾಗುವುದಿಲ್ಲ. ಆದರೂ ವ್ಯಂಗ್ಯವಾಗುತ್ತದೆ, ಕಣ್ಣಿಗೆ ಗೋಚರಿಸುತ್ತದೆ ಎಂದೇ ತಾರ್ಕಿಕರು ಹೇಳುತ್ತಾರೆ. ಹೀಗೆ ಇದು ವಿವಾದಾಸ್ಪದವಾಗಿದೆ. ಲೋಕವ್ಯವಹಾರದಲ್ಲಿಯೂ ದ್ರವ್ಯ ಎಂದರೆ ದುಡ್ಡು, ಬಂಗಾರ ಹೊರತು ಘಟವನ್ನು ದ್ರವ್ಯವೆಂದು ವ್ಯವಹರಿಸುವುದಿಲ್ಲ. ಆದರಿಂದಲೂ ದ್ರವ್ಯತ್ವವು ಘಟಾದಿಗಳಲ್ಲಿರುವ ಜಾತಿ ಎನ್ನಲಾಗದು. ದ್ರವ್ಯದಲ್ಲಿ ಮಾತ್ರವೇ ಸಂಯೋಗ ವಿರುವುದರಿಂದ 'ಸಂಯೋಗ ಸಮವಾಯಿ ಕಾರಣತಾವಚ್ಛೇದಕ'ವು ದ್ರವ್ಯತ್ವಜಾತಿ ಎಂದು ಅನುಮಾನದಿಂದ ತಾರ್ಕಿಕರು ಸಾಧಿಸುತ್ತಾರೆ. ಆದರೂ ನಿತ್ಯಸಂಯೋಗವನ್ನು ಒಪ್ಪುವವರ ಮತದಲ್ಲಿ ಅದಕ್ಕೆ ಉತ್ಪತ್ತಿಯೇ ಇಲ್ಲದಿರುವುದರಿಂದ ಅದಕ್ಕೆ ಸಮವಾಯಿಕಾರಣವನ್ನು, ಅದರಲ್ಲಿ ಕಾರಣತಾವಚ್ಛೇದಕವನ್ನು ಸಾಧನೆ ಮಾಡಲಾಗುವುದಿಲ್ಲ. ಆದರಿಂದ ಸಂಯೋಗ ಮುಂತಾದ ಗುಣಾಶ್ರಯತ್ವವನ್ನೇ ಅಂದರೆ ಸ್ವಾಶ್ರಯಾಶ್ರಯತ್ವರೂಪ ಪರಂಪರಾ ಸಂಬಂಧದಿಂದ ಗುಣತ್ವವನ್ನೇ ಕಾರಣತಾವಚ್ಛೇದಕವೆಂದು ಒಪ್ಪುತ್ತಾರೆ. ಹೀಗಾಗಿ ಗುಣಾಶ್ರಯತ್ವವನ್ನೇ 'ದ್ರವ್ಯತ್ವ'ವೆಂದಿಟ್ಟುಕೊಂಡು

'ದ್ರವ್ಯತ್ವಾತ್' ಎಂದು ಹೇತು ಮಾಡಿದ್ದಾರೆ. ಅದ್ವೈತಮತದಲ್ಲಿ ಆತ್ಮ ನಿರ್ಗುಣನಾದ್ದರಿಂದ ಗುಣಾಶ್ರಯತ್ವರೂಪವಾದ ದ್ರವ್ಯತ್ವವು ಅಸಿದ್ಧವೆಂದು ಪೂರ್ವಪಕ್ಷಿ ಹೇಳುತ್ತಿದ್ದಾನೆ.

'ಗುಣಾಶ್ರಯತ್ವ'ವೆಂಬ ಹೇತು ಗುರುವಾಯಿತು. ಆಶ್ರಯತ್ವ ಮಾತ್ರವೇ ಸಾಕು. ಲಘುವಾದ ಆಶ್ರಯತ್ವವೇ ಹೇತುವಾಗುವ ಸಂಭವವಿದ್ದಾಗ ಗುರುವಾದ ಗುಣಾಶ್ರಯತ್ವ ಹೇತುವಾಗುವುದಿಲ್ಲ. ಎನ್ನುವುದಾದರೆ ಆಶ್ರಯತ್ವ ಸಂಬಂಧದಿಂದ ಗುಣವನ್ನೇ ಹೇತು ಮಾಡುವ ಅಭಿಪ್ರಾಯವಿದೆ. ಎಂದು ತಿಳಿಯಬೇಕು.

ಲಕ್ಷಣ ಶಬ್ದಕ್ಕೆ ಸ್ವರೂಪವೆಂದರ್ಥ. ಆದರೆ ವ್ಯಂಜಕವೆಂಬ ಅರ್ಥವೂ ಇದೆ. ಆದರಿಂದ 'ಗುಣಾಶ್ರಯತ್ವ ಲಕ್ಷಣ ದ್ರವ್ಯತ್ವ'ವೆಂದರೆ ಗುಣಾಶ್ರಯತ್ವದಿಂದ ವ್ಯಂಗ್ಯವಾದ ದ್ರವ್ಯತ್ವ ಜಾತಿ, ಅದೇ ಹೇತು ಎಂದೂ ಕೆಲವರು ವಿವರಣೆ ನೀಡುತ್ತಾರೆ.

**अनङ्गीकारादिति ।** यद्यपि स्वभावतो निर्गुणस्याप्यारोपित-गुणाश्रयत्वान्नासिद्धिः । आरोपितधूमवत्त्वस्यैवाग्निसाधकत्वाभ्युपगमात् । तथापि सिद्धसाधनतावारणाय पारमार्थिकभेदस्यैव साध्यतायाम् आरोपित-गुणाश्रयत्वस्याप्रयोजकतया तदपि पारमार्थिकमेव वाच्यमित्यसिद्धिरिति भावः ।

ಅದ್ವೈತಮತದಲ್ಲಿ ಆತ್ಮನು ನಿರ್ಗುಣನಾದ್ದರಿಂದ ಗುಣವನ್ನು ಅವನಲ್ಲಿ ಒಪ್ಪಿಲ್ಲ ಎಂದು ಪೂರ್ವಪಕ್ಷಿ ಅಸಿದ್ಧಿಯನ್ನು ಹೇಳಿದ್ದಾನೆ. ಆದರೆ ಇದು ಸರಿಯಲ್ಲ. ಆತ್ಮನು ಸ್ವಭಾವತಃ ನಿರ್ಗುಣನಾದರೂ ಆರೋಪಿತಗುಣಗಳಿಗೆ ಆಶ್ರಯನೇ ಆಗಿರುವನೆಂದು ಅದ್ವೈತಮತದಲ್ಲಿ ಒಪ್ಪಿದ್ದಾರೆ. ಆದರಿಂದ ಅಸಿದ್ಧಿ ಇಲ್ಲ. ಆರೋಪಿತ ಧೂಮವು ಕೂಡ ಪರ್ವತದಲ್ಲಿ ಅಗ್ನಿಸಾಧಕವೇ ಎಂದು ಅವರು ಅಂಗೀಕರಿಸಿದ್ದಾರೆ. ಅವರ ಮತದಲ್ಲಿ ಪರ್ವತವೂ ಆರೋಪಿತ, ಅದರಲ್ಲಿ ಧೂಮವೂ ಆರೋಪಿತ, ಅಗ್ನಿಯೂ ಆರೋಪಿತ, ಬ್ರಹ್ಮ ಒಂದೇ ಅನಾರೋಪಿತ.

ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ಆತ್ಮನಲ್ಲಿ ಆರೋಪಿತವಾದ ಗುಣಾಶ್ರಯತ್ವವು ಭೇದ ಸಾಧಕವಾದರೂ ಆ ಭೇದವೂ ಆರೋಪಿತವೇ ಹೊರತು, ಪಾರಮಾರ್ಥಿಕವಲ್ಲ. ಪಾರಮಾರ್ಥಿಕ ವಾದ ಭೇದವನ್ನೇ ದ್ವೈತಿಗಳು ಸಾಧಿಸಲು ಹೊರಟಿದ್ದಾರೆ. ಪಾರಮಾರ್ಥಿಕ ಭೇದಕ್ಕೆ ಆರೋಪಿತ ಗುಣಾಶ್ರಯತ್ವಹೇತುವು ಅಪ್ರಯೋಜಕ, ಹೀಗಾಗಿ ಪಾರಮಾರ್ಥಿಕಗುಣಾಶ್ರಯತ್ವವನ್ನೇ ಹೇತು ವೆಂದು ವಿವಕ್ಷೆ ಮಾಡಬೇಕು. ಆತ್ಮನಲ್ಲಿ ಈ ಪಾರಮಾರ್ಥಿಕ ಗುಣಾಶ್ರಯತ್ವವು ಅದ್ವೈತ ಮತಪ್ರಕಾರ ಇಲ್ಲದ್ದರಿಂದ ಅಸಿದ್ಧಿ ಎಂದು ಪೂರ್ವಪಕ್ಷಿ ಹೇಳುತ್ತಿದ್ದಾನೆ.

**अथ सुखं नानाव्यक्त्याश्रितं गुणत्वात् रूपवत् । सुखत्वं वा नानाव्यक्त्याश्रिताश्रितं गुणनिष्ठजातित्वाद्रूपत्ववदिति ।**

**ಸುಖವು ನಾನಾ ವ್ಯಕ್ತಿಗಳಲ್ಲಿ ಆಶ್ರಿತವಾಗಿದೆ. ಗುಣವಾದ್ದರಿಂದ, ರೂಪದಂತೆ. ಅಥವಾ ಸುಖತ್ವವು ನಾನಾವ್ಯಕ್ತ್ಯಾಶ್ರಿತದಲ್ಲಿ ಆಶ್ರಿತವಾಗಿದೆ. ಗುಣನಿಷ್ಠ ಜಾತಿಯಾದ್ದರಿಂದ, ರೂಪತ್ವದಂತೆ.**

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 3 ನೋಡಿರಿ)

**सुखं नानाव्यक्त्याश्रितमिति ।** यद्यपि रूपादेः प्रत्येकं नानाव्यक्त्याश्रितत्वाभावात् दृष्टान्ते साध्यवैकल्यम् । संयोगादेर्दृष्टान्तत्वसम्भवेऽपि रूपादावनैकान्त्यम् । तथापि जात्या नानाव्यक्त्याश्रितत्वस्य स्वाश्रयाश्रयनिष्ठभेदप्रतियोगितावच्छेदकवृत्तिगुणत्वव्याप्यजातिमत्त्वरूपस्य साध्यत्वान्न दोषः । रूपत्वादेः स्वाश्रायाश्रयनीलघटादिनिष्ठभेदप्रतियोगितावच्छेदकपीतरूपवृत्तेर्दृष्टान्ते सत्त्वात् । पक्षे च सुखत्वमादाय साध्यपर्यवसाने तदाश्रयाश्रयाणामात्मनां भेदसिद्धिः ।

ರೂಪ ಮುಂತಾದ ಗುಣವು ಪ್ರತಿಯೊಂದೂ ಪ್ರತ್ಯೇಕವಾಗಿ ನಾನಾ ವ್ಯಕ್ತಿಗಳಲ್ಲಿ ಆಶ್ರಿತವಾಗಿಲ್ಲ. ಒಂದು ವಸ್ತುವಿನ ರೂಪ ಆ ವಸ್ತುವಿನಲ್ಲಿ ಮಾತ್ರವಿರುತ್ತದೆ. ಬೇರೆ ರೂಪ ಬೇರೆ ವಸ್ತುವಿನಲ್ಲಿಯೇ ಇರುತ್ತದೆ. ಆದರಿಂದ ದೃಷ್ಟಾಂತವಾದ ರೂಪದಲ್ಲಿ ನಾನಾ ವ್ಯಕ್ತ್ಯಾಶ್ರಿತತ್ವವೆಂಬ ಸಾಧ್ಯವಿಲ್ಲದಿರುವ ಸಾಧ್ಯ ವೈಕಲ್ಯದೋಷ ಬರುತ್ತದೆ. ರೂಪದ ಬದಲಿಗೆ ಸಂಯೋಗವನ್ನು ದೃಷ್ಟಾಂತವಾಗಿಟ್ಟುಕೊಂಡರೆ ಒಂದು ಸಂಯೋಗವು ಪ್ರತಿಯೋಗಿ ಅನುಯೋಗಿಗಳೆರಡರಲ್ಲಿಯೂ ಇರುವುದರಿಂದ ನಾನಾ ವ್ಯಕ್ತ್ಯಾಶ್ರಿತತ್ವ ಬರಬಹುದಾದರೂ ರೂಪಾದಿಗಳಲ್ಲಿ ವ್ಯಭಿಚಾರ ದೋಷ ಬರುತ್ತದೆ. ರೂಪಾದಿಗಳು ಗುಣಗಳಾಗಿವೆ, ನಾನಾ ವ್ಯಕ್ತ್ಯಾಶ್ರಿತವಾಗಿಲ್ಲ ಎಂದು.

ಈ ದೋಷ ಪರಿಹಾರಕ್ಕೆ ಸಾಧ್ಯವನ್ನು ಪರಿಷ್ಕಾರ ಮಾಡಬೇಕು. ಜಾತ್ಯಾ ನಾನಾ ವ್ಯಕ್ತ್ಯಾಶ್ರಿತತ್ವವು ಸಾಧ್ಯ. ಅಂದರೆ, 'ಸ್ವಾಶ್ರಯಾಶ್ರಯವೃತ್ತಿ ಭೇದ ಪ್ರತಿಯೋಗಿತಾವಚ್ಛೇದಕ ವೃತ್ತಿ ಗುಣತ್ವವ್ಯಾಪ್ಯ ಜಾತಿಮತ್ತ್ವ'ವು ಸಾಧ್ಯ ಎನ್ನಬೇಕು.

ದೃಷ್ಟಾಂತದಲ್ಲಿ ಸ್ವಪದದಿಂದ ರೂಪತ್ವಜಾತಿಯನ್ನು ತೆಗೆದುಕೊಳ್ಳಬೇಕು. ಸ್ವಾಶ್ರಯ ನೀಲರೂಪ. ಸ್ವಾಶ್ರಯಾಶ್ರಯವು ನೀಲರೂಪವುಳ್ಳ ಘಟ. ತದ್ವೃತ್ತಿ ಭೇದವೆಂದರೆ 'ನೀಲಘಟೋ

ನ ಪೀತಘಟಃ' ಎಂದು ಕಾಣುವ ಪೀತಘಟ ಭೇದ. ಈ ಭೇದಕ್ಕೆ ಪ್ರತಿಯೋಗಿ ಪೀತಘಟ. ಪ್ರತಿಯೋಗಿತಾವಚ್ಛೇದಕವು ಪೀತರೂಪ. ತದ್‌ವೃತ್ತಿಯಾದ ಗುಣತ್ವವ್ಯಾಪ್ಯ ಜಾತಿ ಎಂದರೆ ರೂಪತ್ವ, ಇದು ದೃಷ್ಟಾಂತವಾದ ರೂಪದಲ್ಲಿದೆ. ಆದರಿಂದ ದೃಷ್ಟಾಂತನಲ್ಲಿ ಸಾಧ್ಯವೈಕಲ್ಯವಿಲ್ಲ.

ಪಕ್ಷದಲ್ಲಿ ಸ್ವಪದದಿಂದ ಸುಖತ್ವವನ್ನು ಇಟ್ಟುಕೊಳ್ಳಬೇಕು. ಸ್ವಾಶ್ರಯ ದೇವದತ್ತಸುಖ. ಸ್ವಾಶ್ರಯಾಶ್ರಯ ದೇವದತ್ತ. ತದ್‌ವೃತ್ತಿ ಭೇದವು ದೇವದತ್ತೋ ನ ಯಜ್ಞದತ್ತಸುಖವಾನ್ ಎಂಬ ಯಜ್ಞದತ್ತಭೇದ. ಈ ಭೇದಕ್ಕೆ ಪ್ರತಿಯೋಗಿ ಯಜ್ಞದತ್ತ. ಪ್ರತಿಯೋಗಿತಾವಚ್ಛೇದಕವು ಯಜ್ಞದತ್ತ ಸುಖ. ಅದರಲ್ಲಿ ಗುಣತ್ವವ್ಯಾಪ್ಯವಾದ ಸುಖತ್ವಜಾತಿ ಇದೆ. ಹೀಗೆ ಪಕ್ಷವಾದ ಯಜ್ಞದತ್ತಸುಖದಲ್ಲಿ ಸಾಧ್ಯವಾದ ಜಾತಿ ಇರುವುದರಿಂದ ಪಕ್ಷದಲ್ಲಿ ಸಾಧ್ಯಾನುಗಮವಿದೆ. ದೇವದತ್ತಸುಖಉಳ್ಳ ದೇವದತ್ತನಲ್ಲಿ ಯಜ್ಞದತ್ತಸುಖವುಳ್ಳ ಯಜ್ಞದತ್ತನಿಂದ ಭೇದ ಸಿದ್ಧಿಸುವುದರಿಂದ ಆತ್ಮಭೇದ ಸಿದ್ಧವಾಗುತ್ತದೆ.

**गुणत्वादिजातिमादायार्थान्तरवारणाय गुणत्वव्याप्येति । न च गुणत्वस्यापि गुणत्वाभाववदवृत्तितया गुणत्वव्याप्यत्वादर्थान्तरतादवस्थ्यमिति वाच्यम् । गुणत्वव्याप्येत्यनेन गुणत्वन्यूनवृत्तित्वस्य गुणनिष्ठभेदप्रतियोगितावच्छेदकत्वपर्यवसितस्य विवक्षितत्वात् । सुखत्वादेर्गन्धादिगुणनिष्ठभेदप्रतियोगितावच्छेदकत्वेन गुणत्वव्याप्यत्वादिति न कश्चिद्दोषः ।**

'ಗುಣತ್ವವ್ಯಾಪ್ಯ' ಎಂದು ಜಾತಿಗೆ ವಿಶೇಷಣ ಕೊಡದಿದ್ದರೆ 'ಸ್ವಾಶ್ರಯಾಶ್ರಯ ವೃತ್ತಿ ಭೇದ' ಶಬ್ದದಿಂದ 'ದೇವದತ್ತಸುಖವಾನ್ ನ ಯಜ್ಞದತ್ತಸುಖವಾನ್' ಎಂದೇ ಭೇದವನ್ನು ತೆಗೆದುಕೊಳ್ಳಬೇಕಾಗಿಲ್ಲ. 'ದೇವದತ್ತಸುಖವಾನ್ ನ ನೀಲಘಟಃ' ಎಂದು ನೀಲಘಟಭೇದವನ್ನೂ ಇಟ್ಟುಕೊಳ್ಳಬಹುದು. ಆಗ ಪ್ರತಿಯೋಗಿತಾವಚ್ಛೇದಕವು ನೀಲರೂಪ. ಅದರಲ್ಲಿ ಗುಣತ್ವವಿದೆ. 'ಭೇದಪ್ರತಿಯೋಗಿತಾವಚ್ಛೇದಕವೃತ್ತಿ ಜಾತಿ' ಎಂದು ಗುಣತ್ವವನ್ನು ತೆಗೆದುಕೊಳ್ಳಬಹುದು. ಅಂಥ ಜಾತಿಮತ್ತ್ವವು ದೇವದತ್ತಸುಖದಲ್ಲಿ ಬರುತ್ತದೆ. ದೇವದತ್ತನಲ್ಲಿ ಘಟಭೇದವಿದೆ ಎಂದು ಮಾತ್ರ ಸಿದ್ಧವಾಗುತ್ತದೆ. ಯಜ್ಞದತ್ತ ಭೇದವಿದೆ ಎಂದು ಸಿದ್ಧವಾಗುವುದಿಲ್ಲ. ಆತ್ಮಭೇದ ಸಿದ್ಧವಾಗುವುದಿಲ್ಲ. ಉದ್ದೇಶ ಸಿದ್ಧಿಯಾಗದೆ ಅರ್ಥಾಂತರ ದೋಷ ಬರುತ್ತದೆ.

'ಗುಣತ್ವವ್ಯಾಪ್ಯಜಾತಿ' ಎಂದು ವಿಶೇಷಣ ಮಾಡಿದರೆ, ನೀಲಘಟಭೇದ ಪ್ರತಿಯೋಗಿತಾವಚ್ಛೇದಕವಾದ ನೀಲರೂಪದಲ್ಲಿ ಗುಣತ್ವವ್ಯಾಪ್ಯ ಜಾತಿ ಎಂದರೆ ಗುಣತ್ವ ಜಾತಿಯಲ್ಲ, ರೂಪತ್ವ ಜಾತಿಯೆ. ಈ ಜಾತಿಯು ಪಕ್ಷವಾದ ಸುಖದಲ್ಲಿ ಬರುವುದಿಲ್ಲ. ಸಾಧ್ಯಾನುಗಮ ಶಕ್ಯವಾಗುವುದಿಲ್ಲ.

ಯಜ್ಞದತ್ತಸುಖವದ್‌ಭೇದವನ್ನೇ ತೆಗೆದುಕೊಂಡು ಭೇದಪ್ರತಿಯೋಗಿತಾವಚ್ಛೇದಕವಾದ ಸುಖದಲ್ಲಿರುವ ಗುಣತ್ವವ್ಯಾಪ್ಯಜಾತಿಯು ಸುಖತ್ವವೆಂದೇ ಇಟ್ಟುಕೊಂಡು, ಜಾತಿಮತ್ತ್ವವು ಸುಖದಲ್ಲಿ ಬರುತ್ತದೆ ಎನ್ನಬೇಕಾಗುತ್ತದೆ. ಆತ್ಮಭೇದ ಸಿದ್ಧವಾಗುತ್ತದೆ.

'ಗುಣತ್ವ ವ್ಯಾಪ್ಯ' ಎಂದು ವಿಶೇಷಣ ಕೊಟ್ಟರೂ ಕೂಡ ಗುಣತ್ವವನ್ನೇ 'ಗುಣತ್ವ ವ್ಯಾಪ್ಯಜಾತಿ' ಎಂದು ಗ್ರಹಣ ಮಾಡಬಹುದು, ಗುಣತ್ವವು ಗುಣತ್ವಾಭಾವದವೃತ್ತಿಯಾದ್ದರಿಂದ ಗುಣತ್ವವ್ಯಾಪ್ಯವೇ ಆಗುವುದು. ಹೀಗಾಗಿ 'ಗುಣತ್ವವ್ಯಾಪ್ಯಜಾತಿ' ಎಂದು ಗುಣತ್ವವನ್ನೇ ತೆಗೆದುಕೊಂಡು ಸಾಧ್ಯ ಪರ್ಯವಸಾನ ಮಾಡಿದಾಗ ಹಿಂದಿನಂತೆಯೇ ಆತ್ಮಭೇದ ಸಿದ್ಧಿಸಲಾರದು, ಅರ್ಥಾಂತರ ದೋಷ ಹಿಂದಿನಂತೆಯೇ ಬರುವುದು ಎಂದು ಇಲ್ಲಿ ಶಂಕೆ ಬರುವುದು ಸಹಜ. ಅದಕ್ಕೆ ಗುಣತ್ವ ನ್ಯೂನವೃತ್ತಿತ್ವರೂಪವಾದ ಗುಣತ್ವವ್ಯಾಪ್ಯತ್ವವನ್ನು ವಿವಕ್ಷೆ ಮಾಡಬೇಕು. 'ಗುಣತ್ವನ್ಯೂನವೃತ್ತಿತ್ವ'ವೆಂದರೆ ಗುಣನಿಷ್ಠ ಭೇದ ಪ್ರತಿಯೋಗಿತಾವಚ್ಛೇದಕತ್ವ. ಯಾವುದೇ ಗುಣದಲ್ಲಿ 'ಗುಣೋ ನ' ಎಂದು ಗುಣಭೇದ ಬರುವುದಿಲ್ಲ. ಗುಣತ್ವವು ಗುಣನಿಷ್ಠ ಭೇದಪ್ರತಿಯೋಗಿತಾವಚ್ಛೇದಕವಾಗುವುದಿಲ್ಲ. ಸುಖತ್ವವು ಗಂಧಾದಿಗುಣನಿಷ್ಠ ಭೇದ ಪ್ರತಿಯೋಗಿತಾವಚ್ಛೇದಕವೇ ಆಗುತ್ತದೆ. 'ಗಂಧಃ ಸುಖಂ ನ' ಎಂದು ಭೇದಪ್ರತೀತಿ ಇದೆ. ಗಂಧಗುಣನಿಷ್ಠವಾದ ಸುಖಭೇದಕ್ಕೆ ಪ್ರತಿಯೋಗಿತಾವಚ್ಛೇದಕವು ಸುಖತ್ವವೆ. ಗುಣತ್ವವಲ್ಲ. ಹೀಗೇ 'ಗಂಧಃ ರೂಪಂ ನ' ಎಂದು ಭೇದ ಪ್ರತೀತಿ ಇರುವುದರಿಂದ ರೂಪ ಭೇದಕ್ಕೆ ಪ್ರತಿಯೋಗಿತಾವಚ್ಛೇದಕವು ದೃಷ್ಟಾಂತವಾದ ರೂಪದಲ್ಲಿರುವ ರೂಪತ್ವವಾಗುತ್ತದೆ.

**एतत्पक्षे साध्यगौरवादाह – सुखत्वं वेति । नानेत्यादेः स्वाश्रयाश्रयनिष्ठभेदप्रतियोगितावच्छेदकवृत्तीत्यर्थः। तेन नानाव्यक्त्याश्रितं यत्संयोगादिकं तदाश्रितत्वस्य रूपत्वादावभावेऽपि न पूर्ववद्दोषः । जातित्वमात्रस्य मनस्त्वादौ व्यभिचारित्वाद्गुणनिष्ठेति ।**

'ಜಾತ್ಯಾ ನಾನಾ ವ್ಯಕ್ತ್ಯಾಶ್ರಿತತ್ವ'ವೆಂಬ ಈ ಸಾಧ್ಯವು ಜಾತಿ ಘಟಿತವಾಗಿದ್ದು ಗುರುಭೂತವಾಗುವುದರಿಂದ ಜಾತಿಯನ್ನೇ ಪಕ್ಷಮಾಡಿ, 'ಸುಖತ್ವವು ನಾನಾ ವ್ಯಕ್ತ್ಯಾಶ್ರಿತಾಶ್ರಿತ'ವೆಂದು ಸಾಧ್ಯಸಾಧನ ಮಾಡುತ್ತಾರೆ. ಗುಣನಿಷ್ಠ ಜಾತಿತ್ವವು ಹೇತು. ರೂಪತ್ವವು ದೃಷ್ಟಾಂತ. ಈ ಪಕ್ಷದಲ್ಲಿ 'ನಾನಾ ವ್ಯಕ್ತ್ಯಾಶ್ರಿತಾಶ್ರಿತ' ಎಂದರೆ 'ಸ್ವಾಶ್ರಯಾಶ್ರಯ ನಿಷ್ಠ ಭೇದ ಪ್ರತಿಯೋಗಿತಾವಚ್ಛೇದಕವೃತ್ತಿ' ಎಂದರ್ಥ. ಹೀಗೆ ಹೇಳದಿದ್ದರೆ ನಾನಾ ವ್ಯಕ್ತ್ಯಾಶ್ರಿತವಾದ ಸಂಯೋಗಾದಿಗಳಲ್ಲಿ ಯಾವುದರಲ್ಲಿಯೂ ರೂಪತ್ವವಿಲ್ಲದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಹಿಂದಿನಂತೆಯೇ ಬಂದೀತು. 'ಸ್ವಾಶ್ರಯಾಶ್ರಯನಿಷ್ಠ ಭೇದಪ್ರತಿಯೋಗಿತಾವಚ್ಛೇದಕ ವೃತ್ತಿ' ಎಂದರೆ ಈ ದೋಷವಿಲ್ಲ. ಸ್ವಪದದಿಂದ ರೂಪತ್ವವನ್ನು ತೆಗೆದುಕೊಳ್ಳಬೇಕು. 'ಸ್ವಾಶ್ರಯಾಶ್ರಯ'ವೆಂದರೆ, ರೂಪತ್ವಾಶ್ರಯ ನೀಲರೂಪ, ಆದಕ್ಕೆ ಆಶ್ರಯ ನೀಲಘಟ. 'ತನ್ನಿಷ್ಠ ಭೇದ'ವು ಪೀತಘಟಭೇದ. 'ಭೇದಪ್ರತಿಯೋಗಿ'

ಪೀತಘಟ. 'ಪ್ರತಿಯೋಗಿತಾವಚ್ಛೇದಕ' ಪೀತರೂಪ. 'ತದ್‌ವೃತ್ತಿ' ರೂಪತ್ವವೆಂದು ದೃಷ್ಟಾಂತದಲ್ಲಿ ಸಾಧ್ಯಾನುಗಮ ಸುಲಭ.

'ಗುಣನಿಷ್ಠ ಜಾತಿತ್ವಾತ್' ಎಂದು ಹೇತುವಿನಲ್ಲಿ ವಿಶೇಷಣ ನೀಡದಿದ್ದರೆ ಜಾತಿತ್ವ ಮಾತ್ರವು ಮನಸ್ತ್ವಾದಿಗಳಲ್ಲಿ ಇದೆ, ಸ್ವಾಶ್ರಯಾಶ್ರಯವು ಮನಸ್ತ್ವಕ್ಕೆ ಇಲ್ಲ, ಸ್ವಾಶ್ರಯವಾದ ಮನಸಿಗೆ ಒಂದು ಸಮವಾಯಿ ಆಶ್ರಯವೇ ಇಲ್ಲ. ಅದು ನಿತ್ಯ. ನಿತ್ಯದ್ರವ್ಯಕ್ಕೆ ಆಶ್ರಿತತ್ವವಿಲ್ಲ ಎಂದು ತಾರ್ಕಿಕಮತ. ಹೀಗಾಗಿ ಸ್ವಾಶ್ರಯಾಶ್ರಯ ನಿಷ್ಠಭೇದ ಪ್ರತಿಯೋಗಿತಾವಚ್ಛೇದಕ ವೃತ್ತಿತ್ವವನ್ನು ಹೇಳಲು ಬರುವುದಿಲ್ಲ. ಅದರ ಅಭಾವವೇ ಬರುತ್ತದೆ, ಅದರಿಂದ ವ್ಯಭಿಚಾರ, ಅದಕ್ಕೆ 'ಗುಣನಿಷ್ಠ' ಎಂದು ವಿಶೇಷಣ ಉಕ್ತವಾಗಿದೆ. ವೇದಾಂತಿಮತದಲ್ಲಿ ಮನಸ್ಸು ಜೀವೋಪಾಧಿ. ಅದರ ಭೇದದಿಂದ ಆತ್ಮಭೇದ ಸಿದ್ಧವೇ ಇರುವುದರಿಂದ ವ್ಯಭಿಚಾರವಿಲ್ಲ. ಮನಸ್ತ್ವಜಾತಿ ನಾನಾ ವ್ಯಕ್ತ್ಯಾಶ್ರಿತಾಶ್ರಿತವೆ. ಅದರ ವ್ಯಾವೃತ್ತಿಗಾಗಿ ಗುಣನಿಷ್ಠತ್ವ ವಿಶೇಷಣ ಕೊಡಬೇಕಾಗಿಲ್ಲ.

**तावन्मात्रस्य तत्तद्रूपत्वादौ व्यभिचारित्वाज्जातीति । गुणसमवेतत्वोक्तौ तु तल्लाभायैव जातिपदमित्यवधेयम् ।**

'ಗುಣನಿಷ್ಠತ್ವಾತ್' ಎಂದಿಷ್ಟೇ ಹೇತುಮಾಡಿದರೆ 'ತದ್ರೂಪತ್ವ'ದಲ್ಲಿ ವ್ಯಭಿಚಾರ. ತದ್ರೂಪತ್ವಾಶ್ರಯ ತದ್ರೂಪ. ಅದಕ್ಕೆ ಆಶ್ರಯ ತದ್‌ರೂಪವದ್ ಘಟ. ಅದರಲ್ಲಿರುವ ಭೇದವು ಏತದ್ ರೂಪವದ್ ಘಟಭೇದ, ಭೇದ ಪ್ರತಿಯೋಗಿತಾವಚ್ಛೇದಕ ಏತದ್ ರೂಪ. ತದ್ ವೃತ್ತಿತ್ವವು ತದ್ರೂಪತ್ವಕ್ಕೆ ಬರುವುದಿಲ್ಲ ಎಂದು ವ್ಯಭಿಚಾರ. ತದ್ರೂಪತ್ವದಲ್ಲಿ ವ್ಯಭಿಚಾರ ವಾರಣ ಮಾಡಬೇಕಾದರೆ ಹೇತು ಬಾರದಂತೆ ಮಾಡಬೇಕು. 'ಗುಣನಿಷ್ಠ ಜಾತಿತ್ವಾತ್' ಎನ್ನಬೇಕು. ತದ್‌ರೂಪತ್ವವು ಗುಣನಿಷ್ಠವಾದರೂ ಜಾತಿಯಲ್ಲ. ಗುಣನಿಷ್ಠಜಾತಿತ್ವರೂಪವಾದ ಹೇತು ಬರುವುದಿಲ್ಲವಾದ್ದರಿಂದ ವ್ಯಭಿಚಾರವಿಲ್ಲ.

'ಜಾತಿ' ಶಬ್ದವನ್ನು ಹಾಕದಿದ್ದರೂ 'ಗುಣನಿಷ್ಠತ್ವ'ವೆಂದರೆ 'ಗುಣಸಮವೇತತ್ವ' ಎಂದು ವಿವಕ್ಷೆ ಮಾಡಿದರೂ ತದ್‌ರೂಪತ್ವವು ಸಮವೇತವಲ್ಲವಾದ್ದರಿಂದ ಹೇತು ಬರುವುದಿಲ್ಲ, ವ್ಯಭಿಚಾರವಿಲ್ಲ ಎನ್ನಲು ಶಕ್ಯವಿದೆ. ಅದರಿಂದ 'ಜಾತಿ' ಶಬ್ದ ಹಾಕಿರುವುದು 'ಗುಣನಿಷ್ಠತ್ವ'ವು ಗುಣಸಮವೇತತ್ವ ರೂಪವೆಂದು ತಿಳಿಸುವ ಉದ್ದೇಶದಿಂದ ಎನ್ನಬೇಕು. 'ಗುಣನಿಷ್ಠಜಾತಿತ್ವಾತ್' ಎಂದರೆ 'ಗುಣಸಮವೇತತ್ವಾತ್' ಎಂದೇ ಅರ್ಥ.

**न च शब्दे शब्दत्वे च व्यभिचारः । तस्य द्रव्यत्वात् । अद्रव्यत्वपक्षेऽपि तदन्यत्वेन हेतुविशेषणादिति चेन्न ।**

**'ಗುಣತ್ವಹೇತುವಿಗೆ ಶಬ್ದದಲ್ಲಿ ವ್ಯಭಿಚಾರ, ಗುಣನಿಷ್ಠ ಜಾತಿತ್ವಹೇತುವಿಗೂ ಶಬ್ದತ್ವದಲ್ಲಿ ವ್ಯಭಿಚಾರ' ಎನ್ನಲಾಗದು. ಏಕೆಂದರೆ ಶಬ್ದವು ದ್ರವ್ಯ, ಹೊರತು ಗುಣವಲ್ಲ. 'ದ್ರವ್ಯವಲ್ಲ, ಗುಣವೇ' ಎನ್ನುವ ಪಕ್ಷದಲ್ಲಿ 'ಶಬ್ದಭಿನ್ನತ್ವೇ ಸತಿ' ಎಂದು ಗುಣತ್ವಹೇತುವಿಗೂ, 'ಶಬ್ದತ್ವಾನ್ಯತ್ವೇ ಸತಿ' ಎಂದು ಗುಣನಿಷ್ಠಜಾತಿತ್ವ ಹೇತುವಿಗೂ ವಿಶೇಷಣ ಕೊಡುತ್ತೇವೆ. ಅದರಿಂದ ವ್ಯಭಿಚಾರವಿಲ್ಲ'—ಇದು ಸರಿಯಲ್ಲ.**

**व्यभिचार इति ।** शब्दाश्रयीभूतगगनस्यैकत्वेन शब्दे प्रथमसाध्यस्य, शब्दत्वे च द्वितीयसाध्यस्याभावादिति भावः । मीमांसकमतेनाह **— तस्येति ।** शब्दस्येत्यर्थः । तथाच शब्दे शब्दत्वे वा हेत्वभावादेव न व्यभिचार इति भावः । नैयायिकनयेऽप्याह **— अद्रव्यत्वपक्ष इति । तदन्यत्वेनेति ।** प्रथमे शब्दान्यत्वेन द्वितीये शब्दत्वान्यत्वेन चेत्यर्थः ।

ರೂಪವು ನಾನಾ ವ್ಯಕ್ತಿಗಳಲ್ಲಿ ಆಶ್ರಿತವಾದರೂ ಶಬ್ದವು ನಾನಾವ್ಯಕ್ತ್ಯಾಶ್ರಿತವಲ್ಲ. ಶಬ್ದಾಶ್ರಯವು ಆಕಾಶ. ಆಕಾಶ ಒಂದೇ. ಗುಣತ್ವವೆಂಬ ಮೊದಲನೇ ಹೇತುವು ಶಬ್ದದಲ್ಲಿ ಇದೆ. ನಾನಾವ್ಯಕ್ತ್ಯಾಶ್ರಿತತ್ವವೆಂಬ ಸಾಧ್ಯವಿಲ್ಲ ಎಂದು ವ್ಯಭಿಚಾರ. ಶಬ್ದತ್ವವು ನಾನಾವ್ಯಕ್ತ್ಯಾಶ್ರಿತದಲ್ಲಿ ಆಶ್ರಿತವಾಗಿಲ್ಲ. ಶಬ್ದವು ನಾನಾವ್ಯಕ್ತ್ಯಾಶ್ರಿತವಲ್ಲವಾದ್ದರಿಂದ ಅದರಲ್ಲಿ ಆಶ್ರಿತವಾದ ಶಬ್ದತ್ವವು ನಾನಾವ್ಯಕ್ತ್ಯಾಶ್ರಿತಾಶ್ರಿತವೆನಿಸುವುದಿಲ್ಲ. ಗುಣನಿಷ್ಠಜಾತಿತ್ವ ಹೇತುವು ಬರುತ್ತದೆ. ಅದರಿಂದ ಎರಡನೇ ಹೇತುವಿಗೂ ವ್ಯಭಿಚಾರ ಎಂದು ಶಂಕೆ.

ಈ ಶಂಕೆಗಳಿಗೆ ಮೀಮಾಂಸಕ ಮತಾನುಸಾರ ಸಮಾಧಾವನ್ನು ಹೇಳುತ್ತಾರೆ 'ಶಬ್ದವು ದ್ರವ್ಯ' ಎಂದು. ಶಬ್ದವು ದ್ರವ್ಯವಾದ್ದರಿಂದ ಅದರಲ್ಲಿ ಗುಣತ್ವಹೇತುವು ಬರುವುದಿಲ್ಲ. ಶಬ್ದತ್ವದಲ್ಲಿ ಗುಣನಿಷ್ಠಜಾತಿತ್ವಹೇತುವೂ ಬರುವುದಿಲ್ಲ. ಅದರಿಂದ ಎರಡು ಹೇತುಗಳಿಗೂ ವ್ಯಭಿಚಾರ ದೋಷವಿಲ್ಲ.

ನೈಯಾಯಿಕ ಮತದಲ್ಲಿ ಶಬ್ದವು ಗುಣವಾಗಿದೆ. ಶಬ್ದತ್ವವು ಗುಣನಿಷ್ಠಜಾತಿಯಾಗಿದೆ. ಅದರಿಂದ ವ್ಯಭಿಚಾರ ಅವಶ್ಯ ಬರುತ್ತದೆ. ಆದರೆ 'ತದನ್ಯತ್ವ' ವಿಶೇಷಣದಿಂದ ವ್ಯಭಿಚಾರ ಪರಿಹಾರವಾಗುತ್ತದೆ. ಶಬ್ದದಲ್ಲಿ ಗುಣತ್ವಹೇತು ಬಂದರೂ 'ಶಬ್ದಾನ್ಯತ್ವೇ ಸತಿ ಗುಣತ್ವ' ಹೇತು ಬರುವುದಿಲ್ಲ. ಶಬ್ದತ್ವದಲ್ಲಿ ಗುಣನಿಷ್ಠಜಾತಿತ್ವ ಬಂದರೂ 'ಶಬ್ದತ್ವಾನ್ಯತ್ವೇ ಸತಿ ಗುಣನಿಷ್ಠಜಾತಿತ್ವ' ಎಂಬ ಹೇತು ಬರುವುದಿಲ್ಲ.

**न च द्वितीये कत्वादिजातौ व्यभिचारः। तत्कल्पे तदन्यत्वपदेन तद्वदवृत्तित्वस्य विवक्षितत्वात् । कत्वाद्यन्यत्वेनापि हेतुर्विशेषणीय इत्यप्याहुः । वस्तुतः कल्पद्वयेऽपि तदन्यत्वेनेत्यस्य शब्दान्यत्वेनेत्येवार्थः । हेतुविशेषणादित्यस्य हेतुघटकगुणविशेषण-त्वादित्यर्थकतया शब्दमात्रवृत्तिशब्दत्वादेः शब्दान्यगुणवृत्तित्वाभावान्नोक्त-दोष इति भावः ।**

ಇಲ್ಲಿ ಪುನಃ ವ್ಯಭಿಚಾರ ಶಂಕೆ ಬರುತ್ತದೆ. 'ಶಬ್ದತ್ವಾನ್ಯತ್ವೇ ಸತಿ ಗುಣನಿಷ್ಠ ಜಾತಿತ್ವ' ಎಂಬ ಹೇತುವು ಕತ್ವ ಮುಂತಾದ ಜಾತಿಗಳಲ್ಲಿ ಬರುತ್ತದೆ. ಕಕಾರಾದಿ ಶಬ್ದಾಶ್ರಯ ಆಕಾಶವೇ ಆಗಿರುವುದರಿಂದ ಕಕಾರಾದಿಶಬ್ದವು ನಾನಾವ್ಯಕ್ತ್ಯಾಶ್ರಿತವಲ್ಲ. ಕತ್ವಾದಿ ಜಾತಿಯು ಶಬ್ದತ್ವಾನ್ಯ ಗುಣನಿಷ್ಠ ಜಾತಿಯಾಗಿದ್ದರೂ ನಾನಾವ್ಯಕ್ತ್ಯಾಶ್ರಿತಾಶ್ರಿತವಾಗಿಲ್ಲ. ಈ ವ್ಯಭಿಚಾರ ಪರಿಹಾರಕ್ಕೆ 'ಶಬ್ದತ್ವಾನ್ಯತ್ವ' ವೆಂದರೆ 'ಶಬ್ದತ್ವವದವೃತ್ತಿತ್ವ' ಎಂದು ವಿವಕ್ಷೆ ಮಾಡುತ್ತೇವೆ. ಕತ್ವಾದಿ ಜಾತಿಗಳು ಶಬ್ದತ್ವವದ್ ವೃತ್ತಿಯೇ ಆಗಿವೆ ಹೊರತು ಶಬ್ದತ್ವವದವೃತ್ತಿಯಲ್ಲ. ಕಕಾರಾದಿ ಶಬ್ದಗಳು ಶಬ್ದತ್ವವತ್ತೇ ಆಗಿವೆ. ಆದರಿಂದ ಕತ್ವಾದಿ ಜಾತಿಯಲ್ಲಿ ಗುಣನಿಷ್ಠಜಾತಿತ್ವರೂಪ ವಿಶೇಷ್ಯವು ಬಂದರೂ ಶಬ್ದತ್ವವದವೃತ್ತಿತ್ವರೂಪ ವಿಶೇಷಣವು ಬರುವುದಿಲ್ಲವಾದ್ದರಿಂದ ವಿಶಿಷ್ಟ ಹೇತುವು ಬರುವುದಿಲ್ಲ. ವ್ಯಭಿಚಾರವಿಲ್ಲ.

ಕೆಲವರು 'ಶಬ್ದತ್ವಾನ್ಯತ್ವದಂತೆ ಕತ್ವಾದಿಜಾತ್ಯನ್ಯತ್ವವನ್ನೂ ವಿಶೇಷಣವಾಗಿ ಕೊಡಬೇಕು, ಆದರಿಂದ ವ್ಯಭಿಚಾರ ಪರಿಹಾರವಾಗುತ್ತದೆ' ಎನ್ನುತ್ತಾರೆ.

ವಸ್ತುತಃ ಗುಣತ್ವವು ಹೇತುವೆಂದು ಒಂದು ಪಕ್ಷ, ಗುಣನಿಷ್ಠಜಾತಿತ್ವವು ಹೇತುವೆಂದು ಇನ್ನೊಂದು ಪಕ್ಷ ಎಂಬ ಎರಡೂ ಪಕ್ಷಗಳಲ್ಲಿಯೂ ಶಬ್ದಾನ್ಯತ್ವವೇ ವಿಶೇಷಣ. ಎರಡನೇ ಪಕ್ಷದಲ್ಲಿ ಶಬ್ದಾನ್ಯತ್ವವು ಗುಣಕ್ಕೆ ವಿಶೇಷಣ. ಶಬ್ದಾನ್ಯಗುಣವೃತ್ತಿಜಾತಿತ್ವವೇ ಹೇತು. 'ಹೇತುವಿಶೇಷಣ' ಶಬ್ದಕ್ಕೆ ಹೇತುಘಟಕ ಗುಣವಿಶೇಷಣ ಎಂದರ್ಥ. ಶಬ್ದತ್ವವು ಶಬ್ದಮಾತ್ರ ವೃತ್ತಿಯಾದ್ದರಿಂದ ಶಬ್ದಾನ್ಯ ಗುಣವೃತ್ತಿ ಜಾತಿಯಾಗುವುದಿಲ್ಲ. ಶಬ್ದಾನ್ಯಗುಣ ವೃತ್ತಿಜಾತಿತ್ವಹೇತುವು ಬರುವುದಿಲ್ಲ, ವ್ಯಭಿಚಾರವಿಲ್ಲ.

**ಸುಖಾದಿಗಳು ಅಂತಃಕರಣಾಶ್ರಿತ. ಆತ್ಮಭೇದಸಾಧಕವಲ್ಲ.**

**सुखदुःखादीनामन्तःकरणाश्रितत्वात् अंतःकरणानां च नानात्वेन सिद्धसाधनात् । स्वरूपसुखविवक्षायां तु तस्य द्रव्यत्वेनासिद्धेः ।**

**ಸುಖದುಃಖಾದಿಗಳು ಅಂತಃಕರಣಾಶ್ರಿತವಾದ್ದರಿಂದ ಅಂತಃಕರಣಗಳು ನಾನಾ ಇರುವುದರಿಂದ ಸಿದ್ಧಸಾಧನತ್ವ ದೋಷ ಬರುತ್ತದೆ. 'ಸುಖ' ಎಂದರೆ ಸ್ವರೂಪ ಸುಖವೆಂದು ವಿವಕ್ಷೆ ಮಾಡಿದರೆ ಅದು ಗುಣವಲ್ಲವಾದ್ದರಿಂದ ಗುಣತ್ವ ಹೇತುವಿಗೆ ಅಸಿದ್ಧಿ ದೋಷ ಬರುತ್ತದೆ.**

अत्र वृत्तिसुखत्वं स्वरूपसुखत्वं वा पक्षतावच्छेदकम् । उभयानुगत-सुखत्वजातेर्द्रव्यत्वादिना सङ्करेणासम्भवादिति भावेनाद्यं दूषयति – **सुखदुःखादीनामिति ।** वृत्त्यात्मकेत्यादिः । अत्र सुखस्यैव प्रकृतत्वेऽपि दुःखादिग्रहणं दुःखेच्छादिपक्षकानुमानान्तराणामपि निरास-सूचनाय । **अन्तःकरणाश्रितत्वादिति ।** तेषामन्तःकरणपरिणामत्वा-दिति भावः ।

ಈ ಅನುಮಾನದಲ್ಲಿ ವೃತ್ತಿಸುಖತ್ವವನ್ನಾಗಲಿ ಸ್ವರೂಪಸುಖತ್ವವನ್ನಾಗಲಿ ಪಕ್ಷತಾವಚ್ಛೇದಕ ವಾಗಿ ಮಾಡಬೇಕಾಗುತ್ತದೆ. ಏಕೆಂದರೆ ವೃತ್ತಿಸುಖ ಮತ್ತು ಸ್ವರೂಪಸುಖಗಳೆರಡರಲ್ಲಿಯೂ ಅನುಗತವಾದ ಸುಖತ್ವವೆಂಬ ಒಂದು ಜಾತಿಯನ್ನು ಹೇಳಲಾಗುವುದಿಲ್ಲ. ದ್ರವ್ಯತ್ವಾದಿಗಳಿಂದ ಸಾಂಕರ್ಯ ಬರುತ್ತದೆ. ದ್ರವ್ಯತ್ವವನ್ನು ಬಿಟ್ಟು ಸುಖತ್ವವು ವೃತ್ತಿಸುಖದಲ್ಲಿ, ಸುಖತ್ವವನ್ನು ಬಿಟ್ಟು ದ್ರವ್ಯತ್ವವು ಘಟದಲ್ಲಿ, ಎರಡೂ ಸ್ವರೂಪಸುಖದಲ್ಲಿ, ಎಂದು. ಹೀಗಾಗಿ ವೃತ್ತಿಸುಖತ್ವವನ್ನು ಪಕ್ಷತಾವಚ್ಛೇದಕಮಾಡಿದರೆ ವೃತ್ತಿಸುಖಕ್ಕೆ ನಾನಾ ಅಂತಃಕರಣಗಳು ಆಶ್ರಯವಾಗಿರುವುದರಿಂದ ಸಿದ್ಧಸಾಧನತ್ವದೋಷ. ಸ್ವರೂಪಸುಖತ್ವವನ್ನು ಪಕ್ಷತಾವಚ್ಛೇದಕ ಮಾಡಿದರೆ ಸ್ವರೂಪಸುಖವು ದ್ರವ್ಯವಾಗಿರುವುದರಿಂದ ಅದರಲ್ಲಿ ಗುಣತ್ವ ಹೇತುವು ಅಸಿದ್ಧ.

'ಸುಖದುಃಖಾದಿಗಳು ಅಂತಃಕರಣಾಶ್ರಿತವಾದ್ದರಿಂದ' ಎಂಬಲ್ಲಿ ಸುಖದೊಂದಿಗೆ ದುಃಖಾದಿ ಗಳನ್ನು ಸೇರಿಸಿ ಹೇಳಿದ್ದು ಯದ್ಯಪಿ ಸರಿಯಲ್ಲ. ಸುಖಪಕ್ಷಕ ಅನುಮಾನವನ್ನು ಹೇಳುವ ಈ ಸಂದರ್ಭದಲ್ಲಿ ದುಃಖಾದಿಗಳು ಪ್ರಕೃತವಲ್ಲ. ಸುಖವೇ ಪ್ರಕೃತ. ಆದರೂ ದುಃಖಾದಿ ಎಂದು ಹೇಳಿದ್ದು ದುಃಖ ಇಚ್ಛಾ ಮುಂತಾದವುಗಳನ್ನು ಪಕ್ಷಮಾಡಿ ಅನುಮಾನ ಮಾಡಿದರೂ ಇದೇರೀತಿ ದೋಷಗ್ರಸ್ತವಾಗುವುದೆಂದು ಸೂಚಿಸುವ ಅಭಿಪ್ರಾಯದಿಂದ.

ಸುಖದುಃಖಾದಿಗಳು ಅಂತಃಕರಣಾಶ್ರಿತ ಏಕೆಂದರೆ ಅವು ಅಂತಃಕರಣ ಪರಿಣಾಮ ರೂಪವಾಗಿವೆ. ಆದರಿಂದ ಸುಖದುಃಖಾದಿಗಳು ನಾನಾ ಅಂತಃಕರಣಗಳಲ್ಲಿಯೇ ಆಶ್ರಿತ ವಾಗಿರುವುದು ಸಿದ್ಧವಾಗಿರುವುದರಿಂದ ಅವುಗಳನ್ನು ನಾನಾ ವ್ಯಕ್ತ್ಯಾಶ್ರಿತವೆಂದು ಸಾಧನೆ ಮಾಡಿದರೆ ಸಿದ್ಧಸಾಧನತ್ವದೋಷ ಬರುತ್ತದೆ.

**सिद्धसाधनत्वादिति ।** यद्यपि सुखदुःखादीनामात्माश्रितत्वपक्षेऽप्यनिर्वचनीयात्मभेदमादाय सिद्धसाधनत्वं सम्भवत्येव । पारमार्थिकत्वेन भेदविशेषणे च साध्याप्रसिद्धेः । अन्तःकरणाश्रितत्वपक्षे सिद्धसाधनानुपपत्तेश्च । तद्भेदस्याप्यपारमार्थिकत्वात् । तथापि वस्तुगतिमनुरुद्ध्यैवान्तःकरणाश्रितत्वमुक्तम् । वस्तुतो वक्ष्यमाणरीत्या धर्मिसत्तासमसत्ताकभेदस्य साध्यशरीरघटकतायामात्माश्रितत्वपक्षे सिद्धसाधनानवकाशादन्तःकरणाश्रितत्वपक्ष एव तदुक्तिः ।

ಯದ್ಯಪಿ ಸುಖದುಃಖ ಮುಂತಾದವು ಅಂತಃಕರಣಾಶ್ರಿತವೆಂದು ಪಕ್ಷವನ್ನಿಟ್ಟುಕೊಂಡೇ ಸಿದ್ಧಸಾಧನತ್ವ ದೋಷವನ್ನು ಹೇಳಬೇಕೆಂದಿಲ್ಲ. ಆತ್ಮಾಶ್ರಿತವೆಂದು ಪಕ್ಷವಿಟ್ಟುಕೊಂಡರೂ ಅನಿರ್ವಚನೀಯವಾದ ಆತ್ಮಭೇದವನ್ನಿಟ್ಟುಕೊಂಡು ಸಿದ್ಧಸಾಧನತ್ವದೋಷವನ್ನು ಹೇಳಲು ಸಾಧ್ಯವಿದೆ. ಏಕೆಂದರೆ ಭೇದದಲ್ಲಿ ಪಾರಮಾರ್ಥಿಕತ್ವ ವಿಶೇಷಣವನ್ನು ಸೇರಿಸುವುದಿಲ್ಲ. ಸೇರಿಸಿದರೆ, ಸಾಧ್ಯ ಅಪ್ರಸಿದ್ಧವಾಗುತ್ತದೆ, ಮತ್ತು ಅಂತಃಕರಣಾಶ್ರಿತತ್ವ ಪಕ್ಷದಲ್ಲಿ ಸಿದ್ಧಸಾಧನತ್ವವೂ ಕೂಡಲಾರದು. ಅಂತಃಕರಣ ಭೇದವೂ ಕೂಡ ಅಪಾರಮಾರ್ಥಿಕ ತಾನೆ? ಆದರೂ ಪಕ್ಷವಾಗಿರುವ ವೃತ್ತಿಸುಖವು ಅಂತಃಕರಣಾಶ್ರಿತವಾದ್ದರಿಂದ ಸಿದ್ಧಸಾಧನವೆಂದು ವಾಸ್ತವಸ್ಥಿತಿಯನ್ನು ಹೇಳುವ ಅಭಿಪ್ರಾಯದಿಂದ ಅಂತಃಕರಣಾಶ್ರಿತತ್ವವನ್ನು ಹೇಳಿದ್ದಾರೆ. ವಸ್ತುತಃ ಮುಂದೆ ಹೇಳುವಂತೆ ಸಾಧ್ಯಶರೀರದಲ್ಲಿ ಧರ್ಮಿಸತ್ತಾಸಮಾನಸತ್ತಾಕ ಭೇದವನ್ನು ಘಟಕವಾಗಿ ಇಟ್ಟುಕೊಳ್ಳುವುದರಿಂದ ಆತ್ಮಾಶ್ರಿತತ್ವ ಪಕ್ಷದಲ್ಲಿ ಧರ್ಮಿಯಾದ ಆತ್ಮ ಅನಿರ್ವಚನೀಯವಲ್ಲದ್ದರಿಂದ ಅನಿರ್ವಚನೀಯ ಭೇದವನ್ನಿಟ್ಟುಕೊಂಡು ಸಿದ್ಧಸಾಧನವನ್ನು ಹೇಳಲು ಅವಕಾಶವಿಲ್ಲ. ಆದರೆ ವೃತ್ತಿಸುಖಕ್ಕೆ ಅಂತಃಕರಣವು ಧರ್ಮಿ ಅನಿರ್ವಚನೀಯ. ಧರ್ಮಿಸಮ ಸತ್ತಾಕವಾದ ಭೇದವು ಅನಿರ್ವಚನೀಯ ವ್ಯಾವಹಾರಿಕವಾದ್ದರಿಂದ ಸಿದ್ಧವೇ ಇದೆ ಎಂದು ಅಂತಃಕರಣಾಶ್ರಿತತ್ವ ಪಕ್ಷದಲ್ಲಿಯೇ ಸಿದ್ಧಸಾಧನವನ್ನು ಹೇಳಿದ್ದಾರೆ.

द्वितीयपक्षं दूषयति **— स्वरूपेति ।** आत्मस्वरूपेत्यर्थः । द्रव्यसमवेतस्यैव गुणत्वेन स्वरूपसुखस्यातथात्वात् स्वरूपासिद्धिरिति भावः । सिद्धान्ते तु तस्य स्वरूपत्वेऽप्यात्मविशेषतया गुणत्वमस्त्येवेति ध्येयम् ।

ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ–ಸ್ವರೂಪಸುಖವನ್ನು ಅಂದರೆ ಆತ್ಮಸ್ವರೂಪಭೂತವಾದ ಸುಖವನ್ನು ಪಕ್ಷವಾಗಿ ವಿವಕ್ಷೆ ಮಾಡುವುದಾದರೆ ಅದು ಗುಣವಲ್ಲವಾದ್ದರಿಂದ ಗುಣತ್ವಹೇತು ಅಸಿದ್ಧವಾಗುವುದು ಎಂದು. ದ್ರವ್ಯಸಮವೇತವೇ ಗುಣವೆನಿಸುವುದರಿಂದ ಆತ್ಮಸ್ವರೂಪ ಸುಖವು ದ್ರವ್ಯಸಮವೇತವಲ್ಲದುದರಿಂದ ಗುಣವೆನಿಸಲಾರದು. ಆದರಿಂದ ಗುಣತ್ವ ಹೇತುವಿಗೆ ಸ್ವರೂಪಾಸಿದ್ಧಿ ದೋಷವು ಬರುವುದು. ಇದು ತಾರ್ಕಿಕರೀತಿಯಿಂದ ಹೇಳಿದ್ದು. ಸಿದ್ಧಾಂತದಲ್ಲಿ ಆತ್ಮಸ್ವರೂಪಭೂತ ಸುಖವು ವಿಶೇಷ ಬಲದಿಂದ ಆತ್ಮನಿಗೆ ವಿಶೇಷಣವೇ ಆಗಿರುವುದರಿಂದ ಗುಣತ್ವವಿದ್ದೇ ಇದೆ ಎಂದು ತಿಳಿಯಬೇಕು.

**ಶಾರೀರಕ್ರಿಯೆಗಳು ಆತ್ಮಭೇದ ಸಾಧಕವಲ್ಲ**

**चैत्रशरीरं मैत्रशरीरस्वामिभिन्नस्वामिकं तद्विरुद्धचेष्टावत्त्वादित्यत्र व्यभिचारः । एकस्वामिकयोरपि घटपटयोर्विरुद्धचेष्टादर्शनात् । शरीरत्वेन हेतुविशेषणे दृष्टान्तासिद्धिः ।**

**'ಚೈತ್ರಶರೀರವು ಮೈತ್ರಶರೀರ ಸ್ವಾಮಿಗಿಂತ ಭಿನ್ನ ಸ್ವಾಮಿಕವಾಗಿದೆ. ಏಕೆಂದರೆ ಅದು ಮೈತ್ರಶರೀರಕ್ಕಿಂತ ವಿರುದ್ಧವಾದ ಚೇಷ್ಟೆಗೆ ಆಶ್ರಯವಾಗಿದೆ'. ಎಂಬ ಅನುಮಾನದಲ್ಲಿ ವ್ಯಭಿಚಾರ ದೋಷವಿದೆ, ಅಭಿನ್ನ ಸ್ವಾಮಿಕವಾದ ಘಟಪಟಗಳಲ್ಲಿಯೂ ಕೂಡ ವಿರುದ್ಧ ಚೇಷ್ಟೆ ಕಂಡುಬರುವುದರಿಂದ. 'ಶರೀರವಾಗಿದ್ದು ಮೈತ್ರಶರೀರಕ್ಕಿಂತ ವಿರುದ್ಧಚೇಷ್ಟೆಗೆ ಆಶ್ರಯವಾಗಿರುವುದರಿಂದ' ಎಂದು ವಿಶೇಷಣವನ್ನು ಸೇರಿಸಿದರೆ ದೃಷ್ಟಾಂತ ಇಲ್ಲವಾಗುವುದು.**

**चैत्रशरीरमिति ।** अत्र तत्स्वामित्वं न तदवच्छिन्नभोगभोक्तृत्वम् । एकस्वामिकयोर्घटपटयोरित्यग्रिमग्रन्थविरोधात् । घटाद्यवच्छिन्नभोगाप्रसिद्धेः । किन्तु स्वस्वामिभावव्यवहारनियामकः तत्सत्तानियामकत्वादिलक्षणो धर्मविशेषः । यद्यपि तत्स्वामिभिन्नस्वामिकत्वं परमतेऽप्रसिद्धम् । तथापि प्रसिद्धघटादिसाधारणस्य तत्स्वामिभिन्नत्वस्यैव साध्यतावच्छेदकत्वान्न दोषः । साध्यता च स्वस्वामिकत्वसम्बन्धेन । अतः फलतश्चैत्रमैत्रात्मनोर्भेदसिद्धिः । घटादेस्तादृशसम्बन्धेन सिद्ध्ययोगात् ।

ಇಲ್ಲಿ 'ತತ್‌ಸ್ವಾಮಿತ್ವ'ವೆಂದರೆ 'ತದವಚ್ಛಿನ್ನ ಭೋಗ ಭೋಕ್ತೃತ್ವ' ಎನ್ನಲಾಗದು. ಏಕೆಂದರೆ

'ಏಕಸ್ವಾಮಿಕ ಘಟಪಟಗಳಲ್ಲಿಯೂ ಕೂಡ ವಿರುದ್ಧ ಚೇಷ್ಟೆ ಕಂಡುಬರುವುದರಿಂದ' ಎಂದು ಮುಂದೆ ಹೇಳುವುದರ ವಿರೋಧ ಬರುತ್ತದೆ, ಘಟಾದ್ಯವಚ್ಛಿನ್ನ ಭೋಗವು ಅಪ್ರಸಿದ್ಧವಾಗಿರುವುದರಿಂದ. ಆದರಿಂದ 'ತತ್‌ಸ್ವಾಮಿತ್ವ'ವೆಂದರೆ ಸ್ವ-ಸ್ವಾಮಿಭಾವ ವ್ಯವಹಾರಕ್ಕೆ ನಿಯಾಮಕವಾದ ತತ್‌ಸತ್ತಾ ನಿಯಾಮಕತ್ವಾದಿ ರೂಪವಾದ ಧರ್ಮವಿಶೇಷ ಎನ್ನಬೇಕು.

ಯದ್ಯಪಿ ತತ್‌ಸ್ವಾಮಿ ಭಿನ್ನಸ್ವಾಮಿಯೇ ಪರಮತದಲ್ಲಿ ಅಪ್ರಸಿದ್ಧನಾಗಿರುವುದರಿಂದ ತತ್‌ಸ್ವಾಮಿಭಿನ್ನಸ್ವಾಮಿಕತ್ವವು ಅಪ್ರಸಿದ್ಧ. ಆದರೂ ಘಟಾದಿಗಳಲ್ಲಿ ಕಂಡಿರುವ 'ತತ್‌ಸ್ವಾಮಿ ಭಿನ್ನತ್ವ'ವನ್ನೇ ಸಾಧ್ಯತಾವಚ್ಛೇದಕವಾಗಿ ಮಾಡಬೇಕು. ಸ್ವಸ್ವಾಮಿಕತ್ವವನ್ನು ಸಾಧ್ಯತಾವಚ್ಛೇದಕ ಸಂಬಂಧವೆಂದು ಸ್ವೀಕರಿಸಬೇಕು. ಅಂದರೆ, 'ಸ್ವ ಸ್ವಾಮಿಕತ್ವ ಸಂಬಂಧೇನ ತತ್‌ಸ್ವಾಮಿ ಭಿನ್ನವು ಸಾಧ್ಯ' ಎನ್ನಬೇಕು. ಆಗ ಸಾಧ್ಯಕ್ಕೆ ಅಪ್ರಸಿದ್ಧಿ ದೋಷ ಬರುವುದಿಲ್ಲ. ಇದರ ಫಲವಾಗಿ ಚೈತ್ರಾತ್ಮ ಮೈತ್ರಾತ್ಮರಿಗೆ ಭೇದವು ಸಿದ್ಧವಾಗುತ್ತದೆ. ಏಕೆಂದರೆ, ಘಟಾದಿಗಳು ಸ್ವಸ್ವಾಮಿಕತ್ವ ಸಂಬಂಧದಿಂದ ಪಕ್ಷದಲ್ಲಿ ಸಿದ್ಧವಾಗುವುದು ಶಕ್ಯವಿಲ್ಲ ತಾನೆ?

अत्र तद्विरुद्धचेष्टावत्त्वं तदवृत्तिक्रियावत्त्वं, तत्क्रियाविजातीयक्रियावत्त्वं वेति मन्वानो दूषयति — **इत्यत्रेति** । व्यभिचारमुपपादयति — **एकस्वामिकयोरिति** । मैत्रस्वामिकयोरित्यर्थः । तथाच मैत्रशरीरविरुद्धचेष्टावति घटादौ तत्स्वामिभिन्नस्वामिकत्वाभावात्, यो यद्विरुद्धचेष्टाश्रयः स तत्स्वामिभिन्नस्वामिक इति सामान्यव्याप्तौ घटविरुद्धचेष्टावति पटादौ तत्स्वामिभिन्नस्वामिकत्वाभावादपि व्यभिचार इति भावः । ननु शरीरत्वे सति तद्विरुद्धचेष्टावत्त्वमेव हेतुः । अतो नोक्तव्यभिचार इत्यत आह — **शरीरत्वेनेति** । शरीरत्वविशिष्टनिरुक्तचेष्टावत्त्वस्य हेतुत्वेऽपीत्यर्थः ।

'ತದ್ವಿರುದ್ಧ ಚೇಷ್ಟಾವತ್ತ್ವ'ವೆಂದರೆ 'ತದವೃತ್ತಿಕ್ರಿಯಾವತ್ತ್ವ', ಅಥವಾ 'ತತ್‌ಕ್ರಿಯಾ ವಿಜಾತೀಯ ಕ್ರಿಯಾವತ್ತ್ವ' ಎಂದಿಟ್ಟುಕೊಂಡು ವ್ಯಭಿಚಾರ ದೋಷವನ್ನು ಪೂರ್ವಪಕ್ಷಿ ಹೇಳುತ್ತಾನೆ. ವ್ಯಭಿಚಾರ ಹೀಗೆ— ಮೈತ್ರನೊಬ್ಬನೇ ಸ್ವಾಮಿಯಾಗಿಉಳ್ಳ ಘಟಪಟಗಳಲ್ಲಿ ವಿಶೇಷವ್ಯಾಪ್ತಿಗೆ ವ್ಯಭಿಚಾರ. ಮೈತ್ರಶರೀರಕ್ಕೆ ವಿರುದ್ಧವಾದ ಚೇಷ್ಟೆ ಉಳ್ಳ ಈ ಘಟಾದಿಗಳಲ್ಲಿ ತತ್‌ಸ್ವಾಮಿ ಭಿನ್ನಸ್ವಾಮಿಕತ್ವರೂಪವಾದ ಸಾಧ್ಯವಿಲ್ಲ. ಯಾವುದು ಯಾವುದಕ್ಕೆ ವಿರುದ್ಧವಾದ ಚೇಷ್ಟೆಗೆ ಆಶ್ರಯವೋ ಅದು ಅದರ ಸ್ವಾಮಿಗಿಂತ ಭಿನ್ನವಾದ ಸ್ವಾಮಿ ಉಳ್ಳದ್ದೆಂದು ಸಾಮಾನ್ಯವ್ಯಾಪ್ತಿ

ಇಟ್ಟುಕೊಂಡರೆ ಈ ವ್ಯಾಪ್ತಿಗೆ ಗ್ರಾಹಕವಾದ ಸಹಚಾರವು ವಿಶೇಷವ್ಯಾಪ್ತಿಗೆ ಗ್ರಾಹಕವಾಗುತ್ತದೆ. ಆದರೂ ಪ್ರಕೃತದಲ್ಲಿ ಸಾಮಾನ್ಯವ್ಯಾಪ್ತಿಯನ್ನು ಇಟ್ಟುಕೊಂಡರೂ ಘಟ ವಿರುದ್ಧ ಚೇಷ್ಟೆಯುಳ್ಳ ಪಟಾದಿಗಳಲ್ಲಿ ಘಟಸ್ವಾಮಿ ಭಿನ್ನಸ್ವಾಮಿಕತ್ವವು ಇರುವ ನಿಯಮವಿಲ್ಲ. ಎರಡಕ್ಕೂ ಮೈತ್ರನೊಬ್ಬನೇ ಸ್ವಾಮಿ ಇರಬಹುದು. ಆದರಿಂದ ವ್ಯಭಿಚಾರ. ಹೀಗೆ ಶರೀರವಿರುದ್ಧಚೇಷ್ಟಾವತ್ವಹೇತುವಿಗೂ ವ್ಯಭಿಚಾರ, ಹೇತುಸದೃಶವಾದ ಘಟವಿರುದ್ಧಚೇಷ್ಟಾವತ್ವಕ್ಕೂ ವ್ಯಭಿಚಾರವೇ ಎಂದು ಹೇಳಿದಂತಾಯಿತು.

'ಶರೀರತ್ವೇ ಸತಿ ತದ್ವಿರುದ್ಧ ಚೇಷ್ಟಾವತ್ತ್ವಾತ್' ಎಂದು ಹೇತು ಮಾಡುವ ಪಕ್ಷದಲ್ಲಿಯೂ ದೃಷ್ಟಾಂತಾಭಾವರೂಪವಾದ ದೋಷವಿದ್ದೇ ಇದೆ.

**यद्यपि साक्षात्प्रयत्नजन्यक्रियारूपचेष्टापदार्थविवक्षयैवोक्तदोष-वारणसम्भवात् तादृशक्रियाश्रयत्वरूपशरीरत्वस्य पृथगुपादानमनुचितम् । न च शरीरत्वस्य जातित्वान्न गौरवमिति वाच्यम् । पृथिवीत्वादिना संकरात् । तथापि सांकर्यस्य जातिबाधकत्वानङ्गीकारे लाघवसम्भवा-च्छरीरत्वं पृथगुपात्तम् । दृष्टान्ताभाव इति । तथाच व्याप्तिग्रह-विरोधिव्यभिचारग्रहाभावेऽपि तत्कारणीभूतसहचारग्रहासम्भवेन व्याप्तिग्र-हासम्भवान्नानुमानसम्भव इति भावः ।**

ಯದ್ಯಪಿ 'ಶರೀರತ್ವೇ ಸತಿ' ಎಂದು ಪ್ರತ್ಯೇಕ ವಿಶೇಷಣವನ್ನು ಸೇರಿಸಬೇಕಾಗಿಲ್ಲ. 'ಚೇಷ್ಟಾ' ಶಬ್ದಕ್ಕೇ 'ಮೈತ್ರಶರೀರ ವಿರುದ್ಧ ಸಾಕ್ಷಾತ್‌ಪ್ರಯತ್ನ ಜನ್ಯಕ್ರಿಯಾ' ಎಂದು ಅರ್ಥವಿವಕ್ಷೆ ಮಾಡಿದರೆ ಸಾಕು. ಆದರಿಂದಲೇ ಘಟಪಟಾದಿಗಳಲ್ಲಿ ಚೇಷ್ಟಾ ಇಲ್ಲದ್ದರಿಂದ ವ್ಯಭಿಚಾರ ಪರಿಹಾರವಾಗುತ್ತದೆ. ಸಾಕ್ಷಾತ್ ಪ್ರಯತ್ನಜನ್ಯ ಕ್ರಿಯಾಶ್ರಯತ್ವರೂಪವಾದ ಶರೀರತ್ವವನ್ನು ಸೇರಿಸುವುದು, ಮತ್ತು ಮೈತ್ರಶರೀರವಿರುದ್ಧ ಕ್ರಿಯಾಶ್ರಯತ್ವವನ್ನೂ ಪ್ರತ್ಯೇಕವಾಗಿ ಸೇರಿಸುವುದು ಹೀಗೆ ಎರಡು ಬಾರಿ ಕ್ರಿಯಾವನ್ನು ಸೇರಿಸುವುದು ಅನಾವಶ್ಯಕ, ಅನುಚಿತ.

ಶರೀರತ್ವವು ಜಾತಿಯಾಗಿರುವುದರಿಂದ ಅದನ್ನು ಪ್ರತ್ಯೇಕವಾಗಿ ಸೇರಿಸಿದರೆ ಗೌರವದೋಷವಿಲ್ಲ ಎನ್ನಲಾಗದು. ಏಕೆಂದರೆ ಪೃಥಿವೀತ್ವಾದಿಗಳಿಂದ ಸಾಂಕರ್ಯ ಬರುವುದರಿಂದ ಶರೀರತ್ವವು ಜಾತಿಯಾಗಲಾರದು. ಪೃಥಿವೀತ್ವವನ್ನು ಬಿಟ್ಟು ಶರೀರತ್ವವು ಜಲೀಯ ಶರೀರದಲ್ಲಿ, ಶರೀರತ್ವವನ್ನು ಬಿಟ್ಟು ಪೃಥಿವೀತ್ವವು ಘಟಾದಿಗಳಲ್ಲಿ, ಎರಡರ ಸಮಾವೇಶವು ಪಾರ್ಥಿವ ಶರೀರದಲ್ಲಿ ಎಂದು ಸಾಂಕರ್ಯ. ಆದರೂ ಸಾಂಕರ್ಯವನ್ನು ಜಾತಿಬಾಧಕವೆಂದು ಅಂಗೀಕರಿಸದಿರುವ ಪಕ್ಷದಲ್ಲಿ ಶರೀರತ್ವ ಜಾತಿಯನ್ನು ವಿಶೇಷಣವಾಗಿ ಇಟ್ಟುಕೊಂಡರೆ ಲಾಘವವಿದೆ ಎಂಬ ಅಭಿಪ್ರಾಯದಿಂದ ಹಾಗೆ ಮಾಡಿದ್ದಾರೆ.

ಶರೀರತ್ವವನ್ನು ವಿಶೇಷಣವಾಗಿಟ್ಟುಕೊಂಡಾಗ ದೃಷ್ಟಾಂತ ಇಲ್ಲವಾಗುವುದು ಎನ್ನುವುದರ ಅಭಿಪ್ರಾಯವಿದು—ವ್ಯಾಪ್ತಿಗ್ರಹಣಕ್ಕೆ ವಿರೋಧಿಯಾದ ವ್ಯಭಿಚಾರ ಜ್ಞಾನವು ಶರೀರತ್ವ ವಿಶೇಷಣದಿಂದ ಪರಿಹಾರಗೊಂಡರೂ ಕೂಡ, ದೃಷ್ಟಾಂತವಿಲ್ಲವಾಗುವುದರಿಂದ ವ್ಯಾಪ್ತಿಗ್ರಹಣಕ್ಕೆ ಕಾರಣವಾದ ಸಹಚಾರಜ್ಞಾನವಿಲ್ಲದಂತಾಗುತ್ತದೆ. ಆಗ ವ್ಯಾಪ್ತಿಜ್ಞಾನ ಬಾರದಿರುವುದರಿಂದ ಅನುಮಾನ ಕೂಡುವುದಿಲ್ಲ ಎಂದು.

**ವಿರುದ್ಧಧರ್ಮಗಳು ಜೀವೇಶ್ವರ ಭೇದ ಸಾಧಕವಲ್ಲ**

**विमतौ भिन्नौ विरुद्धधर्माधिकरणत्वात् दहनतुहिनवदिति चेन्न । पारमार्थिकभेदसाधने अप्रसिद्धविशेषणत्वात् । अपारमार्थिकभेदसाधने सिद्धसाधनत्वात् । तस्मान्नानुमानमात्मभेदे मानम् ।**

**'ವಿವಾದಾಸ್ಪದರಾದ ಜೀವೇಶರು ಪರಸ್ಪರ ಭಿನ್ನರು. ವಿರುದ್ಧ ಧರ್ಮಉಳ್ಳವರಾಗಿರುವುದರಿಂದ, ಬೆಂಕಿ ಹಿಮಗಳಂತೆ' ಎಂಬ ಅನುಮಾನವೂ ಭೇದ ಸಾಧಕವಲ್ಲ. ಪಾರಮಾರ್ಥಿಕ ಭೇದವನ್ನು ಸಾಧಿಸುವುದಾದರೆ ಅಪ್ರಸಿದ್ಧ ವಿಶೇಷಣತ್ವದೋಷ ಬರುತ್ತದೆ. ಅಪಾರಮಾರ್ಥಿಕ ಭೇದವನ್ನು ಸಾಧಿಸಿದರೆ ಸಿದ್ಧಸಾಧನತ್ವ ದೋಷ ಬರುತ್ತದೆ. ಅದರಿಂದ ಅನುಮಾನವು ಆತ್ಮಭೇದವಿಷಯದಲ್ಲಿ ಸಾಧಕವಲ್ಲ.**

विप्रतिपन्नाशेषभेदसाधकानुमानप्रकारमाशङ्कते — **विमताविति ।** भिन्नत्वाभिन्नत्वाभ्यां विप्रतिपन्नौ जीवेश्वरावित्यर्थः । अत्र द्वित्वमविवक्षितम्। विमतत्वमात्रस्य पक्षतावच्छेदकत्वात्

**भिन्नाविति ।** मिथो भिन्नावित्यर्थः । विमतत्वव्याप्यधर्मावच्छिन्नप्रतियोगिताकभेदवन्ताविति यावत् । विरुद्धधर्माधिकरणत्वात् परस्परवृत्त्यभावप्रतियोगिधर्मवत्त्वात् । विमतत्वसमानाधिकरणाभावप्रतियोगिधर्मवत्त्वादिति यावत् ।

अत्र यो यद्धर्मसमानाधिकरणाभावप्रतियोगिधर्मवान् स तद्धर्मव्याप्यधर्मावच्छिन्नप्रतियोगिताकभेदवानिति सामान्यव्याप्त्या दहनतुहि-

**नोभयत्वाधिकरण दहनादिवृत्त्यभाव प्रतियोगि शैत्यादिमत्तुहिनादेस्तदुभयत्वव्याप्य दहनत्वाद्यवच्छिन्न प्रतियोगिताकभेदवत्त्ववत् प्रकृतस्येश्वरादेरुक्तविमतत्वाधिकरण जीवादिवृत्त्यभावप्रतियोगि स्वातन्त्र्यादिमत्त्वेन तादृशविमतत्वव्याप्य जीवत्वाद्यवच्छिन्नप्रतियोगिताक भेदवत्त्वं सिद्ध्यतीत्याशयः ।**

ವಿವಾದಾಸ್ಪದವಾಗಿರುವ ಎಲ್ಲ ಭೇದಗಳನ್ನೂ ಸಾಧಿಸುವ ಅನುಮಾನ ಪ್ರಕಾರವನ್ನು ಪ್ರಸ್ತುತಪಡಿಸುತ್ತಾರೆ. 'ವಿವಾದಾಸ್ಪದರಾದ ಜೀವೇಶರು ಪರಸ್ಪರ ಭಿನ್ನರು' ಎಂದು. ಪರಸ್ಪರ ಭಿನ್ನರು ಅಭಿನ್ನರು ಎಂದು ವಿವಾದಕ್ಕೊಳಗಾಗಿರುವ ಜೀವೇಶರು ಭಿನ್ನರು ಎಂದರ್ಥ. ಇಲ್ಲಿ ದ್ವಿವಚನವು ಸಾಧುತ್ವಾರ್ಥ, ಹೊರತು, ದ್ವಿತ್ವವನ್ನು ಹೇಳುವ ವಿವಕ್ಷೆ ಇಲ್ಲ. ಏಕೆಂದರೆ ಅದಿನ್ನೂ ಸಿದ್ಧವಾಗಿಲ್ಲ. ವಿವಾದಾಸ್ಪದತ್ವ ಮಾತ್ರವೇ ಪಕ್ಷತಾವಚ್ಛೇದಕವಾಗಿ ವಿವಕ್ಷಿತವಾಗಿದೆ.

ಸಾಧ್ಯದಲ್ಲಿ 'ಭಿನ್ನ'ರೆಂದರೆ ಪರಸ್ಪರ ಭಿನ್ನರೆಂದರ್ಥ. ಅಂದರೆ, 'ವಿಮತತ್ವ ವ್ಯಾಪ್ಯ ಧರ್ಮಾವಚ್ಛಿನ್ನ ಪ್ರತಿಯೋಗಿತಾಕ ಭೇದವಂತೌ', ಜೀವತ್ವ ಈಶ್ವರತ್ವಗಳು ವಿಮತತ್ವ ವ್ಯಾಪ್ಯ ಧರ್ಮಗಳು. ಅಂಥ ಜೀವತ್ವಾವಚ್ಛಿನ್ನಪ್ರತಿಯೋಗಿತಾಕ ಭೇದವು ಈಶ್ವರನಲ್ಲಿ, ಈಶ್ವರತಾವಚ್ಛಿನ್ನ ಪ್ರತಿಯೋಗಿತಾಕ ಭೇದವು ಜೀವನಲ್ಲಿ ಹೀಗೆ ಪರಸ್ಪರ ಭೇದಉಳ್ಳವರು ಜೀವೇಶ್ವರರು ಎಂದು ಸಾಧಿಸಬೇಕಾಗಿದೆ. ವಿರುದ್ಧ ಧರ್ಮಾಧಿಕರಣತ್ವವು ಹೇತು. ಪರಸ್ಪರ ವೃತ್ತ್ಯಭಾವ ಪ್ರತಿಯೋಗಿ ಧರ್ಮವತ್ವವೆಂದರ್ಥ. ಜೀವವೃತ್ತ್ಯಭಾವ ಪ್ರತಿಯೋಗಿ ಧರ್ಮವು ಈಶ್ವರತ್ವ. ಈಶ್ವರ ವೃತ್ತ್ಯಭಾವ ಪ್ರತಿಯೋಗಿ ಧರ್ಮವು ಜೀವತ್ವ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ವಿಮತತ್ವಸಮಾನಾಧಿಕರಣ ಅಭಾವ ಪ್ರತಿಯೋಗಿ ಧರ್ಮವತ್ವವು ಹೇತು. ಜೀವತ್ವ ಈಶ್ವರತ್ವಗಳು ಎರಡೂ ವಿಮತತ್ವ ಸಮಾನಾಧಿಕರಣ ಅಭಾವ ಪ್ರತಿಯೋಗಿ ಧರ್ಮಗಳೇ ಆಗಿವೆ. ವಿಮತತ್ವ ಸಮಾನಾಧಿಕರಣ ಅಭಾವ ಪ್ರತಿಯೋಗಿ ಧರ್ಮರೂಪದಿಂದ ಅವು ಎರಡೂ ಹೇತುಗಳು.

ಇಲ್ಲಿ ವಿಮತತ್ವಘಟಿತವಾದ ಸಾಧ್ಯ ಹೇತುಗಳು ದೃಷ್ಟಾಂತದಲ್ಲಿ ಬರುವುದಿಲ್ಲವಾದ್ದರಿಂದ ತತ್ಸದೃಶವಾದ ದಹನತುಹಿನೋಭಯತ್ವರೂಪ ಧರ್ಮಘಟಿತವಾದ ಸಾಧ್ಯಹೇತುಗಳಿಗೆ ಸಾಮಾನ್ಯಮುಖೀ ವ್ಯಾಪ್ತಿ ಅಂದರೆ, ಸಾಧ್ಯಸದೃಶದಿಂದ ಹೇತುಸದೃಶಕ್ಕೆ ವ್ಯಾಪ್ತಿ ವಿವಕ್ಷಿತವಾಗಿದೆ. ಎಲ್ಲಿ ಯಾವ ಧರ್ಮಸಮಾನಾಧಿಕರಣ ಅಭಾವಪ್ರತಿಯೋಗಿ ಧರ್ಮವಿದೆಯೋ ಅಲ್ಲಿ ಆ ಧರ್ಮದ ವ್ಯಾಪ್ಯ ಧರ್ಮಾವಚ್ಛಿನ್ನಪ್ರತಿಯೋಗಿತಾಕ ಭೇದವಿದೆ ಎಂದು. ದಹನ-ತುಹಿನ, ಬೆಂಕಿ-ಹಿಮಗಳು ದೃಷ್ಟಾಂತ. ಪಕ್ಷದಲ್ಲಿರುವ ವಿಮತತ್ವಸದೃಶ ದಹನ ತುಹಿನೋಭಯತ್ವರೂಪ ಧರ್ಮ ಸಮಾನಾಧಿಕರಣ ಅಭಾವ ಪ್ರತಿಯೋಗಿಯಾದ ಶೈತ್ಯಧರ್ಮಉಳ್ಳ ಹಿಮದಲ್ಲಿ ದಹನತುಹಿನೋಭಯತ್ವ ವ್ಯಾಪ್ಯ

ದಹನತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದವಿದೆ. ಅಂಥ ಉಷ್ಣತ್ವಧರ್ಮಉಳ್ಳ ದಹನದಲ್ಲಿ ದಹನತುಹಿನೋಭಯತ್ವವ್ಯಾಪ್ಯ ತುಹಿನತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದವಿದೆ. ಹಾಗೇ ಪ್ರಕೃತ ವಿಮತತ್ವಾಧಿಕರಣ ಜೀವವೃತ್ತ್ಯಭಾವ ಪ್ರತಿಯೋಗಿ ಸ್ವಾತಂತ್ರ್ಯ ಉಳ್ಳ ಈಶ್ವರನಲ್ಲಿ ವಿಮತತ್ವ ವ್ಯಾಪ್ಯ ಜೀವತ್ವಾವಚ್ಛಿನ್ನಪ್ರತಿಯೋಗಿತಾಕ ಭೇದ ಸಿದ್ಧವಾಗುತ್ತದೆ. ವಿಮತತ್ವಾಧಿಕರಣ ಈಶ್ವರ ವೃತ್ತ್ಯಭಾವ ಪ್ರತಿಯೋಗಿ ಅಸ್ವಾತಂತ್ರ್ಯ ಉಳ್ಳ ಜೀವನಲ್ಲಿ ವಿಮತತ್ವ ವ್ಯಾಪ್ಯ ಈಶ್ವರತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದವೂ ಸಿದ್ಧವಾಗುತ್ತದೆ.

**यद्वा, अयं तद्भिन्नस्तन्निष्ठाभावप्रतियोगिधर्मवत्त्वात् । स चैतद्भिन्न एतन्निष्ठाभावप्रतियोगिधर्मवत्त्वात् । यो यन्निष्ठाभावप्रतियोगिधर्मवान् स तद्भिन्नो दहननिष्ठाभावप्रतियोगिशैत्याधिकरणतुहिनवदिति समूहालम्बनानुमाने तात्पर्यम् ।**

**तेन जीवेश्वरोभयं पक्षीकृत्य भेदमात्रसाधने घटादिभेदमादायार्थान्तरं, परस्परभेदसाधनेऽपि तस्य प्रत्येकं जीवभेदादिरूपत्वादंशे बाधः, एवं जीवविरुद्धधर्मवत्त्वादेः प्रत्येकं भागासिद्धिः, पक्षदृष्टान्तयोः साध्यहेत्वननुगमश्चेत्यादिदोषानवकाशः ।**

ಅಥವಾ ಇವನು ಅವನಿಗಿಂತ ಭಿನ್ನ, ಅವನಲ್ಲಿಲ್ಲದ ಧರ್ಮಉಳ್ಳವನಾದ್ದರಿಂದ, ಅವನು ಇವನಿಗಿಂತ ಭಿನ್ನ, ಇವನಲ್ಲಿಲ್ಲದ ಧರ್ಮಉಳ್ಳವನಾದ್ದರಿಂದ ಎಂದು ಎರಡು ಅನುಮಾನಗಳು. ಯಾರು ಯಾರಲ್ಲಿಲ್ಲದ ಧರ್ಮ ಉಳ್ಳವನೋ ಅವನು ಅವನಿಗಿಂತ ಭಿನ್ನ, ಬೆಂಕಿಯಲ್ಲಿಲ್ಲದ ಶೈತ್ಯ ಧರ್ಮಉಳ್ಳ ಹಿಮವು ಹೇಗೆ ಬೆಂಕಿಯಿಂದ ಭಿನ್ನವೋ ಹಾಗೆ ಎಂದು ಸಾಮಾನ್ಯ ಮುಖೀವ್ಯಾಪ್ತಿ ಎಂದು ಸಮೂಹಾಲಂಬನಾನುಮಾನವನ್ನು ಹೇಳುವ ತಾತ್ಪರ್ಯವಿದೆ.

ಹೀಗೆ ಹೇಳಿದ್ದರಿಂದ ಯಥಾಶ್ರುತವಾದ ಅನುಮಾನದ ಮೇಲೆ ಬರಬಹುದಾದ ಅನೇಕ ಆಕ್ಷೇಪಗಳಿಗೆ ಎಡೆಇಲ್ಲದಂತಾಗಿದೆ. ಆ ಆಕ್ಷೇಪಗಳು ಇವು— ಜೀವೇಶ್ವರರಿಬ್ಬರನ್ನು ಪಕ್ಷಮಾಡಿ 'ಅವರು ಭಿನ್ನರು' ಎಂದು ಭೇದಮಾತ್ರ ಸಾಧನೆ ಮಾಡುವುದಾದರೆ ಘಟಾದಿಭೇದ ಸಿದ್ಧವಾಗಲಿ, ಪರಸ್ಪರಭೇದ ಸಿದ್ಧವಾಗಬೇಕಾಗಿಲ್ಲ ಎಂದು ಅರ್ಥಾಂತರದೋಷ. ಪರಸ್ಪರ ಭೇದ ಸಾಧನ ಮಾಡುವುದಾದರೆ ಪರಸ್ಪರ ಭೇದವು 'ಜೀವಭೇದ–ಈಶ್ವರಭೇದ' ರೂಪವಾಗಿರುವುದರಿಂದ ಜೀವಭೇದಉಳ್ಳ ಈಶ್ವರನಲ್ಲಿ ಈಶ್ವರಭೇದವಿಲ್ಲ, ಈಶ್ವರಭೇದಉಳ್ಳ ಜೀವನಲ್ಲಿ ಜೀವಭೇದ ವಿಲ್ಲವೆಂದು ಅಂಶೇ ಬಾಧದೋಷ. 'ಜೀವವಿರುದ್ಧ ಧರ್ಮ ಈಶ್ವರವಿರುದ್ಧ ಧರ್ಮ'ಗಳೆಂಬ

ಹೇತುಗಳಲ್ಲಿ ಜೀವವಿರುದ್ಧ ಧರ್ಮವಿರುವಲ್ಲಿ ಈಶ್ವರವಿರುದ್ಧ ಧರ್ಮವಿಲ್ಲ, ಈಶ್ವರವಿರುದ್ಧ ಧರ್ಮವಿರುವಲ್ಲಿ ಜೀವವಿರುದ್ಧ ಧರ್ಮವಿಲ್ಲವೆಂದು ಪ್ರತ್ಯೇಕವಾಗಿ ಭಾಗಾಸಿದ್ಧಿ. ಪಕ್ಷ ಮತ್ತು ದೃಷ್ಟಾಂತಗಳಲ್ಲಿ ಸಾಧ್ಯ ಹೇತುಗಳು ಒಂದೇ ಅನುಗತವಾಗಿ ಇರುವುದಿಲ್ಲ ಎಂಬ ಅನನುಗಮದೋಷ ಎಂದು ಅನೇಕ ಆಕ್ಷೇಪಗಳಿಗೆ ಅವಕಾಶವಿದೆ.

**अत्र पारमार्थिकत्वविशेषितस्तदविशेषितो वा भेदः साध्यः ? आद्ये दोषमाह – पारमार्थिकेति । अन्त्ये दोषमाह – अपारमार्थिकेति । पारमार्थिकत्वाविशेषितेत्यर्थः । न त्वपारमार्थिकत्वविशेषितेत्यर्थः । उभयाविशेषितभेदसाधनपक्षाप्रतिक्षेपेण न्यूनतापत्तेः। स चापारमार्थिकत्व-विशेषितो न वेत्यन्यदेतत् । आत्मभेदसाधकानुमाननिराकरणमुपसंहरति – तस्मादिति । उक्तरीत्या भेदसाधकानुमानमात्रस्याभासत्वादित्यर्थः। भेदे जीवेश्वरभेदेऽनुमानं न प्रमाणमित्यर्थः ।**

'ವಿಮತೌ ಭಿನ್ನೌ' ಎಂದು ಪಾರಮಾರ್ಥಿಕ ಭೇದವನ್ನು ಸಾಧಿಸುವುದಾದರೆ ಅಪ್ರಸಿದ್ಧ ವಿಶೇಷಣತ್ವವು ದೋಷ. ಅಪಾರಮಾರ್ಥಿಕ ಭೇದ ಸಾಧನೆ ಮಾಡುವುದಾದರೆ ಸಿದ್ಧಸಾಧನತ್ವವು ದೋಷ' ಎಂದು ಹೇಳುವುದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು—'ಪಾರಮಾರ್ಥಿಕತ್ವ ವಿಶೇಷಣವನ್ನು ಹಾಕಿ ಭೇದವನ್ನು ಸಾಧಿಸುವ ಪಕ್ಷದಲ್ಲಿ ಅಪ್ರಸಿದ್ಧವಿಶೇಷಣತ್ವದೋಷ. ವಿಶೇಷಣವನ್ನು ಹಾಕದೆ ಭೇದವನ್ನು ಸಾಧಿಸುವ ಪಕ್ಷದಲ್ಲಿ ಸಿದ್ಧಸಾಧನತ್ವವು ದೋಷ' ಎಂದು. 'ಅಪಾರಮಾರ್ಥಿಕ' ಎಂದರೆ ಇಲ್ಲಿ ಪಾರಮಾರ್ಥಿಕತ್ವ ವಿಶೇಷಣ ರಹಿತ ಎಂದರ್ಥವೇ ಹೊರತು 'ಅಪಾರಮಾರ್ಥಿಕತ್ವ' ವಿಶೇಷಣ ಸಹಿತ ಎಂದಲ್ಲ. ಯಥಾಶ್ರುತಗ್ರಹಣ ಮಾಡಿದರೆ, ಪಾರಮಾರ್ಥಿಕತ್ವ ವಿಶೇಷಣಯುಕ್ತ ಮತ್ತು ಅಪಾರಮಾರ್ಥಿಕತ್ವ ವಿಶೇಷಣಯುಕ್ತ ಎಂದು ಎರಡು ಪಕ್ಷಗಳನ್ನು ಮಾತ್ರ ನಿರಾಕರಿಸಿದಂತಾಗುತ್ತದೆ. ಎರಡೂ ವಿಶೇಷಣಗಳಿಲ್ಲದಿರುವ ಮೂರನೇ ಪಕ್ಷವನ್ನು ನಿರಾಕರಣ ಮಾಡದಿದ್ದುದರಿಂದ ನ್ಯೂನತೆ ಬರುತ್ತದೆ. ಆದರಿಂದ 'ಅಪಾರಮಾರ್ಥಿಕಭೇದ' ಎಂದರೆ ಪಾರಮಾರ್ಥಿಕತ್ವ ವಿಶೇಷಣವನ್ನು ಹಾಕದೆ ಹೇಳಿರುವ ಭೇದ ಮಾತ್ರವೆಂದರ್ಥ. ಅಪಾರಮಾರ್ಥಿಕತ್ವ ವಿಶೇಷಣವನ್ನು ಹಾಕಿದಿರೋ ಇಲ್ಲವೋ ಎನ್ನುವ ಪ್ರಶ್ನೆ ಇಲ್ಲಿ ಇಲ್ಲ, ಅದು ಬೇಡ.

'ಆದರಿಂದ ಅನುಮಾನವು ಆತ್ಮಭೇದ ಸಾಧಕವಲ್ಲ' ಎಂದು ಆತ್ಮಭೇದ ಸಾಧಕವಾದ ಅನುಮಾನಗಳ ನಿರಾಕರಣೆಯನ್ನು ಪೂರ್ವಪಕ್ಷಿಯು ಉಪಸಂಹಾರ ಮಾಡುತ್ತಾನೆ. ಇಷ್ಟರವರೆಗೆ ಹೇಳಿದಂತೆ ಭೇದಸಾಧಕ ಅನುಮಾನಗಳೆಲ್ಲವೂ ದೋಷಯುಕ್ತವಾಗಿರುವುದರಿಂದ ಜೀವೇಶ್ವರ ಭೇದವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದಿಲ್ಲ ಎಂದರ್ಥ.

'द्वा सुपर्णा' 'द्वे ब्रह्मणी' इत्याद्यागमो लोकसिद्ध-भेदानुवादकः । अनुवादश्च 'नेह नानाऽस्ती'ति निषेधाय । एतेन घटपटादिभेदे प्रमाणं निरस्तं वेदितव्यम् । प्रत्यक्षस्य भ्रान्तित्वेनाप्रामाण्यात् । अत एव न तन्मूलानुमानमपि न प्रमाणम् ।

'ದ್ವಾ ಸುಪರ್ಣಾ' 'ದ್ವೇ ಬ್ರಹ್ಮಣೀ ವೇದಿತವ್ಯೇ' ಇತ್ಯಾದಿ ಆಗಮವು ಲೋಕಸಿದ್ಧ ಭೇದವನ್ನು ಅನುವಾದಿಸುತ್ತದೆ ಹೊರತು ಭೇದವನ್ನು ಹೇಳುವ ಅಭಿಪ್ರಾಯ ಅದಕ್ಕೆ ಇಲ್ಲ. ಅನುವಾದಿಸುವುದು 'ನೇಹ ನಾನಾಸ್ತಿ' ಎಂದು ನಿಷೇಧ ಮಾಡುವುದಕ್ಕಾಗಿ. 'ನೇಹ ನಾನಾಸ್ತಿ' ಎಂದು ಸಾಮಾನ್ಯವಾಗಿ ಎಲ್ಲ ಭೇದವನ್ನೂ ವೇದವು ನಿಷೇಧಿಸಿರುವುದರಿಂದ ಘಟಪಟಾದಿ ಭೇದ ವಿಷಯದಲ್ಲಿಯೂ ಎಲ್ಲ ಪ್ರಮಾಣ ನಿರಸ್ತವಾಯಿತೆಂದು ತಿಳಿಯಬೇಕು. ಪ್ರತ್ಯಕ್ಷವು ಭ್ರಾಂತಿಯಾದ್ದರಿಂದ ಪ್ರಮಾಣವಲ್ಲ. ಆದರಿಂದ ಪ್ರತ್ಯಕ್ಷ ಮೂಲಕವಾದ ಅನುಮಾನ ಆಗಮಗಳೂ ಪ್ರಮಾಣವಲ್ಲ ಎಂದಂತಾಗುವುದು.

अस्तु तर्हि द्वा सुपर्णेत्याद्यागम एवाऽत्मभेदे प्रमाणम् । तत्र जीवेश्वराख्यपक्षिणोर्द्वे ब्रह्मणीत्यत्र परापरब्रह्मतया उक्तयोः तयोरेव भेदव्याप्तद्वित्वश्रवणात् । तयोरन्यः, अनश्नन्नन्य इति साक्षादपि तयोर्भेदाभिधानात् । बह्वीः प्रजाः पुरुषात् सम्प्रसूता इति जीवानामपि नानात्वावगमादित्याशङ्क्याह —द्वा सुपर्णेति । द्वौ सुपर्णावित्यौकार-स्याकारादेशः । ननु भेदस्य मानान्तरासिद्धताया उक्तत्वात् कथमागमस्य तदनुवादकत्वमित्यतो लोकसिद्धेत्युक्तम् । लोकव्यवहारसिद्धेत्यर्थः । स च वक्ष्यमाणप्रमाणविरोधादप्रमाणमेवेति भावः ।

'ಜೀವೇಶ್ವರ ಭೇದವಿಷಯದಲ್ಲಿ ಅನುಮಾನವು ಪ್ರಮಾಣವಾಗದಿದ್ದರೆ, ಬೇಡ, 'ದ್ವಾ ಸುಪರ್ಣಾ' ಇತ್ಯಾದಿ ಆಗಮವೇ ಆತ್ಮಭೇದವಿಷಯದಲ್ಲಿ ಪ್ರಮಾಣ ಎನ್ನುತ್ತೇವೆ. ಈ ಆಗಮ ವಾಕ್ಯದಲ್ಲಿ ಜೀವಪಕ್ಷಿ ಪರಮಾತ್ಮಪಕ್ಷಿಗಳೆಂದೂ 'ದ್ವೇ ಬ್ರಹ್ಮಣೀ' ಎಂಬ ವಾಕ್ಯದಲ್ಲಿ ಪರಬ್ರಹ್ಮ ಅಪರಬ್ರಹ್ಮಗಳೆಂದೂ ಜೀವೇಶ್ವರರೇ ಉಕ್ತರಾಗಿದ್ದಾರೆ. ಅವರಿಬ್ಬರಲ್ಲಿ ಭೇದವ್ಯಾಪ್ತವಾದ ದ್ವಿತ್ವವು

ದ್ವಿವಚನದಿಂದ ಉಕ್ತವಾಗಿದೆ. 'ತಯೋರನ್ಯಃ' 'ಅನಶ್ನನ್ನನ್ಯಃ' ಎಂದು ನೇರವಾಗಿ ಭೇದವೂ ಉಕ್ತವಾಗಿದೆ. 'ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ' 'ಬಹಳ ಮಕ್ಕಳು ಈಶ್ವರನಿಂದ ಹುಟ್ಟಿದರು' ಎಂದು ಜೀವ ನಾನಾತ್ವವೂ ತಿಳಿದುಬರುತ್ತದೆ' ಎಂದು ಆಶಂಕಿಸಿ ಪೂರ್ವಪಕ್ಷಿ ಹೇಳುತ್ತಾನೆ— 'ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಯು ಲೋಕಸಿದ್ಧವಾದ ಜೀವೇಶ್ವರ ಭೇದವನ್ನು ಅನುವಾದ ಮಾಡುತ್ತದೆ' ಎಂದು. 'ದ್ವಾ ಸುಪರ್ಣಾ' ಎಂಬುದು 'ಔ' ಎಂಬ ದ್ವಿವಚನ ಪ್ರತ್ಯಯಕ್ಕೆ ಆಕಾರಾದೇಶ ಬಂದು ನಿಷ್ಪನ್ನವಾದ ಛಾಂದಸ ಪ್ರಯೋಗ. 'ಭೇದವು ಪ್ರಮಾಣಾಂತರದಿಂದ ಸಿದ್ಧವಾಗುವುದಿಲ್ಲ' ಎಂದು ಇಷ್ಟರವರೆಗೆ ಹೇಳಿದ್ದರಿಂದ ವೇದವು ಅದನ್ನು ಅನುವಾದ ಮಾಡುವುದು ಹೇಗೆ ಸಾಧ್ಯ, ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ 'ಲೋಕಸಿದ್ಧವಾದ ಭೇದವನ್ನು ವೇದವು ಅನುವಾದ ಮಾಡುತ್ತದೆ ಎನ್ನುತ್ತಾನೆ. ಅಂದರೆ, ಲೋಕವ್ಯವಹಾರ ಸಿದ್ಧವಾದ ಭೇದವನ್ನು ವೇದ ಅನುವಾದ ಮಾಡುತ್ತದೆ. ಲೋಕವ್ಯವಹಾರವು ಮುಂದೆ ಹೇಳುವ ಪ್ರಮಾಣಗಳ ವಿರೋಧದಿಂದ ಅಪ್ರಮಾಣವೇ ಆಗಿದೆ ಎಂದು ಅಭಿಪ್ರಾಯ.

**नन्वनुवादमात्रेण कथं भेदस्य निरासः । अन्यथा दध्यादिरूपगुण-विधानाय दध्ना जुहोतीत्यनूद्यमानयागादेरपि निरासप्रसङ्गादत आह — अनुवादश्चेति । निषेधायेति । ब्रह्मणि पारमार्थिकत्वाकारेण भेदनिषेधायेत्यर्थः । तथाच भेदानुवादस्य तन्निषेध एव तात्पर्यान्न तत्रागमस्य प्रामाण्यमिति भावः ।**

ವೇದವು ಭೇದವನ್ನು ಅನುವಾದ ಮಾಡಿದ ಮಾತ್ರಕ್ಕೇ ಭೇದ ನಿರಾಸವಾಗುವುದು ಹೇಗೆ? ಅನುವಾದ ಮಾಡಿದ್ದೆಲ್ಲವೂ ನಿರಾಸವಾಗುವುದೆಂದು ಹೇಳಿದರೆ, 'ದಧ್ನಾ ಜುಹೋತಿ' ಎಂಬ ವಾಕ್ಯದಿಂದ ಯಾಗಾನುವಾದವನ್ನು ಮಾಡುವ ವೇದವು ಯಾಗನಿರಾಸ ಮಾಡುತ್ತಿದೆ ಎನ್ನಬೇಕಾದೀತು. 'ಅಗ್ನಿಹೋತ್ರಂ ಜುಹೋತಿ' ಎಂದು ವಿಹಿತವಾದ ಯಾಗವನ್ನು ಅನುವಾದ ಮಾಡಿ ಅದರಲ್ಲಿ ದಧಿರೂಪವಾದಗುಣವನ್ನು ವಿಧಾನ ಮಾಡುತ್ತದೆ ಹೊರತು ಯಾಗವನ್ನು ಅದು ನಿರಾಸಮಾಡುವುದಿಲ್ಲ ತಾನೆ? ಎಂಬ ಆಕ್ಷೇಪಕ್ಕೆ ಪೂರ್ವಪಕ್ಷಿ ಉತ್ತರ ಕೊಡುತ್ತಾನೆ– ಯಾಗವನ್ನು ಅನುವಾದ ಮಾಡಿದ್ದು ಗುಣವಿಧಾನ ಮಾಡುವುದಕ್ಕಾಗಿ. ಆದರೆ ಭೇದವನ್ನು ಅನುವಾದ ಮಾಡುವುದು ಅದನ್ನು ನಿರಾಸ ಮಾಡುವುದಕ್ಕಾಗಿ ಹೊರತು ಅದಕ್ಕೆ ಬೇರೆ ಪ್ರಯೋಜನವಿಲ್ಲ. ಹೀಗಾಗಿ ಭೇದಾನುವಾದಕ್ಕೆ ಭೇದನಿಷೇಧದಲ್ಲಿಯೇ ತಾತ್ಪರ್ಯವಿರುವುದರಿಂದ ಭೇದ ವಿಷಯದಲ್ಲಿ ಆಗಮವು ಪ್ರಮಾಣವಾಗುವುದಿಲ್ಲ ಎಂದು.

**एवमात्मभेदं निरस्य भेदमात्रस्यापारमार्थिकत्वसिद्ध्यर्थमात्माना-**

त्मनोरनात्मनां च मिथो भेदं दूषयति –**एतेनेति** । भेदमात्रस्य नेह नानास्तीति निषिद्धत्वेनेत्यर्थः । **घटपटादिभेद इति** । घटपटादिभिरात्मनस्तेषां च मिथो भेद इत्यर्थः। तर्हि घटपटौ भिन्नावित्यादिप्रत्यक्षस्य का गतिरत आह –**प्रत्यक्षस्येति** । सम्भावितदोषस्य प्रत्यक्षस्य निर्दुष्टागमविरोधे सत्यप्रामाण्यस्यैव युक्तत्वादिति भावः। **अत एव** । भेदग्राहिप्रत्यक्षस्य भ्रान्तित्वादेव । **तन्मूलकेति** । तादृशप्रत्यक्षसंवादसापेक्षेत्यर्थः ।

ಆತ್ಮ ಅನಾತ್ಮರಿಗೆ ಮತ್ತು ಅನಾತ್ಮಗಳಿಗೆ ಭೇದವು ಅಪಾರಮಾರ್ಥಿಕವೆಂದು ಸಿದ್ಧಿಸುವುದಕ್ಕಾಗಿ ಆತ್ಮ ಅನಾತ್ಮರಿಗೂ ಅನಾತ್ಮಗಳಿಗೂ ಪರಸ್ಪರ ಭೇದವನ್ನು ನಿರಾಕರಿಸುತ್ತಾನೆ. 'ಘಟಪಟಾದಿ ಭೇದದಲ್ಲಿಯೂ ಪ್ರಮಾಣವು ನೇಹ ನಾನಾಸ್ತಿ ವಾಕ್ಯದಿಂದ ನಿರಸ್ತವಾಯಿತೆಂದು ತಿಳಿಯಬೇಕು' ಎಂದು. 'ನೇಹ ನಾನಾಸ್ತಿ' ಎಂದು ವೇದವು ಭೇದಸಾಮಾನ್ಯವನ್ನೇ ನಿಷೇಧಿಸುವುದರಿಂದ ಘಟಪಟಾದಿ ಭೇದವು ನಿರಸ್ತವಾಯಿತೆಂದರ್ಥ. 'ಘಟಪಟಾದಿ ಭೇದೇ' ಎಂಬ ಒಂದು ಶಬ್ದದಿಂದ, ಘಟಪಟಾದಿಗಳಿಂದ ಆತ್ಮರಿಗೆ ಭೇದವೂ ಘಟಪಟಾದಿಗಳ ಪರಸ್ಪರ ಭೇದವೂ ಎರಡೂ ಉಕ್ತವಾಗುತ್ತದೆ.

ಹಾಗಾದರೆ 'ಘಟ ಮತ್ತು ಪಟಗಳು ಪರಸ್ಪರ ಭಿನ್ನವಾಗಿವೆ' ಎಂಬ ಪ್ರತ್ಯಕ್ಷಕ್ಕೆ ಏನುಗತಿ? ಎಂಬ ಪ್ರಶ್ನೆಗೆ 'ಪ್ರತ್ಯಕ್ಷವು ಭ್ರಾಂತಿಯಾಗಿರುವುದರಿಂದ ಪ್ರಮಾಣವಲ್ಲ' ಎನ್ನುತ್ತಾನೆ. ಪ್ರತ್ಯಕ್ಷದಲ್ಲಿ ದೋಷವು ಸಂಭಾವಿತವಾಗಿರುವುದರಿಂದ ನಿರ್ದುಷ್ಟವಾದ ಆಗಮದ ವಿರೋಧವಿದ್ದಾಗ ಅದನ್ನು ಅಪ್ರಮಾಣವೆಂದು ಅಂಗೀಕರಿಸುವುದೇ ಯುಕ್ತವೆಂದು ಅಭಿಪ್ರಾಯ. ಭೇದಗ್ರಾಹಿ ಪ್ರತ್ಯಕ್ಷವು ಹೀಗೆ ಭ್ರಾಂತಿಯಾಗಿರುವುದರಿಂದಲೇ ಪ್ರತ್ಯಕ್ಷ ಸಂವಾದ ಸಾಪೇಕ್ಷವಾಗಿರುವ ಅನುಮಾನಾದಿಗಳೂ ಅಪ್ರಮಾಣವೇ.

अनुमानादिरित्यादिना पौरुषेयागमपरिग्रहः । केवलस्यानुमानादेः शङ्किताप्रामाण्यकत्वेनासाधकत्वात्, प्रत्यक्षादिप्रमाणसंवादेनैव प्रामाण्यं वाच्यम् । तस्य च प्रत्यक्षादेरप्रामाण्ये तत्समानविषयानुमानादिप्रामाण्यस्य दुर्लभत्वादिति भावः । व्याप्तिग्राहकसहचारप्रत्यक्षस्य भ्रमत्वान्न तन्मूलकानुमानादिः प्रमाणमित्यपि व्याचक्षते । तत्र यद्यपि वह्निवारिणोः

सहचारभ्रमेऽपि पर्वतादौ वारिलिङ्गकवह्न्यनुमानस्य प्रामाण्यमस्ति । तथापि व्याप्तिपक्षधर्मताविरहे प्रामाण्यं दुरवधारणमित्याशयः ।

ಅನುಮಾನಾದಿಗಳೆಂದು ಆದಿಪದದಿಂದ ಪೌರುಷೇಯಾಗಮವಿಟ್ಟುಕೊಳ್ಳಬೇಕು. ಪೌರುಷೇಯಾಗಮವೇ ಪ್ರತ್ಯಕ್ಷಸಂವಾದ ಸಾಪೇಕ್ಷ, ಹೊರತು ಅಪೌರುಷೇಯ ಆಗಮ ತತ್‌ಸಾಪೇಕ್ಷವಾಗಿರುವುದಿಲ್ಲ. ಕೇವಲಾನುಮಾನದಲ್ಲಿಯೂ ಪೌರುಷೇಯಾಗಮದಲ್ಲಿಯೂ ಅಪ್ರಾಮಾಣ್ಯ ಸಂದೇಹವಿರುವುದರಿಂದ ಅವುಗಳು ಸಾಧಕವಾಗುವುದಿಲ್ಲ, ಅವುಗಳಿಗೆ ಪ್ರತ್ಯಕ್ಷಾದಿ ಪ್ರಮಾಣ ಸಂವಾದದಿಂದಲೇ ಪ್ರಾಮಾಣ್ಯವನ್ನು ಒಪ್ಪಬೇಕು. ಈ ಪ್ರತ್ಯಕ್ಷಾದಿಗಳೇ ಅಪ್ರಮಾಣವಾಗಿದ್ದರೆ ತತ್‌ಸಮಾನ ವಿಷಯಕವಾದ ಅನುಮಾನಾದಿಗಳಿಗೆ ಪ್ರಾಮಾಣ್ಯನಿಶ್ಚಯವು ದುರ್ಲಭವಾಗುತ್ತದೆ ಎಂದು ಅಭಿಪ್ರಾಯ.

ವ್ಯಾಪ್ತಿಗ್ರಾಹಕವಾದ ಸಹಚಾರಪ್ರತ್ಯಕ್ಷವು ಭ್ರಮವಾಗಿರುವುದರಿಂದ ತನ್ಮೂಲಕವಾದ ಅನುಮಾನಾದಿಗಳು ಪ್ರಮಾಣವಾಗಲಾರವು ಎಂದೂ ಕೆಲವರು ವ್ಯಾಖ್ಯಾನಿಸುತ್ತಾರೆ. ಯದ್ಯಪಿ ವಹ್ನಿ ಜಲಗಳಿಗೆ ಸಹಚಾರ ಜ್ಞಾನವು ಭ್ರಮವೇ. ಆದರೂ ಪರ್ವತದಲ್ಲಿ ಜಲಹೇತುವಿನಿಂದ ವಹ್ನಿಯನ್ನು ಅನುಮಾನ ಮಾಡಿದರೆ ಅದು ಪ್ರಮಾಣವೇ ಆಗುತ್ತದೆ. ಆದರೂ ವ್ಯಾಪ್ತಿ ಮತ್ತು ಪಕ್ಷ ಧರ್ಮತಾಗಳಿಲ್ಲದಿದ್ದರೆ ಅನುಮಾನವನ್ನು ಪ್ರಮಾಣವೆಂದು ನಿಶ್ಚಯಿಸಲು ಶಕ್ಯವಾಗುವುದಿಲ್ಲ ಎಂದು ಅಭಿಪ್ರಾಯ.

**अभेदे तु प्रत्यक्षं तावत् सुलभमेव । अहमित्येकाकारेणानुभवात् । अनुमानं च– विमता आत्मानः परमार्थतः परमार्थनो न भिद्यन्ते आत्मत्वात् परमात्मवदिति ।**

**ಅಭೇದದಲ್ಲಿ ಪ್ರತ್ಯಕ್ಷವು ಸುಲಭ. ಏಕೆಂದರೆ 'ಅಹಂ' ಎಂದು ಏಕಾಕಾರದಿಂದಲೇ ಎಲ್ಲ ಆತ್ಮರಿಗೆ ತಮ್ಮ ಅನುಭವವಿದೆ. ಅನುಮಾನವೂ ಪ್ರಮಾಣವಾಗಿದೆ— 'ವಿವಾದಾಸ್ಪದರಾದ ಆತ್ಮರು ಪರಮಾತ್ಮನಿಂದ ಪಾರಮಾರ್ಥಿಕವಾಗಿ ಬೇರೆಯಲ್ಲ. ಆತ್ಮರಾದ್ದರಿಂದ, ಪರಮಾತ್ಮನಂತೆ' ಎಂದು.**

एवमभेदे बाधकप्रमाणं निरस्य दार्ढ्याय त्रिविधमपि साधकप्रमाणं दर्शयति –**अभेदे त्विति** । यत्त्वभेदे प्रमाणाभाव एव भेदे प्रमाणं भविष्यतीत्यत आह –**अभेदे त्वितीति** । तच्चिन्त्यम् । तुल्यन्यायेन भेदे प्रमाणाभाव एवाभेदे प्रमाणमिति वक्तुं शक्यत्वात् । अभेदे

**प्रमाणाभावस्यानुमानविधयैव भेदसाधकतया तन्निरासावसर एव निरसनीयत्वाच्च ।**

ಅಭೇದ ವಿಷಯದಲ್ಲಿ ಬಾಧಕವಾಗುವ ಭೇದ ಪ್ರಮಾಣಗಳನ್ನು ನಿರಾಸಮಾಡಿ ದಾರ್ಢ್ಯಕ್ಕಾಗಿ ಮೂರು ಬಗೆಯ ಸಾಧಕಪ್ರಮಾಣಗಳನ್ನು ಪೂರ್ವಪಕ್ಷಿ ತೋರಿಸುತ್ತಾನೆ.

ಕೆಲವರು 'ಅಭೇದದಲ್ಲಿ ಪ್ರಮಾಣಾಭಾವವೇ ಭೇದದಲ್ಲಿ ಪ್ರಮಾಣವೆನಿಸುತ್ತದೆ ಎಂದು ಆಶಂಕಿಸಿ ಅಭೇದದಲ್ಲಿ ಪ್ರಮಾಣಗಳನ್ನು ಪೂರ್ವಪಕ್ಷಿ ತೋರಿಸುತ್ತಾನೆ' ಎನ್ನುತ್ತಾರೆ. ಅದು ಸರಿಯಲ್ಲ. ಅಭೇದದಲ್ಲಿ ಪ್ರಮಾಣವಿಲ್ಲದಿರುವುದೇ ಭೇದದಲ್ಲಿ ಪ್ರಮಾಣ ಎಂಬ ಆಶಂಕೆಗೆ ಸುಲಭವಾಗಿ ತುಲ್ಯನ್ಯಾಯದಿಂದ ಭೇದದಲ್ಲಿ ಪ್ರಮಾಣವಿಲ್ಲದಿರುವುದೇ ಅಭೇದದಲ್ಲಿ ಪ್ರಮಾಣ' ಎಂದು ಹೇಳಲು ಶಕ್ಯವಿದೆ. ಮತ್ತು ಅಭೇದದಲ್ಲಿ ಪ್ರಮಾಣವಿಲ್ಲದಿರುವುದು ಅನುಮಾನರೂಪ ದಿಂದಲೇ ಭೇದಕ್ಕೆ ಸಾಧಕವಾಗುವುದರಿಂದ ಅನುಮಾನ ನಿರಾಸಮಾಡುವ ಸಂದರ್ಭದಲ್ಲಿಯೇ ಆ ಶಂಕೆಗೆ ಹೀಗೆ ಉತ್ತರ ನೀಡುವುದು ಸಂಗತವಾಗುತ್ತದೆ ಹೊರತು ಈಗ ಪ್ರತ್ಯಕ್ಷ ಪ್ರಮಾಣದ ವಿಚಾರದಲ್ಲಿ ಇದು ಸಂಗತವಾಗುವುದೂ ಇಲ್ಲ.

**ಅಭೇದ ವಿಷಯದಲ್ಲಿ 'ಅಹಂ' ಅನುಭವ ಪ್ರತ್ಯಕ್ಷ ಪ್ರಮಾಣ**

नन्वात्मान्तरप्रतियोगिकभेदस्य प्रतियोग्यप्रत्यक्षेणाप्रत्यक्षत्वस्योक्तत्वात् कथं तदभावरूपाभेदस्य प्रत्यक्षत्वमित्यत आह — **एकाकारेणेति ।** एकवस्तुतादात्म्येनेत्यर्थः । अयं भावः । भेदाभावो हि प्रतियोगितादात्म्यम् । तथाचाहमित्येकाकारानुभवानामेकवस्तुविषयकत्वे लाघवेनैकचित्तादात्म्यावगाहिनोऽहमिति प्रत्यक्षस्य कथमभेदे प्रामाण्यात्पंम्भव इति ।

ಆತ್ಮಾಂತರ ಪ್ರತಿಯೋಗಿಕ ಭೇದವು, ಪ್ರತಿಯೋಗಿಯು ಪ್ರತ್ಯಕ್ಷವಾಗದಿರುವ ಪ್ರಯುಕ್ತ ಪ್ರತ್ಯಕ್ಷವಾಗಲಾರದೆಂದು ಹಿಂದೆ ಹೇಳಿದೆ. ಹೀಗೆ ಭೇದವು ಅಪ್ರತ್ಯಕ್ಷವಾಗಿರುವಾಗ ತದಭಾವ ರೂಪವಾದ ಅಭೇದವು ಹೇಗೆ ಪ್ರತ್ಯಕ್ಷವಾದೀತು? ಎಂಬ ಪ್ರಶ್ನೆಗೆ ಏಕಾಕಾರದಿಂದ, ಅಂದರೆ ಏಕವಸ್ತು ತಾದಾತ್ಮ್ಯದಿಂದ ಎಂದು ಪೂರ್ವಪಕ್ಷಿ ಉತ್ತರ ನೀಡುತ್ತಾನೆ. ಇದರ ಅಭಿಪ್ರಾಯ ಹೀಗೆ— ಭೇದಾಭಾವವು ಪ್ರತಿಯೋಗಿ ತಾದಾತ್ಮ್ಯರೂಪವಾಗಿದೆ. ಏಕೆಂದರೆ ತಾದಾತ್ಮ್ಯನಿಷೇಧವೆ ಭೇದ. 'ಅಹಂ' ಎಂದು ಏಕಾಕಾರವಾಗಿ ಬರುವ ಅನುಭವಗಳಿಗೆ ಏಕಚೇತನವಸ್ತು ವಿಷಯಕತ್ವವನ್ನೇ ಹೇಳುವುದು ಲಾಘವ. 'ಘಟ' ಎಂದು ಏಕಾಕಾರಾನುಭವ ಬಂದರೂ ಪ್ರತ್ಯಕ್ಷ

ವಿರೋಧವಿರುವುದರಿಂದ ಏಕಘಟತಾದಾತ್ಮ್ಯವನ್ನು ಅದು ಗ್ರಹಿಸುವುದಿಲ್ಲ. ಏಕಘಟತ್ವ ಜಾತಿವಿಶಿಷ್ಟದ ತಾದಾತ್ಮ್ಯವನ್ನೇ ಗ್ರಹಿಸುತ್ತದೆ. ಪ್ರಕೃತದಲ್ಲಿ ಅಂಥ ಪ್ರತ್ಯಕ್ಷ ವಿರೋಧವಿಲ್ಲ. ಹೀಗಾಗಿ 'ಅಹಂ' ಎಂದು ಏಕಚಿತ್ ತಾದಾತ್ಮ್ಯವನ್ನೇ ಈ ಅನುಭವ ವಿಷಯೀಕರಿಸುತ್ತದೆ. ತಾದಾತ್ಮ್ಯವೇ ಅಭೇದವೆಂದಮೇಲೆ ಈ ಅನುಭವವು ಅಭೇದದಲ್ಲಿ ಏಕೆ ಪ್ರಮಾಣವಾಗಲಾರದು? ಎಂದು.

**ವಿಮತರಾದ ಆತ್ಮರು ವಸ್ತುತಃ ಭಿನ್ನರಲ್ಲ**

**विमता आत्मान इति ।** बहुवचनमवच्छेदकावच्छेदेन साध्यसिद्धेरुद्देश्यत्वसूचनाय । अन्यथा सर्वात्मनामैक्यासिद्धेः । जीवपरमात्मनोर्व्यावहारिकभेदाभ्युपगमात् सामान्यतो भेदनिषेधे बाधः स्यादतः **– परमार्थत इति ।** न चैवं पारमार्थिकभेदाप्रसिद्ध्या साध्याप्रसिद्धिरिति वाच्यम् । पारमार्थिकत्वेन भेदाभावस्य साध्यत्वात् । तन्मते व्यधिकरणधर्मावच्छिन्नाभावसत्त्वेन साध्यप्रसिद्धेः ।

'ವಿವಾದಾಸ್ಪದರಾದ ಆತ್ಮರು' ಎಂದು ಬಹುವಚನದಿಂದ ಅವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧಿಯು ಉದ್ದೇಶ್ಯವಾಗಿದೆ ಎಂದು ಸೂಚಿತವಾಗುತ್ತದೆ. ಅವಚ್ಛೇದಕವೆಂದರೆ ಇಲ್ಲಿ ಪಕ್ಷತಾವಚ್ಛೇದಕವು ವಿವಕ್ಷಿತ. ತದವಚ್ಛೇದವೆಂದರೆ ತದ್‌ವ್ಯಾಪ್ತಿ. 'ಪಕ್ಷತಾವಚ್ಛೇದಕವಿರುವಲ್ಲೆಲ್ಲ ಸಾಧ್ಯ ಇದೆ' ಎಂದು ಸಾಧಿಸುವುದು ಉದ್ದೇಶ್ಯವಾಗಿದೆ ಎಂದರ್ಥ. ಅವಚ್ಛೇದಕ ಸಾಮಾನಾಧಿಕರಣ್ಯೇನ ಸಾಧ್ಯಸಿದ್ಧಿಯ ಉದ್ದೇಶವಿರುವುದೂ ಉಂಟು. ಅಂದರೆ, ಪಕ್ಷತಾವಚ್ಛೇದಕವಿರುವ ಕೆಲವು ಕಡೆ ಸಾಧ್ಯ ಬಂದರೆ ಸಾಕು, ಪಕ್ಷತಾವಚ್ಛೇದಕವಾಗಿರುವ ಪರ್ವತತ್ವವಿರುವಲ್ಲೆಲ್ಲ ವಹ್ನಿಸಿದ್ಧಿಯ ಉದ್ದೇಶವಿರುವುದಿಲ್ಲ. ಕೆಲವುಕಡೆ ಪರ್ವತತ್ವ ಸಾಮಾನಾಧಿಕರಣ್ಯವು ವಹ್ನಿಯಲ್ಲಿ ಬಂದರೆ ಸಾಕು ಎನ್ನುವ ಅಭಿಪ್ರಾಯ. ಹೀಗೆ ಸಾಮಾನಾಧಿಕರಣ್ಯ ಮಾತ್ರ ಉದ್ದೇಶವಿಟ್ಟುಕೊಂಡು, ಅವಚ್ಛೇದಕಾವಚ್ಛೇದೇನ ಸಾಧ್ಯ ಸಾಧನೆ ಮಾಡದಿದ್ದರೆ ಎಲ್ಲ ಆತ್ಮರಿಗೆ ಐಕ್ಯ ಸಿದ್ಧಿಸುವುದಿಲ್ಲ. ಅದು ಸಿದ್ಧವಾಗಬೇಕು ಎಂದು.

ಜೀವಪರಮಾತ್ಮರಿಗೆ ಅದ್ವೈತದಲ್ಲಿಯೂ ವ್ಯಾವಹಾರಿಕ ಭೇದವನ್ನು ಅಂಗೀಕರಿಸಿರುವುದರಿಂದ ಸಾಮಾನ್ಯತಃ ಎಲ್ಲ ಭೇದವನ್ನು ನಿಷೇಧಿಸಿದರೆ ಬಾಧ ಉಂಟಾಗುವುದು. ಅದಕ್ಕೆ 'ಪರಮಾರ್ಥತಃ ನ ಭಿದ್ಯಂತೇ'. 'ಪಾರಮಾರ್ಥಿಕ ಭೇದವಿಲ್ಲ' ಎಂದಿದ್ದಾನೆ. ಯದ್ಯಪಿ ಪಾರಮಾರ್ಥಿಕ ಭೇದವೆನ್ನುವುದೇ ಅವನಿಗೆ ಅಪ್ರಸಿದ್ಧ, ಅದರ ಅಭಾವ ಹೇಗೆ ಕೂಡುತ್ತದೆ? ಅದರಿಂದ ಸಾಧ್ಯಾಪ್ರಸಿದ್ಧಿ ಬರುತ್ತದೆ. ಆದರೆ ಪಾರಮಾರ್ಥಿಕವಾದ ಭೇದವನ್ನು ನಿಷೇಧಿಸುತ್ತಿಲ್ಲ. ಭೇದವನ್ನು ಪಾರಮಾರ್ಥಿಕವಾಗಿ ನಿಷೇಧಿಸುತ್ತಿದ್ದಾನೆ. ಅದ್ವೈತಮತದಲ್ಲಿ ವ್ಯಧಿಕರಣ

ಧರ್ಮಾವಚ್ಛಿನ್ನಾಭಾವವನ್ನು ಅಂಗೀಕರಿಸಿರುವುದರಿಂದ ಪ್ರತಿಯೋಗಿತೆಯು ಆ ಪ್ರತಿಯೋಗಿತೆಗೆ ವ್ಯಧಿಕರಣವಾದ ಅಂದರೆ ಪ್ರತಿಯೋಗಿಯಲ್ಲಿ ಇಲ್ಲದಿರುವ ಬೇರೇ ಕಡೆ ಇರುವ ಪಾರಮಾರ್ಥಿಕತ್ವದಿಂದ ಅವಚ್ಛಿನ್ನವಾಗಬಹುದು. ಹೀಗಾಗಿ ಪಾರಮಾರ್ಥಿಕತ್ವಾವಚ್ಛಿನ್ನ ಪ್ರತಿಯೋಗಿತೆಯು ಪ್ರಸಿದ್ಧವೆ. ಪಾರಮಾರ್ಥಿಕತ್ವಾವಚ್ಛಿನ್ನ ಪ್ರತಿಯೋಗಿತಾಕವಾದ ಭೇದಾಭಾವವು ಸಾಧ್ಯ. ಅದು ಅಪ್ರಸಿದ್ಧವಾಗುವುದಿಲ್ಲ.

**एतेन पारमार्थिकत्वमभेदविशेषणमित्यपास्तम् । उक्तबाधानिस्तारात् । न च प्रतिभासिकाभेदसिद्ध्याऽर्थान्तरमिति वाच्यम् । पारमार्थिकाभेदस्यैव साध्यत्वात् ।**

ಇಲ್ಲಿ ಕೆಲವರು ಹೇಳುತ್ತಾರೆ, 'ಪಾರಮಾರ್ಥಿಕತ್ವವು ಅಭೇದದಲ್ಲಿ ವಿಶೇಷಣ. ಭೇದದಲ್ಲಿ ವಿಶೇಷಣವೆಂದಿದ್ದರೆ ಪಾರಮಾರ್ಥಿಕಭೇದ ಅಪ್ರಸಿದ್ಧವಾದ್ದರಿಂದ ಅದರ ಅಭಾವರೂಪವಾದ ಅಭೇದವು ಅಪ್ರಸಿದ್ಧವೆನಿಸುತ್ತಿತ್ತು' ಎಂದು. ಇದು ಸರಿಯಲ್ಲ, ಭೇದಾಭಾವರೂಪವಾದ ಅಭೇದವು ಬಾಧಿತವೆಂದು ಹಿಂದೆಯೇ ಹೇಳಿದ್ದೇವೆ. ವ್ಯಾವಹಾರಿಕ ಭೇದವನ್ನು ಒಪ್ಪಿರುವಾಗ ಅದೂ ಸೇರಿದಂತೆ ಎಲ್ಲ ಭೇದ ಸಾಮಾನ್ಯವನ್ನು ನಿಷೇಧಿಸಿದರೆ ಅದು ಬಾಧಿತವಾಗುತ್ತದೆ. ಆದಕ್ಕೆ ಪಾರಮಾರ್ಥಿಕತ್ವ ವಿಶೇಷಣವನ್ನು ಸೇರಿಸಿದರೆ ಬಾಧ ಪರಿಹಾರವಾಗುವುದಿಲ್ಲ.

ಪ್ರಕೃತ ಪಾರಮಾರ್ಥಿಕತ್ವಾಕಾರೇಣ ಭೇದ ನಿಷೇಧಮಾಡುವ ಪಕ್ಷದಲ್ಲಿಯೂ ಅಂಥ ಭೇದನಿಷೇಧವು ಪ್ರಾತಿಭಾಸಿಕವಾಗಿ ಜೀವನಲ್ಲಿ ಇರಲೆಂದು ಪ್ರಾತಿಭಾಸಿಕ ಅಭೇದ ಸಿದ್ಧವಾಗಬಹುದು, ಅದರಿಂದ ಅರ್ಥಾಂತರತ್ವ ದೋಷ ಬರಬಹುದು. ನಿಜ, ಆದರೆ ಅಭೇದದಲ್ಲಿ ಕೂಡ ಪಾರಮಾರ್ಥಿಕತ್ವ ವಿಶೇಷಣ ಕೊಡುತ್ತೇವೆ, ಅಂದರೆ ಪಾರಮಾರ್ಥಿಕತ್ವಾಕಾರೇಣ ಎಂಬುದನ್ನು ತಂತ್ರೇಣ ಅಭೇದದಲ್ಲಿಯೂ ಅನ್ವಯ ಮಾಡುತ್ತೇವೆ. ಪಾರಮಾರ್ಥಿಕ ಅಭೇದ ಸಾಧನೆಯೆ ಉದ್ದಿಷ್ಟವಾಗಿದೆ. ಅದು ಸಿದ್ಧವಾಗದಿರುವುದರಿಂದ ಅರ್ಥಾಂತರಕ್ಕೆ ಅವಕಾಶವಿಲ್ಲ.

**परमार्थतो न भिद्यन्त इत्यनेन पारमार्थिकतादात्म्यस्यैव साध्यत्वं विवक्षितमिति तु न सत् । व्यवहारतोऽपि न भिद्यन्त इति वक्ष्यमाणाभाससाम्याननुगुणत्वात् । तत्र व्यावहारिकस्य परमात्मतादात्म्यस्य दृष्टान्ते परमात्मन्यसत्त्वेन साध्यत्वासम्भवात् । सामान्यतः पारमार्थिकभेदाभावस्य सिद्धान्तिनं प्रत्यसिद्धिरतः परमात्मप्रतियोगिकत्वं भेदविशेषणम् ।**

'ಪರಮಾರ್ಥತೋ ನ ಭಿದ್ಯಂತೇ' ಎಂಬ ಮಾತಿಗೆ ಪಾರಮಾರ್ಥಿಕ ತಾದಾತ್ಮ್ಯ ಅರ್ಥ, ಪಾರಮಾರ್ಥಿಕ ತಾದಾತ್ಮ್ಯವೇ ಸಾಧ್ಯವೆಂದು ವಿವಕ್ಷಿತ' ಎಂದು ಕೆಲವರು ಹೇಳುವುದು ಸರಿಯಲ್ಲ. ಪಾರಮಾರ್ಥಿಕತಾದಾತ್ಮ್ಯವನ್ನು ಸಾಧಿಸುವ ಪಕ್ಷದಲ್ಲಿ 'ವ್ಯವಹಾರತೋಽಪಿ ನ ಭಿದ್ಯಂತೇ' ವ್ಯಾವಹಾರಿಕ ತಾದಾತ್ಮ್ಯವನ್ನು ಹಾಗೇ ಏಕೆ ಸಾಧಿಸಬಾರದೆಂದು ಆಭಾಸಸಾಮ್ಯವನ್ನು ಮುಂದೆ ಹೇಳುತ್ತಾರೆ. ಅದು ಸರಿಯಾಗದು. ಪರಮಾತ್ಮನು ದೃಷ್ಟಾಂತ. ಅವನಲ್ಲಿ ಪರಮಾತ್ಮನ ವ್ಯಾವಹಾರಿಕ ತಾದಾತ್ಮ್ಯವೆಂಬ ಸಾಧ್ಯವನ್ನು ಹೇಳಲಾಗದು ಎನ್ನುವ ಅನುಪಪತ್ತಿ ಬಂದೀತು. ಅದರಿಂದ 'ಪರಮಾರ್ಥತೋ ನ ಭಿದ್ಯಂತೇ' ಎಂದರೆ ಪಾರಮಾರ್ಥಿಕತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದಾಭಾವವೆಂದೇ ಅರ್ಥವಿಟ್ಟುಕೊಳ್ಳಬೇಕು. ಪರಮಾತ್ಮ ದೃಷ್ಟಾಂತದಲ್ಲಿ ಪಾರಮಾರ್ಥಿಕತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದಾಭಾವದಂತೆ, ವ್ಯಾವಹಾರಿಕತ್ವಾವಚ್ಛಿನ್ನಪ್ರತಿಯೋಗಿತಾಕ ಭೇದಾಭಾವವೂ ಇರುವುದರಿಂದ ಆಭಾಸಸಾಮ್ಯ ಕೂಡುತ್ತದೆ.

ಭೇದಾಭಾವದಲ್ಲಿ ಪಾರಮಾರ್ಥಿಕತ್ವ ವಿಶೇಷಣ ನೀಡಿದ್ದರಿಂದ ಸಾಮಾನ್ಯತಃ ಪಾರಮಾರ್ಥಿಕ ವಾದ ಭೇದಾಭಾವವು ಸಾಧ್ಯವೆಂದರೆ ಇದು ದ್ವೈತಸಿದ್ಧಾಂತದಲ್ಲಿ ಕೂಡುವುದಿಲ್ಲ. ಪರಮಾತ್ಮನಲ್ಲಿ ಪ್ರಪಂಚದಿಂದ ಭೇದವನ್ನು ಅಂಗೀಕರಿಸಿರುವುದರಿಂದ ಅವನಲ್ಲಿ ಸಾಮಾನ್ಯತಃ ಭೇದಾಭಾವವು ಬಾಧಿತ. ಅದರಿಂದ ಭೇದದಲ್ಲಿ ಪರಮಾತ್ಮಪ್ರತಿಯೋಗಿಕತ್ವವಿಶೇಷಣವನ್ನು ನೀಡಬೇಕು. ಪರಮಾತ್ಮನಲ್ಲಿ ಪಾರಮಾರ್ಥಿಕವಾದ ಪರಮಾತ್ಮಪ್ರತಿಯೋಗಿಕ ಭೇದಾಭಾವವು ಕಂಡಿದೆ. ಜೀವನಲ್ಲಿ, ಅದು ಸಾಧ್ಯ ಎನ್ನಬೇಕು. ಅದರಿಂದ 'ಪರಮಾತ್ಮನಃ ಪರಮಾರ್ಥತೋ ನ ಭಿದ್ಯಂತೇ' ಎಂದಿದ್ದಾನೆ.

**ವಿಮತತ್ವವು ಪಕ್ಷತಾವಚ್ಛೇದಕ**

**ननु किमत्र पक्षतावच्छेदकम्। न तावदात्मत्वम्। परमात्मनः पक्षत्वापत्त्या अंशे सिद्धसाधनात्। नापि परमात्मेतरत्वविशिष्टम्। साध्येन साकं पक्षतावच्छेदकस्य विरोधात्। नापि भ्रान्त्या परमात्मेतरतया प्रतीयमानत्व-विशिष्टम्। परमात्मन्यपि तदितरत्वभ्रान्तिसम्भवेनाऽद्यप-क्षोक्तदोषानिस्तारादिति चेन्न। परमात्मनो भिद्यन्ते न वेति विप्रतिपत्तिगोचरत्वस्यैव पक्षतावच्छेदकत्वात्। अन्यथा तवापि परमात्मनो भिद्यन्त इति भेदसाधनस्याप्यसम्भवात्।**

ಇಲ್ಲಿ ಪಕ್ಷತಾವಚ್ಛೇದಕವು ಯಾವುದು? ಆತ್ಮತ್ವವು ಪಕ್ಷತಾವಚ್ಛೇದಕವೆನ್ನುವಂತಿಲ್ಲ. ಆತ್ಮತ್ವವು ಪಕ್ಷತಾವಚ್ಛೇದಕವಾದರೆ ಪರಮಾತ್ಮನಲ್ಲಿಯೂ ಆತ್ಮತ್ವವಿರುವುದರಿಂದ ಅವನೂ ಪಕ್ಷವಾಗಬೇಕಾದೀತು. ಆಗ ಪರಮಾತ್ಮ ಪ್ರತಿಯೋಗಿಕ ಭೇದಾಭಾವವು ಪರಮಾತ್ಮನಲ್ಲಿ ಸಿದ್ಧವೇ ಆಗಿರುವುದರಿಂದ ಅಂಶೇಸಿದ್ಧಸಾಧನತ್ವದೋಷ ಬರುತ್ತದೆ. ಪರಮಾತ್ಮೇತರತ್ವ ವಿಶಿಷ್ಟವಾದ ಆತ್ಮತ್ವವನ್ನು ಪಕ್ಷತಾವಚ್ಛೇದಕ ಮಾಡಿದರೆ ಸಾಧ್ಯವಾದ ಪರಮಾತ್ಮ ಪ್ರತಿಯೋಗಿಕ ಭೇದಾಭಾವಕ್ಕೂ ಪಕ್ಷತಾವಚ್ಛೇದಕವಾದ ಪರಮಾತ್ಮೇತರತ್ವ ವಿಶಿಷ್ಟ ಆತ್ಮತ್ವಕ್ಕೂ ವಿರೋಧ ಬರುವುದು. ಭ್ರಾಂತಿಯಿಂದ ಪರಮಾತ್ಮೇತರತಯಾ ಪ್ರತೀಯಮಾನತ್ವವೂ ಕೂಡ ಪಕ್ಷತಾವಚ್ಛೇದಕವಾಗಲಾರದು. ಏಕೆಂದರೆ ಪರಮಾತ್ಮನಲ್ಲಿಯೂ ಭ್ರಾಂತಿಯಿಂದ ಪರಮಾತ್ಮೇತರತಯಾ ಪ್ರತೀಯಮಾನತ್ವವು ಬರಬಹುದು. ಆಗ ಪರಮಾತ್ಮನೂ ಪಕ್ಷವಾಗುತ್ತಾನೆ. ಹಿಂದೆ ಹೇಳಿದಂತೆ ಪರಮಾತ್ಮ ಪ್ರತಿಯೋಗಿಕ ಭೇದಾಭಾವವು ಸಿದ್ಧವಾಗಿರುವುದರಿಂದ ಅಂಶೇಸಿದ್ಧಸಾಧನತ್ವ ದೋಷವಿದೆ. ಅದು ಪರಿಹಾರವಾಗುವುದಿಲ್ಲ. ಈ ಶಂಕೆಗೆ ಸಮಾಧಾನ ಹೀಗೆ– ಪರಮಾತ್ಮನಿಗಿಂತ ಭಿನ್ನರೆ ಅಲ್ಲವೇ ಎಂದು ವಿವಾದಗೋಚರತ್ವವೇ ಪಕ್ಷತಾವಚ್ಛೇದಕ. ಹೀಗೆ ಹೇಳದಿದ್ದರೆ ಭೇದವಾದಿಗೂ ಕೂಡ ಪರಮಾತ್ಮನಿಗಿಂತ ಆತ್ಮರು ಭಿನ್ನರೆಂದು ಸಾಧಿಸುವುದು ಶಕ್ಯವಾಗಲಾರದು.

अत्रानुमाने पक्षतावच्छेदकं दुर्निरूपमित्याशङ्कते **—नन्विति ।** आत्मत्वस्य वक्ष्यमाणरीत्या पक्षतावच्छेदकत्वे दूषिते तद्व्यापकस्य सामान्यतो विवादविषयत्वरूपविमतत्वस्य तद्विशिष्टात्मत्वस्य च तद्दूषितप्रायमित्यभिप्रायेणात्मत्वस्यैव तद्दूषयति **—न तावदिति ।** पक्षत्वापत्त्या पक्षतावच्छेदकाक्रान्तत्वापत्त्या । **अंशे सिद्धसाधनादिति ।** यद्यप्यवच्छेदकावच्छेदेन साध्यसिद्धेरुद्देश्यतायामंशतः सिद्धसाधनं न दोषः । न्यूनविषयकसिद्धेरनुमित्यविरोधित्वात् । न चावच्छेदकावच्छेदेन साध्यतदभावकोटिकसन्देहलक्षणपक्षताविघटकत्वेन तस्य दोषत्वम् । अंशतः सिद्धिसत्त्वेऽप्यवच्छेदकावच्छेदेन साध्यं सामानाधिकरण्येन तदभावं चावगाहमानसन्देहसम्भवेन तस्यैव तत्र पक्षतात्वात् ।

ಈ ಅನುಮಾನದಲ್ಲಿ ಪಕ್ಷತಾವಚ್ಛೇದಕವನ್ನು ಹೇಳುವುದು ಕಷ್ಟಸಾಧ್ಯವೆಂದು ಆಶಂಕೆ

ಮಾಡುತ್ತಿದ್ದಾನೆ. ಆತ್ಮತ್ವವು ಮುಂದೆ ಹೇಳುವಂತೆ ಪಕ್ಷತಾವಚ್ಛೇದಕವಾಗಲಾರದೆಂದಾದರೆ ಅದಕ್ಕೆ ವ್ಯಾಪಕವಾದ ಸಾಮಾನ್ಯತಃ ವಿವಾದ ವಿಷಯತ್ವರೂಪವಾದ ವಿಮತತ್ವವಾಗಲಿ, ತದ್ವಿಶಿಷ್ಟವಾದ ಆತ್ಮತ್ವವಾಗಲಿ ಪಕ್ಷತಾವಚ್ಛೇದಕವಾಗಲಾರದೆಂದು ಹೇಳಿದಂತಾಗುವುದೆಂಬ ಅಭಿಪ್ರಾಯದಿಂದ ಆತ್ಮತ್ವಕ್ಕೇ ಪಕ್ಷತಾವಚ್ಛೇದಕತ್ವ ಕೂಡುವುದಿಲ್ಲ ಎನ್ನುತ್ತಾನೆ. ಆತ್ಮತ್ವವು ಪರಮಾತ್ಮನಲ್ಲಿಯೂ ಇರುವುದರಿಂದ ಪರಮಾತ್ಮನೂ 'ಪಕ್ಷವಾಗುತ್ತಾನೆ' ಎಂದರೆ ಪಕ್ಷತಾವಚ್ಛೇದಕಾಕ್ರಾಂತನಾಗುತ್ತಾನೆ ಎಂದರ್ಥ. ಪಕ್ಷವೇ ಆಗುತ್ತಾನೆ ಎಂದರ್ಥವಲ್ಲ. ಪಕ್ಷವಾಗಬೇಕಾದರೆ ಸಾಧ್ಯಸಂದೇಹ ಪ್ರಯುಕ್ತವಾಗಿ ಅನುಮಿತ್ಸುದ್ದೇಶ್ಯನಾಗಬೇಕು. ಪರಮಾತ್ಮ ಅನುಮಿತ್ಸುದ್ದೇಶ್ಯನಲ್ಲ. ಅವನಲ್ಲಿ ಸಾಧ್ಯ ಸಂದೇಹವಿಲ್ಲ.

ಪರಮಾತ್ಮನೂ ಪಕ್ಷತಾವಚ್ಛೇದಕಾಕ್ರಾಂತನಾದರೆ ಅವನಲ್ಲಿ ಅಂಶೇ ಸಿದ್ಧಸಾಧನತಾ ದೋಷ ಬರುತ್ತದೆ. ಯದ್ಯಪಿ ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧಿ ಉದ್ದಿಷ್ಟವಾದಾಗ ಅಂಶತಃ ಸಿದ್ಧಸಾಧನ ದೋಷವಾಗುವುದಿಲ್ಲ. ನ್ಯೂನವಿಷಯಕವಾದ ಅಂಶತಃ ಸಿದ್ಧಿ ಇದ್ದರೂ ಅನುಮಿತಿಗೆ ನೇರವಾಗಿ ಅದು ವಿರೋಧಿಯಲ್ಲ. ಅವಚ್ಛೇದಕಾವಚ್ಛೇದೇನ ಸಾಧ್ಯವನ್ನೂ ತದಭಾವವನ್ನೂ ವಿಷಯೀಕರಿಸುವ ಸಂದೇಹರೂಪ ಪಕ್ಷತಾವನ್ನು ವಿಘಟನ ಮಾಡುವುದರಿಂದ ಅಂಶೇ ಸಿದ್ಧಿಯು ದೋಷವೆಂದೂ ಹೇಳುವಂತಿಲ್ಲ. ಅಂಶೇ ಸಿದ್ಧಿ ಇದ್ದರೂ ಅವಚ್ಛೇದಕಾವಚ್ಛೇದೇನ ಸಾಧ್ಯವನ್ನೂ ಸಾಮಾನಾಧಿಕರಣ್ಯೇನ ಸಾಧ್ಯಾಭಾವವನ್ನೂ ವಿಷಯೀಕರಿಸುವ ಸಂದೇಹ ಸಂಭವವಿರುವುದರಿಂದ ಅದೇ ಪಕ್ಷತಾ ಆಗಬಹುದು.

**न चैवमनित्ये वाङ्मनसे इत्यादौ वाङ्मात्रे साध्यसिद्धेरविरोधित्वप्रसङ्ग इति वाच्यम् । पक्षतावच्छेदकावच्छेदेन सिद्धेस्तदवच्छेदेनानुमितिविरोधितया वाक्त्वावच्छेदेन सिद्धेस्तदवच्छेदेनानुमितिविरोधित्वसम्भवात् । अत एवाऽह मणिकारः 'पक्षतावच्छेदकनानात्वे ह्यंशतः सिद्धसाधनं दोष' इति । तथापि तद्विषयकानुमितौ तद्विषयकसिद्धिसामान्यस्य विरोधित्वमिति मतमनुसृत्येदमुक्तम् ।**

ಹೀಗೆ ಹೇಳಿದರೆ 'ಅನಿತ್ಯೇ ವಾಙ್ಮನಸೇ' 'ವಾಕ್ ಮನಸುಗಳು ಅನಿತ್ಯ' ಎಂಬ ಅನುಮಾನದಲ್ಲಿಯೂ ವಾಕ್ ಮಾತ್ರದಲ್ಲಿ ಸಾಧ್ಯಸಿದ್ಧಿ ಇರುವುದು ಅಂಶತಃ ಸಿದ್ಧಿ. ಅನುಮಿತಿ ವಿರೋಧಿಯಲ್ಲ ಎನ್ನಬೇಕಾದೀತು, ಎಂದರೆ, ಇದು ಸರಿಯಲ್ಲ. ಇಲ್ಲಿ ವಾಕ್ತ್ವವೂ ಮನಸ್ತ್ವವೂ ಪಕ್ಷತಾವಚ್ಛೇದಕಗಳು. ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧಿಯು ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಾನುಮಿತಿಗೆ ವಿರೋಧಿಯೇ ಆಗುವುದರಿಂದ ಪಕ್ಷತಾವಚ್ಛೇದಕ ವಾಕ್ತ್ವಾವಚ್ಛೇದೇನ ಸಿದ್ಧಿಯು

ತದವಚ್ಛೇದೇನ ಅನುಮಿತಿಗೆ ವಿರೋಧಿಯಾಗಬಹುದು. ವಾಕ್‌ಮನಸುಗಳೆರಡರಲ್ಲಿ 'ಒಂದು ವಾಕ್ಕಿನಲ್ಲಿ ಮಾತ್ರ ಅನಿತ್ಯತ್ವಸಿದ್ಧಿ' ಎಂದು ಅಂಶೇಸಿದ್ಧಸಾಧನತ್ವವ್ಯವಹಾರ. ಆದರಿಂದ ತತ್ವಚಿಂತಾಮಣಿ ಗ್ರಂಥಕಾರ ಗಂಗೇಶೋಪಾಧ್ಯಾಯನು ಹೇಳುತ್ತಾನೆ— 'ಪಕ್ಷತಾವಚ್ಛೇದಕ ಅನೇಕವಿರುವಾಗ ಅಂಶೇ ಸಿದ್ಧಸಾಧನವು ದೋಷವಾಗುತ್ತದೆ' ಎಂದು.

ಆದರೂ ಒಂದು ವಿಷಯದಲ್ಲಿ ಅನುಮಿತಿ ಉಂಟಾಗಲು ಆ ವಿಷಯದಲ್ಲಿ ಯಾವುದೇ ಬಗೆಯ ಸಿದ್ಧಿ ಇದ್ದರೂ ಪ್ರತಿಬಂಧಕವೇ ಆಗುತ್ತದೆ ಎಂಬ ಮತವನ್ನು ಅನುಸರಿಸಿ ಹೀಗೆ ಹೇಳುತ್ತಿದ್ದಾನೆ ಎನ್ನಬೇಕು.

अस्तु तर्हि परमात्मव्यावृत्तं तदन्यत्वविशिष्टात्मत्वमेव पक्षतावच्छेदकमित्याशङ्कां निरस्यति —**नापीति । विरोधादिति ।** भेदाभेदायोर्विरोधान्न पक्षतावच्छेदकसाध्यभावसम्भवः । स्वविरोधिधर्मधर्मितावच्छेदकक स्वप्रकारक परोक्षज्ञानानभ्युपगमादिति भावः । यद्यपि तन्मते भेदसामान्यस्य न पारमार्थिकभेदाभावेन विरोधः । तथापि प्रातिभासिकभेदस्याव्यावर्तकत्वाद् व्यावहारिकभेदस्य च परं प्रत्यसिद्धेः पारमार्थिकभेदस्यैव पक्षकुक्षौ निवेश्यतया ध्रुवो विरोधः । वस्तुतः सिद्धान्ते सत्तात्रैविध्यानभ्युपगमेन भेदमात्रस्यैवाभेदविरोधितया तद्रीत्यैतदभिधानमिति ध्येयम् ।

ಹಾಗಾದರೆ ಪರಮಾತ್ಮನಲ್ಲಿ ಇಲ್ಲದ ತದನ್ಯತ್ವವಿಶಿಷ್ಟಆತ್ಮತ್ವವನ್ನೇ ಪಕ್ಷತಾವಚ್ಛೇದಕವೆಂದಿಟ್ಟುಕೊಳ್ಳೋಣ ಎಂಬ ಶಂಕೆಗೆ ಸಮಾಧಾನವನ್ನು ಹೇಳುತ್ತಾನೆ– ಸಾಧ್ಯವಾದ ಅಭೇದಕ್ಕೂ ಈ ಪಕ್ಷತಾವಚ್ಛೇದಕಕ್ಕೂ ವಿರೋಧವಿದೆ. ಭೇದ ಅಭೇದಗಳಿಗೆ ವಿರೋಧವಿರುವುದರಿಂದ ಅವೆರಡರಲ್ಲಿ ಒಂದನ್ನು ಸಾಧ್ಯವಾಗಿ ಇನ್ನೊಂದನ್ನು ಪಕ್ಷತಾವಚ್ಛೇದಕವಾಗಿ ಮಾಡಲಾಗದು. ಏಕೆಂದರೆ ಸ್ವ ವಿರೋಧಿಧರ್ಮವು ಧರ್ಮಿತಾವಚ್ಛೇದಕವಾದರೆ, ಆ ಧರ್ಮವು ಪ್ರಕಾರವಾಗುವಂಥಹ ಪರೋಕ್ಷಜ್ಞಾನವನ್ನು ಯಾರೂ ಒಪ್ಪುವುದಿಲ್ಲ 'ವಹ್ನ್ಯಭಾವವಾನ್ ವಹ್ನಿಮಾನ್' ಎಂಬಲ್ಲಿ ವಹ್ನಿ ಪ್ರಕಾರ. ಆದಕ್ಕೆ ಸ್ವವಿರೋಧಿ ಧರ್ಮ ವಹ್ನ್ಯಭಾವ. ವಹ್ನ್ಯಭಾವವಾನ್ ಎಂಬಲ್ಲಿ ವಹ್ನ್ಯಭಾವವು ಧರ್ಮಿತಾವಚ್ಛೇದಕ. ಇಂಥ ಪರೋಕ್ಷಜ್ಞಾನ ಎಲ್ಲೂ ಕಂಡಿಲ್ಲ. ಆದರೆ ಅಪರೋಕ್ಷ ಬರಬಹುದು. 'ವಹ್ನ್ಯಭಾವವಾನ್ ವಹ್ನಿಮಾನ್' ಎಂಬ ಜ್ಞಾನ ಉಂಟಾಗಲೆಂದು ಇಚ್ಛೆಯಿಂದ ತಾನೇ ಅಂಥ ಆಹಾರ್ಯ ಅಪರೋಕ್ಷಜ್ಞಾನ ತಂದುಕೊಳ್ಳಬಹುದು. ಬಾಧಕಾಲೀನ ಇಚ್ಛಾಜನ್ಯಜ್ಞಾನವಿದು ಪರೋಕ್ಷಜ್ಞಾನ ಮಾತ್ರ ಬರುವುದಿಲ್ಲ. ಎಂದು ಅವನ ಅಭಿಪ್ರಾಯ.

ಯದ್ಯಪಿ ಅದ್ವೈತದಲ್ಲಿ ಭೇದಸಾಮಾನ್ಯಕ್ಕೆ ಪಾರಮಾರ್ಥಿಕಭೇದಾಭಾವದಿಂದ ವಿರೋಧವಿಲ್ಲ. ಆದರೂ ಪ್ರಾತಿಭಾಸಿಕ ಭೇದವು ವ್ಯಾವರ್ತಕವಾಗುವುದಿಲ್ಲ. ವ್ಯಾವಹಾರಿಕಭೇದವು ಪ್ರತಿವಾದಿಯಾದ ದ್ವೈತಿಗೆ ಅಸಿದ್ಧವಾಗಿದೆ. ಹೀಗಾಗಿ ಪಾರಮಾರ್ಥಿಕ ಭೇದವನ್ನೇ ಪಕ್ಷಶರೀರದಲ್ಲಿ ಸೇರಿಸಬೇಕಾಗಿರುವುದರಿಂದ ಪಕ್ಷತಾವಚ್ಛೇದಕ ಸಾಧ್ಯಗಳಿಗೆ ವಿರೋಧ ಅಪರಿಹಾರ್ಯವೇ ಆಗಿದೆ.

ವಸ್ತುತಃ ದ್ವೈತಸಿದ್ಧಾಂತದಲ್ಲಿ ಪ್ರಾತಿಭಾಸಿಕ ವ್ಯಾವಹಾರಿಕ ಪಾರಮಾರ್ಥಿಕವೆಂದು ಸತ್ತಾತ್ರೈವಿಧ್ಯವನ್ನು ಅಂಗೀಕರಿಸಿಲ್ಲವಾದ್ದರಿಂದ ಭೇದವೆಲ್ಲವೂ ಅಭೇದವಿರೋಧಿಯೇ ಆಗಿರುವುದರಿಂದ ದ್ವೈತಸಿದ್ಧಾಂತ ರೀತಿಯಿಂದಲೇ ಈ ವಿರೋಧವನ್ನು ಹೇಳುತ್ತಿದ್ದಾನೆ ಎಂದು ತಿಳಿಯಬೇಕು.

**विमतपदेन विमतिविशेषविषयत्वस्यैव विवक्षिततया तावन्मात्रस्य पक्षतावच्छेदकत्वं नानुपपन्नमित्याह —परमात्मन इति । चैत्राद्या इत्यादिः । अत्र चैत्रत्वादीनामननुगतत्वात्तदवच्छिन्नधर्मिकसमूहालम्बन-विमतिविषयत्वस्य पक्षतावच्छेदकत्वानुसरणम् ।**

'ವಿಮತ'ರಾದ ಆತ್ಮರು', ಎಂಬಲ್ಲಿ ವಿಮತ ಎಂದು ವಿಮತಿ ವಿಶೇಷ ವಿಷಯತ್ವವೇ ವಿವಕ್ಷಿತವಾಗಿರುವುದರಿಂದ ವಿಮತತ್ವ ಮಾತ್ರವನ್ನೇ ಪಕ್ಷತಾವಚ್ಛೇದಕವಾಗಿ ಮಾಡುವುದರಲ್ಲಿ ಏನೂ ಅನುಪಪತ್ತಿ ಇಲ್ಲ ಎನ್ನುತ್ತಾನೆ— 'ಪರಮಾತ್ಮನಿಗಿಂತ ಭಿನ್ನರೆ ಅಲ್ಲವೇ ಎಂಬ ವಿವಾದ ವಿಷಯತ್ವವೇ ಪಕ್ಷತಾವಚ್ಛೇದಕ' ಎಂದು, 'ಚೈತ್ರ ಮುಂತಾದವರು ಪರಮಾತ್ಮನಿಗಿಂತ ಭಿನ್ನರೆ ಅಲ್ಲವೆ' ಎಂದು ಮೊದಲಿಗೆ 'ಚೈತ್ರಾದಿ' ಶಬ್ದವನ್ನು ಸೇರಿಸಿಕೊಳ್ಳಬೇಕು. ಚೈತ್ರತ್ವ ಮೈತ್ರತ್ವ ಮುಂತಾದ ಧರ್ಮಗಳು ಎಲ್ಲ ಆತ್ಮರಲ್ಲಿ ಅನುಗತವಾಗದಿರುವುದರಿಂದ ಚೈತ್ರನು ಭಿನ್ನನೆ ಅಲ್ಲವೆ? ಮೈತ್ರನು ಭಿನ್ನನೆ ಅಲ್ಲವೆ? ಎಂದು ಮುಂತಾಗಿ ಚೈತ್ರತ್ವಾದ್ಯವಚ್ಛಿನ್ನಧರ್ಮಿಕವಾದ ಸಮೂಹಾಲಂಬನಾತ್ಮಕವಾದ ಒಂದು ವಿಮತಿಗೆ ವಿಷಯತ್ವವನ್ನು ಪಕ್ಷತಾವಚ್ಛೇದಕವಾಗಿ ಮಾಡಲಾಗಿದೆ.

नन्वेवमात्मत्वादिकमेव पक्षतावच्छेदकीकृत्य परमात्मभेदवादिनं प्रति तदन्यधर्मावच्छिन्ने तदभेदसाधनमसङ्गतमत आह —**अन्यथेति** । भेदवादिनाऽऽत्मत्वादिपक्षतावच्छेदकीकरण इत्यर्थः । **असम्भवादिति** । परमात्मभेदस्यात्मत्वसामानाधिकरण्येन साधने यावज्जीवेषु तदसिद्धेस्तदव-च्छेदेन साधने परमात्मनि बाधात्तदितरत्वेन पक्षविशेषणे च परं प्रत्यसिद्धेस्तादितरत्वेन प्रतीयमानत्वोक्तौ पुनरुक्तबाधप्रसङ्गद् भेदवा-दिनाऽप्युक्तविमतिविषयत्वमेव पक्षतावच्छेदकीकर्तव्यमिति भावः ।

ಇಲ್ಲಿ ಭೇದವಾದಿಯು ಆತ್ಮತ್ವಾದಿಗಳನ್ನೇ ಪಕ್ಷತಾವಚ್ಛೇದಕ ಮಾಡಿ ಪರಮಾತ್ಮ ಭೇದವನ್ನು ಸಾಧಿಸುವಾಗ, ಅಭೇದವಾದಿ ಆ ಆತ್ಮತ್ವಾದಿಗಳನ್ನು ಬಿಟ್ಟು ಬೇರೆ ಧರ್ಮವಿಶಿಷ್ಟನಲ್ಲಿ ಪರಮಾತ್ಮಾಭೇದಸಾಧನ ಮಾಡುವುದು ಅಸಂಗತವಾಗದೆ? ಎಂದರೆ ಹೇಳುತ್ತಾನೆ—'ಹೀಗಲ್ಲದಿದ್ದರೆ ಭೇದವಾದಿಗೂ ಕೂಡ ಪರಮಾತ್ಮಭೇದವನ್ನು ಸಾಧಿಸಲು ಶಕ್ಯವಾಗದು' ಎಂದು. ಭೇದವಾದಿಯು ಆತ್ಮತ್ವವಿಶಿಷ್ಟನಲ್ಲಿ ಪರಮಾತ್ಮಭೇದ ಸಾಧನ ಮಾಡುವಾಗ ಆತ್ಮತ್ವ ಸಾಮಾನಾಧಿಕರಣ್ಯೇವ ಸಾಧಿಸಿದರೆ ಎಲ್ಲ ಜೀವರಲ್ಲಿ ಪರಮಾತ್ಮ ಭೇದ ಸಿದ್ಧವಾಗದು. ಆತ್ಮತ್ವಾವಚ್ಛೇದೇನ ಸಾಧಿಸಲು ಹೊರಟರೆ ಪರಮಾತ್ಮನಲ್ಲಿ ಬಾಧ ಬರುತ್ತದೆ. ಪರಮಾತ್ಮೇತರತ್ವ ವಿಶಿಷ್ಟ ಆತ್ಮರೆಂದು ಪಕ್ಷದಲ್ಲಿ ವಿಶೇಷಣ ಹಾಕಿದರೆ ಪ್ರತಿವಾದಿಯಾದ ಅದ್ವೈತಿಗೆ ಅದು ಅಸಿದ್ಧವಾಗುತ್ತದೆ. ಪರಮಾತ್ಮೇತರತ್ವೇನ ಪ್ರತೀಯಮಾನರಾದ ಆತ್ಮರೆಂದು ಹೇಳಿದರೆ ಪರಮಾತ್ಮನೂ ಪರಮಾತ್ಮೇತರತ್ವೇನ ಪ್ರತೀಯಮಾನನಾಗಬಹುದಾದ್ದರಿಂದ ಪರಮಾತ್ಮ ನಲ್ಲಿ ಪರಮಾತ್ಮ ಭೇದವು ಬಾಧಿತವಾಗುತ್ತದೆ ಎಂದು ಹಿಂದೆ ಹೇಳಿದ ಬಾಧದೋಷವಿದ್ದೇ ಇದೆ. ಅದರಿಂದ ಭೇದವಾದಿಯೂ ಕೂಡ ಹಿಂದೆ ಹೇಳಿದ ವಿಮತಿವಿಶೇಷವಿಷಯತ್ವವನ್ನೇ ಪಕ್ಷತಾವಚ್ಛೇದಕವಾಗಿ ಮಾಡಬೇಕಾಗುತ್ತದೆ ಎಂದು ಅಭಿಪ್ರಾಯ.

**आत्मत्वं च न जातिः । किन्तु स्वप्रकाशत्वम् । तेन हेतुसाध्ययोर्न विरोधः ।**

**ಆತ್ಮತ್ವವು ಜಾತಿಯಲ್ಲ, ಸ್ವಪ್ರಕಾಶತ್ವವೆಂದು ಹೇಳುತ್ತೇವೆ. ಅದರಿಂದ ಹೇತುಸಾಧ್ಯಗಳಿಗೆ ವಿರೋಧವಿಲ್ಲ.**

नन्वात्मत्वजातेर्व्यक्तिभेदनियतत्वेन व्यक्त्यभेदपर्यवसितनिरुक्त-साध्यव्याप्यत्वासम्भव इत्यत आह – **आत्मत्वमिति** । स्वप्रकाशत्व-मित्यवेद्यत्वमभिमतम् । न तु स्वविषयप्रकाशत्वम् । स्वस्यैवासिद्धेः । परस्यासिद्धिस्तु वक्ष्यते । नन्वीदृशानुमानेन जीवपरमात्माभेदसिद्धावपि कथं मिथो जीवाभेदसिद्धिरिति चेन्न । सर्वेष्वेकाभेदस्य सर्वैक्यपर्यवसा-यित्वात् । एतच्चोपलक्षणम् । 'विमता आत्मानश्चैत्रात्मनो न भिद्यन्ते आत्मत्वाच्चैत्रात्मवदि'त्याद्यनुमानमपि ग्राह्यम् ।

ಆತ್ಮತ್ವವು ಜಾತಿಯಾದರೆ ಜಾತಿಯು ವ್ಯಕ್ತಿಭೇದಕ್ಕೆ ವ್ಯಾಪ್ಯವಾಗಿರುವುದರಿಂದ, ವ್ಯಕ್ತ್ಯಭೇದದಲ್ಲಿ ಪರ್ಯವಸಾನವಾಗುವ ಪ್ರಕೃತಸಾಧ್ಯಕ್ಕೆ ಆತ್ಮತ್ವವು ವ್ಯಾಪ್ಯವೆನಿಸುವುದು ಅಸಂಭವ.

ಆದರಿಂದ ಆತ್ಮತ್ವವು ಇಲ್ಲಿ ಸ್ವಪ್ರಕಾಶತ್ವವೆಂದು ವಿವಕ್ಷಿತವಾಗಿದೆ. ಸ್ವಪ್ರಕಾಶತ್ವವೂ ಅವೇದ್ಯತ್ವವೆಂದು ಅಭಿಮತವಾಗಿದೆ. ಏಕೆಂದರೆ ಸ್ವವಿಷಯಪ್ರಕಾಶರೂಪತ್ವವು ತನಗೇ ಅಂದರೆ ಅದ್ವೈತಿಗೇ ಅಸಿದ್ಧವಾಗಿದೆ. ಏಕೆಂದರೆ, 'ಕ್ರಿಯಾಕರ್ಮ ವಿರೋಧ' ಅಂದರೆ ಕ್ರಿಯೆಯೂ ತಜ್ಜನ್ಯ ಫಲವೂ ಒಬ್ಬನಲ್ಲಿ ಬರಲಾರದು, ಅದು ವಿರುದ್ಧ ಎಂದು ಅದ್ವೈತಿಯು ಹೇಳುತ್ತಾನೆ. ದ್ವೈತಿ ಇದನ್ನು ಒಪ್ಪುವುದಿಲ್ಲ. ಅವೇದ್ಯತ್ವರೂಪವಾದ ಈ ಸ್ವಪ್ರಕಾಶತ್ವವೂ ದ್ವೈತಿಗೆ ಅಸಿದ್ಧವಾಗಿದೆ ಎಂದು ಮುಂದೆ ಹೇಳುತ್ತಾರೆ.

ಈ ಅನುಮಾನದಿಂದ ಜೀವ ಪರಮಾತ್ಮರೊಳಗೆ ಅಭೇದ ಸಿದ್ಧವಾದರೂ ಜೀವರೊಳಗೆ ಪರಸ್ಪರ ಅಭೇದ ಸಿದ್ಧವಾಗುವುದು ಹೇಗೆ? ಎಂದರೆ, ಇದರ ಅಭಿಪ್ರಾಯ— ಒಬ್ಬ ಪರಮಾತ್ಮನಿಂದ ಎಲ್ಲ ಜೀವರಲ್ಲಿ ಅಭೇದವೆಂದಾದರೆ ಎಲ್ಲ ಜೀವರೂ ಪರಸ್ಪರ ಅಭಿನ್ನರೆಂದೇ ಪರ್ಯವಸಾನ ವಾಗುವುದು ಎಂದು. ಮತ್ತು ಈ ಅನುಮಾನವು ಉಪಲಕ್ಷಣ. ವಿಮತರಾದ ಆತ್ಮರು ಚೈತ್ರಾತ್ಮನಿಂದ ಅಭಿನ್ನರು, ಆತ್ಮತ್ವವಿರುವುದರಿಂದ, ಚೈತ್ರಾತ್ಮನಂತೆ, ಎಂದು ಮುಂತಾಗಿಯೂ ಅನುಮಾನಗಳನ್ನಿಟ್ಟು ಕೊಳ್ಳಬೇಕು.

**ಎಲ್ಲರ ಶರೀರಗಳಲ್ಲಿಯೂ ಒಬ್ಬನೇ ಆತ್ಮ**

**किञ्च विमतानि शरीराणि देवदत्तस्यैव भोगायतनानि शरीरत्वाद्देवदत्तशरीरवत् । अत्र भोगायतनत्वात्यन्ताभावानधिकरणत्वं साध्यम् । तेन सुप्तमूर्च्छितमृतशरीरादिषु न बाधः । नापि व्यभिचारः ।**

**ವಿಮತವಾದ ಶರೀರಗಳು ದೇವದತ್ತನಿಗೇ ಭೋಗಾವಚ್ಛೇದಕವಾಗಿವೆ. ಶರೀರತ್ವವಿರುವುದರಿಂದ, ದೇವದತ್ತನ ಶರೀರದಂತೆ. ಈ ಅನುಮಾನದಲ್ಲಿ ಭೋಗಾಯತನತ್ವಾತ್ಯಂತಾಭಾವಾನಧಿಕರಣತ್ವವು ಸಾಧ್ಯ. ಆದರಿಂದ ಸುಷುಪ್ತಶರೀರ ಮೂರ್ಛಿತಶರೀರ ಮೃತಶರೀರಗಳಲ್ಲಿ ಬಾಧವಿಲ್ಲ. ವ್ಯಭಿಚಾರವೂ ಇಲ್ಲ.**

अत्रैवानुमानान्तरमाह – किं चेति ।

भोगोऽनुभवः । आयतनमवच्छेदकम् । तथाच देवदत्तभिन्नभोगानवच्छेदकत्वे सति देवदत्तभोगावच्छेदकानीत्यर्थः । सत्यन्तव्या-

वृत्तिः स्वयमेव वक्ष्यते । भोक्तुर्देवदत्तत्वसिद्धये विशेष्यभागः । अथैवं भोक्त्रैक्यसिद्धावपि कथमभोक्तुरीश्वरस्य जीवाभेदसिद्धिरिति चेद् अत्राह । ईश्वरस्यापि तत्तच्छरीरावच्छिन्नरसभोक्तृत्वात्तदैक्यसिद्धिरिति । तच्चिन्त्यम् । अस्मदादिशरीरस्येश्वरभोगं प्रति साधनविशेषत्वरूपावच्छेदकत्वासम्भवात् । अन्यथा देवदत्तशरीरस्याप्युभयभोक्तृकत्वेन दृष्टान्तत्वानुपपत्तेः । वस्तुतः चैतनैक्ये लाघवरूपानुकूलतर्कबलात् सकलचेतनैक्यसिद्धावुद्धेश्यसिद्धिर्बोध्या । जीवैक्यसिद्धिमात्रमत्रोद्देश्यमित्यप्याहुः ।

ಈ ವಿಷಯದಲ್ಲಿಯೇ ಇನ್ನೊಂದು ಅನುಮಾನವನ್ನು ಅದ್ವೈತಿಯು ಹೇಳುತ್ತಾನೆ—

ಭೋಗವೆಂದರೆ ಅನುಭವ. ಆಯತನವೆಂದರೆ ಅವಚ್ಛೇದಕ. ದೇವದತ್ತ ಭಿನ್ನರಿಗೆ ಭೋಗಾನವಚ್ಛೇದಕವಾಗಿದ್ದು ದೇವದತ್ತನಿಗೆ ಭೋಗಾವಚ್ಛೇದಕವಾಗಿರುತ್ತವೆ ಎಂದು ಸಾಧ್ಯ. 'ದೇವದತ್ತ ಭಿನ್ನರಿಗೆ ಭೋಗಾನವಚ್ಛೇದಕವಾಗಿದ್ದು' ಎಂಬ ವಿಶೇಷಣಕ್ಕೆ ಕೃತ್ಯವನ್ನು ಮುಂದೆ ತಾವೇ ಹೇಳುತ್ತಾರೆ. ಭೋಕ್ತನು ದೇವದತ್ತನೆಂದು ಸಿದ್ಧಿಸುವುದಕ್ಕಾಗಿ ವಿಶೇಷ್ಯ ಭಾಗವಿದೆ.

ಇಲ್ಲಿ ಭೋಕ್ತೃಗಳಿಗೆ ಐಕ್ಯ ಸಿದ್ಧಿಸಿದರೂ ಅಭೋಕ್ತನಾದ ಈಶ್ವರನಿಗೆ ಜೀವಾಭೇದಸಿದ್ಧಿ ಹೇಗೆ? ಇದಕ್ಕೆ ಕೆಲವರು ಹೇಳುತ್ತಾರೆ, 'ಈಶ್ವರನಿಗೂ 'ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ' ಎಂಬ ಶ್ರುತಿಯು ಹೇಳುವಂತೆ ದೇವದತ್ತ ಶರೀರಾವಚ್ಛೇದೇನ ಶುಭರಸ ಭೋಕ್ತೃತ್ವವಿರುವುದರಿಂದ ಅವನಿಗೆ ಜೀವಾಭೇದ ಸಿದ್ಧಿ' ಎಂದು. ಇದು ಸರಿಯಲ್ಲ. ನಮ್ಮ ಶರೀರವು ಈಶ್ವರನ ಭೋಗಕ್ಕೆ ಸಾಧನ ವಿಶೇಷರೂಪ ಅವಚ್ಛೇದಕವಾಗುವುದು ಅಸಂಭವ. ಅವಚ್ಛೇದಕವಾಗುವ ಪಕ್ಷದಲ್ಲಿ ದೇವದತ್ತ ಶರೀರವೂ ಕೂಡ ಜೀವೇಶರಿಬ್ಬರಿಗೂ ಭೋಗಾವಚ್ಛೇದಕವಾಗುವುದರಿಂದ ದೇವದತ್ತನಿಗೇ ಭೋಗಾವಚ್ಛೇದಕವೆನ್ನುವಲ್ಲಿ ಅದು ದೃಷ್ಟಾಂತವಾಗಲಾರದು. ವಸ್ತುತಃ ಭೋಕ್ತೃಚೇತನೈಕ್ಯವು ಅನುಮಾನದಿಂದ ಸಿದ್ಧಿಸುವಾಗಲೇ 'ಸಕಲ ಚೇತನೈಕ್ಯವನ್ನು ಒಪ್ಪುವುದರಲ್ಲಿ ಲಾಘವವಿದೆ' ಎಂಬ ಅನುಕೂಲ ತರ್ಕ ಬಲದಿಂದ ಸಕಲಚೇತನೈಕ್ಯವೇ ಸಿದ್ಧಿಸುವುದರಿಂದ ಉದ್ದೇಶ್ಯಸಿದ್ಧಿ ಎಂದು ತಿಳಿಯಬೇಕು. ಕೆಲವರು ಈ ಅನುಮಾನದಿಂದ ಜೀವೈಕ್ಯ ಸಿದ್ಧಿಮಾತ್ರವೇ ಉದ್ದಿಷ್ಟವಾಗಿದೆ ಎಂದೂ ಹೇಳುತ್ತಾರೆ.

नन्वत्र विमतत्वावच्छेदकचैत्रादिशरीरत्वं विमतत्वमात्रं वा पक्षतावच्छेदकम् ? आद्ये सुप्तिमूर्च्छावस्थाविशिष्टशरीरे बाधः । तत्काले साक्ष्य-

धीनसुखदुःखानुभवाङ्गीकारेऽपि शरीरस्य तदवच्छेदकत्वे प्रमाणाभावात् । मृतशरीरे बाधतादवस्थ्याच्च । एवं देवदत्तीयमृतशरीरे व्यभिचारः । न च विशिष्टस्य विशेष्यानतिरिक्ततया विशेष्यीभूतशरीरे च कदाचित् साध्यसत्त्वान्नोक्तदोष इति वाच्यम् । विशिष्टस्यौपाधिकत्वेन केवल-विशेष्यानतिरिक्तत्वायोगात् । न चैवं वृक्षः कपिसंयोगी एतत्वादित्या-दावपि मूलावच्छिन्नवृक्षादौ साध्याभावसत्त्वाद्बाधादिप्रसङ्ग इति वाच्यम् । वृक्षत्वावच्छेदेन साध्यतायामिष्टापत्तेः । सामानाधिकरण्येन साधने तस्यादोषत्वात् ।

ಇಲ್ಲಿ ಪಕ್ಷತಾವಚ್ಛೇದಕವು ವಿಮತತ್ವಾವಚ್ಛೇದಕ ಚೈತ್ರಾದಿ ಶರೀರತ್ವವೆ ಅಥವಾ ವಿಮತತ್ವ ಮಾತ್ರವೆ? 'ಚೈತ್ರಮೈತ್ರಾದಿ ಶರೀರಾಣಿ ದೇವದತ್ತಸ್ಯೈವ ಭೋಗಾಯತನಾನಿ, ನ ವಾ?' ಎಂಬ ವಿಮತಿಯಲ್ಲಿ ಚೈತ್ರಮೈತ್ರಾದಿ ಶರೀರಗಳು ವಿಷಯವಾಗಿವೆ. ಚೈತ್ರಮೈತ್ರಾದಿ ಶರೀರತ್ವವು ವಿಷಯತಾವಚ್ಛೇದಕವಾಗಿದೆ. ಹೀಗೆ ವಿಮತತ್ವಾವಚ್ಛೇದಕವಾದ ಚೈತ್ರಾದಿಶರೀರತ್ವವು ಪಕ್ಷತಾ ವಚ್ಛೇದಕವೆನ್ನುವ ಮೊದಲನೆ ಪಕ್ಷದಲ್ಲಿ ಸುಷ್ಯವಸ್ಥೆ ಮೂರ್ಛಾವಸ್ಥೆಗಳಲ್ಲಿರುವ ಶರೀರದಲ್ಲಿ ಬಾಧ. ಈ ಅವಸ್ಥೆಗಳಲ್ಲಿಯೂ ಸಾಕ್ಷ್ಯಧೀನ ಸುಖದುಃಖಾನುಭವವು ಜೀವಾತ್ಮನಿಗೆ ಇರುತ್ತದೆ ಎಂದು ಒಪ್ಪಿದರೂ ಶರೀರವು ಅದಕ್ಕೆ ಅವಚ್ಛೇದಕವಾಗಿದೆ ಎನ್ನಲು ಪ್ರಮಾಣವಿಲ್ಲ. ಮೃತ ಶರೀರದಲ್ಲಿ ಬಾಧ ಪರಿಹಾರವೂ ಆಗುವುದಿಲ್ಲ. ದೇವದತ್ತನ ಮೃತ ಶರೀರದಲ್ಲಿ ವ್ಯಭಿಚಾರವೂ ಈ ಅನುಮಾನದಲ್ಲಿ ದೋಷ. 'ಮರಣ ವಿಶಿಷ್ಟವಾದ ಶರೀರವೂ ವಿಶೇಷ್ಯಕ್ಕಿಂತ ಬೇರೆಯಲ್ಲವಾದ್ದರಿಂದ, ವಿಶೇಷ್ಯವಾದ ಶರೀರದಲ್ಲಿ ಕದಾಚಿತ್, ಅಂದರೆ ಜೀವಂತವಿದ್ದಾಗ, ಸಾಧ್ಯವಿರುವುದರಿಂದ ಹೇತುವಿಗೆ ವ್ಯಭಿಚಾರವಿಲ್ಲ' ಎಂದು ಸಮಾಧಾನ ಯುಕ್ತವಲ್ಲ. ಏಕೆಂದರೆ ವಿಶಿಷ್ಟಪದಾರ್ಥ ಔಪಾಧಿಕ. ಕೇವಲ ವಿಶೇಷ್ಯ ಅನೌಪಾಧಿಕ. ಕೇವಲ ವಿಶೇಷ್ಯ ಬೇರೆ, ಆದರಲ್ಲಿ ವಿಶೇಷಣ ಸಂಬಂಧರೂಪ ಉಪಾಧಿ ಯಿಂದ ಹುಟ್ಟುವ ವಿಶಿಷ್ಟ ಪದಾರ್ಥ ಬೇರೆ. ಅವು ಬೇರೆಯಲ್ಲ ಎನ್ನಲಾಗದು. ಈಗ ಪ್ರಶ್ನೆ ಬರುತ್ತದೆ. ವೃಕ್ಷವು ಕಪಿಸಂಯೋಗಿ, ಏತತ್ವವಿರುವುದರಿಂದ ಇತ್ಯಾದಿ ಅನುಮಾನಗಳಲ್ಲಿಯೂ ಕೂಡ ಮೂಲಾವಚ್ಛಿನ್ನ ವೃಕ್ಷದಲ್ಲಿ ಸಾಧ್ಯಾಭಾವವಿರುವುದರಿಂದ ಬಾಧಾದಿದೋಷಪ್ರಸಂಗ ಎಂದು. ಇದಕ್ಕೆ ಸಮಾಧಾನ— ವೃಕ್ಷತ್ವಾವಚ್ಛೇದೇನ ಸಾಧನೆ ಮಾಡುವಾಗ ಈ ದೋಷ ಬರಲಿ. ಇಷ್ಟಾಪತ್ತಿ. ಸಾಮಾನಾಧಿಕರಣ್ಯೇನ ಸಾಧನೆ ಮಾಡುವಾಗ ಅದು ದೋಷವಾಗುವುದಿಲ್ಲ.

द्वितीये तु विशिष्टस्य विमत्यविषयत्वेन पक्षबहिर्भूततया

**बाधानवकाशेऽपि तत्रैव व्यभिचारः । न च मृतशरीरादौ चेष्टावत्त्वरूप-शरीरत्वाभावादेव न व्यभिचार इति वाच्यम् । चेष्टाशून्यसुप्तादिशरीरेऽसिद्धिवारणाय पूर्ववज्जातिरूपस्य चेष्टात्यन्ताभावानधिकरणत्वरूपस्य वा शरीरत्वस्य हेतुत्वावश्यकत्वादित्यत आह – भोगायतनत्वेति । न बाध इति । सुप्तादिशरीराणां भोगायतनत्वध्वंसाधिकरणत्वेन तदत्यन्ता-भावानधिकरणत्वादिति भावः ।**

ವಿಮತತ್ವ ಮಾತ್ರವು ಪಕ್ಷತಾವಚ್ಛೇದಕ ಎನ್ನುವ ಎರಡನೇ ಪಕ್ಷದಲ್ಲಿ ಮರಣ ವಿಶಿಷ್ಟವು ವಿಮತಿಗೆ ವಿಷಯವಾಗದಿರುವುದರಿಂದ ಪಕ್ಷಬಹಿರ್ಭೂತವಾಗುವುದರಿಂದ ಬಾಧಕ್ಕೆ ಅವಕಾಶ ವಿಲ್ಲದಿದ್ದರೂ ಅದರಲ್ಲಿಯೇ ವ್ಯಭಿಚಾರ. 'ಮೃತಶರೀರಾದಿಗಳಲ್ಲಿ ಚೇಷ್ಟಾವತ್ವರೂಪ ಶರೀರತ್ವ ವಿಲ್ಲದಿರುವುದರಿಂದಲೇ ವ್ಯಭಿಚಾರಕ್ಕೆ ಅವಕಾಶವಿಲ್ಲ' ಎನ್ನುವಂತಿಲ್ಲ. ಚೇಷ್ಟಾ ಶೂನ್ಯವಾಗಿ ಸುಮ್ಮನಿರುವ ಶರೀರದಲ್ಲಿ ಅಸಿದ್ಧಿ ಪರಿಹಾರಕ್ಕೆ ಹಿಂದಿನಂತೆ ಜಾತಿರೂಪವಾದ ಶರೀರತ್ವವನ್ನಾಗಲಿ, ಚೇಷ್ಟಾತ್ಯಂತಾಭಾವಾನಧಿಕರಣತ್ವ ರೂಪವಾದ ಶರೀರತ್ವವನ್ನಾಗಲಿ ಹೇತು ಮಾಡುವುದು ಆವಶ್ಯಕ. ಆಗ ಮೃತ ಶರೀರದಲ್ಲಿಯೂ ಇಂಥಹ ಶರೀರತ್ವ ಬರುವುದರಿಂದ ವ್ಯಭಿಚಾರ ಬರುತ್ತದೆ.

ಈ ದೋಷಪರಿಹಾರಕ್ಕೆ ಸಾಧ್ಯವನ್ನು 'ಭೋಗಾಯತನತ್ವಾತ್ಯಂತಾಭಾವಾನಧಿಕರಣತ್ವ' ಎಂದು ಪರಿಷ್ಕಾರ ಮಾಡುತ್ತಾರೆ. 'ಸುಪ್ತ ಮೂರ್ಛಿತ ಮೃತಶರೀರಗಳಲ್ಲಿ ಬಾಧವಿಲ್ಲ' ಎಂದರೆ, ಈ ಶರೀರಗಳಲ್ಲಿ ಭೋಗಾಯತನತ್ವದ ಧ್ವಂಸವಿರುವುದರಿಂದ ಅದರ ಅತ್ಯಂತಾಭಾವ ಇಲ್ಲ ಎಂದರ್ಥ.

**स्यादेतत् । देवदत्तयज्ञदत्तादीनां मिथो व्यावहारिकभेदाभ्युपगमेन यज्ञदत्तादिशरीराणां देवदत्तादिभिन्नभोगानवच्छेदकत्वाभावाद्बाधः । न च पारमार्थिकत्वेन भेदो विशेषणीयः । तथासति परमार्थतो देवदत्त-भिन्नयज्ञदत्तादिसिद्धिप्रसङ्गेनापसिद्धान्तात् । न च वस्तुतो देवदत्तभिन्न-घटादिभोगानवच्छेदकत्वेनापि साध्यपर्यवसानान्न जीवभेदसिद्धिप्रसङ्ग इति वाच्यम् । घटादिभोगस्य केनाप्यनभ्युपगतत्वेन तदवच्छेदकत्वस्या-प्रसक्ततया तत्प्रतिषेधपर्यवसानानुपपत्तेरित्याशङ्कते – नन्विति ।**

'ಎಲ್ಲ ಶರೀರಗಳೂ ದೇವದತ್ತನಿಗೇ ಭೋಗಾವಚ್ಛೇದಕವಾಗಿವೆ' ಎನ್ನುವುದು ಅದ್ವೈತದಲ್ಲಿ ಕೂಡುವುದಿಲ್ಲ. ದೇವದತ್ತ ಯಜ್ಞದತ್ತಾದಿಗಳಿಗೆ ಪರಸ್ಪರವಾಗಿ ವ್ಯಾವಹಾರಿಕ ಭೇದವನ್ನು

ಒಪ್ಪಿರುವುದರಿಂದ ಯಜ್ಞದತ್ತಾದಿಗಳ ಶರೀರಗಳು ದೇವದತ್ತಾದಿಭಿನ್ನರಾದ ಯಜ್ಞದತ್ತಾದಿಗಳಿಗೆ ಭೋಗಕ್ಕೆ ಅವಚ್ಛೇದಕವೇ ಆಗಿರುವುದರಿಂದ ಅನವಚ್ಛೇದಕ ಎನ್ನಲಾಗದಿರುವುದರಿಂದ ಬಾಧ ಬರುತ್ತದೆ. ಅದಕ್ಕೆ ಭೇದವನ್ನು ಪಾರಮಾರ್ಥಿಕಭೇದವೆಂದು ವಿಶೇಷಣ ಕೊಟ್ಟು ಹೇಳಿದರೆ ಪಾರಮಾರ್ಥಿಕವಾಗಿ ದೇವದತ್ತನಿಗಿಂತ ಭಿನ್ನರಾದ ಯಜ್ಞದತ್ತಾದಿಗಳ ಸಿದ್ಧಿಪ್ರಸಂಗವಿರುವುದರಿಂದ ಅಪಸಿದ್ಧಾಂತ ಪ್ರಸಂಗ. ಅದಕ್ಕೆ 'ವಸ್ತುತಃ ದೇವದತ್ತ ಭಿನ್ನ ಘಟಾದಿಪದಾರ್ಥಗಳಿಗೆ ಭೋಗಾನವಚ್ಛೇದಕವೆಂದು ಕೂಡ ಸಾಧ್ಯಪರ್ಯವಸಾನ ಮಾಡಬಹು ದಾದ್ದರಿಂದ ಜೀವಭೇದ ಸಿದ್ಧಿ ಪ್ರಸಂಗವಿಲ್ಲ, ಅಪಸಿದ್ಧಾಂತವಿಲ್ಲ' ಎಂದು ಹೇಳುವಂತಿಲ್ಲ. ಏಕೆಂದರೆ ಘಟಾದಿ ಜಡಪದಾರ್ಥಗಳಿಗೆ ಭೋಗವನ್ನು ಯಾರೂ ಒಪ್ಪಿಲ್ಲವಾದ್ದರಿಂದ ಅದಕ್ಕೆ ಅವಚ್ಛೇದಕವೆನಿಸುವ ಪ್ರಸಕ್ತಿಯೇ ಇಲ್ಲದ್ದರಿಂದ ಅದರ ನಿಷೇಧದಲ್ಲಿ ಪರ್ಯವಸಾನ ಮಾಡುವುದು ಕೂಡುವುದಿಲ್ಲ. ಈ ಸಮಸ್ಯೆಯನ್ನು ಸ್ಪಷ್ಟಗೊಳಿಸಿ ಪರಿಹಾರವನ್ನು ಹೇಳುತ್ತಾರೆ—

**ननु देवदत्तस्यैवेत्यत्र भोक्तृत्वेनाप्रसक्तस्याचेतनस्यैवकारेणव्यवच्छेदायोगाच्चेतनान्तरं तद्व्यावर्त्यं वाच्यम् । तेनात्मान्तरसिद्धिः । एवकारपरित्यागे च सर्वेषां शरीराणां प्रतिनियतभोक्तृकाणामपि देवदत्तभोगायतनत्वस्याप्युपपत्त्याऽर्थान्तरत्वमिति चेन्न । परमतप्राप्तस्यैव भोक्त्रन्तरस्यैवकारेण व्यावर्त्यत्वात् ।**

'ದೇವದತ್ತನಿಗೇ ಭೋಗಾವಚ್ಛೇದಕ' ಎಂಬಲ್ಲಿ ಏವಕಾರದಿಂದ ಭೋಕ್ತೃವೆಂದು ಪ್ರಸಕ್ತವಾಗದಿರುವ ಘಟಾದಿಗಳನ್ನು ವ್ಯಾವೃತ್ತಿ ಮಾಡುವುದು ಕೂಡುವುದಿಲ್ಲ. ಪ್ರಸಕ್ತರಾಗುವ ಬೇರೆ ಚೇತನರನ್ನೇ ವ್ಯಾವೃತ್ತಿ ಮಾಡಬೇಕು. ಆಗ ಬೇರೆ ಚೇತನರಿರುವರೆಂದು ಅನುಮಾನದಿಂದ ಸಿದ್ಧರಾಗುತ್ತಾರೆ. ಏವಕಾರ ಪರಿತ್ಯಾಗ ಮಾಡುವುದಾದರೆ ಎಲ್ಲ ಶರೀರಗಳೂ ಆಯಾ ಭೋಕ್ತೃಚೇತನರಿಗೆ ಅವಚ್ಛೇದಕವಾಗಿರುವಾಗಲೇ ದೇವದತ್ತನ ಭೋಗಕ್ಕೂ ಅವಚ್ಛೇದಕವಾಗುವುದೆಂದು ಅನುಮಾನವು ಪರ್ಯವಸಾನವಾಗುವುದರಿಂದ ಅರ್ಥಾಂತರತ್ವದೋಷ ಬರುತ್ತದೆ. ಈ ಎಲ್ಲ ದೋಷಗಳ ಪರಿಹಾರಕ್ಕೆ ಪರಮತಪ್ರಾಪ್ತ ಭೋಕ್ತ್ರಂತರ ವ್ಯಾವೃತ್ತಿಯೇ ಏವಕಾರದ ಕೃತ್ಯ ಎಂದು ಹೇಳುತ್ತೇವೆ.

ननूक्तसाध्ये सत्यन्तानुपादानान्नैतद्दोषावकाश इत्यत आह

—एवकारेति । प्रतिनियतभोक्तृकाणां मिथो विभिन्नभोक्तृकाणाम् । तथाचैकैकशरीरे भोक्तृद्वयसिद्ध्याऽप्यनुमानपर्यवसानान्न तदैक्यसिद्धिरित्यर्थः । न च सत्यन्तोपादानेऽपि शरीरानवच्छिन्नसौषुप्तिकभोगभोक्तुर्देवदत्ताभिन्नत्वासिद्ध्याऽर्थान्तरतादवस्थ्यमिति वाच्यम् । सुप्तोत्थितस्य सुखमहमस्वाप्समित्यैक्यानुसन्धानविरोधेन तद्भेदासिद्धेरिति भावः।

ಉಕ್ತವಾದ ಸಾಧ್ಯದಲ್ಲಿ 'ಏವಕಾರ ಪರಿತ್ಯಾಗ'ವೆಂದರೆ 'ದೇವದತ್ತ ಭಿನ್ನರಿಗೆ ಭೋಗಾನವಚ್ಛೇದಕವಾಗಿದ್ದು' ಎಂಬ ಅಂಶವನ್ನು ಬಿಡುವುದು. ಈ ಏವಕಾರ ಪರಿತ್ಯಾಗ ಮಾಡಿದರೆ ಅಪ್ರಸಕ್ತನಿಷೇಧ ಪ್ರಸಕ್ತಿ ಇಲ್ಲ. ಆದರೆ 'ಎಲ್ಲ ಶರೀರಗಳೂ ಪ್ರತಿನಿಯತ ಭೋಕ್ತೃಗಳಿಗೆ, ಅಂದರೆ ಆಯಾ ಭೋಕ್ತೃಗಳಿಗೆ ಭೋಗಾವಚ್ಛೇದಕವಾಗಿರುವಾಗಲೇ ದೇವದತ್ತನಿಗೂ ಭೋಗಾವಚ್ಛೇದಕ ವಾಗುತ್ತವೆ, ಪ್ರತಿ ಶರೀರದಲ್ಲಿ ಇಬ್ಬಿಬ್ಬರು ಭೋಕ್ತೃಗಳಿರುತ್ತಾರೆ' ಎರದು ಅನುಮಾನ ಪರ್ಯವಸಾನವಾಗುವುದರಿಂದ ಭೋಕ್ತೃಗಳಿಗೆ ಐಕ್ಯಸಿದ್ಧಿಯಾಗುವುದಿಲ್ಲ ಎಂದರ್ಥ. ಏವಕಾರ ಹಾಕಿದರೂ ಶರೀರಾನವಚ್ಛಿನ್ನ ಸೌಷುಪ್ತಿಕ ಭೋಗಭೋಕ್ತೃಗಳಿಗೆ ಅವರು ದೇವದತ್ತ ಭಿನ್ನರಾದರೂ ಅವರ ಭೋಗ ಸೌಷುಪ್ತಿಕವಾಗಿರುವುದರಿಂದ ಶರೀರವು ಅನವಚ್ಛೇದಕವಾಗಿದೆ ಹೊರತು, ದೇವದತ್ತಾ ಭೇದ ಪ್ರಯುಕ್ತವಲ್ಲ. ಹೀಗಾಗಿ ಅನವಚ್ಛೇದಕತ್ವದಿಂದ ದೇವದತ್ತಾಭಿನ್ನತ್ವಸಿದ್ಧಿಸದಿರುವುದರಿಂದ ಅರ್ಥಾಂತರತ್ವವಿದ್ದೇ ಇದೆ ಎಂದರೆ ಸುಪ್ತಿಯಿಂದ ಎದ್ದವನಿಗೆ ಸುಖನಿದ್ದೆ ಮಾಡಿದೆನೆಂದು ಐಕ್ಯಾನುಸಂಧಾನವಿದೆ. ಅದರ ವಿರೋಧದಿಂದ ಭೇದವನ್ನು ಹೇಳಲಾಗದಿರುವುದರಿಂದ ಅಭೇದ ಸಾಧನೆಗೆ ಪ್ರಸಕ್ತಿ ಇಲ್ಲ.

परमतप्राप्तस्येति । अयमाशयः । सत्यन्तघटकभेदस्य पारमार्थिकत्वेन विशेषणेऽपि न जीवान्तरसिद्धिप्रसङ्गः । निषेध्यत्वात् । पारमार्थिकशुक्तिरजतं नास्तीतिवत् । न च भोगावच्छेदकत्वमात्रमत्र निषिध्यते, न तु भोक्त्रन्तरमिति वाच्यम् । भोगावच्छेदकत्ववति विशिष्टनिषेधस्य भोक्त्रन्तरनिषेध एव पर्यवसानात् । निषेधश्च परमतप्राप्तभोक्त्रन्तरप्रतीतिनिरासार्थमिति ।।

ಪರಮತಪ್ರಾಪ್ತ ಭೋಕ್ತೃಂತರವ್ಯಾವೃತ್ತಿ ಎನ್ನುವುದರ ಅಭಿಪ್ರಾಯ ಹೀಗೆ— 'ದೇವದತ್ತಾದಿ ಭಿನ್ನರಿಗೆ ಭೋಗಾನವಚ್ಛೇದಕ' ಎಂಬಲ್ಲಿ ಭೇದಕ್ಕೆ ಪಾರಮಾರ್ಥಿಕತ್ವ ವಿಶೇಷಣ ನೀಡಿದರೂ ಪಾರಮಾರ್ಥಿಕ ಜೀವಭೇದ ಸಿದ್ಧಿಪ್ರಸಂಗವಿಲ್ಲ. ಏಕೆಂದರೆ 'ಭಿನ್ನಜೀವರಿಗೆ ಭೋಗಕ್ಕೆ ಅವಚ್ಛೇದಕ

ವಲ್ಲ' ಎಂದು ನಿಷೇಧ ಮಾಡುತ್ತಿದ್ದೇವೆ. 'ಪಾರಮಾರ್ಥಿಕ ಶುಕ್ತಿರಜತವಿಲ್ಲ' ಎಂದು ನಿಷೇಧಮಾಡಿದರೆ ಪಾರಮಾರ್ಥಿಕ ಶುಕ್ತಿರಜತ ಸಿದ್ಧವಾಗುವುದಿಲ್ಲ. ಹಾಗೇ ಇದು. 'ಭೋಗಾವಚ್ಛೇದಕತ್ವವಿಲ್ಲ' ಎಂದು ಮಾತ್ರ ನಿಷೇಧ ಮಾಡುವುದರಿಂದ ಭಿನ್ನಜೀವನಿಷೇಧ ಮಾಡಿದಂತಾಗುವುದಿಲ್ಲ' ಎನ್ನಕೂಡದು. 'ಭಿನ್ನಜೀವರ ಭೋಗಾವಚ್ಛೇದಕತ್ವ' ಎಂಬ ವಿಶಿಷ್ಟವನ್ನು ವಿಶೇಷ್ಯವಾದ ಭೋಗಾವಚ್ಛೇದಕತ್ವಉಳ್ಳ ಶರೀರದಲ್ಲಿ ನಿಷೇಧ ಮಾಡಿದರೆ ಅದು ವಿಶೇಷಣರಾದ ಭಿನ್ನಜೀವರ ನಿಷೇಧದಲ್ಲಿಯೇ ಪರ್ಯವಸಾನವಾಗುವುದು. ಈ ನಿಷೇಧವು ಪರಮತ ಪ್ರಾಪ್ತ ಭಿನ್ನಜೀವ ಪ್ರತೀತಿ ನಿರಾಸಕ್ಕಾಗಿ.

यत्तु देवदत्तातिरिक्तत्वेन पराभिमतचेतनभोगानायतनत्वे सति देवदत्तभोगायतनत्वमिह साध्यार्थ इति । तन्न । देवदत्तचेतनस्यैव तदतिरिक्तत्वेन पराभिमतत्वमङ्गीकर्तुर्मायावादिनो बाधप्रसङ्गात् । उक्तरीत्यैवोपपत्तौ पराभिमतत्वपर्यन्तनिवेशवैयर्थ्याच्च ॥

ಕೆಲವರು ಹೀಗೆ ಹೇಳುತ್ತಾರೆ— ದೇವದತ್ತ ಭಿನ್ನರೆಂದು ಪರಾಭಿಮತರಾದ ಚೇತನರಿಗೆ ಭೋಗಾನವಚ್ಛೇದಕವಾಗಿದ್ದು ದೇವದತ್ತಭೋಗಾವಚ್ಛೇದಕವಾಗಿರುವುದೇ ಸಾಧ್ಯ ಎಂದು. ಇದು ಸರಿಯಲ್ಲ. 'ದೇವದತ್ತಚೇತನನೇ ದೇವದತ್ತಭಿನ್ನನೆಂದು ಪರಾಭಿಮತನಾಗಿದ್ದಾನೆ' ಎಂದು ಮಾಯಾವಾದಿ ಅಂಗೀಕರಿಸಿದ್ದಾನೆ. ಅಂಥ ಚೇತನನಿಗೆ ಭೋಗಾನವಚ್ಛೇದಕತ್ವವನ್ನು ಸಾಧನೆ ಮಾಡಲು ಹೊರಟರೆ ಬಾಧ ಪ್ರಸಂಗವಿದೆ. ಮತ್ತು ನಾವು ಹೇಳಿದಂತೇ ಸಾಧ್ಯವು ಉಪಪನ್ನವಾಗುತ್ತಿರುವಾಗ 'ಪರಾಭಿಮತತ್ವ' ವಿಶೇಷಣವನ್ನು ಸಾಧ್ಯದಲ್ಲಿ ನಿವೇಶ ಮಾಡುವುದೂ ವ್ಯರ್ಥ.

**ಭೇದವೆಲ್ಲವೂ ಮಿಥ್ಯಾ, ಚಂದ್ರಭೇದದಂತೆ**

**अपि च भेदो मिथ्या भेदत्वाच्चन्द्रभेदवत् । मिथ्यात्वं चाधिष्ठानयाथात्म्यज्ञाननिवर्त्यत्वम् ।**

**ಎಲ್ಲ ಭೇದವೂ ಮಿಥ್ಯಾ, ಭೇದತ್ವವಿರುವುದರಿಂದ, ಚಂದ್ರಭೇದದಂತೆ, ಮಿಥ್ಯಾ ಎಂದರೆ ಅಧಿಷ್ಠಾನಯಥಾರ್ಥಜ್ಞಾನದಿಂದ ನಿವರ್ತ್ಯ ಎಂದರ್ಥ.**

सर्वाभेदसिद्धये भेदमात्रमिथ्यात्वानुमानमाह — **भेद इति** । विमत इत्यादिः । तेन न पूर्ववदंशतश्चन्द्रभेदे सिद्धसाधनम् । नन्वत्र

मिथ्यात्वमसत्त्वं चेदपसिद्धान्तः, जगतः सदसद्विलक्षणत्वाङ्गीकारादत आह **– मिथ्यात्वं चेति** । यद्वा सदसद्विलक्षणत्वरूपमिथ्यात्वसाधने परं प्रति साध्याप्रसिद्धिरत आह **– मिथ्यात्वं चेति** । यद्वा यदि सत्त्वानधिकरणत्वं मिथ्यात्वं तदा निर्धर्मकब्रह्मवत् सद्रूपस्यापि भेदस्य सत्त्वाधिकरणत्वनिषेधसम्भवादर्थान्तरमित्यत आह **– मिथ्यात्वं चेति** । यद्वा बाध्यत्वमेव हि मिथ्यात्वम् । तच्चान्यथा विज्ञातस्य सम्यग्विज्ञातत्वमेवेति सिद्धसाधनम् । क्षणिकत्वादिना विज्ञातस्य जगतः स्थायित्वादिना विज्ञातत्वाभ्युपगमादत आह **– मिथ्यात्वं चेति** । यद्वा, अज्ञानतत्कार्यान्यतरत्वरूपमिथ्यात्वे साध्ये परं प्रति दृष्टान्तस्य साध्यवैकल्यं, तन्मतेऽत्यन्तासतश्चन्द्रभेदादेरज्ञानतत्कार्यान्तर्भावाभावादत आह **–मिथ्यात्वं चेति** ।

ಸರ್ವಾಭೇದ ಸಿದ್ಧಿಗಾಗಿ ಎಲ್ಲ ಭೇದಗಳ ಮಿಥ್ಯಾತ್ವವಿಷಯದಲ್ಲಿ ಅನುಮಾನವನ್ನು ಹೇಳುತ್ತಾನೆ. 'ಭೇದವು ಮಿಥ್ಯಾ' ಎಂದು. ವಿಮತವಾದ ಎಲ್ಲ ಭೇದವೂ ಮಿಥ್ಯಾ ಎಂದು ಸೇರಿಸಿಕೊಳ್ಳಬೇಕು. ಅದರಿಂದ ಹಿಂದಿನಂತೆ ಚಂದ್ರಭೇದದಲ್ಲಿ ಅಂಶೇ ಸಿದ್ಧಸಾಧನತ್ವದೋಷಕ್ಕೆ ಅವಕಾಶವಿಲ್ಲ.

ಇಲ್ಲಿ ಮಿಥ್ಯಾತ್ವವೆಂದರೆ ಅಸತ್ವವೆಂದಾದರೆ ಅಪಸಿದ್ಧಾಂತ, ಜಗತ್ತನ್ನು ಅದ್ವೈತಸಿದ್ಧಾಂತದಲ್ಲಿ ಸದಸದ್‌ವಿಲಕ್ಷಣವೆಂದು ಅಂಗೀಕರಿಸಿರುವುದರಿಂದ. ಅಥವಾ ಸದಸದ್ ವಿಲಕ್ಷಣತ್ವರೂಪ ಮಿಥ್ಯಾತ್ವವನ್ನು ಸಾಧನ ಮಾಡಲು ಹೊರಟರೆ ಪ್ರತಿವಾದಿಯಾದ ದ್ವೈತಿಗೆ ಸಾಧ್ಯಾಪ್ರಸಿದ್ಧಿ. ಅಥವಾ ಸತ್ವಾನಧಿಕರಣತ್ವವು ಮಿಥ್ಯಾತ್ವವೆಂದಿಟ್ಟುಕೊಂಡರೆ ನಿರ್ಧರ್ಮಕ ಬ್ರಹ್ಮನಂತೆಯೆ ಭೇದವೂ ಸದ್ರೂಪವಾಗಿದ್ದೇ ಸತ್ವಾನಧಿಕರಣವಾಗಬಹುದೆಂದು ಅರ್ಥಾಂತರ. ಅಥವಾ ಬಾಧ್ಯತ್ವವೇ ಮಿಥ್ಯಾತ್ವ. ಅದು ಅನ್ಯಥಾ ಜ್ಞಾತವಾಗಿದ್ದುದು ಸಮ್ಯಗ್ ಜ್ಞಾತವಾಗುವುದೇ ಹೊರತು ಬೇರೇನಲ್ಲ. ಅದರಿಂದ ಸಿದ್ಧಸಾಧನ. ಏಕೆಂದರೆ ಕ್ಷಣಿಕ ಎಂದು ಮುಂತಾಗಿ ಜ್ಞಾತವಾಗಿದ್ದುದು ಸ್ಥಾಯಿ ಎಂದು ಮುಂತಾಗಿ ಜ್ಞಾತವಾಗುವುದುಂಟೆಂದು ದ್ವೈತಿಗಳು ಅಂಗೀಕರಿಸಿದ್ದಾರೆ. ಅಥವಾ ಅಜ್ಞಾನ ತತ್ಕಾರ್ಯ ಅನ್ಯತರತ್ವ ರೂಪವಾದ ಮಿಥ್ಯಾತ್ವವನ್ನು ಸಾಧಿಸುವುದಾದರೆ ದ್ವೈತಿಗಳಿಗೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಏಕೆಂದರೆ ಅವರ ಮತದಲ್ಲಿ ಅಸತ್ತಾದ ಚಂದ್ರಭೇದಾದಿಗಳು ಅಜ್ಞಾನರೂಪವೂ ಅಲ್ಲ. ತತ್ಕಾರ್ಯವೂ ಆಗಿರುವುದಿಲ್ಲ. ಈ ಎಲ್ಲ ದೋಷಪರಿಹಾರಕ್ಕೆ ಮಿಥ್ಯಾತ್ವವೆಂದರೆ ಅಧಿಷ್ಠಾನ ಯಥಾರ್ಥಜ್ಞಾನದಿಂದ ನಿವರ್ತ್ಯವಾಗುವುದು ಎಂದು ವಿವಕ್ಷಿತ ಎನ್ನುತ್ತಾನೆ.

**निवर्त्यत्वमात्रस्य मुद्गरप्रहारदिना घटादेरिव सत्त्वपक्षेऽप्युपपत्ते-र्ज्ञाननिवर्त्यत्वमिति । एतदप्युत्तरज्ञाननिवर्त्यपूर्वज्ञानवत् सत्त्वा-विरोधीत्यधिष्ठानपदम् । अधिष्ठानयाथात्म्यज्ञाननिवर्त्यस्य शुक्तिरजतादेः सत्त्वादर्शनेऽपि तद्भ्रमनिवर्त्यस्य सत्त्वसम्भवादर्थान्तरमित्यतो याथात्म्येति ।**

ನಿವರ್ತ್ಯವಾಗುವುದೇ ಮಿಥ್ಯಾತ್ವ ಎಂದು ಹೇಳಿದರೆ ಸತ್ಯವಾದ ಮಡಿಕೆಯೂ ದೊಣ್ಣೆಯಿಂದ ಹೊಡೆದಾಗ ನಿವೃತ್ತಿ ಹೊಂದುವುದರಿಂದ ಸತ್ಯತ್ವ ಪಕ್ಷದಲ್ಲಿಯೂ ನಿವರ್ತ್ಯತ್ವವು ಕೂಡುತ್ತದೆ ಎಂದು ಅರ್ಥಾಂತರ ದೋಷ. ಜ್ಞಾನ ನಿವರ್ತ್ಯತ್ವವೇ ಮಿಥ್ಯಾತ್ವ ಎಂದರೂ ಉತ್ತರಜ್ಞಾನನಿವರ್ತ್ಯ ಪೂರ್ವಜ್ಞಾನದಂತೆ ಸತ್ಯತ್ವಕ್ಕೆ ಅವಿರೋಧಿಯಾಗುವುದರಿಂದ ಅಧಿಷ್ಠಾನ ಯಥಾರ್ಥಜ್ಞಾನ ಪದವನ್ನು ಸೇರಿಸಿದ್ದಾನೆ. ಅಧಿಷ್ಠಾನ ಯಾಥಾರ್ಥ್ಯಜ್ಞಾನ ನಿವರ್ತ್ಯವಾದ ಶುಕ್ತಿರಜತಾದಿಗಳಲ್ಲಿ ಸತ್ವವು ಕಂಡಿಲ್ಲವಾದರೂ ಅಧಿಷ್ಠಾನಭ್ರಮದಿಂದ ನಿವರ್ತ್ಯವಾದುದಕ್ಕೆ ಸತ್ವಸಂಭವವಿರುವುದರಿಂದ ಅರ್ಥಾಂತರ ದೋಷ. ಅದಕ್ಕೆ 'ಯಾಥಾತ್ಮ್ಯಜ್ಞಾನ ವಿವಕ್ಷಿತವಾಗಿದೆ.

**न च मायिमते चन्द्रभेदादेः प्रातिभासिकत्वेन निवृत्तिसम्भवेऽपि सिद्धान्तिमते तुच्छत्वेन तस्य निवृत्त्ययोगाद् दृष्टान्तवैकल्यमिति वाच्यम्। यतस्तन्निवर्त्यत्वं तदधीनसिद्धिकाभावप्रतियोगित्वम् । चन्द्रभेदा-देरभावश्चन्द्रैकत्वज्ञानाधीनसिद्धिक इत्यदोषः**

ಹೀಗೆ ಹೇಳಿದರೂ ಮಾಯಿಮತದಲ್ಲಿ ಚಂದ್ರಭೇದಾದಿಗಳು ಪ್ರಾತಿಭಾಸಿಕಸತ್ತಾಗಿರುವುದ ರಿಂದ ನಿವೃತ್ತಿ ಸಂಭವವಿದ್ದರೂ ದ್ವೈತ ಸಿದ್ಧಾಂತದಲ್ಲಿ ಚಂದ್ರಭೇದಾದಿಗಳು ಅತ್ಯಂತಾಸತ್ತಾದ್ದರಿಂದ ಅದಕ್ಕೆ ನಿವೃತ್ತಿ ಕೂಡುವುದಿಲ್ಲ, ಅದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವೆಂಬ ಸಮಸ್ಯೆ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ— ತನ್ನಿವರ್ತ್ಯತ್ವವೆಂದರೆ ತದಧೀನವಾಗಿ ಅದರ ಅಭಾವವು ಸಿದ್ಧಿಸುತ್ತದೆ ಎಂದರ್ಥ. ಚಂದ್ರನೊಬ್ಬನೆ ಎಂಬ ಯಥಾರ್ಥಜ್ಞಾನಾಧೀನವಾಗಿ ಚಂದ್ರಭೇದದ ಅಭಾವವು ಸಿದ್ಧಿಸುತ್ತದೆ. ಇಂಥ ಅಭಾವ ಪ್ರತಿಯೋಗಿತ್ವವೇ ಮಿಥ್ಯಾತ್ವ. ಅದರಿಂದ ದೋಷವಿಲ್ಲ.

**ननु प्रामाणिकाप्रामाणिकयोरनुगतसामान्याभावादसिद्धो हेतुरिति चेन्न । भेदत्वेन प्रतीयमानत्वस्यैव हेतुत्वात्। एवञ्च नोक्तदोषावकाशः। प्रतीयमानत्वं हि प्रतीतिविषयत्वम् ।**

**तच्च प्रतीतिसम्बन्धित्वम् । प्रतीतिसम्बन्धश्च स्वरूपमेवेत्यत्र प्रामाणिकत्वानपेक्षणात् ।**

'ಪ್ರಾಮಾಣಿಕ ಅಪ್ರಾಮಾಣಿಕಗಳಲ್ಲಿ ಅನುಗತವಾಗಿ ಒಂದು ಸಾಮಾನ್ಯಧರ್ಮ ಇಲ್ಲದಿರುವುದರಿಂದ ಹೇತುವು ಅಸಿದ್ಧ' ಎಂಬ ದೋಷಕ್ಕೆ ಸಮಾಧಾನ ಹೀಗೆ— ಭೇದವೆಂದು ಪ್ರತೀಯಮಾನವಾಗುವುದೇ ಇಲ್ಲಿ 'ಭೇದತ್ವ' ಶಬ್ದದಿಂದ ವಿವಕ್ಷಿತವಾಗಿದೆ ಎಂದು. ಈಗ ಹಿಂದೆ ಹೇಳಿದ ದೋಷಕ್ಕೆ ಅವಕಾಶವಿಲ್ಲ. ಪ್ರತೀಯಮಾನವಾಗುವುದೆಂದರೆ ಪ್ರತೀತಿಗೆ ವಿಷಯವಾಗುವುದೆಂದರ್ಥ. ವಿಷಯವಾಗುವುದೆಂದರೆ ಸಂಬಂಧಿಯಾಗುವುದೆಂದರ್ಥ. ಪ್ರತೀತಿಯ ಸಂಬಂಧವು ಪ್ರತೀತಿಯ ಸ್ವರೂಪವೆ. ಪ್ರತೀತಿಯ ಸ್ವರೂಪವು ವಿಷಯದ ಪ್ರಾಮಾಣಿಕತ್ವವನ್ನು ಅಪೇಕ್ಷಿಸುವುದಿಲ್ಲ.

**प्रामाणिकेति ।** सिद्धान्ते सदसत्साधारणभेदत्वधर्मस्याप्रसिद्धत्वेनेत्यर्थः **। असिद्धो हेतुरिति ।** उभयानुगतभेदत्वस्य हेतुत्वे हेत्वप्रसिद्धिः । सन्मात्रवृत्तिभेदत्वस्य हेतुत्वे दृष्टान्तासिद्धिः । दृष्टान्तवृत्तिभेदभ्रमविषयत्वरूपभेदत्वस्य हेतुत्वे च स्वरूपासिद्धिरित्यर्थः ।

ದ್ವೈತ ಸಿದ್ಧಾಂತದಲ್ಲಿ ಸತ್ ಮತ್ತು ಅಸತ್‌ಗಳಲ್ಲಿ ಅನುಗತವಾದ ಭೇದತ್ವವೆಂಬ ಧರ್ಮವು ಅಪ್ರಸಿದ್ಧವಾದ್ದರಿಂದ 'ಅನುಗತವಾದ ಭೇದತ್ವವನ್ನು ಹೇತು ಮಾಡುವೆವು' ಎಂದರೆ ಅದು ನಮಗೆ ಅಪ್ರಸಿದ್ಧ. ಸತ್‌ನಲ್ಲಿ ಮಾತ್ರ ಇರುವ ಭೇದತ್ವವನ್ನು ಹೇತು ಮಾಡಿದರೆ ಅಸತ್ತಾದ ದೃಷ್ಟಾಂತದಲ್ಲಿ ಅದು ಅಸಿದ್ಧ. ದೃಷ್ಟಾಂತದಲ್ಲಿ ಮಾತ್ರ ಇರುವ ಭೇದಭ್ರಮವಿಷಯತ್ವವನ್ನು ಹೇತುಮಾಡಿದರೆ ಪಕ್ಷದಲ್ಲಿ ಅದು ಇಲ್ಲದಿರುವುದರಿಂದ ಸ್ವರೂಪಾಸಿದ್ಧಿ ದೋಷ ಬರುತ್ತದೆ.

ननु प्रतीयमानत्वं हि प्रतीतिकर्मत्वम् । तस्य च प्रतीतिजन्यफलाश्रयत्वरूपस्य न सदसत्साधारण्यमत आह –**प्रतीतिविषयत्वमिति ।** एतदेव प्रतीतिकर्मत्वं, न तूक्तरूपम् । ज्ञाततारूपफलस्य निरस्तत्वेनासम्भवादिति भावः । ननु प्रतीतिजनकसन्निकर्षादिमत्त्वरूपं तद्विषयत्वमपि न सदसत्साधारणमित्याशङ्क्याह –**तच्चेति ।** ननु सम्बन्धस्य सम्बन्धिसत्तासापेक्षत्वात् कथमसतश्चन्द्रभेदादेः प्रतीतिसम्बन्धित्वमत

**निवर्त्यत्वमात्रस्य मुद्गरप्रहारदिना घटादेरिव सत्त्वपक्षेऽप्युपपत्तेर्ज्ञाननिवर्त्यत्वमिति । एतदप्युत्तरज्ञाननिवर्त्यपूर्वज्ञानवत् सत्त्वाविरोधीत्यधिष्ठानपदम् । अधिष्ठानयाथात्म्यज्ञाननिवर्त्यस्य शुक्तिरजतादेः सत्त्वादर्शनेऽपि तद्भ्रमनिवर्त्यस्य सत्त्वसम्भवादर्थान्तरमित्यतो याथात्म्येति ।**

ನಿವರ್ತ್ಯವಾಗುವುದೇ ಮಿಥ್ಯಾತ್ವ ಎಂದು ಹೇಳಿದರೆ ಸತ್ಯವಾದ ಮಡಿಕೆಯೂ ದೊಣ್ಣೆಯಿಂದ ಹೊಡೆದಾಗ ನಿವೃತ್ತಿ ಹೊಂದುವುದರಿಂದ ಸತ್ಯತ್ವ ಪಕ್ಷದಲ್ಲಿಯೂ ನಿವರ್ತ್ಯತ್ವವು ಕೂಡುತ್ತದೆ ಎಂದು ಅರ್ಥಾಂತರ ದೋಷ. ಜ್ಞಾನ ನಿವರ್ತ್ಯತ್ವವೇ ಮಿಥ್ಯಾತ್ವ ಎಂದರೂ ಉತ್ತರಜ್ಞಾನನಿವರ್ತ್ಯ ಪೂರ್ವಜ್ಞಾನದಂತೆ ಸತ್ಯತ್ವಕ್ಕೆ ಅವಿರೋಧಿಯಾಗುವುದರಿಂದ ಅಧಿಷ್ಠಾನ ಯಥಾರ್ಥಜ್ಞಾನ ಪದವನ್ನು ಸೇರಿಸಿದ್ದಾನೆ. ಅಧಿಷ್ಠಾನ ಯಾಥಾರ್ಥ್ಯಜ್ಞಾನ ನಿವರ್ತ್ಯವಾದ ಶುಕ್ತಿರಜತಾದಿಗಳಲ್ಲಿ ಸತ್ವವು ಕಂಡಿಲ್ಲವಾದರೂ ಅಧಿಷ್ಠಾನಭ್ರಮದಿಂದ ನಿವರ್ತ್ಯವಾದುದಕ್ಕೆ ಸತ್ವಸಂಭವವಿರುವುದರಿಂದ ಅರ್ಥಾಂತರ ದೋಷ. ಅದಕ್ಕೆ 'ಯಾಥಾತ್ಮ್ಯಜ್ಞಾನ ವಿವಕ್ಷಿತವಾಗಿದೆ.

**न च मायिमते चन्द्रभेदादेः प्रातिभासिकत्वेन निवृत्तिसम्भवेऽपि सिद्धान्तिमते तुच्छत्वेन तस्य निवृत्त्ययोगाद् दृष्टान्तवैकल्यमिति वाच्यम्। यतस्तन्निवर्त्यत्वं तदधीनसिद्धिकाभावप्रतियोगित्वम् । चन्द्रभेदादेरभावश्चन्द्रैकत्वज्ञानाधीनसिद्धिक इत्यदोषः**

ಹೀಗೆ ಹೇಳಿದರೂ ಮಾಯಿಮತದಲ್ಲಿ ಚಂದ್ರಭೇದಾದಿಗಳು ಪ್ರಾತಿಭಾಸಿಕಸತ್ತಾಗಿರುವುದರಿಂದ ನಿವೃತ್ತಿ ಸಂಭವವಿದ್ದರೂ ದ್ವೈತ ಸಿದ್ಧಾಂತದಲ್ಲಿ ಚಂದ್ರಭೇದಾದಿಗಳು ಅತ್ಯಂತಾಸತ್ತಾದ್ದರಿಂದ ಅದಕ್ಕೆ ನಿವೃತ್ತಿ ಕೂಡುವುದಿಲ್ಲ, ಅದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವೆಂಬ ಸಮಸ್ಯೆ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ— ತನ್ನಿವರ್ತ್ಯತ್ವವೆಂದರೆ ತದಧೀನವಾಗಿ ಅದರ ಅಭಾವವು ಸಿದ್ಧಿಸುತ್ತದೆ ಎಂದರ್ಥ. ಚಂದ್ರನೊಬ್ಬನೆ ಎಂಬ ಯಥಾರ್ಥಜ್ಞಾನಾಧೀನವಾಗಿ ಚಂದ್ರಭೇದದ ಅಭಾವವು ಸಿದ್ಧಿಸುತ್ತದೆ. ಇಂಥ ಅಭಾವ ಪ್ರತಿಯೋಗಿತ್ವವೇ ಮಿಥ್ಯಾತ್ವ. ಅದರಿಂದ ದೋಷವಿಲ್ಲ.

**ननु प्रामाणिकाप्रामाणिकयोरनुगतसामान्याभावादसिद्धो हेतुरिति चेन्न । भेदत्वेन प्रतीयमानत्वस्यैव हेतुत्वात्। एवञ्च नोक्तदोषावकाशः। प्रतीयमानत्वं हि प्रतीतिविषयत्वम् ।**

**तच्च प्रतीतिसम्बन्धित्वम् । प्रतीतिसम्बन्धश्च स्वरूपमेवेत्यत्र प्रामाणिकत्वानपेक्षणात् ।**

**'ಪ್ರಾಮಾಣಿಕ ಅಪ್ರಾಮಾಣಿಕಗಳಲ್ಲಿ ಅನುಗತವಾಗಿ ಒಂದು ಸಾಮಾನ್ಯಧರ್ಮ ಇಲ್ಲದಿರುವುದರಿಂದ ಹೇತುವು ಅಸಿದ್ಧ' ಎಂಬ ದೋಷಕ್ಕೆ ಸಮಾಧಾನ ಹೀಗೆ— ಭೇದವೆಂದು ಪ್ರತೀಯಮಾನವಾಗುವುದೇ ಇಲ್ಲಿ 'ಭೇದತ್ವ' ಶಬ್ದದಿಂದ ವಿವಕ್ಷಿತವಾಗಿದೆ ಎಂದು. ಈಗ ಹಿಂದೆ ಹೇಳಿದ ದೋಷಕ್ಕೆ ಅವಕಾಶವಿಲ್ಲ. ಪ್ರತೀಯಮಾನವಾಗುವುದೆಂದರೆ ಪ್ರತೀತಿಗೆ ವಿಷಯವಾಗುವುದೆಂದರ್ಥ. ವಿಷಯವಾಗುವುದೆಂದರೆ ಸಂಬಂಧಿಯಾಗುವುದೆಂದರ್ಥ. ಪ್ರತೀತಿಯ ಸಂಬಂಧವು ಪ್ರತೀತಿಯ ಸ್ವರೂಪವೆ. ಪ್ರತೀತಿಯ ಸ್ವರೂಪವು ವಿಷಯದ ಪ್ರಾಮಾಣಿಕತ್ವವನ್ನು ಅಪೇಕ್ಷಿಸುವುದಿಲ್ಲ.**

**प्रामाणिकेति ।** सिद्धान्ते सदसत्साधारणभेदत्वधर्मस्याप्रसिद्धत्वेनेत्यर्थः **। असिद्धो हेतुरिति ।** उभयानुगतभेदत्वस्य हेतुत्वे हेत्वप्रसिद्धिः । सन्मात्रवृत्तिभेदत्वस्य हेतुत्वे दृष्टान्तासिद्धिः । दृष्टान्तवृत्तिभेदभ्रमविषयत्वरूपभेदत्वस्य हेतुत्वे च स्वरूपासिद्धिरित्यर्थः ।

ದ್ವೈತ ಸಿದ್ಧಾಂತದಲ್ಲಿ ಸತ್ ಮತ್ತು ಅಸತ್‌ಗಳಲ್ಲಿ ಅನುಗತವಾದ ಭೇದತ್ವವೆಂಬ ಧರ್ಮವು ಅಪ್ರಸಿದ್ಧವಾದ್ದರಿಂದ 'ಅನುಗತವಾದ ಭೇದತ್ವವನ್ನು ಹೇತು ಮಾಡುವೆವು' ಎಂದರೆ ಅದು ನಮಗೆ ಅಪ್ರಸಿದ್ಧ. ಸತ್‌ನಲ್ಲಿ ಮಾತ್ರ ಇರುವ ಭೇದತ್ವವನ್ನು ಹೇತು ಮಾಡಿದರೆ ಅಸತ್ತಾದ ದೃಷ್ಟಾಂತದಲ್ಲಿ ಅದು ಅಸಿದ್ಧ. ದೃಷ್ಟಾಂತದಲ್ಲಿ ಮಾತ್ರ ಇರುವ ಭೇದಭ್ರಮವಿಷಯತ್ವವನ್ನು ಹೇತುಮಾಡಿದರೆ ಪಕ್ಷದಲ್ಲಿ ಅದು ಇಲ್ಲದಿರುವುದರಿಂದ ಸ್ವರೂಪಾಸಿದ್ಧಿ ದೋಷ ಬರುತ್ತದೆ.

ननु प्रतीयमानत्वं हि प्रतीतिकर्मत्वम् । तस्य च प्रतीतिजन्यफलाश्रयत्वरूपस्य न सदसत्साधारण्यमत आह — **प्रतीतिविषयत्वमिति ।** एतदेव प्रतीतिकर्मत्वं, न तूक्तरूपम् । ज्ञाततारूपफलस्य निरस्तत्वेनासम्भवादिति भावः । ननु प्रतीतिजनकसन्निकर्षादिमत्त्वरूपं तद्विषयत्वमपि न सदसत्साधारणमित्याशङ्क्याह — **तच्चेति ।** ननु सम्बन्धस्य सम्बन्धिसत्तासापेक्षत्वात् कथमसतश्चन्द्रभेदादेः प्रतीतिसम्बन्धित्वमत

**आह – सम्बन्धश्चेति । स्यादेवं यद्यन्यः सम्बन्धः स्यात् । अयं तु प्रतीतेः स्वरूपमेव । तस्य तु विषयसत्तानिरपेक्षत्वान्न दोष इति भावः ।**

'ಪ್ರತೀಯಮಾನವಾಗುವುದು ಎಂಬುದನ್ನೇ ಹೇತು ಮಾಡಿದರೂ ಹಿಂದಿನ ದೋಷ ಪರಿಹಾರವಾಗುವುದಿಲ್ಲ. ಪ್ರತೀಯಮಾನವಾಗುವುದೆಂದರೆ ಪ್ರತೀತಿಗೆ ಕರ್ಮವಾಗುವುದು. ಅಂದರೆ ಪ್ರತೀತಿಜನ್ಯವಾದ ಫಲಕ್ಕೆ ಆಶ್ರಯವಾಗುವುದು ಅದು ಸತ್‌ನಲ್ಲಿ ಮಾತ್ರ ಬಂದೀತು. ಸತ್ ಅಸತ್‌ಗಳೆರಡರಲ್ಲಿ ಅನುಗತವಾಗಿ ಬರಲಾರದು'. ಎಂಬ ಆಕ್ಷೇಪ ಬಂದರೆ ಹೀಗೆ ಸಮಾಧಾನ– ಪ್ರತೀತಿಕರ್ಮತ್ವವೆಂದರೆ ಪ್ರತೀತಿಗೆ ವಿಷಯವಾಗುವುದೆಂದರ್ಥ ಹೊರತು ಪ್ರತೀತಿ ಜನ್ಯಫಲಕ್ಕೆ ಆಶ್ರಯವಾಗುವುದಲ್ಲ. ಜ್ಞಾತತಾ ರೂಪವಾದ ಪ್ರತೀತಿಫಲವನ್ನೇ ನಿರಾಕರಿಸಿರುವುದರಿಂದ ಅದನ್ನು ಹೇತು ಮಾಡುವುದು ಅಸಂಭವ.

'ಪ್ರತೀತಿಗೆ ವಿಷಯವಾಗುವುದೆಂಬುದನ್ನು ಹೇತು ಮಾಡಿದರೂ ಹಿಂದಿನ ದೋಷ ಪರಿಹಾರವಾಗುವುದಿಲ್ಲ. ಜ್ಞಾನಕ್ಕೆ ಕಾರಣವಾದ ಸನ್ನಿಕರ್ಷವಾಗಲಿ ಜ್ಞಾನಜನ್ಯ ವ್ಯವಹಾರ ಯೋಗ್ಯತ್ವವಾಗಲಿ ಪ್ರತೀತಿವಿಷಯತ್ವವೆನಿಸುತ್ತದೆ. ಇದು ಸತ್ ಮತ್ತು ಅಸತ್ ಎರಡರಲ್ಲಿ ಅನುಗತವಾಗಿರುವುದಿಲ್ಲ. ಕೇವಲ ಸತ್‌ನಲ್ಲಿ ಬರುತ್ತದೆ' ಎಂಬ ಆಕ್ಷೇಪ ಬಂದರೆ ಹೀಗೆ ಸಮಾಧಾನ– ಪ್ರತೀತಿವಿಷಯತ್ವವೆಂದರೆ ಪ್ರತೀತಿಸಂಬಂಧಿತ್ವ, ಪ್ರತೀತಿಯ ಸಂಬಂಧವೆ. ಯದ್ಯಪಿ ಸಂಬಂಧವಿರ ಬೇಕಾದರೆ ಸಂಬಂಧಿಗಳಿರಬೇಕು. ಸಂಬಂಧಿಗಳು ಸತ್ತಾಗಿರಬೇಕು. ಅಪ್ರಾಮಾಣಿಕವಾದ ಚಂದ್ರಭೇದ ಸತ್ತಲ್ಲ. ಅದರಲ್ಲಿ ಪ್ರತೀತಿಯ ಸಂಬಂಧ ಬರಲಾರದು ಎಂಬ ಶಂಕೆ ಇಲ್ಲಿ ಸಹಜ. ಆದರೆ ಪ್ರತೀತಿಯ ಸಂಬಂಧ ಒಂದು ಬೇರೆ ಪದಾರ್ಥವಲ್ಲ. ಪ್ರತೀತಿಯ ಸ್ವರೂಪವೆ. ಅದಕ್ಕೆ ವಿಷಯಸತ್ತಾಪೇಕ್ಷೆಯಿಲ್ಲ. ಅಸತ್ತಾದ ಚಂದ್ರಭೇದದ ಪ್ರತೀತಿ ಬಂದಿರುವುದರಿಂದ ಆ ಪ್ರತೀತಿಯ ಸ್ವರೂಪವೇ ಆಗಿರುವ ಸಂಬಂಧಕ್ಕೆ ಸಂಬಂಧಿಯಾದ ಚಂದ್ರಭೇದ ಸತ್ತಾಗಿರಬೇಕಾಗಿಲ್ಲ. ಅದರಿಂದ ಈ ಸಂಬಂಧವನ್ನು ಹೇತುಮಾಡಿದರೆ ಪಕ್ಷದಲ್ಲಿ ಅಸಿದ್ಧಿ ದೋಷವಿಲ್ಲ. ದೃಷ್ಟಾಂತದಲ್ಲಿ ಸಾಧನವೈಕಲ್ಯವೂ ಇಲ್ಲ.

**ಚಂದ್ರಭೇದವೇ ಆರೋಪಿತ, ಚಂದ್ರಾಂತರವಲ್ಲ**

**ननु प्रतीयमाने चन्द्रे चन्द्रान्तरस्यारोपितत्वेनारोपितानारोपितचन्द्रयोर्भेदस्य सत्यत्वेन साध्यविकलो दृष्टान्त इति चेन्न । चन्द्रे भेदारोपमात्रेण द्वित्वप्रतीत्युपपत्तौ चन्द्रान्तरस्यारोपाङ्गीकारे गौरवात् ।**

**'ಕಾಣುವ ಚಂದ್ರನಲ್ಲಿ ಇನ್ನೊಬ್ಬ ಚಂದ್ರ ಆರೋಪಿತನಾದ್ದರಿಂದ, ಈ ಆರೋಪಿತ ಚಂದ್ರ ಮತ್ತು ಅನಾರೋಪಿತ ಚಂದ್ರರಿಗೆ ಭೇದ ಸತ್ಯವಾದ್ದರಿಂದ, ದೃಷ್ಟಾಂತ ವಾಗಿರುವ ಚಂದ್ರಭೇದದಲ್ಲಿ ಮಿಥ್ಯಾತ್ವವೆಂಬ ಸಾಧ್ಯ ಬರುವುದಿಲ್ಲವಾದ್ದರಿಂದ ದೃಷ್ಟಾಂತ ಸಾಧ್ಯವಿಕಲವಾಯಿತು' ಎಂದು ಹೇಳಬಾರದು. ಚಂದ್ರಭೇದವನ್ನು ಆರೋಪಿಸಿದ ಮಾತ್ರದಿಂದಲೇ ಚಂದ್ರದ್ವಿತ್ವದ ಪ್ರತೀತಿ ಕೂಡುವುದರಿಂದ, ಅದಕ್ಕಾಗಿ ಇನ್ನೊಬ್ಬ ಚಂದ್ರನ ಆರೋಪವನ್ನು ಒಪ್ಪುವುದು ಗೌರವ ಗ್ರಸ್ತವಾಗುವುದು.**

स्यादेतत् । परमते चन्द्रभेदस्य पारमार्थिकत्वाद्दृष्टान्तस्य साध्यवैकल्यम् । न चैवं चन्द्रभेदप्रतीतेः प्रमात्वप्रसङ्गः । चन्द्रभिन्नत्वेन भासमानचन्द्रस्यारोपितत्वेन विशिष्टविषयबाधात् । चन्द्रभेदस्यैवारोपितत्वे चन्द्रद्वित्वप्रतीतेरनुपपत्तेः । तस्या विभिन्नवस्तुविषयकापेक्षाबुद्धिसापेक्षत्वादित्याशङ्कते – **नन्विति । सत्यत्वेनेति ।** अन्यथाऽरोपितानारोपितयोरैक्यप्रसङ्ग इति भावः। द्वित्वप्रतीतिं प्रति न वस्तुतो विभिन्नवस्तु-विषयकबुद्धिर्हेतुः । दूरस्थवृक्षयोर्भेदाग्रहेऽपि द्वित्वप्रतीत्यापत्तेः । अपि तु भेदग्रह एवेति चन्द्रे चन्द्रभेदारोपाङ्गीकारे नानुपपत्तिः । न च चन्द्रान्तरस्यारोपाङ्गीकारेऽपि बाधकाभावः । चन्द्रश्चन्द्रभिन्न इत्यादौ चन्द्रभेदस्यैव साक्षाद्धर्मिविशेषणत्वापेक्षया तादात्म्येन चन्द्रभिन्नस्य तथात्वे विषयताधिक्येन गौरवादित्याशयेन समाधत्ते – **चन्द्रभेदारोपमात्रेणेति ।**

ದ್ವೈತಮತದಲ್ಲಿ ಚಂದ್ರಭೇದ ಪಾರಮಾರ್ಥಿಕವಾಗಿರುವುದರಿಂದ ದೃಷ್ಟಾಂತವಾಗಿರುವ ಚಂದ್ರಭೇದದಲ್ಲಿ ಸಾಧ್ಯವಾದ ಮಿಥ್ಯಾತ್ವವಿಲ್ಲ ಎಂದು ದೃಷ್ಟಾಂತಕ್ಕೆ ಸಾಧ್ಯವೈಕಲ್ಯವೆಂಬ ದೋಷಬರುತ್ತದೆ. ಚಂದ್ರಭೇದ ಪಾರಮಾರ್ಥಿಕವಾದರೂ ಅದರ ಪ್ರತೀತಿ ಪ್ರಮೆಯಾಗಬೇಕಿಲ್ಲ. ಏಕೆಂದರೆ ಚಂದ್ರಭಿನ್ನನೆಂದು ಕಾಣುವ ಇನ್ನೊಬ್ಬ ಚಂದ್ರನು ಆರೋಪಿತ ಅಸತ್ಯ. ಆರೋಪಿತ ಅನಾರೋಪಿತಗಳಿಗೆ ಭೇದ ಸತ್ಯ. ಅದು ಮಿಥ್ಯೆಯಾದಲ್ಲಿ ಅವರಿಗೆ ಐಕ್ಯಪ್ರಸಂಗ. ಆರೋಪಿತ ನಾಗಿರುವುದರಿಂದ ಅಸತ್ತಾದ 'ಚಂದ್ರಭಿನ್ನನು ಚಂದ್ರ' ಎಂಬ ವಿಶಿಷ್ಟ ವಿಷಯ ಬಾಧಿತವಾದ್ದರಿಂದಲೆ ಅದರ ಪ್ರತೀತಿ ಭ್ರಮವೆನಿಸುತ್ತದೆ. ಶುಕ್ತಿಯನ್ನು ರಜತವೆಂದು ತಿಳಿಯುವಂತೆ ಚಂದ್ರನನ್ನು ಚಂದ್ರಭಿನ್ನ ಎಂದು ತಿಳಿಯುವುದು ಭ್ರಮೆ. ಚಂದ್ರಭಿನ್ನನು ಆರೋಪಿತ.

ಚಂದ್ರಭೇದವನ್ನೇ ಆರೋಪಿತವೆಂದು ಒಪ್ಪುವ ಪಕ್ಷದಲ್ಲಿ ಚಂದ್ರದ್ವಿತ್ವಪ್ರತೀತಿಯನ್ನು ಕೊಡಿಸಲಾಗದು. ದ್ವಿತ್ವಪ್ರತೀತಿ ಬರಬೇಕಾದರೆ ಮೊದಲಿಗೆ ಭಿನ್ನಭಿನ್ನ ವಸ್ತುಗಳ ವಿಷಯದಲ್ಲಿ 'ಇದೊಂದು' 'ಇದೊಂದು' ಎಂದು ಅಪೇಕ್ಷಾಬುದ್ಧಿ ಬರಬೇಕಾಗುತ್ತದೆ ತಾನೆ? ಆದರಿಂದ ಚಂದ್ರಭೇದ ಮೊದಲೇ ಇರಬೇಕು, ಸತ್ಯವಾಗಿರಬೇಕು. ಆದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಈ ಪ್ರಶ್ನೆಗೆ ಅದ್ವೈತಿ ಹೇಳುತ್ತಾನೆ— ಚಂದ್ರಭೇದಾರೋಪ ಮಾತ್ರದಿಂದಲೆ ದ್ವಿತ್ವಪ್ರತೀತಿ ಕೊಡುತ್ತಿರಲು ಚಂದ್ರಾಂತರಾರೋಪವನ್ನು ಒಪ್ಪುವುದು ಗೌರವಗ್ರಸ್ತ ಎಂದು. ದ್ವಿತ್ವಪ್ರತೀತಿಗೆ ವಸ್ತುತಃ ಭಿನ್ನವಾದ ಅನೇಕ ವಸ್ತುಗಳ ಅಪೇಕ್ಷಾ ಬುದ್ಧಿಯೆ ಹೇತುವಾದಲ್ಲಿ ದೂರದಲ್ಲಿರುವ, ವಸ್ತುತಃ ಭಿನ್ನವಾದ ಎರಡು ವಸ್ತುಗಳಲ್ಲಿ ಭೇದವನ್ನು ತಿಳಿಯದಿದ್ದರೂ ದ್ವಿತ್ವಪ್ರತೀತಿ ಬರಬೇಕಾದೀತು. ಆದರಿಂದ ಭೇದಪ್ರತೀತಿಯೇ ದ್ವಿತ್ವಪ್ರತೀತಿಗೆ ಕಾರಣ. ಚಂದ್ರನಲ್ಲಿ ಚಂದ್ರಭೇದಾರೋಪ ಮಾತ್ರದಿಂದಲೆ ಭೇದಪ್ರತೀತಿ, ಆದರಿಂದ ದ್ವಿತ್ವ ಪ್ರತೀತಿ ಎಂದು ಒಪ್ಪಿದರೆ ಏನೂ ಅನುಪಪತ್ತಿಯಿಲ್ಲ.

'ಹಾಗಾದರೆ ಚಂದ್ರಾಂತರದ ಆರೋಪವನ್ನು ಅಂಗೀಕರಿಸಿದರೂ ಬಾಧಕವಿಲ್ಲ ಎನ್ನುತ್ತೇನೆ' ಎಂದರೆ ಅದು ಸರಿಯಲ್ಲ. 'ಚಂದ್ರನು ಚಂದ್ರಭಿನ್ನ' ಎಂಬ ಪ್ರತೀತಿಯಲ್ಲಿ ಧರ್ಮಿಯಾದ ಚಂದ್ರನಲ್ಲಿ ವಿಶೇಷಣವಾಗಿ ಸಾಕ್ಷಾತ್ತಾಗಿ ಸ್ವರೂಪ ಸಂಬಂಧದಿಂದ ಚಂದ್ರಭೇದವೇ ಕಾಣುವುದಕ್ಕಿಂತ ತಾದಾತ್ಮ್ಯ ಸಂಬಂಧದಿಂದ ಚಂದ್ರಭಿನ್ನನು ಕಾಣುವ ಪಕ್ಷದಲ್ಲಿ ವಿಷಯತೆಗಳು ಅಧಿಕವಾಗುವುದರಿಂದ ಗೌರವ ಬರುತ್ತದೆ. ಚಂದ್ರನಲ್ಲಿ ತಾದಾತ್ಮ್ಯೇನ ಚಂದ್ರಭಿನ್ನನು ಒಂದು ವಿಷಯ, ಚಂದ್ರಭಿನ್ನನಲ್ಲಿ ಚಂದ್ರಭೇದವು ಸ್ವರೂಪಸಂಬಂಧದಿಂದ ಇನ್ನೊಂದು ವಿಷಯ ಎಂದು ಎರಡು ವಿಷಯತಾಗಳು ಎಂದಾಗುವುದರಿಂದ ಆಧಿಕ್ಯ. ಆದರಿಂದ ಚಂದ್ರಭೇದವನ್ನೇ ಆರೋಪಿತವೆಂದು ಒಪ್ಪಬೇಕು.

**ननु तर्हि शुक्तिकायां रजताभेदारोपमात्रेणेदं रजतमिति प्रतीत्युपपत्तौ रजतारोपाङ्गीकारो व्यर्थ इति चेन्न। तत्राधिष्ठानस्यारजतत्वेन रजतोपस्थित्यर्थं रजतारोपाङ्गीकारात् । रजतानुपस्थितौ रजताभेदारोपासम्भवात् । नैवं प्रकृते । अधिष्ठानस्य चन्द्रत्वात् ।**

**'ಇದೇ ರೀತಿ ಶುಕ್ತಿಯಲ್ಲಿಯೂ ರಜತದ ಅಭೇದಾರೋಪವನ್ನು ಮಾತ್ರ ಅಂಗೀಕರಿಸಿದರೆ ಲಾಘವ. ಆದರಿಂದಲೇ 'ಇದು ರಜತ' ಎಂಬ ಪ್ರತೀತಿ ಕೊಡುತ್ತದೆ, ರಜತಾರೋಪವನ್ನು ಒಪ್ಪುವುದು ವ್ಯರ್ಥ.' ಎಂದು ಹೇಳಬಾರದು. ಇಲ್ಲಿ ಅಧಿಷ್ಠಾನವು ರಜತವಲ್ಲ. ಶುಕ್ತಿಯು ಅಧಿಷ್ಠಾನ. ರಜತಾಭೇದಾರೋಪಕ್ಕೆ ಬೇಕಾಗುವ ರಜತೋಪಸ್ಥಿತಿಗಾಗಿ ರಜತಾರೋಪವನ್ನೇ ಮಾಡಬೇಕಾಗುತ್ತದೆ. ರಜತೋಪಸ್ಥಿತಿ**

**ಇಲ್ಲದೆ ಇದ್ದರೆ ರಜತಾಭೇದಾರೋಪ ಮಾಡುವುದು ಶಕ್ಯವಿಲ್ಲ. ಪ್ರಕೃತದಲ್ಲಿ ಹಾಗೆ ಇಲ್ಲ. ಅಧಿಷ್ಠಾನವು ಚಂದ್ರ. ಅಧಿಷ್ಠಾನ ಪ್ರತೀತಿಯೆ ಚಂದ್ರಪ್ರತೀತಿ. ಹೀಗೆ ಚಂದ್ರನ ಉಪಸ್ಥಿತಿ ಇರುವುದರಿಂದ ಚಂದ್ರಭೇದಾರೋಪವು ಶಕ್ಯವೆ.**

अत्र प्रतिबन्दीमाशङ्कते —**नन्विति** । यद्यपि रजतारोपापेक्षया विषयताधिक्येन रजताभेदारोप एव गौरवान्नैतत्प्रतिबन्द्यवकाशः । न च धर्मिकल्पनातो धर्मकल्पना लघीयसीति शङ्क्यम् । धर्मिघटितधर्मकल्पनायाः लघुत्वायोगात् । तथापि रजताभेदस्य रजतत्वरूपत्वेन तद्विशिष्टारोपात् तदारोपे लाघवमित्यभिप्रायः । रजतत्वस्य च न स्वरूपेणारोप्यत्वम् । मिथ्यैव रजतं प्रत्यभादित्यनुस्मृतिविरोधात् । रजताभेदत्वेनारोपे च रजतारोपस्यावश्यकतेत्याह —**तत्रेत्यादिना** । रजताभेदारोपाङ्गीकारेऽपि तत्कारणीभूतप्रतियोग्युपस्थित्यर्थं रजतारोपोऽवश्यमङ्गीकार्यः । न चैवं चन्द्रान्तरारोपस्याप्यावश्यकता । अधिष्ठानभूतचन्द्रप्रतीतेरेव प्रतियोगिज्ञानत्वात् । न चैवमिहाप्यापणस्थरजतोपस्थित्यैव निर्वाहः। तथासति तदभेदस्यैवारोप्यत्वापत्त्या दर्शितानुस्मृतिविरोधात् । तथाचावश्यकरजतारोपेणैवोपपत्तौ तदभेदारोपाङ्गीकारे वैयर्थ्यं गौरवं चेत्याशयः ।

ಇದೇರೀತಿ 'ಇದಂ ರಜತಂ' ಎಂಬಲ್ಲಿ ರಜತಾರೋಪಕ್ಕಿಂತ ರಜತಾಭೇದಾರೋಪವನ್ನೊಪ್ಪಿದರೆ ಲಾಘವವಾಗದೆ? ಎಂದು ಪ್ರತಿಬಂದಿಯನ್ನು ಶಂಕಿಸುತ್ತಾನೆ. ಯದ್ಯಪಿ ರಜತಾರೋಪಕ್ಕಿಂತ ವಿಷಯತಾಧಿಕ್ಯವಿರುವುದರಿಂದ ರಜತಾಭೇದಾರೋಪದಲ್ಲಿಯೇ ಗೌರವ. ಆದರಿಂದ ಈ ಪ್ರತಿಬಂದಿಗೆ ಅವಕಾಶವಿಲ್ಲ. ರಜತವು ಧರ್ಮಿ, ರಜತಾಭೇದವು ಧರ್ಮ, ಧರ್ಮಿಕಲ್ಪನೆಗಿಂತ ಧರ್ಮಕಲ್ಪನೆ ಲಘು ಎನ್ನುವಂತಿಲ್ಲ, ರಜತಾಭೇದವೆಂಬ ಧರ್ಮದೊಳಗೆ ರಜತವೆಂಬ ಧರ್ಮಿಯೂ ಸೇರಿರುವುದರಿಂದ ಧರ್ಮಿಯೊಂದಿಗೆ ಧರ್ಮವನ್ನು ಕಲ್ಪಿಸುವುದರಿಂದ ಲಾಘವ ಕೂಡುವುದಿಲ್ಲ. ಆದರೂ ರಜತಾಭೇದವು ರಜತತ್ವರೂಪವಾದ ಒಂದು ಧರ್ಮವಾಗಿರುವುದರಿಂದ ಅಂಥ ರಜತತ್ವ ವಿಶಿಷ್ಟವಾದ ರಜತದ ಆರೋಪಕ್ಕಿಂತ ಕೇವಲ ರಜತತ್ವರೂಪವಾದ ರಜತಾಭೇದಾರೋಪ ಲಘುವೇ ಆಗಿರುತ್ತದೆ ಎಂದು ಅಭಿಪ್ರಾಯ. ಆದರಿಂದ ಪ್ರತಿಬಂದಿ ಕೂಡುತ್ತದೆ.

ಇದಕ್ಕೆ ಉತ್ತರವಾಗಿ ಹೇಳುತ್ತಾನೆ. ರಜತತ್ವವನ್ನು ಸ್ವರೂಪೇಣ ಆರೋಪಿಸುವ ಪಕ್ಷದಲ್ಲಿ ಲಾಘವವಿದ್ದರೂ, ಮಿಥ್ಯೆಯಾದ ರಜತವೇ ಕಾಣಿಸಿತೆಂದು ಬಾಧೋತ್ತರದಲ್ಲಿ ಸ್ಮರಣೆ ಬರುವುದರಿಂದ ಅದರ ವಿರೋಧವಿದೆ. ಸ್ಮರಣೆಯಲ್ಲಿ ರಜತಾಭೇದರೂಪದಿಂದಲೆ ರಜತಾಭೇದ ಕಾಣುತ್ತದೆ, ರಜತತ್ವರೂಪದಿಂದಲ್ಲ. ರಜತಾಭೇದರೂಪದಿಂದಲೇ ಆರೋಪವನ್ನು ಒಪ್ಪಬೇಕು. ಆಗ ಅದಕ್ಕೆ ರಜತಾರೋಪ ಆವಶ್ಯಕ. ಗೌರವದೋಷವಿದೆ ಎಂದು ಅದನ್ನು ಬಿಡುವಂತಿಲ್ಲ. ರಜತಾ ಭೇದಾರೋಪವನ್ನು ಅಂಗೀಕರಿಸುವ ಪಕ್ಷದಲ್ಲಿ ಅದಕ್ಕೆ ಕಾರಣವಾಗಿ ಬೇಕಾಗಿರುವ ಪ್ರತಿಯೋಗ್ಯುಪಸ್ಥಿತಿಗಾಗಿ ರಜತಾರೋಪವನ್ನು ಅವಶ್ಯ ಅಂಗೀಕರಿಸಲೇಬೇಕು ಅದರಿಂದ ಗೌರವವಿದ್ದೇ ಇದೆ ಎಂದರ್ಥ.

ಚಂದ್ರಭೇದ ಸ್ಥಳದಲ್ಲಿಯೂ ಹೀಗೇ ಚಂದ್ರಾಂತರಾರೋಪವು ಆವಶ್ಯಕವೆನ್ನುವಂತಿಲ್ಲ. ಅಧಿಷ್ಠಾನ ಚಂದ್ರನೇ ಆಗಿರುವುದರಿಂದ ಅಧಿಷ್ಠಾನನಾದ ಚಂದ್ರನ ಪ್ರತೀತಿಯೇ ಚಂದ್ರಭೇದ ಪ್ರತೀತಿಗೆ ಆವಶ್ಯವಾಗಿರುವ ಪ್ರತಿಯೋಗಿ ಜ್ಞಾನರೂಪವಾಗಿದೆ. ಪ್ರತಿಯೋಗ್ಯುಪಸ್ಥಿತಿಗಾಗಿ ಬೇರೆ ಚಂದ್ರಪ್ರತೀತಿ ಬೇಕಾಗಿಲ್ಲ.

'ರಜತಾಭೇದಾರೋಪವನ್ನು ಆಪಣಸ್ಥ ರಜತೋಪಸ್ಥಿತಿಯೇ ಪ್ರತಿಯೋಗ್ಯುಪಸ್ಥಿತಿ ರೂಪವಾಗಿ ನಿರ್ವಾಹ ಮಾಡಬಾರದೆ?' ಎಂದರೆ ಆಗ ಆಪಣಸ್ಥ ರಜತಾಭೇದವೇ ಆರೋಪ್ಯವಾಗ ಬೇಕಾಗುವ ಪ್ರಸಂಗವಿರುತ್ತದೆ. ಅದಕ್ಕೆ ಮಿಥ್ಯಾರಜತವೇ ಕಾಣಿಸಿತೆಂದು ಸ್ಮರಣೆಯ ವಿರೋಧ ಬರುತ್ತದೆ. ಆಪಣಸ್ಥ ರಜತವು ಮಿಥ್ಯಾ ಅಲ್ಲ. ಹೀಗಾಗಿ ಆವಶ್ಯಕವಾದ ರಜತಾರೋಪದಿಂದಲೇ ನಿರ್ವಾಹ ಮಾಡುವುದು ಯುಕ್ತವಾಗಿರುವಾಗ ರಜತಾಭೇದಾರೋಪಾಂಗೀಕಾರ ಮಾಡುವುದು ವ್ಯರ್ಥ ಮತ್ತು ಗೌರವಗ್ರಸ್ತ ಎಂದು ಅಭಿಪ್ರಾಯ.

**ಜಗತ್ತೆಂಬುದು ಅಂತರ್ಭೇದರಹಿತ ಪದಾರ್ಥ**

**अपि च ।**

**विमतं तात्त्विकस्वान्तर्भेदहीनं मतत्वतः ।**
**यदित्थं तत्तथा यद्वत्खं तथेदं ततस्तथा ॥**

**यथा गगनमन्योन्यं पारमार्थिकभेदशून्यैर्घटमठाद्याकाशैः परमार्थतो न भिद्यते तथा जगदाख्यः पदार्थोऽप्यन्योन्यं तात्त्विकभेदशून्यैः स्वैकदेशैर्घटादिभिः परमार्थतो न भिद्यत इति ।**

ವಿಪ್ರತಿಪನ್ನವಾದ ಜಗತ್ತು ತಾತ್ವಿಕವಾಗಿ ಅಂತರ್ಭೇದ ರಹಿತವಾಗಿದೆ. ದೃಶ್ಯವಾದ್ದ ರಿಂದ. ಯಾವುದು ದೃಶ್ಯವೋ ಅದು ತಾತ್ವಿಕ ಅಂತರ್ಭೇದರಹಿತ. ಭೂತಾಕಾಶದಂತೆ. ಜಗತ್ತು ದೃಶ್ಯವಾಗಿದೆ. ಆದರಿಂದ ತಾತ್ವಿಕ ಅಂತರ್ಭೇ ದ ರಹಿತವಾಗಿದೆ. ಹೇಗೆ ಆಕಾಶವು ಪರಸ್ಪರ ಪಾರಮಾರ್ಥಿಕ ಭೇದಶೂನ್ಯವಾದ ಘಟಕಾಶ ಮಠಾಕಾಶಗಳಿಂದ ಪಾರಮಾರ್ಥಿಕವಾಗಿ ಭೇದರಹಿತವಾಗಿದೆಯೋ ಹಾಗೇ ಜಗತ್ತೆಂಬ ಪದಾರ್ಥವು ಕೂಡ ಪರಸ್ಪರ ತಾತ್ವಿಕ ಭೇದಶೂನ್ಯವಾದ ಏಕದೇಶರೂಪ ಘಟಾದಿಗಳಿಂದ ಪಾರಮಾರ್ಥಿಕವಾಗಿ ಭೇದರಹಿತವಾಗಿದೆ ಎಂದರ್ಥ.

सर्वाभेदसाधकानुमानान्तरं प्रदर्शयंस्तत्प्रयोगप्रकारज्ञापनाय तार्किक-रीत्या पञ्चावयवप्रयोगरूपां प्राचीनकारिकामुदाहरति – **विमतमिति** । तां विवृणोति – **यथेति** । तथाच विमतं जगत् परस्परप्रतियोगिक-पारमार्थिकभेदशून्यस्वैकदेशप्रतियोगिकपारमार्थिकभेदशून्यं दृश्यत्वात् । यद् दृश्यं तत् तादृशसाध्यवत् । यथा भूताकाशम् । दृश्यं च जगत् । तस्मात् तादृशसाध्यवदिति प्रयोगार्थ उक्तो भवति ।

ಸರ್ವಾಭೇದ ಸಾಧಕವಾದ ಇನ್ನೊಂದು ಅನುಮಾನವನ್ನು ತೋರಿಸುವುದಕ್ಕಾಗಿ, ಅದರ ಪ್ರಯೋಗ ಹೇಗೆಂಬುದನ್ನು ತಿಳಿಸುವುದಕ್ಕೆ ತಾರ್ಕಿಕ ರೀತಿಯಲ್ಲಿ ಪಂಚಾವಯವ ವಾಕ್ಯಪ್ರಯೋಗ ರೂಪವಾದ ಪ್ರಾಚೀನ ಶ್ಲೋಕವನ್ನು ಉದಾಹರಿಸುತ್ತಾನೆ. 'ವಿಪ್ರತಿಪನ್ನವಾದ ಜಗತ್ತು' ಎಂದು ಮುಂತಾಗಿ, ಇಲ್ಲಿ 'ವಿಮತವು ತಾತ್ವಿಕ ಸ್ವಾಂತರ್ಭೇದ ಹೀನವಾಗಿದೆ' ಎಂದು ಪ್ರತಿಜ್ಞಾವಾಕ್ಯ. 'ದೃಶ್ಯವಾದ್ದರಿಂದ' ಎಂದು ಹೇತುವಾಕ್ಯ. 'ಯಾವುದು ದೃಶ್ಯವೋ ಅದು ತಾತ್ವಿಕ ಅಂತರ್ಭೇದಹೀನ, ಭೂತಾಕಾಶದಂತೆ' ಎಂದು ಉದಾಹರಣ ವಾಕ್ಯ. 'ಜಗತ್ತು ದೃಶ್ಯವಾಗಿದೆ' ಎಂದು ಉಪನಯ ವಾಕ್ಯ. 'ಆದರಿಂದ ಅಂತರ್ಭೇದ ರಹಿತವಾಗಿದೆ' ಎಂದು ನಿಗಮನ ವಾಕ್ಯ. ಹೀಗೆ ನ್ಯಾಯದ ಪಂಚ ಅವಯವ ವಾಕ್ಯಗಳೂ ಈ ಶ್ಲೋಕದಲ್ಲಿ ಉಕ್ತವಾಗಿದೆ. ಅದರ ವಿವರಣೆ— 'ಹೇಗೆ ಆಕಾಶವು ಪರಸ್ಪರ...' ಎಂದು ಮುಂತಾಗಿ. ಇದರ ಅಭಿಪ್ರಾಯ ಹೀಗೆ— ವಿಪ್ರತಿಪನ್ನವಾದ ಜಗತ್ತು ಪರಸ್ಪರ ಪ್ರತಿಯೋಗಿಕ ಪಾರಮಾರ್ಥಿಕ ಭೇದಶೂನ್ಯ ಸ್ವೈಕದೇಶ ಪ್ರತಿಯೋಗಿಕ ಪಾರಮಾರ್ಥಿಕ ಭೇದಶೂನ್ಯವಾಗಿದೆ, ದೃಶ್ಯವಾದ್ದರಿಂದ. ಯಾವುದು ದೃಶ್ಯವೋ ಅದು ಹಾಗೆ ಸಾಧ್ಯ ಉಳ್ಳದ್ದಾಗಿರುತ್ತದೆ, ಭೂತಾಕಾಶದಂತೆ. ಜಗತ್ತು ದೃಶ್ಯವಾಗಿದೆ. ಆದರಿಂದ ಹಾಗೆ ಸಾಧ್ಯ ಉಳ್ಳದ್ದಾಗಿದೆ. ಎಂದು ಪ್ರಯೋಗದ ಅರ್ಥ.

अत्र सामान्यतो भेदशून्यत्वमप्रसिद्धम् । अतः स्वैकदेशप्रतियोगि-

**केति । तादृशव्यावहारिकभेदसत्त्वाद्बाधवारणाय पारमार्थिकेति । मिथो विभिन्नैकदेशैरभेदसिद्ध्याऽर्थान्तरवारणाय शून्यान्तमेकदेशविशेषणम् । पूर्ववदप्रसिद्धिवारणाय परस्परेत्यादि । न च पारमार्थिकभेदाप्रसिद्ध्या साध्याप्रसिद्धिः । प्रतियोगिनः परप्रसिद्धिमात्रेण निषेधसाधनस्योक्तत्वात् ॥ यदि तु मिथः स्वैकदेशभेदस्य यः पारमार्थिकत्वेनाभावस्तद्विशिष्टस्वैकदेशभेदस्य पारमार्थिकत्वेनाभावः साध्यस्तदा नाप्रसिद्धिशङ्काऽपि । व्यधिकरणधर्मावच्छिन्नभेदाभावप्रसिद्धेः । न च निरंशे गुणादौ व्यभिचारः । निरंशपदार्थस्यैवानभ्युपगमात् । अभ्युपगमे वा सांशत्वेन मतत्वस्यैव हेतुत्वात् ।**

ಇಲ್ಲಿ ಸಾಮಾನ್ಯವಾಗಿ ಭೇದಶೂನ್ಯತ್ವವು ಅಪ್ರಸಿದ್ಧ. ಎಲ್ಲ ಪದಾರ್ಥಗಳಲ್ಲಿ ಇತರ ಭೇದವಿದೆ. ಆದರಿಂದ ತನ್ನ ಏಕದೇಶ ಪ್ರತಿಯೋಗಿಕ ಭೇದಶೂನ್ಯ ಎಂದಿದೆ. ಅಂಥ ವ್ಯಾವಹಾರಿಕ ಭೇದ ಅದ್ವೈತಮತದಲ್ಲಿ ಇರುವುದರಿಂದ ಭೇದ ಶೂನ್ಯತ್ವವನ್ನು ಹೇಳಿದರೆ ಬಾಧ ಬಂದೀತೆಂದು ಅದರ ನಿವಾರಣೆಗೆ ಪಾರಮಾರ್ಥಿಕಭೇದ ಶೂನ್ಯತ್ವ ಎಂದು ವಿಶೇಷಣ ಕೊಡಲಾಗಿದೆ. ಪರಸ್ಪರ ಭಿನ್ನವಾದ ಏಕದೇಶಗಳಿಂದಲೆ ಅಭೇದ ಸಿದ್ಧವಾಗಿ ಅರ್ಥಾಂತರದೋಷ ಬರಬಾರದೆಂದು ಪರಸ್ಪರ ಭೇದಶೂನ್ಯ ಎಂದು ಏಕದೇಶಕ್ಕೆ ವಿಶೇಷಣ. ಸಾಮಾನ್ಯತಃ ಭೇದಶೂನ್ಯವೆಂದರೆ ಹಿಂದಿನಂತೆ ಅಪ್ರಸಿದ್ಧಿ ದೋಷ ಬರುವುದರಿಂದ ಪರಸ್ಪರ ಭೇದಶೂನ್ಯ ಎಂದು ವಿಶೇಷಣ.

ಪಾರಮಾರ್ಥಿಕ ಭೇದವೆಂಬುದೇ ಅದ್ವೈತದಲ್ಲಿ ಅಪ್ರಸಿದ್ಧವಾದ್ದರಿಂದ ಸಾಧ್ಯಾಪ್ರಸಿದ್ಧಿ ಎನ್ನಬಾರದು. ಪ್ರತಿಯೋಗಿಯು ಪ್ರತಿವಾದಿಗೆ ಸಿದ್ಧವಾಗಿದ್ದರೆ ಸಾಕು. ವಾದಿ ಅದರ ನಿಷೇಧವನ್ನು ಸಾಧಿಸಬಹುದೆಂದು ಹಿಂದೆ ಹೇಳಿಯಾಗಿದೆ.

'ಪರಸ್ಪರ ಸ್ವೈಕದೇಶಭೇದದ ಪಾರಮಾರ್ಥಿಕತ್ವೇನ ಅಭಾವದಿಂದ ಕೂಡಿದ ಸ್ವೈಕದೇಶ ಭೇದದ ಪಾರಮಾರ್ಥಿಕತ್ವೇನ ಅಭಾವವು ಸಾಧ್ಯ' ಎನ್ನುವ ಪಕ್ಷದಲ್ಲಿ ಅಪ್ರಸಿದ್ಧಿಯ ಶಂಕೆಗೂ ಅವಕಾಶವಿಲ್ಲ. ಏಕೆಂದರೆ ವ್ಯಧಿಕರಣ ಧರ್ಮಾವಚ್ಛಿನ್ನಾಭಾವವು ಪ್ರಸಿದ್ಧವೇ ಇದೆ. ನಿರಂಶವಾದ ಗುಣಾದಿಗಳಲ್ಲಿ ವ್ಯಭಿಚಾರ ಎನ್ನಬಾರದು. ನಿರಂಶವಾದ ಪದಾರ್ಥವೆ ಅಂಗೀಕೃತವಾಗಿಲ್ಲ. ಅಂಗೀಕರಿಸುವ ಪಕ್ಷದಲ್ಲಿ 'ಸಾಂಶತ್ವೇನ ದೃಶ್ಯತ್ವ'ವನ್ನೇ ಹೇತು ಮಾಡುವುದರಿಂದ ಗುಣಾದಿಗಳಲ್ಲಿ ಹೇತು ಬಾರದಿರುವುದರಿಂದ ವ್ಯಭಿಚಾರವಿಲ್ಲ.

## ಆಕಾಶಭೇದಕ್ಕೆ ಉಪಾಧಿ ವ್ಯಂಜಕವಲ್ಲ

**ननु घटमठाद्याकाशानामन्योन्यं पारमर्थिकभेदाङ्गीकारात् साध्यविकलो दृष्टान्त इति चेन्न । तेषां स्वभावतो भिन्नत्वे घटादिसम्बन्धात्प्रागपि भेदप्रतीतिः स्यात् । घटग्रहणे दीपादीनामिव घटादीनां व्यञ्जकत्वाददोष इति चेन्न । दीपादिव्यञ्जकाभावेऽपि कदाचित् स्पार्शनेन घटप्रतीतिदर्शनात् । कुङ्कुमगन्धस्य घृतमिवैतद् व्यञ्जकम् । तथा च घटाद्यभावेऽपि न प्रतीयते भेद इति चेन्न । तत्र पृथिवीत्वेन गन्धसिद्धौ, अनुद्भूतगन्धाङ्गीकारे गौरवात् घृतमभिव्यञ्जकमङ्गीक्रियते । न चैवं प्रकृते । आकाशभेदे मानाभावात् ।**

'ಘಟಮಠಾದ್ಯಾಕಾಶಗಳಿಗೆ ಪರಸ್ಪರ ಪಾರಮಾರ್ಥಿಕಭೇದವನ್ನು ಅಂಗೀಕರಿಸುವುದರಿಂದ ದೃಷ್ಟಾಂತವು ಸಾಧ್ಯವಿಕಲ' ಎನ್ನುವುದು ಸರಿಯಲ್ಲ. ಅವು ಸ್ವಭಾವತಃ ಭಿನ್ನವಾಗಿರುವುದಾದರೆ ಘಟಸಂಬಂಧವಾಗುವುದಕ್ಕಿಂತ ಮೊದಲೂ ಭೇದಪ್ರತೀತಿ ಬರಬೇಕಾದೀತು. ಘಟಗ್ರಹಣಕ್ಕೆ ದೀಪಾದಿಗಳಂತೆ ಘಟಾದ್ಯಾಕಾಶಭೇದಗ್ರಹಣಕ್ಕೆ ಘಟಾದಿಯನ್ನು ವ್ಯಂಜಕವೆನ್ನುತ್ತೇವೆ, ಆದರಿಂದ ಈ ಆಪತ್ತಿ ಇಲ್ಲ ಎಂದರೆ, ಅದೂ ಸರಿಯಲ್ಲ. ದೀಪಾದಿ ವ್ಯಂಜಕವಿಲ್ಲದಿರುವಾಗಲೂ ಕೆಲವೊಮ್ಮೆ ಕೈಯಿಂದ ಮುಟ್ಟಿಯೂ ಘಟವನ್ನು ತಿಳಿಯುವುದು ಕಂಡಿದೆ. ಹಾಗೇ ಘಟಾದಿ ರೂಪವಾದ ವ್ಯಂಜಕವಿಲ್ಲದಿರುವಾಗಲೂ ಎಂದಾದರೂ ಘಟಾದ್ಯಾಕಾಶಭೇದ ಕಾಣಿಸಿಕೊಳ್ಳಬೇಕಾದೀತು ಎಂಬ ಆಪತ್ತಿ ಇದ್ದೇ ಇದೆ. 'ವ್ಯಂಜಕವೆಂದರೆ ಕುಂಕುಮಗಂಧಕ್ಕೆ ಘೃತದಂತೆ ಘಟಾದಿಗಳು ಆಕಾಶಭೇದಕ್ಕೆ ವ್ಯಂಜಕ. ಅದರಿಂದ ಘಟವಿಲ್ಲದಿದ್ದರೆ ಭೇದ ಪ್ರತೀತಿಯೆ ಇರುವುದಿಲ್ಲ' ಎನ್ನುವುದು ಸರಿಯಲ್ಲ. ಕುಂಕುಮಗಂಧಕ್ಕೆ ಘೃತ ಮಾತ್ರವೇ ವ್ಯಂಜಕವಲ್ಲ. ಗಂಧವು ಪೃಥಿವೀತ್ವದಿಂದಲೂ ಸಿದ್ಧವಾಗುತ್ತದೆ. ಆದರೆ ಅನುದ್ಭೂತ ಗಂಧವನ್ನು ಒಪ್ಪಿದರೆ ಗೌರವದೋಷ ಬರುವುದರಿಂದ ಮೊದಲಿದ್ದ ಉದ್ಭೂತಗಂಧವೇ ಘೃತದಿಂದ ಅಭಿವ್ಯಕ್ತವಾಗುತ್ತದೆ ಎಂದು ಒಪ್ಪಬೇಕಾಗುತ್ತದೆ. ಪ್ರಕೃತ ಆಕಾಶಭೇದ ಮೊದಲೇ ಇತ್ತೆನ್ನಲು ಪ್ರಮಾಣವಿಲ್ಲದಿರುವುದರಿಂದ ಘಟವು ಅದಕ್ಕೆ ವ್ಯಂಜಕವೆನ್ನಲಾಗುವುದಿಲ್ಲ.

नन्वाकाशांशानां घटादिसम्बन्धात् पूर्वं भेदरूपविषयसत्त्वेऽपि कारणान्तराभावादेव न भेदप्रतीतिप्रसङ्ग इत्याशङ्कते – **घटग्रहणे दीपादीनामिवेति । दीपादिव्यञ्जकाभावेऽपीति ।** एककारणाभावेऽपि कारणान्तरेण कार्योत्पत्तिदर्शनाद्घटादिव्यञ्जकाभावेऽपि कदाचिद्भेदप्रतीतिः स्यादिति भावः ।

व्यञ्जकत्वपदेन न प्रतीतिविशेषकारणत्वमात्रं विवक्षितम् । किन्तु तत्सामान्यकारणत्वम् । अतो नोक्तदोष इत्याशयेन शङ्कते – **कुङ्कुमेति ।** स्यादेवं बाधकपरिहारो यदि कुङ्कुमगन्धादाविव भेदे प्रमाणं स्यात् । तदेव तु नास्तीत्याह – **तत्रेति ।** यद्यपि पृथिवीत्वं सुरभ्यसुरभ्यवयवारब्धावयविनि गन्धं व्यभिचरति । तथापि गन्धप्रतिबन्धकशून्यत्वे सति पृथिवीत्वस्य हेतुत्वं बोध्यम् । दर्शितस्थले च विरुद्धगन्धरूपप्रतिबन्धकसत्वान्न व्यभिचारः ।

ಆಕಾಶದ ಭಾಗಗಳಲ್ಲಿ ಘಟಾದಿಸಂಬಂಧವಾಗುವುದಕ್ಕೆ ಮೊದಲು ಭೇದರೂಪವಾದ ವಿಷಯವಿದ್ದರೂ ಬೇರೆ ಪ್ರತೀತಿ ಕಾರಣವಿಲ್ಲದಿರುವುದರಿಂದ ಅದರ ಪ್ರತೀತಿ ಬರುವುದಿಲ್ಲ ಎಂದು ಶಂಕೆ. ಕತ್ತಲಲ್ಲಿ ಮೊದಲೇ ಘಟವಿದ್ದರೂ ದೀಪವೆಂಬ ವ್ಯಂಜಕವಿಲ್ಲದ ಪ್ರಯುಕ್ತ ಕಾಣುವುದಿಲ್ಲ. ಹಾಗೆ ಇದು ಎಂದು. ಈ ಶಂಕೆಗೆ ಸಮಾಧಾನ ಹೀಗೆ— ಒಂದು ಕಾರಣವಿಲ್ಲದಾಗಲೂ ಇನ್ನೊಂದು ಕಾರಣದಿಂದ ಕಾರ್ಯೋತ್ಪತ್ತಿಯಾಗುವುದು ಕಂಡಿರುವುದರಿಂದ ಘಟಾದಿ ವ್ಯಂಜಕವಿಲ್ಲದಾಗಲೂ ಬೇರೆ ಕಾರಣದಿಂದ ಆಕಾಶಭೇದ ಪ್ರತೀತಿಯಾಗಲಿ. ಏಕೆ ಆಗುವುದಿಲ್ಲ? ಎಂದು.

'ದೀಪವು ಘಟ ಚಾಕ್ಷುಷಪ್ರತೀತಿಗೆ ಮಾತ್ರ ಕಾರಣ. ಹೊರತು ಸ್ಪಾರ್ಶನಪ್ರತೀತಿಗೆ ಕಾರಣವಲ್ಲ. ಹಾಗೆ ಆಕಾಶ ಭೇದಕ್ಕೆ ಘಟಾದಿಗಳು ವ್ಯಂಜಕವೆಂದರೆ ಒಂದು ಪ್ರತೀತಿ ವಿಶೇಷಕ್ಕೆ ಮಾತ್ರ ಕಾರಣವಾಗಿದೆ ಎಂದಿಷ್ಟೇ ಅರ್ಥವಲ್ಲ. ಪ್ರತೀತಿಗೆ ಸಾಮಾನ್ಯಕಾರಣ ಎಂದರ್ಥ. ಅದಿಲ್ಲದಿದ್ದರೆ ಬೇರೆ ಕಾರಣದಿಂದಲೂ ಪ್ರತೀತಿ ಬರಲಾರದೆಂದು. ಆದರಿಂದ ದೋಷವಿಲ್ಲ' ಎಂದು ಶಂಕೆ. ಇದಕ್ಕೆ ಉದಾಹರಣೆ ಕುಂಕುಮದ ಗಂಧಕ್ಕೆ ಘೃತವು ವ್ಯಂಜಕ. ಅದಿಲ್ಲದಿದ್ದರೆ ಬೇರೆ ಕಾರಣದಿಂದಲೂ ಗಂಧಪ್ರತೀತಿ ಬರಲಾರದು ಎಂದು. ಇದಕ್ಕೆ ಪರಿಹಾರ— ಕುಂಕುಮದಲ್ಲಿ ಗಂಧ ಮೊದಲೇ ಇತ್ತು ಎನ್ನುವುದು ಪ್ರಮಾಣ ಸಿದ್ಧವಾಗಿದೆ. ಪೃಥಿವೀತ್ವ ಹೇತುವಿನಿಂದ ಅನುಮಾನ ಮಾಡಬಹುದಾಗಿದೆ. ಆದರಿಂದ ಘೃತವು ವ್ಯಂಜಕ. ಆದರೆ ಪ್ರಕೃತ ಆಕಾಶಭೇದ

ಘಟಸಂಬಂಧವಾಗುವುದಕ್ಕೆ ಮೊದಲೇ ಇತ್ತು ಎನ್ನಲು ಏನೂ ಪ್ರಮಾಣವಿಲ್ಲ ಆದರಿಂದ ಘಟವನ್ನು ವ್ಯಂಜಕ ಎನ್ನಲಾಗದು ಎಂದು.

ಯದ್ಯಪಿ ಪೃಥಿವೀತ್ವದಿಂದ ಗಂಧ ಸಿದ್ಧವಾಗುತ್ತದ ಎನ್ನುವುದು ಸರಿಯಲ್ಲ. ಸುರಭಿ ಅಸುರಭಿ ಕಪಾಲದ್ವಯದಿಂದಾದ ಘಟದಲ್ಲಿ ಎರಡೂ ಗಂಧವಿರುವುದಿಲ್ಲ. ಏಕೆಂದರೆ ಅವು ಪರಸ್ಪರ ಪ್ರತಿಬಂಧಕಗಳು. ಅದರಿಂದ ಗಂಧವಿಲ್ಲ, ಪೃಥಿವೀತ್ವವಿದೆ ಎಂದು ವ್ಯಭಿಚಾರ. ಆದರೂ ಗಂಧಪ್ರತಿಬಂಧಕ ಶೂನ್ಯವಾದ ಪೃಥಿವೀತ್ವವನ್ನು ಗಂಧಕ್ಕೆ ಹೇತುವಾಗಿ ವಿವಕ್ಷೆ ಮಾಡಿರುವುದರಿಂದ ವ್ಯಭಿಚಾರವಿಲ್ಲ. ಏಕೆಂದರೆ ಸುರಭಿ ಅಸುರಭಿ ಕಪಾಲಗಳಿಂದಾದ ಘಟದಲ್ಲಿ ವಿರುದ್ಧ ಗಂಧರೂಪವಾದ ಪ್ರತಿಬಂಧಕವಿದೆ. ಪ್ರತಿಬಂಧಕ ಶೂನ್ಯವಾದ ಪೃಥಿವೀತ್ವವಿಲ್ಲ.

**नन्वेवं गन्धमात्रसिद्धावपि घृताभिव्यङ्ग्योद्भूतगन्धस्य कथं प्रमाणसिद्धत्वमत आह — अनुद्भूतेति । गौरवादिति । घृतसम्बन्धे सति पूर्वगन्धविनाशस्योद्भूतगन्धोत्पादस्य च कल्पनीयतया गौरवादित्यर्थः। न चाविद्यमान एवोद्भूतगन्धो घृतोपाधिसम्बन्धात् प्रतीयतामिति वाच्यम्। बाधकं विना प्रतीतेर्भ्रमत्वायोगात् । अत्र 'परिशेषेणोद्भूतगन्धस्यैव सिद्ध्या घृतसम्बन्धात् प्रागपि तत्प्रतीतिवारणाये'ति पूरणीयम् । मानाभावादिति । न च घटमठाद्याकाशभेदप्रतीतिरेव तत्र मानमिति वाच्यम् । तस्य भ्रमत्वेनाप्युपपत्तेर्वस्त्वन्तरकल्पने गौरवादिति भावः ।**

ಪೃಥಿವೀತ್ವದಿಂದ ಗಂಧ ಮಾತ್ರ ಸಿದ್ಧವಾದರೂ ಘೃತದಿಂದ ವ್ಯಕ್ತವಾಗುವ ಉದ್ಭೂತ ಗಂಧ ಹೇಗೆ ಪ್ರಮಾಣ ಸಿದ್ಧವಾಗುತ್ತದೆ? ಎಂದರೆ ಹೇಳುತ್ತಾನೆ— ಮೊದಲಿಗೆ ಅನುದ್ಭೂತ ಗಂಧವಿತ್ತು, ಘೃತ ಸಂಬಂಧದಿಂದ ಅದು ನಾಶವಾಗಿ ಬೇರೆ ಉದ್ಭೂತಗಂಧ ಹುಟ್ಟಿತು ಎನ್ನುವುದು ಗೌರವಗ್ರಸ್ತ. ಅದರಿಂದ ಮೊದಲಿದ್ದ ಗಂಧ ಉದ್ಭೂತವೆ. ಅದು ಘೃತದಿಂದ ವ್ಯಕ್ತವಾಯಿತೆನ್ನಬೇಕು. ಎಂದೂ ಇಲ್ಲದ ಉದ್ಭೂತಗಂಧ ಘೃತ ಎಂಬ ಉಪಾಧಿ ಸಂಬಂಧ ಪ್ರಯುಕ್ತವಾಗಿ ಕಾಣುತ್ತದೆ ಎನ್ನೋಣ ಎಂದರೆ ಅದು ಸರಿಯಲ್ಲ. ಇದು ಭ್ರಮವೆಂದಂತಾಗುವುದು. ಬಾಧಕವಿಲ್ಲದಿರುವಾಗ ಪ್ರತೀತಿಯನ್ನು ಭ್ರಮವೆನ್ನಲಾಗದು.

'ಪೃಥಿವೀತ್ವದಿಂದ ಅನುದ್ಭೂತಗಂಧ ಸಿದ್ಧವಾಗುವುದು' ಎಂದರೆ ಘೃತಸಂಬಂಧವಾದಾಗ ಅದು ನಾಶವಾಗಿ ಉದ್ಭೂತಗಂಧ ಬೇರೆ ಉತ್ಪನ್ನವಾಯಿತೆನ್ನಬೇಕು. ಅದು ಗೌರವಗ್ರಸ್ತವಾದ್ದರಿಂದ ಉದ್ಭೂತಗಂಧವೇ ಪೃಥಿವೀತ್ವದಿಂದ ಸಿದ್ಧವಾಗುವುದು ಎಂದು ಪರಿಶೇಷ ಪ್ರಮಾಣದಿಂದ

ಸಿದ್ಧವಾಗುವುದರಿಂದ, ಘೃತಸಂಬಂಧವಾಗುವುದಕ್ಕೆ ಮೊದಲು ಅದರ ಪ್ರತೀತಿವಾರಣಕ್ಕಾಗಿ ಘೃತವನ್ನು ವ್ಯಂಜಕವೆಂದು ಒಪ್ಪಬೇಕು.

'ಆಕಾಶಭೇದದಲ್ಲಿ ಪ್ರಮಾಣವಿಲ್ಲ, ಏಕೆ? ಘಟಮಠಾದ್ಯಾಕಾಶ ಭೇದಪ್ರತೀತಿಯೇ ಪ್ರಮಾಣ' ಎನ್ನುವುದು ಸರಿಯಲ್ಲ. ಆ ಪ್ರತೀತಿಯನ್ನು ಭ್ರಮವೆಂದೊಪ್ಪಿದರೂ ಉಪಪನ್ನವಾಗುತ್ತದೆ. ಆಕಾಶಭೇದವೆಂಬ ವಸ್ತ್ವಂತರವನ್ನು ಕಲ್ಪನೆ ಮಾಡಿದರೆ ಗೌರವದೋಷ ಬರುತ್ತದೆ.

**ಆಕಾಶಭೇದದಲ್ಲಿ ಪ್ರಮಾಣವಿಲ್ಲ**

**ननु कथमाकाशभेदे प्रमाणाभावः? इह पक्षी नेह पक्षीति प्रतीतिरेव मानमिति चेन्न। आलोकमण्डलविषयत्वात्तस्याः। इहाऽलोक इत्यत्रालोकावयवानामिहेति निर्देशात्। नेहाऽलोक इत्यत्र गगनस्य निर्देशात्। इहाऽलोक इति प्रतीतिरिह गगनमिति प्रतीतिवदौपचारिकी वा।**

**'ಆಕಾಶ ಭೇದದಲ್ಲಿ ಪ್ರಮಾಣವಿಲ್ಲವೆನ್ನುವುದು ಹೇಗೆ? 'ಇಲ್ಲಿ ಹಕ್ಕಿ ಇದೆ, ಇಲ್ಲಿ ಇಲ್ಲ' ಎಂದು ಭೇದ ಪ್ರತೀತಿಯೆ ಪ್ರಮಾಣವಾಗಿದೆ' ಎಂದರೆ ಅದು ಸರಿಯಲ್ಲ. ಬೆಳಕಿನ ಬೇರೆ ಬೇರೆ ಪ್ರದೇಶಗಳು ಈ ಪ್ರತೀತಿಗೆ ವಿಷಯ. 'ಇಲ್ಲಿ ಬೆಳಕು' ಎನ್ನುವ ಪ್ರತೀತಿಯಲ್ಲಿ ಬೆಳಕಿನ ಅವಯವವೆ 'ಇಲ್ಲಿ' ಎಂದು ನಿರ್ದೇಶಿಸಲ್ಪಡುತ್ತದೆ. 'ಇಲ್ಲಿ ಬೆಳಕು ಇಲ್ಲ' ಎಂಬಲ್ಲಿ 'ಇಲ್ಲಿ' ಎಂದು ಆಕಾಶವು ನಿರ್ದೇಶಿಸಲ್ಪಡುತ್ತದೆ. 'ಇಲ್ಲಿ ಬೆಳಕೆಂ'ದು ಪ್ರತೀತಿಯು 'ಇಲ್ಲಿ ಆಕಾಶ' ಎನ್ನುವ ಪ್ರತೀತಿಯಂತೆ ಔಪಚಾರಿಕವೆಂದೂ ಹೇಳಲು ಸಾಧ್ಯವಿದೆ.**

मानमित्यस्याकाशभेद इत्यादिः। यद्यपीह पक्षी, नेह पक्षीति प्रतीतेः पक्षितदभावयोराकाशवृत्तित्वावगाहितया नाकाशभेदे मानत्वम्। तथापि तादृशप्रतीतिर्विभिन्नदेशवृत्तित्वविषया, विरुद्धधर्मविषयत्वात्, इह घटत्वं नेह घटत्वमिति प्रतीतिवदित्यनुमानोत्थापकतया मानत्वं बोध्यम्।

वस्तुतः पक्ष्यभावस्य पक्षिमद्देशभेदसमनियततया तदभिन्नत्वात्तदवगाहिप्रतीतेस्तत्र मानत्वमित्यवधेयम्।

**अत्र यद्यपि अविद्यमानमेवाकाशभेदमालोकाद्युपाधिर्भासयतीति वक्तुं शक्यम् । तथापि लाघवमनुसृत्याह – आलोकेति ।**

'ಪ್ರಮಾಣಾಭಾವ ಹೇಗೆ?' ಎನ್ನುವಲ್ಲಿ ಮೊದಲಿಗೆ 'ಆಕಾಶಭೇದ ವಿಷಯದಲ್ಲಿ' ಎಂದು ಸೇರಿಸಬೇಕು.

ಯದ್ಯಪಿ ಇಲ್ಲಿ ಹಕ್ಕಿ ಇದೆ. ಇಲ್ಲಿ ಇಲ್ಲ ಎಂಬ ಪ್ರತೀತಿಯು ಪಕ್ಷಿ ಮತ್ತು ಅದರ ಅಭಾವಗಳು ಆಕಾಶದಲ್ಲಿ ಇವೆ ಎನ್ನುತ್ತದೆ ಹೊರತು ಆಕಾಶದಲ್ಲಿ ಭೇದವಿದೆ ಎನ್ನುವಲ್ಲಿ ಅದು ಪ್ರಮಾಣವಾಗಲಾರದು. ಆದರೂ 'ಈ ಪ್ರತೀತಿಯು ಆಕಾಶದಲ್ಲಿ ಸತ್ಯವಾದ ಬೇರೆ ಬೇರೆ ಪ್ರದೇಶದಲ್ಲಿ ಹಕ್ಕಿ, ಮತ್ತು ಅದರ ಅಭಾವಗಳಿವೆ ಎಂದು ವಿಷಯೀಕರಿಸುತ್ತದೆ. ಏಕೆಂದರೆ ಅದು ಎರಡು ವಿರುದ್ಧ ಧರ್ಮಗಳನ್ನು ವಿಷಯೀಕರಿಸುತ್ತಿದೆ. ಘಟದಲ್ಲಿ ಘಟತ್ವವಿದೆ ಪಟದಲ್ಲಿ ಇಲ್ಲ ಎಂದು ಬೇರೆಬೇರೆ ಸ್ಥಳಗಳನ್ನು ವಿಷಯೀಕರಿಸುವ, 'ಇಲ್ಲಿ ಘಟತ್ವವಿದೆ, ಇಲ್ಲಿ ಘಟತ್ವವಿಲ್ಲ' ಎಂಬ ಪ್ರತೀತಿಯಂತೆ' ಎಂಬ ಅನುಮಾನಕ್ಕೆ ಅವಕಾಶ ಮಾಡಿಕೊಡುವುದರಿಂದ ಅದು ಪ್ರಮಾಣವಾಗುತ್ತದೆ ಎಂದು ತಿಳಿಯಬೇಕು.

ವಸ್ತುತಃ ಪಕ್ಷ್ಯಭಾವವು ಪಕ್ಷಿಮದ್ದೇಶಭೇದಕ್ಕೆ ಸಮನಿಯತವಾಗಿರುವುದರಿಂದ ಅದಕ್ಕೆ ಅಭಿನ್ನವೆ ಆಗಿರುವುದರಿಂದ 'ಪಕ್ಷ್ಯಭಾವ' ವಿಷಯಕಪ್ರತೀತಿಯೆ ಆಕಾಶದಲ್ಲಿ ಸತ್ಯವಾದ ದೇಶಭೇದಗಳಿರುವಲ್ಲಿ ಪ್ರಮಾಣವಾಗುವುದೆಂದು ತಿಳಿಯಬೇಕು.

ಅಸತ್ಯವಾದ ಆಕಾಶಪ್ರದೇಶಭೇದವನ್ನೇ ಬೆಳಕು ಮುಂತಾದ ಉಪಾಧಿಯು ತೋರಿಸುತ್ತದೆ ಎಂದು ಯದ್ಯಪಿ ಇಲ್ಲಿ ಹೇಳಲು ಶಕ್ಯವಿದೆ. ಆದರೂ ಬೆಳಕಿನಿಂದ ಕಾಣುವ ಅಸತ್ಯ ಆಕಾಶಪ್ರದೇಶಗಳು ಪ್ರತೀತಿಗೆ ವಿಷಯ ಎನ್ನುವುದಕ್ಕಿಂತ ಲಾಘವಕ್ಕಾಗಿ 'ಬೆಳಕಿನ ಪ್ರದೇಶಗಳೇ ಈ ಪ್ರತೀತಿಗೆ ವಿಷಯ' ಎನ್ನುತ್ತಾನೆ, ಅದ್ವೈತಿ.

**नन्वेवमपीहाऽलोको नेहाऽलोक इति प्रतीतिरेव मानान्तरमास्ताम् । स्वस्य स्वाधारत्वानुपपत्त्या तस्याः पूर्ववदालोकमण्डलविषयत्वासम्भवादित्यत आह – इहाऽलोक इति । गगनस्यालोकाधारत्वाभावेन तद्विषयत्वासम्भवादिति भावः । गगनस्येति । आलोकावयवानाम् आलोकाभावाधारत्वासम्भवेन तद्विषयत्वायोगादिति भावः । नन्वेवमिहाऽलोक इति संयोगसंसर्गावगाहिप्रत्ययो न स्यात् । अवयवावयविनोस्तदभावात् । न च गगनस्यैव तद्विषयत्वम् । गगनालोकयोः**

**संयोगसत्त्वेऽपि संयोगेनाधाराधेयभावाभावादत आह — औपचारिकी वेति ।** गगनसम्बन्धित्वरूपेहशब्दगौणार्थविषयणीत्यर्थः । प्रयोजनाभावे कथमौपचारिकप्रयोग इत्यत उक्तम् — **गगनमिति । प्रतीतिवदिति ।** यथा तत्रेदमित्यर्थ इहेति प्रयोगो रूढोपचारत्वान्न प्रयोजनविशेषमपेक्षते तथेहापीत्यर्थः । यद्वा, नन्ववयवावयविनोराधाराधेयभावव्यवहारोऽनुभवविरुद्धः । कपाले घट इत्यादिप्रतीतेरसिद्धेः । अतः कथमालोकावयवानामिहेति निर्देश इत्यत आह — **औपचारिकी वेति ।** अस्याप्ययमालोक इत्येवार्थ इति भावः ।

'ಹೀಗಿದ್ದರೂ ಇಲ್ಲಿ ಬೆಳಕಿದೆ, ಇಲ್ಲಿ ಇಲ್ಲ ಎಂಬ ಪ್ರತೀತಿಯೆ ಸತ್ಯವಾದ ಆಕಾಶಭೇದ ವಿಷಯದಲ್ಲಿ ಬೇರೆ ಪ್ರಮಾಣವೆಂದಾಗಲಿ. ಏಕೆಂದರೆ ತನಗೆ ತಾನು ಆಧಾರವಾಗುವುದು ಕೂಡದಿರುವುದರಿಂದ ಹಿಂದಿನಂತೆ ಇಲ್ಲಿಯೂ ಬೆಳಕಿನ ಪ್ರದೇಶಗಳು ವಿಷಯ ಎನ್ನುವುದು ಅಸಂಭವ' ಎಂದರೆ ಹೇಳುತ್ತಾನೆ— 'ಇಲ್ಲಿ ಬೆಳಕಿದೆ' ಎನ್ನುವ ಪ್ರತೀತಿಯು ಬೆಳಕಿನ ಅವಯವವನ್ನು 'ಇಲ್ಲಿ' ಎಂದು ನಿರ್ದೇಶಿಸುತ್ತದೆ' ಎಂದು. ಏಕೆಂದರೆ ಆಕಾಶಭೇದವಿಲ್ಲದಿರುವುದರಿಂದ, ಬೆಳಕಿನ ಅಭಾವಕ್ಕೆ ಆಧಾರವಾಗುವ ಆಕಾಶವು ಬೆಳಕಿಗೆ ಆಧಾರವಾಗದುದರಿಂದ ಮತ್ತು ಆಕಾಶದಲ್ಲಿ ಬೆಳಕಿನ ಸಂಯೋಗವಿದ್ದರೂ ಆ ಸಂಯೋಗ ವೃತ್ತಿನಿಯಾಮಕವಲ್ಲದ್ದರಿಂದ ಆಧಾರವಾಗಿ ಆಕಾಶವು ಈ ಪ್ರತೀತಿಗೆ ವಿಷಯುವಾಗುವುದು ಅಸಂಭವ.

'ಇಲ್ಲಿ ಬೆಳಕು ಇಲ್ಲ' ಎಂಬಲ್ಲಿ 'ಇಲ್ಲಿ' ಎಂದು ಆಕಾಶವು ನಿರ್ದೇಶಿಸಲ್ಪಡುತ್ತದೆ ಹೊರತು ಬೆಳಕಿನ ಅವಯುವವಲ್ಲ, ಬೆಳಕಿನ ಅವಯುವಗಳು ಬೆಳಕಿನ ಅಭಾವಕ್ಕೆ ಆಧಾರವಾಗುವುದು ಅಸಂಭವವಾದ್ದರಿಂದ ಪ್ರತೀತಿಯು ಬೆಳಕಿನ ಅವಯುವಗಳನ್ನು 'ಇಲ್ಲಿ' ಎಂದು ವಿಷಯೀಕರಿಸುವುದು ಕೂಡುವುದಿಲ್ಲ.

'ಇಲ್ಲಿ ಬೆಳಕಿದೆ' ಎಂದು ಬೆಳಕಿಗೆ ಬೆಳಕಿನ ಅವಯುವದಲ್ಲಿ ಸಂಯೋಗ ಸಂಸರ್ಗವನ್ನು ವಿಷಯೀಕರಿಸುವ ಪ್ರತೀತಿ ಉಂಟಾಗಲಾರದು. ಏಕೆಂದರೆ ಅವಯುವ ಅವಯುವಿಗಳಿಗೆ ಸಂಯೋಗ ಸಂಸರ್ಗವಿಲ್ಲ, 'ಆಕಾಶವೇ ಬೆಳಕಿಗೆ ಸಂಯೋಗ ಸಂಸರ್ಗದಿಂದ ಆಧಾರವೆಂದು ಪ್ರತೀತಿಯಲ್ಲಿ ಕಾಣಲಿ' ಎನ್ನುವಂತಿಲ್ಲ. ಆಕಾಶ ಮತ್ತು ಬೆಳಕುಗಳಿಗೆ ಸಂಯೋಗವಿದ್ದರೂ ಸಂಯೋಗ ಸಂಬಂಧ ದಿಂದ ಅವುಗಳಿಗೆ ಆಧಾರ ಆಧೇಯಭಾವವಿಲ್ಲ. ಆದರಿಂದ ಹೇಳುತ್ತಾನೆ, 'ಅಥವಾ ಇದು ಔಪಚಾರಿಕ' ಎಂದು. 'ಬೆಳಕಿನ ಆಧಾರ'ವೆಂದರೆ 'ಬೆಳಕಿನ ಸಂಬಂಧಿ' ಎಂದಿಷ್ಟೇ ಅರ್ಥ. ಸಂಬಂಧಿತ್ವರೂಪ ಗೌಣಾರ್ಥದಲ್ಲಿ 'ಇಲ್ಲಿ' ಎಂದು ಆಕಾಶವು ಆಧಾರವಾಗಿ ವಿಷಯವಾಗಿದೆ ಎಂದರ್ಥ.

'ಔಪಚಾರಿಕ ಪ್ರಯೋಗವನ್ನು ಪ್ರಯೋಜನವಿಲ್ಲದಿದ್ದಾಗ ಏಕೆ ಮಾಡುತ್ತಾರೆ' ಎಂಬ ಆಕ್ಷೇಪಕ್ಕೆ ಉತ್ತರವಾಗಿ ಹೇಳುತ್ತಾನೆ 'ಇಲ್ಲಿ ಆಕಾಶ' ಎಂಬ ಪ್ರತೀತಿಯಂತೆ ಔಪಚಾರಿಕ' ಎಂದು. 'ಇಲ್ಲಿ ಆಕಾಶ' ಎಂಬಲ್ಲಿ 'ಇಲ್ಲಿ' ಎಂದು ಆಧಾರಸಪ್ತಮೀ ಪ್ರಯೋಗ ಔಪಚಾರಿಕ. 'ಇದು ಆಕಾಶ' ಎಂದೇ ಅದರ ಅರ್ಥ. ಆದರೂ ಅದಕ್ಕೆ ಪ್ರಯೋಜನವಿಲ್ಲ. ಏಕೆಂದರೆ ಇದು ರೂಢೋಪಚಾರ. ಪ್ರಯೋಜನವೇನಾದರೊಂದು ಅದಕ್ಕೆ ಬೇಕಾಗಿರುವುದಿಲ್ಲ. ಹಾಗೇ 'ಇಲ್ಲಿ ಆಕಾಶದಲ್ಲಿ ಬೆಳಕು ಇದೆ' ಎನ್ನುವುದೂ ಔಪಚಾರಿಕ, ರೂಢೋಪಚಾರವಾದ್ದರಿಂದ ಪ್ರಯೋಜನವು ಬೇಕಾಗಿಲ್ಲ. 'ಬೆಳಕು ಆಕಾಶ ಸಂಬಂಧಿ'ಯಾಗಿದೆ ಎಂದರ್ಥ ಹೊರತು ಆಕಾಶದಲ್ಲಿ ಆಶ್ರಿತವಾಗಿ ಇದೆ ಎಂದಲ್ಲ.

ಅಥವಾ ಹೀಗೆ ಹೇಳಬೇಕು. 'ಇಲ್ಲಿ ಬೆಳಕು' ಎಂದರೆ 'ಬೆಳಕಿನ ಅವಯವದಲ್ಲಿ ಬೆಳಕು ಇದೆ' ಎಂದರ್ಥ ಕೂಡುವುದಿಲ್ಲ. ಅವಯವ ಅವಯವಿಗಳಿಗೆ ಆಧಾರ ಆಧೇಯಭಾವದ ವ್ಯವಹಾರ ಅನುಭವವಿರುದ್ಧ. 'ಕಪಾಲದಲ್ಲಿ ಘಟ' ಎಂಬ ಪ್ರತೀತಿ ಯಾರಿಗೂ ಇರುವುದಿಲ್ಲ. ಕಪಾಲಘಟಗಳಿಗೆ ಅಭೇದವಿದೆ. ಆದರಿಂದ 'ಇಲ್ಲಿ ಬೆಳಕು' ಎಂಬಲ್ಲಿ 'ಇಲ್ಲಿ' ಎಂದು ಬೆಳಕಿನ ಅವಯವದ ನಿರ್ದೇಶ ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ 'ಅಥವಾ ಇದು ಔಪಚಾರಿಕ ಪ್ರಯೋಗ' ಎನ್ನುತ್ತಾನೆ. 'ಇಲ್ಲಿ ಆಕಾಶ' ಎಂದರೆ 'ಇದು ಆಕಾಶ' ಎಂಬಂತೆ. 'ಇಲ್ಲಿ ಬೆಳಕು' ಎಂದರೆ 'ಇದು ಬೆಳಕು' ಎಂದೇ ಅರ್ಥ ಅಭೇದರೂಪ ಗೌಣಾರ್ಥದಲ್ಲಿ ಔಪಚಾರಿಕ ಪ್ರಯೋಗ ಎಂದು ಅಭಿಪ್ರಾಯ.

'ಹೀಗೆ 'ಇಲ್ಲಿ ಹಕ್ಕಿ ಇದೆ, ಇಲ್ಲಿ ಇಲ್ಲ' ಎನ್ನುವ ಪ್ರತೀತಿಯಿಂದ ಆಕಾಶಭೇದ ಸಿದ್ಧಿಸದಿದ್ದರೂ ಘಟಾಕಾಶಾದಿ ವ್ಯವಹಾರಬಲದಿಂದಲೇ ಆಕಾಶದಲ್ಲಿ ಸ್ವಾಭಾವಿಕ ಅಂಶಸಿದ್ಧಿ' ಎಂದು ಶಂಕಾ ಮಾಡಿಕೊಳ್ಳುತ್ತಾನೆ— 26-9-21

(143) **नन्वथाऽपि घटादिरूपोपाधिः किं गगनमात्रं स्पृशति उत गगनैकदेशम् । नाद्यः सर्वोऽपि घटाकाशः स्यात् । द्वितीये स्वाभाविकांशसिद्धिरिति चेन्न ।**

**'ಘಟ ಮುಂತಾದ ಉಪಾಧಿಯು ಸ್ಪರ್ಶಿಸುವುದು ಇಡಿ ಆಕಾಶವನ್ನೆ? ಅಥವಾ ಆಕಾಶದ ಅವಯವವನ್ನೆ? ಇಡಿ ಆಕಾಶವನ್ನು ಸ್ಪರ್ಶಿಸುವುದೆಂದರೆ ಇಡಿ ಆಕಾಶ ಘಟಾಕಾಶವಾಗಬೇಕಾಗುವುದು. ಆಕಾಶದ ಅವಯವವನ್ನು ಮಾತ್ರ ಸ್ಪರ್ಶಿಸುವುದಾದರೆ ಆಕಾಶದಲ್ಲಿ ಸ್ವಾಭಾವಿಕವಾಗಿ ಅಂಶಗಳಿವೆ ಎಂದಾಗುವುದು'—ಇದು ಸರಿಯಲ್ಲ.**

स्यादेतत् । घटादेर्घटाकाशादिव्यवहारहेतुत्वान्यथानुपपत्त्यैवाकाश-भेदः सेत्स्यति । तथाहि—आकाशसम्बद्धस्य सर्वाकाशसम्बद्धस्य वा घटादेर्घटाकाशादिव्यवहारहेतुत्वे सर्वाकाशस्य घटाकाशत्वापत्तेरेकदेश-

**सम्बद्धस्यैव तथात्वं वाच्यम् । एकदेशस्यौपाधिकत्वे चैवमेवानवस्थानात् स्वाभाविकत्वस्यैव वाच्यतया तन्निर्वाहकस्वाभाविकभेदसिद्धिरित्याशङ्कते — नन्विति । अथापि उक्तप्रतीत्यापि भेदसिद्ध्यनङ्गीकारेऽपि । उपाधिर्घटाकाशादिव्यवहारहेतुः ।**

ಘಟಾದಿ ಉಪಾಧಿ ಅಂದರೆ 'ಘಟಾಕಾಶ' ಮುಂತಾದ ಶಬ್ದವ್ಯವಹಾರಕ್ಕೆ ಕಾರಣವಾಗುವುದು ಬೇರೆ ರೀತಿ ಕೂಡುವುದಿಲ್ಲವಾದ್ದರಿಂದಲೆ ಆಕಾಶಭೇದವು ಸಿದ್ಧಿಸುವುದು. ಅದು ಹೇಗೆಂದರೆ, ಆಕಾಶದ ಸಂಬಂಧವೆ ಇಲ್ಲದೆ ಅಥವಾ ಇಡಿ ಆಕಾಶದ ಸಂಬಂಧವನ್ನು ಹೊಂದಿಯೇ ಘಟಾದಿಗಳು ಘಟಾಕಾಶ ಎಂದು ಮುಂತಾಗಿ ವ್ಯವಹಾರ ಉಂಟುಮಾಡುವ ಪಕ್ಷದಲ್ಲಿ ಇಡೀ ಆಕಾಶವು ಘಟಾಕಾಶವೆನಿಸಬೇಕಾಗುವುದು. ಅದರಿಂದ ಆಕಾಶದ ಒಂದು ಅಂಶಕ್ಕೆ ಘಟವು ಸಂಬಂಧಿಸಿಯೇ ಘಟಾಕಾಶವ್ಯವಹಾರಕ್ಕೆ ಕಾರಣವಾಗುತ್ತದೆ ಎನ್ನಬೇಕು. ಆಕಾಶದ ಅಂಶವು ಸ್ವಾಭಾವಿಕವಲ್ಲ, ಉಪಾಧಿಜನ್ಯವಾಗಿದೆ ಎಂದರೆ ಆ ಉಪಾಧಿಯು ಆ ಅಂಶಕ್ಕೆ ಮಾತ್ರ ಸಂಬಂಧಿಸಿದೆಯೆ? ಇಡಿ ಆಕಾಶಕ್ಕೆ ಸಂಬಂಧಿಸಿದೆಯೆ? ಅಂಶಕ್ಕೆ ಮಾತ್ರ ಸಂಬಂಧಿಸಿದೆ ಎನ್ನಬೇಕು. ಆ ಅಂಶವೂ ಉಪಾಧಿ ಜನ್ಯವಾದರೆ ಪುನಃ ಇದೇ ಪ್ರಶ್ನೆ. ಹೀಗೆ ಅನವಸ್ಥಾ ಬರುವುದರಿಂದ ಆಕಾಶದ ಅಂಶವು ಸ್ವಾಭಾವಿಕವೆ ಹೊರತು ಉಪಾಧಿಜನ್ಯವಲ್ಲ ಎಂದೇ ಹೇಳಬೇಕಾಗುವುದು. ಸ್ವಾಭಾವಿಕ ಅಂಶ ನಿರ್ವಾಹಕವಾಗಿ ಸ್ವಾಭಾವಿಕ ಭೇದವು ಸಿದ್ಧವಾಗುವುದು ಎಂದು ಶಂಕೆ— 'ಘಟ ಮುಂತಾದ ಉಪಾಧಿಯು ಸ್ಪರ್ಶಿಸುವುದು ಇಡಿ ಆಕಾಶವನ್ನೇ ಅಥವಾ ಆಕಾಶದ ಅವಯವವನ್ನೆ?'ಎಂದು.

'ಅಥಾಪಿ' ಎಂದರೆ 'ಇಲ್ಲಿ ಹಕ್ಕಿ ಇದೆ, ಇಲ್ಲಿ ಇಲ್ಲ' ಎಂಬ ಪ್ರತೀತಿಯಿಂದ ಆಕಾಶಭೇದ ಸಿದ್ಧಿಸದೆ ಹೋದರೂ' ಎಂದರ್ಥ. 'ಉಪಾಧಿ' ಎಂದರೆ 'ಘಟಾಕಾಶ' ಎಂದು ಮುಂತಾಗಿ ವ್ಯವಹಾರ ಹೇತು ಎಂದರ್ಥ.

**गगनमात्रं स्पृशतीत्यस्य किमखिलं गगनं स्पृशतीत्यर्थः किं वा निखिलावयवेषु गगनमित्युत निखिलोपाध्यवच्छेदेन गगनमित्याहोस्विदुपाध्यनवच्छिन्नं गगनमिति ? नाद्यः । गगनस्यैकत्वात्। न द्वितीयः । निरवयवत्वात् । न तृतीयः । अनुभवविरोधात् । चतुर्थस्तावदङ्गीक्रियते । तत्र च नोक्तदोष इत्याह — नेति ।**

'ಗಗನಮಾತ್ರ'ವನ್ನು ಸ್ಪರ್ಶಿಸುವುದೆ? ಎಂದರೆ 'ಮಾತ್ರ' ಶಬ್ದದಿಂದ ನಾಲ್ಕು ಬಗೆ

ಅರ್ಥಬರಹುದು— ಎಲ್ಲ ಆಕಾಶವನ್ನು ಸ್ಪರ್ಶಿಸುವುದೆಂದರ್ಥವೆ? ಎಲ್ಲ ಅವಯವಗಳಲ್ಲಿ ಗಗನವನ್ನು ಸ್ಪರ್ಶಿಸುವುದೆಂದರ್ಥವೆ? ಎಲ್ಲ ಉಪಾಧ್ಯವಚ್ಛೇದದಿಂದ ಆಕಾಶವನ್ನು ಸ್ಪರ್ಶಿಸುವುದೆಂದರ್ಥವೆ? ಯಾವ ಉಪಾಧಿಯ ಅವಚ್ಛೇದವೂ ಇಲ್ಲದ ಇಡಿ ಮಹಾ ಆಕಾಶವನ್ನು ಸ್ಪರ್ಶಿಸುವುದೆಂದರ್ಥವೆ? ಎಂದು. ಎಲ್ಲ ಆಕಾಶವನ್ನು ಸ್ಪರ್ಶಿಸುವುದೆಂದರೆ ಅದಕ್ಕೆ ಅರ್ಥವಿಲ್ಲ. ಆಕಾಶವಿರುವುದು ಒಂದೇ. ಅನೇಕವಿಲ್ಲ. ಎಲ್ಲ ಆಕಾಶವೆಂಬುದಿಲ್ಲ. ಎಲ್ಲ ಅವಯವಗಳಲ್ಲಿ ಸ್ಪರ್ಶಿಸುವುದೆಂದರೂ ಅವಯವವೆ ಇಲ್ಲದ ಆಕಾಶದಲ್ಲಿ ಅದು ಸಂಭವವಿಲ್ಲ. ಎಲ್ಲ ಉಪಾಧ್ಯವಚ್ಛೇದದಿಂದ ಸ್ಪರ್ಶಿಸುವುದೆಂದರೆ ಅನುಭವವಿರೋಧ. ಒಂದು ಘಟ ಆ ಉಪಾಧಿಯ ಅವಚ್ಛೇದದಿಂದ ಮಾತ್ರ ಸ್ಪರ್ಶಿಸುವುದು ಹೊರತು ಎಲ್ಲ ಉಪಾಧಿಗಳ ಅವಚ್ಛೇದದಿಂದ ಸ್ಪರ್ಶಿಸಲಾರದು. ಯಾವ ಉಪಾಧಿಯ ಅವಚ್ಛೇದವಿಲ್ಲದೆ ಇಡಿ ಮಹಾಕಾಶವನ್ನೇ ಸ್ಪರ್ಶಿಸುವುದೆಂದರೆ ಅದನ್ನು ಒಪ್ಪುತ್ತೇವೆ. ಅದರಲ್ಲಿ ಹಿಂದೆ ಹೇಳಿದ ದೋಷವಿಲ್ಲ' ಎಂದು ಹೇಳುತ್ತಿದ್ದಾನೆ— 'ನ' ಇದು ಸರಿಯಲ್ಲ ಎಂದು.

**सर्वोऽप्याकाशो घटाकाशः स्यादिति कोऽर्थः । किं घटसम्बन्धी स्यादिति उत घटपरिमाणसदृशपरिमाणः स्यादिति, सर्वोऽपि महाकाशः घटाकाशः स्यादिति वा । नाद्यः । इष्टापत्तेः। न द्वितीयः । उपाधेः प्रतिबिम्बपक्षपातित्वस्वाभाव्येन घटस्योपाधेः प्रतिबिम्ब-स्थानीयाकाशे स्वगतपरिमाणप्रतीत्याधानात् । महाकाशं तु बिम्बस्थानीयमिति न तत्र स्वधर्मोपरञ्जकः । अत एव न तृतीयः । उपरञ्जितघटधर्मत्वस्य घटाकाशपदप्रवृत्तिनि-मित्तस्य परिच्छिन्नाकाश इव महाकाशेऽभावात् तत्र तदव्यवहारात् । संयोगस्य स्वात्यन्ताभावसमानाधिकरणत्वं च प्रमाणबलादङ्गीक्रियते । प्रमाणमेव विरोधं शमयिष्यति । 'संविदेव हि भगवती विषयसत्त्वोपगमे नः शरण' मिति न्यायादिति ।**

27-9-21.

**ಎಲ್ಲ ಆಕಾಶ ಘಟಾಕಾಶವೆನಿಸಲಿ ಎಂದರೇನರ್ಥ? ಎಲ್ಲ ಆಕಾಶ ಘಟಸಂಬಂಧಿಯಾಗಲಿ ಎಂದೆ? ಘಟದಷ್ಟೇ ಪರಿಮಾಣ ಉಳ್ಳದ್ದಾಗಲೆಂದೆ? ಇಡೀ ಮಹಾಕಾಶವೇ ಘಟಾಕಾಶವೆನಿಸಲಿ ಎಂದೆ? ಘಟಸಂಬಂಧಿಯಾಗಲಿ ಎಂಬ ಮೊದಲನೆ ಪಕ್ಷದಲ್ಲಿ**

ಇಷ್ಟಾಪತ್ತಿ. ಎರಡನೆಪಕ್ಷ ಸರಿಯಲ್ಲ. ಉಪಾಧಿಯು ಪ್ರತಿಬಿಂಬದಲ್ಲಿ ಪಕ್ಷಪಾತಿಯಾಗಿರುವುದು ಸಹಜವಾದ್ದರಿಂದ ಘಟರೂಪ ಉಪಾಧಿಯು ಪ್ರತಿಬಿಂಬ ಸ್ಥಾನೀಯವಾದ ಘಟಾಕಾಶದಲ್ಲಿಯೇ ತನ್ನ ಪರಿಮಾಣಪ್ರತೀತಿ ಉಂಟುಮಾಡೀತು. ಮಹಾಕಾಶವು ಬಿಂಬ ಸ್ಥಾನೀಯ. ಆದರಿಂದ ಆದರಲ್ಲಿ ತನ್ನ ಧರ್ಮದ ಪ್ರತೀತಿ ಉಂಟುಮಾಡಲಾರದು. ಹೀಗಾಗಿ ಮೂರನೆ ಪಕ್ಷವೂ ಕೂಡುವುದಿಲ್ಲ. 'ಘಟಾಕಾಶ' ಶಬ್ದಪ್ರವೃತ್ತಿ ನಿಮಿತ್ತವು ಘಟದ ಧರ್ಮದಂಥ ಧರ್ಮ ಆಕಾಶದಲ್ಲಿ ಕಾಣುವುದು. ಇದು ಸಣ್ಣ ಆಕಾಶದಲ್ಲಿರುವಂತೆ ಮಹಾಕಾಶದಲ್ಲಿ ಇಲ್ಲ. ಅಲ್ಲಿ ಆದರ ವ್ಯವಹಾರವಿಲ್ಲ. ಸಂಯೋಗವು ತನ್ನ ಅಭಾವದೊಂದಿಗೆ ಇರುವುದಕ್ಕೆ ಹಾಗೆ ಪ್ರತೀತಿ ಪ್ರಮಾಣವಿದೆ. ವಿರೋಧ ಪರಿಹಾರವನ್ನು ಆ ಪ್ರಮಾಣವೆ ಮಾಡುತ್ತದೆ. 'ವಿಷಯಸತ್ತ್ವವನ್ನು ಒಪ್ಪುವುದಕ್ಕೆ ನಮಗೆ ಅಬಾಧಿತವಾದ ಪ್ರಮಾಣವೆ ಆಧಾರ' ಎಂದು ನಮಗೆ ಹಿರಿಯರು ಹೇಳುತ್ತಾರೆ.

**घटपरिमाणसमानपरिमाणः स्यादिति** । तादृशपरिमाणवत्त्वेन व्यवहर्तव्यः स्यादित्यर्थः । उपाधेः स्वोपहिते स्वधर्मव्यवहारहेतुत्वादिति भावः । **महाकाशो घटाकाशः स्यादिति** । उपाध्यनवच्छिन्नोऽपि घटाकाशत्वेन व्यवहर्तव्यः स्यादित्यर्थः । व्यवहारनिमित्तस्योपाधिसम्बन्धस्य महाकाश एव प्राप्तेरिति भावः । ननु बिम्बप्रतिबिम्बभावस्थले ह्युपाधेः प्रतिबिम्बपक्षपातित्वम् । दर्पणादिना प्रतिमुख एव स्वगतमालिन्याधानदर्शनात् । प्रकृते च तदभावात् कथं महाकाशेऽपि घटपरिमाणाधानापत्तिरित्याशङ्क्योक्तम् – **प्रतिबिम्बस्थानीयेति** । उपाधेः काल्पितभागमात्रपक्षपातित्वस्वाभाव्यादिति भावः । **अत एवेति** । घटाद्युपाधेः स्वोपहित एव स्वधर्माधायकत्वादित्यर्थः । एतदेव विवृणोति – **उपरञ्जितेति** । तथाच तत्पदप्रवृत्तिनिमित्ताभावादेव तदव्यवहारः इति भावः ॥

'ಘಟ ಪರಿಮಾಣಕ್ಕೆ ಸಮಾನವಾದ ಪರಿಮಾಣ ಆಕಾಶದಲ್ಲಿ ಬರಲಿ' ಎಂದರೆ ಹಾಗೆ ವ್ಯವಹಾರ ಬರಲಿ ಎಂದರ್ಥ. ಏಕೆಂದರೆ ಉಪಾಧಿಯ ಕೆಲಸವೆ ತನಗೆ ಸಂಬಂಧಿಸಿದ ವಸ್ತುವಿನಲ್ಲಿ ತನ್ನ ಧರ್ಮವಿರುವಂತೆ ವ್ಯವಹಾರವನ್ನು ಉಂಟು ಮಾಡುವುದು.

'ಮಹಾಕಾಶವು ಘಟಾಕಾಶವಾಗಲಿ' ಎಂದರೆ ಉಪಾಧಿಯ ಅವಚ್ಛೇದವಿಲ್ಲದ ಆಕಾಶವೂ ಘಟಾಕಾಶವೆಂದು ವ್ಯವಹೃತವಾಗಬೇಕಾದೀತು ಎಂದರ್ಥ. ಏಕೆಂದರೆ ವ್ಯವಹಾರಕ್ಕೆ ಕಾರಣವಾದ ಉಪಾಧಿಸಂಬಂಧವನ್ನು ಮಹಾಕಾಶದಲ್ಲಿಯೆ ಒಪ್ಪಿದಂತಾಗಿದೆ.

'ಬಿಂಬ ಪ್ರತಿಬಿಂಬ ಭಾವವಿರುವ ಸ್ಥಳದಲ್ಲಿ ಮಾತ್ರ ಉಪಾಧಿಯು ಪ್ರತಿಬಿಂಬದಲ್ಲಿ ತನ್ನ ಪಕ್ಷಪಾತವನ್ನು ತೋರುತ್ತದೆ. ಕನ್ನಡಿ ಮುಂತಾದ ಕಡೆ ಪ್ರತಿಬಿಂಬದಲ್ಲಿಯೇ ಅದು ತನ್ನ ಮಾಲಿನ್ಯಾದಿಗಳು ಕಾಣುವಂತೆ ಮಾಡುವುದು ಕಂಡಿದೆ. ಪ್ರಕೃತದಲ್ಲಿ ಅಂಥ ಬಿಂಬ ಪ್ರತಿಬಿಂಬ ಭಾವವಿಲ್ಲದಿರುವುದರಿಂದ ಘಟವು ಮಹಾಕಾಶದಲ್ಲಿ ತನ್ನ ಪರಿಮಾಣ ಕಾಣುವಂತೆ ಮಾಡುವ ಪ್ರಸಂಗವಿಲ್ಲ' ಎಂಬ ಶಂಕೆಗೆ ಸಮಾಧಾನ ಹೀಗೆ— ಘಟಾಕಾಶವು ಉಪಾಧಿಸಂಬಂಧದಿಂದ ಕಲ್ಪಿತವಾಗಿರುವುದರಿಂದ ಪ್ರತಿಬಿಂಬಸ್ಥಾನದಲ್ಲಿದೆ. ಉಪಾಧಿಯು ತನ್ನಿಂದ ಕಲ್ಪಿತವಾದ ಭಾಗ ಮಾತ್ರದಲ್ಲಿ ಪಕ್ಷಪಾತಿಯಾಗಿರುವುದು ಸ್ವಾಭಾವಿಕ ಎಂದು ಅಭಿಪ್ರಾಯ.

'ಅದರಿಂದಲೆ ಮೂರನೇ ಪಕ್ಷವೂ ಯುಕ್ತವಲ್ಲ' ಎಂದರೆ ಉಪಾಧಿಯು ತನ್ನಿಂದ ಕಲ್ಪಿತವಾದ ಭಾಗದಲ್ಲಿ ಮಾತ್ರ ತನ್ನ ಧರ್ಮದ ವ್ಯವಹಾರ ಉಂಟುಮಾಡುವುದರಿಂದ ಮೂರನೆ ಪಕ್ಷವೂ ಸರಿಯಲ್ಲ ಎಂದರ್ಥ. ಏಕೆ ಸರಿಯಲ್ಲ ಎಂದರೆ ಘಟಾಕಾಶಶಬ್ದವ್ಯವಹಾರಕ್ಕೆ ಘಟಧರ್ಮ ದಂಥ ಧರ್ಮ ಆಕಾಶದಲ್ಲಿ ಕಾಣುವುದು ನಿಮಿತ್ತ. ಅದಿಲ್ಲವೆಂದರೆ ಆ ವ್ಯವಹಾರವೂ ಇಲ್ಲ.

नन्वेवमाकाशे घटादिसंयोगस्याव्याप्यवृत्तित्वं न स्यात् । तस्य स्वात्यन्ताभावसमानाधिकरणत्वरूपस्य प्रदेशभेदनिर्वाह्यत्वादित्यत आह- **संयोगस्येति । प्रमाणबलादिति ।** इह घटसंयोगो, नेहेति प्रतीति- बलाद् घटगगनसंयोगः स्वाधिकरणयावन्निष्ठाभावप्रतियोगी संयोगत्वात्, वृक्षवानरसंयोगवदित्यनुमानबलाच्चेत्यर्थः । 28-9-

एवमुपाधिर्गगनमात्रं स्पृशतीत्याद्यपक्षाङ्गीकारेण समाधाय गगनैकदेशमिति द्वितीयपक्षाङ्गीकारेण तद्विवरणमेव स्वात्यन्ताभावेत्यादिना कृतमिति तूपचिन्त्यम् । गगनावयवसम्बन्धित्वरूपमुख्यार्थाभिप्रायेण गगनैकदेशं स्पृशतीति विकल्पितत्वात् निरुक्तगौणार्थाङ्गीकारमात्रेण तत्पक्षाङ्गीकारायोगात् । प्रथमपक्षेऽप्येतदङ्गीकारेणैतस्य पक्षान्तरत्वा- सम्भवाच्च ।

नन्वेवं सति यो यत्प्रतियोगी स तद्विरोधीति सामान्यतः प्रतियोग्यभावयोर्विरोधग्राहकमानविरोध इत्यत आह – **प्रमाणमेवेति । विरोधं शमयिष्यति ।** तद्ग्रहं निवर्तयतीत्यर्थः । विशेषप्रमाणेन सामान्यव्याप्तेराभासीकरणादिति भावः । इममेव वृद्धसम्मत्या द्रढयति – **संविदेव हीति ।** भगवतीत्यबाधितत्वेनादरणीयत्वमाह । शरणं हेतुः ।

ಹೀಗೆ ಆಕಾಶದಲ್ಲಿ ಪ್ರದೇಶ ಭೇದವನ್ನು ಒಪ್ಪದಿದ್ದರೆ ಆಕಾಶದಲ್ಲಿ ಘಟಸಂಯೋಗ ಅವ್ಯಾಪ್ಯ ವೃತ್ತಿಯಾಗದೆ ಹೋದೀತು. ಒಂದು ವಸ್ತುವಿನಲ್ಲಿ ಪೂರ್ತಿಯಾಗಿ ವ್ಯಾಪಿಸದೆ ಆ ವಸ್ತುವಿನಲ್ಲಿ ತನ್ನ ಅಭಾವದೊಂದಿಗೆ ಸಂಬಂಧ ಹೊಂದಿರುವುದು ಅವ್ಯಾಪ್ಯವೃತ್ತಿತ್ವ. ಇದು ಪ್ರದೇಶಭೇದದಿಂದಲೆ ನಿರ್ವಾಹವಾಗಬೇಕು ಎಂದು ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾನೆ— 'ಆಕಾಶದಲ್ಲಿ ಪ್ರದೇಶ ಭೇದವಿಲ್ಲದಿದ್ದರೂ ಸಂಯೋಗಕ್ಕೆ ಅವ್ಯಾಪ್ಯವೃತ್ತಿತ್ವವನ್ನು ಪ್ರಮಾಣಬಲದಿಂದ ಅಂಗೀಕರಿಸುತ್ತೇವೆ. ಇಲ್ಲಿ ಘಟ ಸಂಯೋಗವಿದೆ. ಇಲ್ಲಿ ಇಲ್ಲ ಎಂಬ ಪ್ರತೀತಿಯೇ ಇದಕ್ಕೆ ಪ್ರಮಾಣವಾಗಿದೆ'. ಮತ್ತು 'ಘಟ–ಆಕಾಶಗಳ ಸಂಯೋಗವು ತನ್ನ ಅಧಿಕರಣದಲ್ಲಿ ಪ್ರದೇಶಭೇದವಿಲ್ಲದೆ ಪೂರ್ತಿ ಇರುವ ತನ್ನ ಅಭಾವಕ್ಕೆ ಪ್ರತಿಯೋಗಿಯಾಗಿದೆ, ಸಂಯೋಗವಾಗಿರುವುದರಿಂದ, ವೃಕ್ಷ–ವಾನರ ಸಂಯೋಗದಂತೆ' ಎಂಬ ಅನುಮಾನವೂ ಪ್ರಮಾಣವಾಗಿದೆ.

ಕೆಲವರು ಇಲ್ಲಿ ''ಅದ್ವೈತಿಯು ಹಿಂದೆ ಹೇಳಿದ ಎರಡು ವಿಕಲ್ಪಗಳಲ್ಲಿ ಮೊದಲನೆಯದಾದ 'ಘಟವು ಗಗನ ಮಾತ್ರವನ್ನು ಅಂದರೆ ಇಡಿ ಆಕಾಶವನ್ನು ಸ್ಪರ್ಶಿಸುತ್ತದೆ' ಎಂಬ ವಿಕಲ್ಪವನ್ನು ಅಂಗೀಕಾರದಿಂದ ಸಮಾಧಾನಮಾಡಿ ಇದೀಗ ಎರಡನೇ ಪಕ್ಷವನ್ನು 'ಆಕಾಶದ ಅವಯವವನ್ನು ಘಟವು ಸ್ಪರ್ಶಿಸುತ್ತದೆ' ಎಂಬುದನ್ನೂ ಅಂಗೀಕರಿಸಿ ಅದರ ವಿವರಣೆಯನ್ನೇ 'ಸಂಯೋಗವು ಅವ್ಯಾಪ್ಯವೃತ್ತಿ, ಆಕಾಶದಲ್ಲಿ ಅವಯವ ಭೇದವಿಲ್ಲದಿದ್ದರೂ ಅದರಲ್ಲಿ ಅದು ತನ್ನ ಅಭಾವದೊಂದಿಗೆ ತಾನಿರುತ್ತದೆ ಅವ್ಯಾಪ್ಯವೃತ್ತಿಯಾಗಿರುತ್ತದೆ, ಎಂಬುದನ್ನು ಪ್ರಮಾಣವೆ ನಿರ್ವಾಹ ಮಾಡುತ್ತದೆ' ಎಂದು ಪ್ರಸ್ತುತಪಡಿಸುತ್ತಾನೆ' ಎನ್ನುತ್ತಾರೆ. ಇದು ಸರಿಯಲ್ಲ. 'ಆಕಾಶದ ಅವಯವಕ್ಕೆ ಘಟಸಂಯೋಗ' ಎನ್ನುವ ಮುಖ್ಯಾರ್ಥಾಭಿಪ್ರಾಯದಿಂದ 'ಆಕಾಶದ ಅವಯವವನ್ನು ಘಟವು ಸ್ಪರ್ಶಿಸುತ್ತದೆ' ಎಂದು ಎರಡನೇ ವಿಕಲ್ಪ ಹೊರಟಿದೆ. 'ಸಂಯೋಗವು ಅವ್ಯಾಪ್ಯವೃತ್ತಿಯಾದರೆ ಸಾಕೆ'ಂದು ಗೌಣಾರ್ಥ ಮಾಡಿ ಆ ಪಕ್ಷವನ್ನು ಒಪ್ಪಿಕೊಂಡರೆ ಒಪ್ಪಿಕೊಂಡಂತಾಗುವುದಿಲ್ಲ. ಮತ್ತು ಮೊದಲನೆ ವಿಕಲ್ಪದಲ್ಲಿಯೂ ಅವ್ಯಾಪ್ಯವೃತ್ತಿತ್ವ ಅಂಗೀಕೃತವೇ ಆಗಿರುವುದರಿಂದ ಇದು ಬೇರೆ ಪಕ್ಷವೆನಿಸುವುದೂ ಇಲ್ಲ.

ಪ್ರದೇಶಭೇದವಿಲ್ಲದೆ ಒಂದೇ ಆಕಾಶದಲ್ಲಿ ಸಂಯೋಗ ತದಭಾವವನ್ನು ಒಪ್ಪಿದರೆ

ಪ್ರತಿಯೋಗಿಯು ಅಭಾವಕ್ಕೆ ವಿರೋಧಿ, ಒಂದೇ ಕಡೆ ಎರಡೂ ಇರುವುದಿಲ್ಲ ಎಂದು ಸಾಮಾನ್ಯವಾಗಿ ಪ್ರತಿಯೋಗಿ ಅಭಾವಗಳಿಗೆ ವಿರೋಧವನ್ನು ತಿಳಿಸುವ ಪ್ರಮಾಣದ ವಿರೋಧ ಬರುತ್ತದೆ ಎಂದರೆ ಹೇಳುತ್ತಾನೆ— 'ಪ್ರಮಾಣವೇ ವಿರೋಧಬುದ್ಧಿಯನ್ನು ಬಾರದಂತೆ ಮಾಡುತ್ತದೆ' ಎಂದು. ಪ್ರತಿಯೋಗಿಯು ಅಭಾವಕ್ಕೆ ವಿರೋಧಿ, ಎರಡೂ ಒಂದೇಕಡೆ ಇರುವುದಿಲ್ಲ ಎಂಬುದು ಸಾಮಾನ್ಯ ವ್ಯಾಪ್ತಿ. ಆಕಾಶದಲ್ಲಿ ಎರಡೂ ಇವೆ ಎನ್ನುವ ಪ್ರಮಾಣವು ವಿಶೇಷಪ್ರಮಾಣವಾಗಿರುವುದರಿಂದ ಅದು ಸಾಮಾನ್ಯವ್ಯಾಪ್ತಿಯನ್ನು ಬಾಧಿಸುತ್ತದೆ ಎಂದು ಅಭಿಪ್ರಾಯ. 'ಅಬಾಧಿತವಾಗಿದ್ದು ಆದರಣೀಯವಾಗಿರುವ ಪ್ರತೀತಿ ಪ್ರಮಾಣವೇ ನಮಗೆ ವಿಷಯಸತ್ವವನ್ನು ಒಪ್ಪಲು ಆಧಾರ' ಎನ್ನುವ ಹಿರಿಯರ ಮಾತು ಇರುವುದರಿಂದ, ಪ್ರತಿಯೋಗಿ ಅಭಾವಗಳಿಗೆ ವಿರೋಧವನ್ನು ಪ್ರಕೃತದಲ್ಲಿ ಪ್ರಮಾಣವೇ ಪರಿಹರಿಸುತ್ತದೆ ಎನ್ನಬೇಕು.

**ननु विद्यमान एव भेदो घटादिभिर्नाभिव्यज्यते चेत्तर्ह्युत्पद्यत इति वक्तव्यम् । तच्चायुक्तम् । भेदस्यौत्पत्तिकत्वेनानागन्तुकत्वादिति चेत् तर्हि दोषद्वयपरिहारायाविद्यमानमेव भेदं घटाद्युपाधिः प्रतिभासयतीत्यस्तु । एवं चेद् वयं चरितार्थाः । श्रुतयश्च नेह नानाऽस्तीत्याद्या अभेदबोधिकाः । तस्मान्न स्वभावतो विष्णोर्विश्वभिन्नत्वमिति – पूर्वपक्षसङ्क्षेपः ।**

'ಇರುವ ಭೇದವೇ ಘಟಾದಿಗಳಿಂದ 'ವ್ಯಕ್ತವಾಗುತ್ತದೆ' ಎಂದು ಒಪ್ಪದಿದ್ದರೆ ಉತ್ಪನ್ನವಾಗುತ್ತದೆ ಎನ್ನಬೇಕು. ಅದೂ ಕೂಡುವುದಿಲ್ಲ ಭೇದವು ಸ್ವಾಭಾವಿಕ, ಆಗಂತುಕವಲ್ಲ ಎನ್ನುವುದು ಸಿದ್ಧಾಂತ' ಎನ್ನುವುದಾದರೆ, ಎರಡೂ ದೋಷಗಳ ಪರಿಹಾರಕ್ಕೆ, 'ಇಲ್ಲದಿರುವ ಭೇದವನ್ನೆ ಘಟಾದಿ ಉಪಾಧಿಯು ಪ್ರದರ್ಶನ ಮಾಡುತ್ತದೆ' ಎಂದು ಒಪ್ಪೋಣ. ಹೀಗೆ ಒಪ್ಪಿದರೆ ನಾವು ಕೃತಕೃತ್ಯರು, ಭೇದವು ಮೊದಲೇ ಅವಿದ್ಯಮಾನ, ಮಿಥ್ಯಾ ಎಂದೇ ಸಿದ್ಧವಾಗಿರುವುದರಿಂದ ನಮ್ಮ ಪಕ್ಷ ಸಿದ್ಧವಾಯಿತು. ಶ್ರುತಿಗಳೂ ಕೂಡ 'ನೇಹ ನಾನಾಸ್ತಿ ಕಿಂಚನ' ಎಂದು ಮುಂತಾದುವು ಅಭೇದ ಭೋದಕವಾದುವು ಇವೆ. ಆದರಿಂದ ವಿಷ್ಣು ಸ್ವಭಾವತಃ ವಿಶ್ವಕ್ಕಿಂತ ಭಿನ್ನನಲ್ಲ ಎಂದು ಸಂಕ್ಷೇಪವಾಗಿ ಪೂರ್ವಪಕ್ಷ ಮುಗಿಯಿತು.

भेदस्यौपाधिकत्वपक्षेऽनुपपत्तेः स्वाभाविकत्वसिद्धिरित्याशङ्कते

**–ननु यदीति ।** औत्पत्तिकत्वेन यावदाश्रयप्रतीतिभावित्वसिद्धान्तेन । अनागन्तुकत्वात् उपाधिजन्यत्वायोगादित्यर्थः । यद्युक्तानुपपत्त्या भेदस्यौपाधिकत्वासिद्धिस्तर्हि तत एव स्वाभाविकत्वस्याप्यसिद्धौ मिथ्यात्वमेव सिद्ध्यतीत्याह **–तर्हीति । दोषद्वयपरिहारायेति ।** अतिप्रसङ्गापसिद्धान्तरूपदोषद्वयपरिहारायेत्यर्थः । ततः किमित्यत आह **–एवं चेदिति ।** यद्याकाशभेदस्य मिथ्यात्वं तर्हीत्यर्थः। चरितार्थाः सिद्धस्वपक्षाः । प्रागुक्तानुमानस्य दृष्टान्ते साध्यवैकल्याद्यभावेन स्वान्तर्भेदहीनत्वरूपसाध्यसाधकत्वसम्भवादिति भावः ।

ಭೇದವು ಔಪಾಧಿಕವೆನ್ನುವ ಪಕ್ಷದಲ್ಲಿ ಅನುಪಪತ್ತಿ ಇರುವುದರಿಂದ ಸ್ವಾಭಾವಿಕತ್ವ ಸಿದ್ಧಿಸುವುದೆಂದು ಶಂಕೆ. ಭೇದವು 'ಔತ್ಪತ್ತಿಕ'. ಎಂದರೆ, ಭೇದವು ಆಶ್ರಯಪ್ರತೀತಿ ಇರುವಷ್ಟು ಕಾಲ ಇದ್ದೇ ಇರುತ್ತದೆ ಎಂದು ಭೇದಸಿದ್ಧಾಂತ. ಆದರಿಂದ ಅದು ಅನಾಗಂತುಕವಾದ್ದರಿಂದ ಉಪಾಧಿ ಜನ್ಯವಾಗಲಾರದು. ಹೀಗೆ ಅನುಪಪತ್ತಿ ಇರುವುದರಿಂದ ಭೇದಕ್ಕೆ ಔಪಾಧಿಕತ್ವ ಸಿದ್ಧವಾಗದಿದ್ದರೆ ಆದರಿಂದಲೆ ಸ್ವಾಭಾವಿಕತ್ವವೂ ಸಿದ್ಧವಾಗದಿದ್ದರೆ ಮಿಥ್ಯಾತ್ವವೇ ಸಿದ್ಧವಾಗುವುದು. ಏಕೆಂದರೆ ಆಕಾಶಭೇದ ಸ್ವಾಭಾವಿಕವೆಂದಾದರೆ ಘಟಾದಿ ಸಂಬಂಧವಾಗುವುದಕ್ಕೆ ಪೂರ್ವದಲ್ಲಿಯೂ ಕೆಲವೊಮ್ಮೆ ಅದು ಕಾಣಬೇಕಾದೀತು ಎಂದು ಅತಿಪ್ರಸಂಗ ಬರುತ್ತದೆ. ಔಪಾಧಿಕವೆಂದಾದರೆ ಔತ್ಪತ್ತಿಕ ಎನ್ನುವ ಸಿದ್ಧಾಂತದ ವಿರೋಧ ಬರುತ್ತದೆ. ಹೀಗೆ ಎರಡೂ ದೋಷಗಳು ಪರಿಹಾರವಾಗಬೇಕಾದರೆ ಭೇದವನ್ನು ಮಿಥ್ಯಾ ಎನ್ನಬೇಕು. ಆಗ ನಮ್ಮ ಪಕ್ಷ ಸಿದ್ಧವಾಗುವುದರಿಂದ ನಾವು ಕೃತಕೃತ್ಯರು. ಏಕೆಂದರೆ ಹಿಂದೆ ಹೇಳಿದ 'ಜಗತ್ತು ತಾತ್ವಿಕ ಅಂತರ್ಭೇದ ಶೂನ್ಯವಾಗಿದೆ. ದೃಶ್ಯವಾದ್ದರಿಂದ' ಎಂಬ ಅನುಮಾನದಲ್ಲಿ ದೃಷ್ಟಾಂತವಾದ ಆಕಾಶದಲ್ಲಿ ಅಂತರ್ಭೇದವಿರುವುದರಿಂದ ಸಾಧ್ಯವೈಕಲ್ಯ ಮತ್ತು 'ಸಾಧ್ಯವಿಲ್ಲ, ಹೇತುವಿದೆ' ಎಂಬ ವ್ಯಭಿಚಾರಗಳ ಪ್ರಸಕ್ತಿ ಇತ್ತು. ಇದೀಗ ಅವು ಪರಿಹಾರ ವಾಗಿರುವುದರಿಂದ, ಹೇತುವಿನಿಂದ ಸಾಧ್ಯಸಾಧನ ಸಂಭವವಿದೆ.

एवमभेदे प्रत्यक्षानुमाने उपपाद्यागममप्याह **–श्रुतयस्त्विति ।** 'नेह नानास्ति किञ्चन', 'एकमेवाद्वितीय' मित्यादिश्रुतीनां निषेधपरतया प्रागुक्तत्वात्तत एव प्राबल्याद्भेदश्रुतिबाधकत्वं सेत्स्यतीत्यभिप्रायेण तन्नोपपादितम् । पूर्वपक्षमुपसंहरति **–तस्मादिति ।** उक्तरीत्या परपक्षे साधकस्य बाधकाभावस्य चाभावात्स्वपक्षे तद्भावाच्चेत्यर्थः । पूर्वपक्षसङ्क्षेप

**इत्यनेन निरसनीययुक्त्यन्तरसत्त्वं सूचितम् । तच्चाद्वैतश्रुतीनाम् उपक्रमादिषड्विधतात्पर्यलिङ्गयुक्तत्वादिरूपमुपरिष्टात् प्रपञ्चयिष्यामः – इतिपूर्वपक्षग्रन्थः ।**

ಹೀಗೆ ಅಭೇದದಲ್ಲಿ ಪ್ರತ್ಯಕ್ಷ ಅನುಮಾನಗಳನ್ನು ಉಪಪಾದನೆ ಮಾಡಿ ಆಗಮವನ್ನೂ ಪೂರ್ವಪಕ್ಷಿ ಹೇಳುತ್ತಾನೆ. 'ನೇಹ ನಾನಾಸ್ತಿ ಕಿಂಚನ' 'ಏಕಮೇವಾದ್ವಿತೀಯಂ' ಮುಂತಾದ ಈ ಶ್ರುತಿಗಳು ಭೇದನಿಷೇಧ ಪರವಾಗಿ ಹಿಂದೆ ಉಕ್ತವಾಗಿರುವುದರಿಂದ, ನಿಷೇಧಪರವಾದ್ದರಿಂದಲೇ ಪ್ರಬಲವಾಗಿರುವುದರಿಂದ ಭೇದಶ್ರುತಿಬಾಧಕತ್ವ ಸಿದ್ಧಿಸುತ್ತದೆ ಎಂಬ ಅಭಿಪ್ರಾಯದಿಂದ ಅದನ್ನು ಉಪಪಾದನ ಮಾಡಲಿಲ್ಲ. ಪೂರ್ವಪಕ್ಷವನ್ನು ಉಪಸಂಹರಿಸುತ್ತಾನೆ. ಇಷ್ಟರವರೆಗೆ ಹೇಳಿದಂತೆ ಅದ್ವೈತಿಗೆ ಪರಪಕ್ಷದಲ್ಲಿ ಸಾಧಕವಿಲ್ಲ, ಬಾಧಕಾಭಾವವೂ ಇಲ್ಲ. ತನ್ನ ಪಕ್ಷದಲ್ಲಿ ಸಾಧಕವೂ ಇದೆ ಬಾಧಕಾಭಾವವೂ ಇದೆ. ಆದರಿಂದ ವಿಷ್ಣು ಸ್ವಭಾವತಃ ವಿಶ್ವದಿಂದ ಭಿನ್ನನಲ್ಲ ಎನ್ನುತ್ತಾನೆ.

'ಸಂಕ್ಷೇಪವಾಗಿ ಇದು ಪೂರ್ವಪಕ್ಷ' ಎಂಬ ಮಾತಿನಿಂದ ಸಿದ್ಧಾಂತಿಗೆ ನಿರಾಸಮಾಡ ಬೇಕಾಗಿರುವ ಯುಕ್ತಿಗಳು ಬೇರೆಯೂ ಇವೆ ಎಂದು ಸೂಚಿತವಾಗುತ್ತಿದೆ. ಅವು ಅದ್ವೈತ ಶ್ರುತಿಗಳಿಗೆ ಉಪಕ್ರಮಾದಿ ಷಡ್ವಿಧ ತಾತ್ಪರ್ಯ ಲಿಂಗಯುಕ್ತತ್ವಾದಿರೂಪ ಯುಕ್ತಿಗಳು. ಅವನ್ನು ಮುಂದೆ ವಿವರಿಸುವೆವು.

29-9-21.

**ಇಲ್ಲಿಗೆ ಪೂರ್ವಪಕ್ಷಗ್ರಂಥ ಮುಗಿಯಿತು.**

### ಸಿದ್ಧಾಂತದಲ್ಲಿ ಜೀವೇಶ್ವರಭೇದ ಈಶ್ವರನಿಗೆ ಪ್ರತ್ಯಕ್ಷ

**अत्रायं परिहारः । यत्तावदुक्तं न जीवेश्वरभेदे प्रत्यक्षं प्रमाणमिति तत्र ब्रूमः । ईश्वरधर्मिको जीवप्रतियोगिको भेद ईश्वरस्य प्रत्यक्षः । तस्य तादृशप्रत्यक्षसद्भावे 'उत्तमः पुरुषस्त्वन्यः परमात्मेत्युदाहृत' इति तद्वचनं प्रमाणम् । ईश्वरस्य जीवाध्यक्षीकरणे क्षमत्वान्न चोद्यावकाशः ।**

ಈ ಪೂರ್ವಪಕ್ಷಕ್ಕೆ ಹೀಗೆ ಪರಿಹಾರ. 'ಜೀವೇಶ್ವರಭೇದ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲ' ಎಂದು ಹೇಳಿ ಆಕ್ಷೇಪಿಸಿದ್ದಕ್ಕೆ ನಾವು ಹೀಗೆ ಪರಿಹಾರ ಹೇಳುತ್ತೇವೆ.

**ಈಶ್ವರಧರ್ಮಿಕ ಜೀವಪ್ರತಿಯೋಗಿಕ ಭೇದವು ಈಶ್ವರನಿಗೆ ಪ್ರತ್ಯಕ್ಷ ಸಿದ್ಧವಾಗಿದೆ. ಈಶ್ವರನಿಗೆ ಅಂಥ ಪ್ರತ್ಯಕ್ಷ ಇದೆ ಎನ್ನುವುದಕ್ಕೆ 'ಕ್ಷರಾಕ್ಷರ ಪುರುಷರಿಗಿಂತ ಅನ್ಯನು ಪುರುಷೋತ್ತಮ, ಪರಮಾತ್ಮ ಎಂದು ಪ್ರಸಿದ್ಧನಾಗಿದ್ದಾನೆ' ಎಂದು ಅವನ ಮಾತೇ ಪ್ರಮಾಣ. ಈಶ್ವರನಿಗೆ ಜೀವರನ್ನು ಪ್ರತ್ಯಕ್ಷವಾಗಿ ತಿಳಿಯುವ ಸಾಮರ್ಥ್ಯ ವಿರುವುದರಿಂದ ಪ್ರಶ್ನೆಗೆ ಅವಕಾಶವಿಲ್ಲ.**

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 4 ನೋಡಿರಿ)

सिद्धान्तं प्रतिजानीते – **अत्रायमित्यादिना** । अत्र पूर्वपक्षेऽयं वक्ष्यमाणः परिहारो दूषणोद्धार इत्यर्थः । पूर्वपक्षक्रमेणैव सिद्धान्ताभिधान-मिति ज्ञापनाय प्रथमतः प्रथमदूषणोद्धारं प्रतिजानीते – **यत्तावदिति** । **ईश्वरधर्मिक इति** । यद्यपि भेदसामान्यमीश्वरप्रत्यक्षविषयः । तत्प्रत्यक्षे च 'द्वाविमौ पुरुषौ लोक' इत्यादि तद्वचनमेव प्रमाणम् । तथापि 'स्वधर्मिकस्वेतरप्रतियोगिकभेदः स्वप्रत्यक्ष' इति सामान्यतो नियम-मभिप्रेत्येदं निदर्शितम् । प्रथमश्लोक ईश्वरधर्मिकभेदस्यैव प्राधान्येन प्रस्तुतत्वाद्वा । यद्यपि तत्र जडप्रतियोगिकभेदोऽपि प्रकृतः । तथापि प्रथमं जीवेश्वरभेद एव प्रत्यक्षप्रमाणाभावस्य शङ्कितत्वाज्जीवप्रतियोगिक इत्येवोक्तम् । एवमुत्तरत्रेश्वरप्रतियोगिकादिग्रहणस्य सङ्गतिरवसेया ।

नन्वीश्वरस्यैतादृशभेदप्रत्यक्षसद्भावे प्रमाणाभावः । परबुद्धेरप्रत्यक्ष-त्वात् । न चेश्वरः स्वधर्मिकस्वेतरभेदप्रत्यक्षवान्, आत्मत्वात् अस्मदा-दिवदित्यनुमानं मानमिति वाच्यम् । अनुकूलतर्काभावेनाप्रयोजकत्वात् । नाप्यागमः । तस्य तादृशार्थे प्रामाण्यानवधारणादित्यत आह – **ईश्वर-स्येति । तद्वचनमिति** । कृष्णरूपेश्वरवचनमित्यर्थः । तथाचेदं वाक्यं वाक्यार्थविषयकेश्वरीयप्रत्यक्षपूर्वकम् । ईश्वरीयप्रमाणवाक्यत्वात् । तादृशवाक्यान्तरवत् । परोक्षज्ञानरहित ईश्वरो वैतद्वाक्यार्थज्ञानवान् । एतद्वाक्यप्रयोक्तृत्वात् । यो यद्वाक्यप्रयोक्ता स तदर्थज्ञानवान् । यथा

यज्ञदत्त इत्याद्यनुमानमीश्वरस्य जीवप्रकृतिभिन्नत्वरूपवाक्यार्थप्रत्यक्षसद्भावे प्रमाणम् । एतद्वाक्यप्रामाण्यं चोभयवादिसिद्धम् । एतादृशागमानुगृहीतत्वात् उक्तानुमानमपि प्रमाणमेवेत्याशयः ।

ಸಿದ್ಧಾಂತ ಹೇಳಲು ಪ್ರತಿಜ್ಞೆ ಮಾಡುತ್ತಾರೆ, 'ಈ ಪೂರ್ವಪಕ್ಷಕ್ಕೆ ಹೀಗೆ ಪರಿಹಾರ' ಎಂದು ಮುಂತಾಗಿ. ಈ ಪೂರ್ವಪಕ್ಷಕ್ಕೆ ನಾವು ಇನ್ನು ಮುಂದೆ ಹೇಳುವುದು ಪರಿಹಾರ ಎಂದರ್ಥ. ಪೂರ್ವಪಕ್ಷ ಕ್ರಮದಿಂದಲೇ ಸಿದ್ಧಾಂತ ಹೇಳುತ್ತಿರುವೆವೆಂದು ತಿಳಿಸುವುದಕ್ಕಾಗಿ ಮೊದಲಿಗೆ ಪೂರ್ವಪಕ್ಷಿಯ ಮೊದಲನೆ ಆಕ್ಷೇಪಕ್ಕೇ ಉತ್ತರ ನೀಡಲು ಉಪಕ್ರಮಿಸುತ್ತಾರೆ— 'ಪೂರ್ವಪಕ್ಷಿ ಏನು ಹೇಳಿದನೋ ಅದಕ್ಕೆ ಉತ್ತರ ಹೇಳುವೆವು' ಎಂದು.

'ಈಶ್ವರ ಧರ್ಮಿಕ' ಎಂಬುದರ ಅಭಿಪ್ರಾಯ ಹೀಗೆ— ಯದ್ಯಪಿ ಸಾಮಾನ್ಯವಾಗಿ ಭೇದಗಳೆಲ್ಲವೂ ಈಶ್ವರ ಪ್ರತ್ಯಕ್ಷಕ್ಕೆ ಗೋಚರವೆ. ಅಂಥ ಪ್ರತ್ಯಕ್ಷ ಅವನಿಗೆ ಇದೆ ಎನ್ನುವುದಕ್ಕೆ 'ಲೋಕದಲ್ಲಿ ಕ್ಷರ ಅಕ್ಷರರೆಂದು ಎರಡು ಬಗೆಯ ಜೀವರಿರುತ್ತಾರೆ' ಎನ್ನುವ ಅವನ ಮಾತೇ ಪ್ರಮಾಣ. ಆದರೂ 'ತನ್ನ ಧರ್ಮಿಕವಾದ, ತನಗಿಂತ ಅನ್ಯ ಪ್ರತಿಯೋಗಿಕವಾದ ಭೇದವು ತನಗೆ ಪ್ರತ್ಯಕ್ಷ' ಎಂದು ಸಾಮಾನ್ಯನಿಯಮ ಎಂಬ ಅಭಿಪ್ರಾಯದಿಂದ ಅದಕ್ಕೆ ನಿದರ್ಶನವಾಗಿ ಈಶ್ವರನಿಗೆ ಅಂಥ ಪ್ರತ್ಯಕ್ಷವಿದೆ ಎಂದಿದ್ದಾರೆ. ಅಥವಾ ಮಂಗಳಾಚರಣ ಶ್ಲೋಕದಲ್ಲಿ 'ವಿಭಿನ್ನೋ ವಿಶ್ವತೋ ವಿಷ್ಣುಃ' ಎಂದು ಈಶ್ವರ ಧರ್ಮಿಕ ಭೇದವೇ ಮುಖ್ಯವಾಗಿ ಪ್ರಸ್ತುತವಾದ್ದರಿಂದ ಹೀಗೆ ಹೇಳಿದ್ದಾರೆ. ಯದ್ಯಪಿ ಅಲ್ಲಿ ಜಡಪ್ರತಿಯೋಗಿಕ ಭೇದವೂ ಪ್ರಸ್ತುತವಾಗಿದೆ. ಆದರೂ ಪೂರ್ವಪಕ್ಷಿಯು ಜೀವೇಶ್ವರ ಭೇದದಲ್ಲಿಯೇ ಪ್ರತ್ಯಕ್ಷ ಪ್ರಮಾಣವಿಲ್ಲ ಎಂದು ಮೊದಲಿಗೆ ಆಕ್ಷೇಪಿಸಿರುವುದರಿಂದ 'ಜೀವ ಪ್ರತಿಯೋಗಿಕ ಭೇದ' ಎಂದೇ ಹೇಳಿದ್ದಾರೆ. ಹೀಗೇ ಮುಂದೆ ಈಶ್ವರಪ್ರತಿಯೋಗಿಕ ಎಂದು ಮುಂತಾಗಿ ಹೇಳುವುದಕ್ಕೂ ಸಂಗತಿಯನ್ನು ತಿಳಿಯಬೇಕು.

'ಈಶ್ವರನಿಗೆ ಭೇದ ಪ್ರತ್ಯಕ್ಷ ಉಂಟೆನ್ನುವುದಕ್ಕೇ ಪ್ರಮಾಣವಿಲ್ಲ. ಯಾರಿಗೂ ಇನ್ನೊಬ್ಬನ ಬುದ್ಧಿ ಪ್ರತ್ಯಕ್ಷ ಯೋಗ್ಯವಲ್ಲ. ಆದರಿಂದ ಪ್ರತ್ಯಕ್ಷ ಪ್ರಮಾಣವಿಲ್ಲ. 'ಈಶ್ವರನು ತನ್ನ ಧರ್ಮಿಕವಾದ ಇತರ ಪ್ರತಿಯೋಗಿಕವಾದ ಭೇದ ಪ್ರತ್ಯಕ್ಷ ಉಳ್ಳವನು, ಆತ್ಮನಾಗಿರುವುದರಿಂದ, ನಮ್ಮಂತೆಯೇ, ಎಂಬ ಅನುಮಾನವು ಪ್ರಮಾಣ ಎನ್ನಲಾಗದು. ಏಕೆಂದರೆ ಅನುಕೂಲ ತರ್ಕವಿಲ್ಲದಿರುವುದರಿಂದ ಇಂಥ ಅನುಮಾನ ಸಾಧಕವಾಗಲಾರದು. ಆಗಮವೂ ಪ್ರಮಾಣವಾಗದು, ಆ ಆಗಮಕ್ಕೆ ಆ ವಿಷಯದಲ್ಲಿ ಪ್ರಾಮಾಣ್ಯವಿದೆ ಎಂದು ನಿರ್ಧರಿಸುವುದು ಅಶಕ್ಯವಾದ್ದರಿಂದ.'— ಹೀಗೆ ಆಕ್ಷೇಪ ಬಂದರೆ ಹೇಳುತ್ತಾರೆ— 'ಈಶ್ವರನಿಗೆ ಪ್ರತ್ಯಕ್ಷವಿದೆ. ಅದಕ್ಕೆ ಕೃಷ್ಣರೂಪನಾದ ಈಶ್ವರನ ವಚನವೇ' ಪ್ರಮಾಣ ಎಂದು. ಇದರ ಅಭಿಪ್ರಾಯವಿಷ್ಟು— ಈ ವಾಕ್ಯವು ವಾಕ್ಯಾರ್ಥ ವಿಷಯಕ ಈಶ್ವರೀಯ ಪ್ರತ್ಯಕ್ಷ ಪೂರ್ವಕವಾಗಿದೆ. ಈಶ್ವರೀಯ ಪ್ರಮಾಣ ವಾಕ್ಯವಾಗಿರುವುದರಿಂದ, ಅಂಥ ಬೇರೆ ವಾಕ್ಯದಂತೆ.

ಅಥವಾ ಪರೋಕ್ಷಜ್ಞಾನರಹಿತನಾದ ಈಶ್ವರನು ಈ ವಾಕ್ಯದ ಅರ್ಥಜ್ಞಾನಉಳ್ಳವನು, ಈ ವಾಕ್ಯಪ್ರಯೋಗ ಮಾಡಿದವನಾದ್ದರಿಂದ. ಯಾರು ಯಾವ ವಾಕ್ಯವನ್ನು ಪ್ರಯೋಗ ಮಾಡುವನೋ ಅವನು ಆ ವಾಕ್ಯಾರ್ಥ ಜ್ಞಾನವುಳ್ಳವನಾಗಿರುತ್ತಾನೆ ಯಜ್ಞದತ್ತನಂತೆ ಇತ್ಯಾದಿ ಅನುಮಾನವು ಈಶ್ವರನಿಗೆ ತಾನು ಜೀವಪ್ರಕೃತಿಗಳಿಗಿಂತ ಭಿನ್ನನೆಂಬ ವಾಕ್ಯಾರ್ಥದ ಪ್ರತ್ಯಕ್ಷಜ್ಞಾನವಿದೆ ಎನ್ನುವ ವಿಷಯದಲ್ಲಿ ಪ್ರಮಾಣವಾಗಿದೆ. ಈ ವಾಕ್ಯವು ಪ್ರಮಾಣವೆಂಬುದು ಉಭಯವಾದಿ ಸಿದ್ಧವಾಗಿದೆ. ಇಂಥ ಆಗಮದ ಬೆಂಬಲ ಉಳ್ಳದ್ದಾದ್ದರಿಂದ ಹಿಂದೆ ಹೇಳಿದ 'ಈಶ್ವರನು ಸ್ವಧರ್ಮಿಕ ಇತರಪ್ರತಿಯೋಗಿಕ ಭೇದ ಪ್ರತ್ಯಕ್ಷಉಳ್ಳವನು, ಆತ್ಮನಾಗಿರುವುದರಿಂದ' ಎಂಬ ಅನುಮಾನವೂ ಕೂಡ ಪ್ರಮಾಣವೇ ಎಂದು.

यद्यपि भेदप्रतिपादकतद्वाक्येन तत्प्रत्यक्षं प्रसाध्य तेन भेदसाधनापेक्षया तद्वाक्येनैव भेदसाधने लाघवम् । तथापि परेण जीवेश्वरभेदे प्रत्यक्षप्रमाणासम्भवस्योक्ततया तन्निषेधाय परम्पराश्रयणम् ।

अथ व्यावहारिकभेदस्यैवेश्वरीयप्रत्यक्षविषयत्वान्न ततः पारमार्थिकभेदसिद्धिरिति चेत् स किं पारमार्थिकत्वेन प्रतीयत्ते, व्यावहारिकत्वेनैव वा ? नाद्यः । ईश्वरस्यापि भ्रान्तत्वापातात् । द्वितीये च तद् व्यावहारिकत्वं बाध्यमबाध्यं वा ? आद्ये बाध्यार्थग्राहित्वात् स एव दोषः । तत्त्वतो भेदस्य व्यावहारिकत्वापत्तिश्च । अन्ते त्वपसिद्धान्तः । किञ्चोक्तवचनानां वक्ष्यमाणरीत्या व्यावहारिकभेदपरत्वानुपपत्तौ तदनुमेयतदर्थभूतभेदप्रत्यक्षस्य कथं व्यावहारिकविषयत्वमिति दिक् ।

ननु प्रतियोग्यादिप्रत्यक्षाभावेन जीवेश्वरभेदप्रत्यक्षं प्रागेव दूषितमतः कथमेतदित्यत आह —**ईश्वरस्येति** । अन्यथा सर्वज्ञत्वानुपपत्तेरिति भावः । एतच्चाभ्युपेत्यैवोक्तम् । उक्तप्रतियोगिप्रत्यक्षापेक्षाया अनुपदमेव दूष्यत्वादीश्वरप्रत्यक्षस्य कारणानपेक्षत्वाच्चेति सूचनाय न दोषावकाश इत्यनुक्त्वा न चोद्यावकाश इत्युक्तम् ।

ಯದ್ಯಪಿ ಭೇದಪ್ರತಿಪಾದಕವಾದ ಈಶ್ವರವಾಕ್ಯದಿಂದ ಈಶ್ವರಪ್ರತ್ಯಕ್ಷ ಸಾಧನೆ ಮಾಡಿ, ಆ

ಪ್ರತ್ಯಕ್ಷದಿಂದ ಭೇದ ಸಾಧನೆ ಮಾಡುವುದಕ್ಕಿಂತ ಈಶ್ವರವಾಕ್ಯದಿಂದಲೇ ಭೇದಸಾಧನೆ ಮಾಡಿದರೆ ಲಾಘವವಿದೆ. ಆದರೂ ಪೂರ್ವಪಕ್ಷಿಯು ಜೀವೇಶ್ವರ ಭೇದವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲ ಎಂದಿರುವುದರಿಂದ ಅದರ ನಿರಾಕರಣೆಗಾಗಿ ಹೀಗೆ ಬಳಸುದಾರಿಯನ್ನು ಹಿಡಿಯಬೇಕಾಯಿತು.

'ಈಶ್ವರಪ್ರತ್ಯಕ್ಷದಲ್ಲಿ ಕಾಣುವುದು ಕೇವಲ ವ್ಯಾವಹಾರಿಕ ಭೇದವೆ ಹೊರತು ಪಾರಮಾರ್ಥಿಕ ಭೇದವಲ್ಲ. ಅದರಿಂದ ಈ ಪ್ರತ್ಯಕ್ಷದಿಂದ ಪಾರಮಾರ್ಥಿಕಭೇದ ಸಿದ್ಧಿಸುವುದಿಲ್ಲ' ಎಂದು ಹೇಳಿದರೆ, ಕೇಳುತ್ತೇವೆ. ಈಶ್ವರಪ್ರತ್ಯಕ್ಷದಲ್ಲಿ ವ್ಯಾವಹಾರಿಕ ಭೇದವು ಪಾರಮಾರ್ಥಿಕವೆಂದು ಕಾಣುವುದೆ? ಅಥವಾ ವ್ಯಾವಹಾರಿಕವೆಂದೇ ಕಾಣುವುದೆ? ಪಾರಮಾರ್ಥಿಕವೆಂದು ಕಾಣುವ ಪಕ್ಷದಲ್ಲಿ ಈಶ್ವರನೂ ಭ್ರಾಂತನೆಂದಾಗುವುದು. ವ್ಯಾವಹಾರಿಕವೆಂದೇ ಕಾಣುವ ಪಕ್ಷದಲ್ಲಿ, ಆ ವ್ಯಾವಹಾರಿಕತ್ವವು ಬಾಧ್ಯವೆ ಅಥವಾ ಅಬಾಧ್ಯವೆ? ಬಾಧ್ಯ ಎನ್ನುವ ಪಕ್ಷದಲ್ಲಿ ಬಾಧ್ಯಾರ್ಥಗ್ರಾಹಿಯಾಗುವುದರಿಂದ ಈಶ್ವರನು ಭ್ರಾಂತನಾಗಬೇಕಾಗುವುದೆಂದು ಹಿಂದೆ ಹೇಳಿದ ದೋಷವೇ ಬರುತ್ತದೆ. ಮತ್ತು ವಸ್ತುತಃ ಭೇದವು ಅವ್ಯಾವಹಾರಿಕವೆಂದು, ಪಾರಮಾರ್ಥಿಕವೆಂದು ಹೇಳಿದಂತೆಯೇ ಆಗುವುದು. ಭೇದದ ವ್ಯಾವಹಾರಿಕತ್ವವು ಅಬಾಧ್ಯವೆನ್ನುವ ಪಕ್ಷದಲ್ಲಿ ಪೂರ್ವಪಕ್ಷಿಗೆ ಅಪಸಿದ್ಧಾಂತ ದೋಷ. ಬ್ರಹ್ಮ ಹೊರತು ಬೇರೆ ಎಲ್ಲವೂ ಬಾಧ್ಯ ಎನ್ನುವುದು ಅವನ ಸಿದ್ಧಾಂತ. ಮತ್ತು ಈಶ್ವರನ ಈ ವಚನಗಳಿಗೆ ಮುಂದೆ ಹೇಳುವಂತೆ ವ್ಯಾವಹಾರಿಕ ಭೇದ ಪರತ್ವವು ಕೂಡದಿರುವುದರಿಂದ, ಈ ವಚನಗಳಿಂದ ಅನುಮೇಯವಾದ ಅವುಗಳ ಅರ್ಥಭೂತವಾದ ಭೇದಪ್ರತ್ಯಕ್ಷಕ್ಕೆ ವ್ಯಾವಹಾರಿಕ ಭೇದವಿಷಯತ್ವವು ಹೇಗೆ ಕೂಡುತ್ತದೆ? ಇದೊಂದು ದಿಕ್‌ಪ್ರದರ್ಶನವಷ್ಟೆ. ಈ ದಿಕ್ಕಿನಲ್ಲಿ ಇನ್ನೂ ವಿಚಾರ ಮಾಡುವುದು ಸಾಧ್ಯವಿದೆ.

ಪ್ರತಿಯೋಗಿ ಮುಂತಾದವುಗಳ ಪ್ರತ್ಯಕ್ಷ ಇಲ್ಲದ್ದರಿಂದ ಜೀವೇಶ್ವರ ಭೇದ ಪ್ರತ್ಯಕ್ಷ ಅಸಂಭವಿ ಎಂದು ಹಿಂದೆಯೇ ದೋಷ ಉಕ್ತವಾಗಿದೆ. ಆದರಿಂದ ಇದು ಹೇಗೆ ಕೂಡುತ್ತದೆ ಎಂದರೆ ಹೇಳುತ್ತಾರೆ— 'ಇದು ಈಶ್ವರಪ್ರತ್ಯಕ್ಷ' ಎಂದು. ಈಶ್ವರನಿಗೆ ಪ್ರತಿಯೋಗ್ಯಾದಿ ಪ್ರತ್ಯಕ್ಷವಿಲ್ಲವೆಂದರೆ ಅವನು ಸರ್ವಜ್ಞನಲ್ಲವೆಂದಾದೀತೆಂದು ಅಭಿಪ್ರಾಯ. ಇದು ಅಭ್ಯುಪಗಮವಾದ. ವಸ್ತುತಃ ಪ್ರತಿಯೋಗಿ ಪ್ರತ್ಯಕ್ಷವು ಭೇದಪ್ರತ್ಯಕ್ಷಕ್ಕೆ ಬೇಕೆನ್ನುವುದನ್ನು ಈಗಲೆ ಮುಂದೆ ನಿರಾಕರಿಸಲಿದ್ದಾರೆ. ಮತ್ತು ಈಶ್ವರಪ್ರತ್ಯಕ್ಷ ನಿತ್ಯವಾಗಿರುವುದರಿಂದ ಪ್ರತಿಯೋಗಿಪ್ರತ್ಯಕ್ಷಾದಿ ಕಾರಣಗಳು ಅದಕ್ಕೆ ಬೇಕಾಗಿಯೂ ಇಲ್ಲ. ಇದನ್ನು ಸೂಚಿಸುವುದಕ್ಕಾಗಿಯೇ 'ಯಾವ ಅನುಪಪತ್ತಿಯೂ ಇಲ್ಲ' ಎನ್ನದೆ 'ಯಾವ ಪ್ರಶ್ನೆಗೂ ಅವಕಾಶವಿಲ್ಲ' ಎಂದಿದ್ದಾರೆ.

**ಈಶ್ವರಭೇದ ಜೀವನಿಗೆ ಪ್ರತ್ಯಕ್ಷ**

**ईश्वरप्रतियोगिको जीवाधिकरणकस्तु जीवस्य । सप्रति-योगिकपदार्थप्रत्यक्षे न प्रतियोगिप्रत्यक्षं प्रयोजकम् । ''इयं**

**गौर्गवयसदृशी'', ''इह स पटो नास्ति'', ''स्तम्भः पिशाचो न भवति'' इत्यादौ व्यभिचारात् । एतेनाभावप्रत्यक्षयोग्यतायाः प्रतियोगिप्रत्यक्षयोग्यताधीनत्वादयोग्येश्वरप्रतियोगिकान्योन्याभावस्य कथं प्रत्यक्षयोग्यतेति निरस्तम् । ''स्तम्भः पिशाचो न भवती''त्यनुभवात् । अन्योन्याभावविषयत्वात्तस्य ।**

**एवं यज्ञदत्तप्रतियोगिको विष्णुमित्रधर्मिको भेदो विष्णुमित्रस्य, विष्णुमित्रप्रतियोगिको देवदत्तधर्मिको भेदो देवदत्तस्य प्रत्यक्ष इत्याद्यूह्यम्।**

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 5 ನೋಡಿರಿ)

ಈಶ್ವರ ಪ್ರತಿಯೋಗಿಕ ಜೀವಾಧಿಕರಣಕ ಭೇದವು ಜೀವನಿಗೆ ಪ್ರತ್ಯಕ್ಷ ಗೋಚರ. ಸಪ್ರತಿಯೋಗಿಕ ಪದಾರ್ಥ ಪ್ರತ್ಯಕ್ಷಕ್ಕೆ ಪ್ರತಿಯೋಗಿ ಪ್ರತ್ಯಕ್ಷವು ಪ್ರಯೋಜಕವಲ್ಲ. 'ಈ ಗೋವು ಗವಯ ಸದೃಶವಾಗಿದೆ' 'ಇಲ್ಲಿ ಆ ಬಟ್ಟೆ ಇಲ್ಲ' 'ಕಂಭವು ಪಿಶಾಚಿಯಲ್ಲ' ಇತ್ಯಾದಿ ಪ್ರತ್ಯಕ್ಷಗಳಲ್ಲಿ ವ್ಯಭಿಚಾರವಿರುವುದರಿಂದ. 'ಅಭಾವವು ಪ್ರತ್ಯಕ್ಷ ಯೋಗ್ಯವಾಗಬೇಕಾದರೆ ಪ್ರತಿಯೋಗಿಯು ಪ್ರತ್ಯಕ್ಷಯೋಗ್ಯವಾಗಿರಬೇಕು, ಅದರಿಂದ ಪ್ರತ್ಯಕ್ಷಾಯೋಗ್ಯ ಈಶ್ವರ ಪ್ರತಿಯೋಗಿಕ ಭೇದವು ಹೇಗೆ ಪ್ರತ್ಯಕ್ಷ ಯೋಗ್ಯ?' ಎನ್ನುವ ಆಕ್ಷೇಪವೂ ಸರಿಯಲ್ಲ, ಕಂಬವು 'ಪಿಶಾಚಿಯಲ್ಲ' ಎಂದು ಅನುಭವವಿದೆ. ಇದು ಭೇದವಿಷಯಕವಾಗಿದೆ. ಹೀಗೆ ಯಜ್ಞದತ್ತ ಪ್ರತಿಯೋಗಿಕ ವಿಷ್ಣುಮಿತ್ರ ಧರ್ಮಿಕ ಭೇದವು ವಿಷ್ಣುಮಿತ್ರನಿಗೆ ಪ್ರತ್ಯಕ್ಷಸಿದ್ಧ, ವಿಷ್ಣುಮಿತ್ರ ಪ್ರತಿಯೋಗಿಕ ದೇವದತ್ತಧರ್ಮಿಕ ಭೇದವು ದೇವದತ್ತನಿಗೆ ಪ್ರತ್ಯಕ್ಷಸಿದ್ಧ ಎಂದು ಮುಂತಾಗಿ ಭೇದಪ್ರತ್ಯಕ್ಷ ಸಾಧಕ ಅನುಮಾನಗಳನ್ನು ತಿಳಿಯಬೇಕು.

### ಅಭಾವ ಪ್ರತ್ಯಕ್ಷಕ್ಕೆ ಪ್ರತಿಯೋಗಿ ಪ್ರತ್ಯಕ್ಷ ಆವಶ್ಯಕವಲ್ಲ

जीवाधिकरणकस्तु भेदो जीवस्य प्रत्यक्ष इति सम्बन्धः । नाहं सर्वज्ञो नाहं निर्दुःख इत्यनुभवादिति भावः ।

नन्वीश्वरस्याप्रत्यक्षत्वात्कथं तत्प्रतियोगिकभेदस्य प्रत्यक्षत्वमिति

चेत् तत्किं प्रतियोगिप्रत्यक्षं सप्रतियोगिकपदार्थप्रत्यक्षमात्रेऽभावप्रत्यक्षमात्रेऽन्योन्याभावप्रत्यक्ष एव वा कारणम् ? किं वा योग्यानुपलब्धेरभावप्रत्यक्षहेतुत्वादभावयोग्यत्वे प्रतियोगियोग्यतायाः प्रयोजकत्वमिष्यते ? आद्यपक्षत्रयं दूषयति **– सप्रतियोगिकेति ।** इत्यादौ प्रत्यक्षे व्यभिचारात् । पूर्वक्षणे प्रतियोगिभूतगवयादिप्रत्यक्षाभावेऽपि तादृशप्रत्यक्षजननादिति भावः । चतुर्थं तृतीयदोषातिदेशेन दूषयति **– एतेनेति ।** एतदेव विवृणोति **– स्तम्भ इति ।** 'प्रतियोगिनः पिशाचस्यायोग्यत्वेऽपी'त्यादिः । इत्यनुभवात् इत्याकारकप्रत्यक्षजननात् । तथाच तत्र व्यभिचारेण योग्यानुपलब्धेरभावप्रत्यक्षसामान्यहेतुत्वासम्भवान्नाभावयोग्यतायाः प्रतियोगियोग्यताधीनत्वमिति भावः ।

यद्वा, ननु पिशाचभेदप्रत्यक्षमेव नास्तीति नोक्तव्यभिचार इत्यत आह **– स्तम्भ इति ।** इत्यनुभवात् इति प्रत्यक्षस्यानुभवसिद्धत्वात् । अन्यथाऽनुभवविरोध इति भावः । ननु पिशाचो न भवतीति प्रतीतिः तद्विरोधविषयैवास्तु । विरोधस्यापि नञर्थत्वादत आह **– अन्योन्याभावेति ।** अर्थान्तरानुपस्थितावपि तस्यानुभवसिद्धत्वादिति भावः ।

ಜೀವಾಧಿಕರಣಕ ಭೇದವು ಜೀವನಿಗೆ ಪ್ರತ್ಯಕ್ಷ ಎಂದು ಅನ್ವಯ. ನಾನು ಸರ್ವಜ್ಞನಲ್ಲ, ನಾನು ನಿರ್ದುಃಖನಲ್ಲ ಎಂದು ಸರ್ವಜ್ಞ ನಿರ್ದುಖನಾದ ಈಶ್ವರನ ಭೇದ ತನ್ನಲ್ಲಿ ಇರುವುದು ತನಗೆ ಪ್ರತ್ಯಕ್ಷ ಸಿದ್ಧವಾಗಿದೆ ಎಂದು ಭಾವ.

ಈಶ್ವರ ಅಪ್ರತ್ಯಕ್ಷನಾದ್ದರಿಂದ ಈಶ್ವರ ಪ್ರತಿಯೋಗಿಕ ಭೇದವು ಹೇಗೆ ಪ್ರತ್ಯಕ್ಷ ಸಿದ್ಧವಾಗುವುದು ಎಂದರೆ ಕೇಳುತ್ತೇವೆ— ಪ್ರತಿಯೋಗಿ ಪ್ರತ್ಯಕ್ಷವು ಸಪ್ರತಿಯೋಗಿಕ ಪದಾರ್ಥದ ಪ್ರತ್ಯಕ್ಷವೆಲ್ಲಕ್ಕೂ ಕಾರಣವೆಂದು, ಅಭಾವ ಪ್ರತ್ಯಕ್ಷವೆಲ್ಲಕ್ಕೂ ಕಾರಣವೆಂದು, ಅಥವಾ ಅನ್ಯೋನ್ಯಾಭಾವಪ್ರತ್ಯಕ್ಷಕ್ಕೆ ಮಾತ್ರ ಕಾರಣವೆಂದು ಅಭಿಪ್ರಾಯವೆ? ಅಥವಾ ಯೋಗ್ಯಾನುಪಲಬ್ಧಿಯು ಅಭಾವಪ್ರತ್ಯಕ್ಷಕ್ಕೆ ಹೇತುವಾಗಿರುವುದರಿಂದ ಅಭಾವವು ಪ್ರತ್ಯಕ್ಷಯೋಗ್ಯವಾಗಬೇಕಾದರೆ ಅದಕ್ಕೆ ಪ್ರತಿಯೋಗಿಯು ಪ್ರತ್ಯಕ್ಷಯೋಗ್ಯವಾಗುವುದು ಪ್ರಯೋಜಕ ವೆಂದು ಅಭಿಪ್ರಾಯವೆ? ಮೊದಲ ಮೂರು ಪಕ್ಷಗಳಿಗೆ ಅನುಪಪತ್ತಿಯನ್ನು ಹೇಳುತ್ತಾರೆ— 'ಸಪ್ರತಿಯೋಗಿಕ ಪದಾರ್ಥಪ್ರತ್ಯಕ್ಷಕ್ಕೆ ಪ್ರತಿಯೋಗಿ ಪ್ರತ್ಯಕ್ಷವು

ಪ್ರಯೋಜಕವಲ್ಲ' ಎಂದು. ಪ್ರಯೋಜಕವಲ್ಲ ಏಕೆಂದರೆ, ಈ ಗೋವು ಗವಯಕ್ಕೆ ಸದೃಶವಾಗಿದೆ ಎಂದು ಮುಂತಾದ ಪ್ರತ್ಯಕ್ಷಗಳಲ್ಲಿ ಪ್ರತಿಯೋಗಿ ಪ್ರತ್ಯಕ್ಷ ನಿಯಮವು ಇಲ್ಲ, ವ್ಯಭಿಚರಿತವಾಗಿದೆ. ಏಕೆಂದರೆ, ಪೂರ್ವಕ್ಷಣ ದಲ್ಲಿ ಪ್ರತಿಯೋಗಿಯಾದ ಗವಯ ಮುಂತಾದುದರ ಪ್ರತ್ಯಕ್ಷವಿಲ್ಲದಿದ್ದರೂ ಸಪ್ರತಿಯೋಗಿ ಪದಾರ್ಥ ಸಾದೃಶ್ಯಪ್ರತ್ಯಕ್ಷ ಉಂಟಾಗುತ್ತಿದೆ ಎಂದು ಭಾವ.

ನಾಲ್ಕನೇ ಪಕ್ಷಕ್ಕೆ ಮೂರನೇ ಪಕ್ಷದ ದೋಷವೇ ಇದೆ ಎಂದು ಅತಿದೇಶ ಮಾಡಿ ನಿರಾಕರಿಸುತ್ತಾರೆ. 'ಕಂಬವು ಪಿಶಾಚಿಯಲ್ಲ' ಎಂದು ಭೇದ ಪ್ರತ್ಯಕ್ಷದಲ್ಲಿ ಪ್ರತಿಯೋಗಿಯಾದ ಪಿಶಾಚಿಯು ಪ್ರತ್ಯಕ್ಷಯೋಗ್ಯವಲ್ಲ. ಆದರೂ ಭೇದಪ್ರತ್ಯಕ್ಷ ಬರುತ್ತಿದೆ. ಇದು ಅನುಭವ. ಇಂಥ ಕಡೆಗಳಲ್ಲಿ ನಿಮ್ಮ ನಿಯಮಕ್ಕೆ ವ್ಯಭಿಚಾರ ಬರುವುದರಿಂದ ಎಲ್ಲ ಅಭಾವ ಪ್ರತ್ಯಕ್ಷಗಳಿಗೂ ಯೋಗ್ಯಾನುಪಲಬ್ಧಿ ಎಂಬುದು ಹೇತು ಎನ್ನಲಾಗದುದರಿಂದ ಅಭಾವದ ಪ್ರತ್ಯಕ್ಷಯೋಗ್ಯತ್ವವು ಪ್ರತಿಯೋಗಿಯ ಪ್ರತ್ಯಕ್ಷಯೋಗ್ಯತ್ವದ ಅಧೀನವೆನ್ನಲಾಗದೆಂದು ಭಾವ.

ಅಥವಾ ಪಿಶಾಚಿಯ ಭೇದ ಪ್ರತ್ಯಕ್ಷವೇ ಇಲ್ಲದ್ದರಿಂದ ವ್ಯಭಿಚಾರವಿಲ್ಲ ಎಂದರೆ ಹೇಳುತ್ತಾರೆ. ಕಂಬವು ಪಿಶಾಚಿಯಲ್ಲ ಎನ್ನುವ ಭೇದಪ್ರತ್ಯಕ್ಷ ಬರುವುದು ಅನುಭವಸಿದ್ಧವಾಗಿದೆ. ಇದನ್ನು ಒಪ್ಪದಿದ್ದರೆ ಅನುಭವ ವಿರೋಧ ಬರುತ್ತದೆ ಎಂದು ಭಾವ.

'ಪಿಶಾಚಿಯಲ್ಲ ಎನ್ನುವ ಪ್ರತ್ಯಕ್ಷವು ಭೇದವಿಷಯವಲ್ಲ, ವಿರೋಧವಿಷಯಕವೆನ್ನೋಣ, 'ತತ್‌ಸಾದೃಶ್ಯಮಭಾವಶ್ಚ ತದನ್ಯತ್ವಂ ತದಲ್ಪತಾ। ಅಪ್ರಾಶಸ್ತ್ಯಂ ವಿರೋಧಶ್ಚ ನಞರ್ಥಾಃ ಷಟ್ ಪ್ರಕೀರ್ತಿತಾಃ' ಸಾದೃಶ್ಯ ಅಭಾವ ಅನ್ಯತ್ವ ಅಲ್ಪತ್ವ ಅಪ್ರಾಶಸ್ತ್ಯ ವಿರೋಧಗಳು ಆರು ನಞರ್ಥಗಳು. ಆದರಿಂದ ವಿರೋಧವೂ ನಞರ್ಥ'ವೆಂದರೆ ಹೇಳುತ್ತಾರೆ, ವಿರೋಧ ಮುಂತಾದ ಬೇರೆ ಅರ್ಥದ ಉಪಸ್ಥಿತಿ ಇಲ್ಲದಿದ್ದಾಗಲೂ 'ಪಿಶಾಚಿ ಅಲ್ಲ' ಎಂಬ ಭೇದ ಪ್ರತ್ಯಕ್ಷ ಬರುವುದು ಅನುಭವಸಿದ್ಧವಾಗಿದೆ ಎಂದು ಭಾವ.

**नन्वभावयोग्यतायाः प्रतियोगियोग्यतानधीनत्वे गुरुत्वाद्यभावप्रत्यक्षापत्तिः । न च संसर्गाभावप्रत्यक्षे प्रतियोगियोग्यत्वम्, अन्योन्याभावप्रत्यक्षे चाधिकरणयोग्यत्वं प्रयोजकमिति वाच्यम् । स्तम्भे पिशाचत्वात्यन्ताभावस्य वायावुद्भूतरूपवद्भेदस्य च प्रत्यक्षानुपपत्तेरिति चेन्न । अनुभवानुसारेण तत्तदभावत्वस्यैव तत्तद्योग्यताप्रयोजकत्वात् । विष्णुमित्रस्येति ।** नाहं यज्ञमित्र इत्याद्यनुभवादिति भावः । इत्यादीत्यादिना सर्वस्यापि स्वधर्मिकस्वेतरप्रतियोगिकभेदः स्वप्रत्यक्ष इत्येतत्परिग्रहः ।

ಪರಮಾಣುವಿನಲ್ಲಿ ರೂಪ ಇದೆ. (ಅನುದ



ಪ್ರಶ್ನೆ—'ಅಭಾವದ ಪ್ರತ್ಯಕ್ಷ ಯೋಗ್ಯತ್ವವು ಪ್ರತಿಯೋಗಿಪ್ರತ್ಯಕ್ಷಯೋಗ್ಯತ್ವಕ್ಕೆ ಅಧೀನವಲ್ಲದಿದ್ದರೆ ಗುರುತ್ವಾದಿ ಅತೀಂದ್ರಿಯ ವಸ್ತುಗಳ ಅಭಾವ ಪ್ರತ್ಯಕ್ಷ ಬಂದೀತು ತಾನೆ? 'ಸಂಸರ್ಗಾಭಾವ ಪ್ರತ್ಯಕ್ಷಕ್ಕೆ ಪ್ರತಿಯೋಗಿಯ ಪ್ರತ್ಯಕ್ಷಯೋಗ್ಯತ್ವವು ಪ್ರಯೋಜಕ. ಇಲ್ಲಿ ಪರಮಾಣುವು ಇಲ್ಲ ಎಂದು, ಪ್ರತ್ಯಕ್ಷಾಯೋಗ್ಯವಾದ ಪರಮಾಣುವಿನ ಪ್ರತ್ಯಕ್ಷ ಬರುವುದಿಲ್ಲ. ಅನ್ಯೋನ್ಯಾಭಾವ ಪ್ರತ್ಯಕ್ಷಕ್ಕೆ ಮಾತ್ರ ಅಧಿಕರಣದ ಪ್ರತ್ಯಕ್ಷಯೋಗ್ಯತ್ವವು ಪ್ರಯೋಜಕ' ಎಂದು ಹೇಳಿದರೆ ಕಂಬದಲ್ಲಿ ಪಿಶಾಚತ್ವದ ಅತ್ಯಂತಾಭಾವ ಪ್ರತ್ಯಕ್ಷ ಬಾರದೆ ಹೋದೀತು, ವಾಯುವಿನಲ್ಲಿ ಉದ್ಭೂತರೂಪವದ್ಭೇದ ಪ್ರತ್ಯಕ್ಷವೂ ಬಾರದೆ ಹೋದೀತು.

ಈ ಪ್ರಶ್ನೆಗೆ ಸಮಾಧಾನ— ಅನುಭವಾನುಸಾರವಾಗಿ ತತ್ತದಭಾವತ್ವವನ್ನೇ ತತ್ತದಭಾವ ಪ್ರತ್ಯಕ್ಷತ್ವಕ್ಕೆ ಪ್ರಯೋಜಕವೆನ್ನಬೇಕು ಎಂದು.

ಯಜ್ಞದತ್ತ ಪ್ರತಿಯೋಗಿಕ ವಿಷ್ಣುಮಿತ್ರ ಧರ್ಮಿಕ ಭೇದವು ವಿಷ್ಣುಮಿತ್ರನಿಗೆ ಪ್ರತ್ಯಕ್ಷಸಿದ್ಧ. 'ನಾನು ಯಜ್ಞದತ್ತನಲ್ಲ' ಎಂದೇ ಅವನಿಗೆ ಅನುಭವ ಬರುತ್ತದೆ. ಹೀಗೆಯೇ ಎಲ್ಲರಿಗೂ ತಮ್ಮ ತಮ್ಮ ಧರ್ಮಿಕ ಇತರ ಪ್ರತಿಯೋಗಿಕ ಭೇದವು ತಮಗೆ ಪ್ರತ್ಯಕ್ಷಸಿದ್ಧವೇ ಆಗಿದೆ ಎಂದು ತಿಳಿಯಬೇಕು.

**ननु 'नाहं निर्दु:खो न सर्वज्ञ' इति निर्दु:खत्वादिसंसर्गाभाव एवात्मन्यनुभूयते नेश्वरप्रतियोगिकान्योन्याभाव इति चेन्न । मयि निर्दु:खत्वं सर्वज्ञत्वादिकं वा नास्तीत्यनुभव एव तत्संसर्गाभावविषयकः । निर्दु:खत्वस्यैव प्रतियोगितया तत्रोपादानात् । न चास्य निर्दु:खत्वात्यन्ताभावो विषयः । धर्मिप्रतियोगिनोस्तादात्म्यं सामानाधिकरण्येन प्रसज्य तस्यैव निषेधात् । प्रत्यक्षप्रामाण्यं तु सुदृढमन्यत्रोपपादितमस्माभिः ।**

**'ನಾನು ನಿರ್ದುಃಖನಲ್ಲ' 'ಸರ್ವಜ್ಞನಲ್ಲ' ಎಂದು ನಿರ್ದುಃಖತ್ವ ಸರ್ವಜ್ಞತ್ವಗಳ ಸಂಸರ್ಗಾಭಾವವೇ ಅನುಭವದಲ್ಲಿ ಕಾಣುತ್ತದೆ ಹೊರತು ಈಶ್ವರ ಪ್ರತಿಯೋಗಿಕ ಅನ್ಯೋನ್ಯಾಭಾವ ಕಾಣುವುದಿಲ್ಲ' ಎಂದರೆ ಅದು ಸರಿಯಲ್ಲ. 'ನನ್ನಲ್ಲಿ ನಿರ್ದುಃಖತ್ವವಿಲ್ಲ, ಸರ್ವಜ್ಞತ್ವಾದಿಗಳಿಲ್ಲ' ಎನ್ನುವ ಅನುಭವವೇ ಅವುಗಳ ಸಂಸರ್ಗಾಭಾವವಿಷಯಕ. ನಿರ್ದುಃಖತ್ವವನ್ನೇ ಪ್ರತಿಯೋಗಿ ಎಂದು ಅದು ವಿಷಯೀಕರಿಸುತ್ತದೆ ತಾನೆ? 'ನಾನು ನಿರ್ದುಃಖನಲ್ಲ' ಎಂಬ ಅನುಭವ ಹಾಗೆ**

**ನಿರ್ದುಃಖತ್ವಾತ್ಯಂತಾಭಾವವನ್ನು ವಿಷಯೀಕರಿಸುವುದಿಲ್ಲ. ಧರ್ಮಿಪ್ರತಿಯೋಗಿಗಳ ತಾದಾತ್ಮ್ಯವನ್ನು ಸಾಮಾನಾಧಿಕರಣ್ಯದಿಂದ ಆರೋಪಮಾಡಿ ಅದನ್ನೇ ನಿಷೇಧ ಮಾಡುತ್ತದೆ. ಪ್ರತ್ಯಕ್ಷ ಪ್ರಾಮಾಣ್ಯವನ್ನು ಬಹಳ ದೃಢವಾಗಿ ಬೇರೆ ಕಡೆ ನಾವು ಉಪಪಾದನ ಮಾಡಿರುವೆವು.**

स्यादेवमुक्तभेदस्य प्रत्यक्षत्वं, यदि नाहं निर्दुःख इत्यादि प्रत्यक्षं भेदविषयं स्यात्, न त्वेवमित्याशङ्कते **—नन्विति । प्रतियोगितयोपादानादिति ।** अभावांशे प्रतियोगितासंसर्गेण विशेषणत्वादित्यर्थः । अस्य नाहं निर्दुःख इत्यादिप्रत्यक्षस्य । **धर्मिप्रतियागिनोरिति ।** 'नाहं निर्दुःख' इति वाक्येनेत्यादिः । धर्मिणि जीवे प्रतियोगिन ईश्वरस्य तादात्म्यं धर्मिप्रतियोगिपदयोः समानविभक्तिकत्वेनारोप्य । तादृशतादात्म्यारोपजनकसमानविभक्तिकधर्मिप्रतियोगिपदे समुल्लिख्येति यावत् । तस्य तादात्म्यस्यैव निषेधात् अभावबोधनादित्यर्थः ।

अयमाशयः । यादृशशब्दाद्यादृशार्थस्य बोधस्तादृशशब्दोल्लिखितप्रतीतौ तादृशार्थ एव भासते । नञसमभिव्याहारे यत्र यादृशधर्मः प्रतीयते नञ्समभिव्याहारे तत्र तदभावो बुध्यते। तथाच मयि निर्दुःखत्वमस्तीत्यादौ धर्मिणि निर्दुःखत्वभानात्तदभावस्यैव निर्दुःखत्वं नास्तीत्यादौ भानसम्भवः । न च मयि निर्दुःखत्वमस्तीत्यादिशब्दान्निर्दुःखत्वादौ धर्मिनिरूपितास्तित्वस्यैव बोधात् कथमुक्तप्रतीतौ धर्मिणि निर्दुःखत्वभानमिति वाच्यम् । निर्दुःखत्वे धर्मिनिरूपितास्तित्वभाने धर्मिणि निर्दुःखत्वभानस्याप्यनुभवसिद्धत्वात् ।

'ನಾನು ನಿರ್ದುಃಖನಲ್ಲ' ಎಂದು ಮುಂತಾದ ಪ್ರತ್ಯಕ್ಷವು ಭೇದವನ್ನು ವಿಷಯೀಕರಿಸಿದರೆ ಜೀವೇಶ್ವರ ಭೇದವು ಪ್ರತ್ಯಕ್ಷ ಸಿದ್ಧವೆಂದಾದೀತು. ಆದರೆ ಈ ಪ್ರತ್ಯಕ್ಷವು ಭೇದವನ್ನು ವಿಷಯೀ ಕರಿಸುತ್ತಿಲ್ಲ ಎಂದು ಪೂರ್ವಪಕ್ಷ ಮಾಡಿಕೊಳ್ಳುತ್ತಾರೆ. 'ನಿರ್ದುಃಖತ್ವವನ್ನೇ ಪ್ರತಿಯೋಗಿಯೆಂದು ವಿಷಯೀಕರಿಸುತ್ತದೆ' ಎಂದರೆ ಅಭಾವಾಂಶದಲ್ಲಿ ಪ್ರತಿಯೋಗಿತಾ ಸಂಸರ್ಗದಿಂದ ವಿಶೇಷಣವಾಗಿ

ನಿರ್ದುಃಖತ್ವವನ್ನೇ ವಿಷಯೀಕರಿಸುತ್ತದೆ ಎಂದರ್ಥ. 'ನಾನು ನಿರ್ದುಃಖನಲ್ಲ' ಎನ್ನುವ ಪ್ರತ್ಯಕ್ಷವು 'ನಾನು ನಿರ್ದುಃಖನಲ್ಲ' ಎಂಬ ವಾಕ್ಯದಿಂದ ಧರ್ಮಿ ಪ್ರತಿಯೋಗಿಗಳಿಗೆ, ಅಂದರೆ ಧರ್ಮಿಯಾದ ಜೀವನಲ್ಲಿ ಪ್ರತಿಯೋಗಿಯಾದ ಈಶ್ವರನಿಗೆ, ಧರ್ಮಿಪ್ರತಿಯೋಗಿಪದಗಳ ಸಮಾನವಿಭಕ್ತಿಗಳಿಂದ ತಾದಾತ್ಮ್ಯವನ್ನು ಆರೋಪಿಸಿ, ಅಂದರೆ ಅಂಥ ತಾದಾತ್ಮ್ಯಾರೋಪ ಜನಕ ಸಮಾನ ವಿಭಕ್ತಿಕ ಧರ್ಮಿಪ್ರತಿಯೋಗಿ ಪದಗಳನ್ನು ಉಲ್ಲೇಖಿಸಿ ಆ ತಾದಾತ್ಮ್ಯವನ್ನೇ ನಿಷೇಧಿಸುತ್ತದೆ, ಅಂದರೆ ಆ ತಾದಾತ್ಮ್ಯದ ಅಭಾವವನ್ನು ಬೋಧಿಸುತ್ತದೆ ಎಂದರ್ಥ.

ಇದರ ಅಭಿಪ್ರಾಯ ಇಷ್ಟು— ವಕ್ತೃವು ಜ್ಞಾನಪೂರ್ವಕವಾಗಿ ಶಬ್ದಪ್ರಯೋಗ ಮಾಡುತ್ತಾನೆ. ಅವನು ಆಡಿದ ಯಾವ ಶಬ್ದದಿಂದ ಯಾವ ವಿಷಯದ ಶಾಬ್ದಬೋಧ ಬರುವುದೋ, ಆ ಶಬ್ದದಿಂದ ತಿಳಿದುಬರುವ ವಕ್ತೃವಿನ ಜ್ಞಾನದಲ್ಲಿ ಅದೇ ವಿಷಯವು ಕಾಣಿಸುತ್ತದೆ ಎಂದು ನಿಯಮ. ನಞ್ ಸಮಭಿವ್ಯಾಹಾರವಿಲ್ಲದಿದ್ದಾಗ ಯಾವಧರ್ಮಿಯಲ್ಲಿ ಯಾವ ಧರ್ಮ ವಿಷಯಕ ಶಾಬ್ದಬೋಧ ಬರುವುದೋ, ನಞ್ ಸಮಭಿವ್ಯಾಹಾರವಿರುವಾಗ ಅಲ್ಲಿ ಆ ಧರ್ಮದ ಅಭಾವವಿಷಯಕ ಶಾಬ್ದಬೋಧ ಬರುತ್ತದೆ. ಸಮಭಿವ್ಯಾಹಾರವೆಂದರೆ ಸಹ ಪ್ರಯೋಗ. ಹೀಗಾಗಿ ನನ್ನಲ್ಲಿ ನಿರ್ದುಃಖತ್ವವಿದೆ ಎಂಬ ವಾಕ್ಯದಿಂದ ಧರ್ಮಿಯಲ್ಲಿ ನಿರ್ದುಃಖತ್ವವೆಂಬ ಧರ್ಮವಿಷಯಕಜ್ಞಾನ ಬರುವುದರಿಂದ 'ನನ್ನಲ್ಲಿ ನಿರ್ದುಃಖತ್ವವಿಲ್ಲ' ಎಂಬ ವಾಕ್ಯದಿಂದ ಧರ್ಮಿಯಲ್ಲಿ ನಿರ್ದುಃಖತ್ವವೆಂಬ ಧರ್ಮದ ಅಭಾವ ವಿಷಯಕ ಜ್ಞಾನ ಬರುವುದು ಸಂಭವ.

'ನನ್ನಲ್ಲಿ ನಿರ್ದುಃಖತ್ವವಿದೆ' ಎಂಬ ವಾಕ್ಯದಿಂದ ನಿರ್ದುಃಖತ್ವದಲ್ಲಿ ಧರ್ಮಿನಿರೂಪಿತ ಅಸ್ತಿತ್ವವೇ ಬೋಧಿತವಾಗುವುದರಿಂದ ಧರ್ಮಿಯಲ್ಲಿ ನಿರ್ದುಃಖತ್ವವು ಬೋಧಿತವಾಗುವುದು ಹೇಗೆ ಎಂದರೆ ನಿರ್ದುಃಖತ್ವದಲ್ಲಿ ಧರ್ಮಿನಿರೂಪಿತ ಅಸ್ತಿತ್ವ ಕಾಣುವಾಗ ಜೊತೆಗೆ ತುಲ್ಯವಿತ್ತಿವೇದ್ಯತ್ವ ಪ್ರಯುಕ್ತ ಧರ್ಮಿಯಲ್ಲಿ ನಿರ್ದುಃಖತ್ವ ಬೋಧವೂ ಉಂಟಾಗುತ್ತದೆ, ಎನ್ನುವುದು ಅನುಭವಸಿದ್ಧವಾಗಿದೆ.

**एवमहं निर्दुःख इत्यादौ धर्मिणि निर्दुःखतादात्म्यभानात् तदभावस्यैव नाहं निर्दुःख इत्यादौ भानमित्युक्तान्योन्याभावस्य प्रत्यक्षत्वमावश्यकम् । तादात्म्यनिषेधस्यैवान्योन्याभावत्वात् । न च निर्दुःखतादात्म्यस्य निर्दुःखत्वरूपतया तदत्यन्ताभाव एवायमिति वाच्यम् । तादात्म्यत्वेन तादात्म्यनिषेधस्यान्योन्याभावत्वात् । एवं नाहं निर्दुःख इत्यादौ निर्दुःखप्रतियोगिकत्वेन भासमानभेदे तत्तादात्म्यप्रतियोगिकत्वमपि भासते । निर्दुःखत्वं नास्तीत्यादौ तु न तथेति नैकविषयत्वमिति ध्येयम् ।**

ಹೀಗೆಯೇ 'ನಾನು ನಿರ್ದುಃಖ' ಎಂಬಲ್ಲಿ ವಿಶೇಷಣವಿಭಕ್ತ್ಯರ್ಥವಾದ ತಾದಾತ್ಮ್ಯವು ಧರ್ಮಿಯಲ್ಲಿ ಪ್ರಕಾರವಾಗಿ ಕಾಣುತ್ತದೆ. ಆದರಿಂದ ಧರ್ಮಿಯಲ್ಲಿ ನಿರ್ದುಃಖ ತಾದಾತ್ಮ್ಯ ತೋರುವುದರಿಂದ 'ನಾನು ನಿರ್ದುಃಖನಲ್ಲ' ಎಂದಾಗ ಧರ್ಮಿಯಲ್ಲಿ ನಿರ್ದುಃಖ ತಾದಾತ್ಮ್ಯದ ಅಭಾವವೇ ಪ್ರತ್ಯಕ್ಷದಲ್ಲಿ ತೋರುವುದು ಆವಶ್ಯಕ. ಈ ತಾದಾತ್ಮ್ಯವು 'ನಾನು ನಿರ್ದುಃಖ' ಎಂಬಲ್ಲಿ 'ನಿರ್ದುಃಖ' ಎಂಬ ವಿಶೇಷಣಪದೋತ್ತರ ಪ್ರಥಮಾವಿಭಕ್ತಿಯಿಂದ ಕಾಣುತ್ತದೆ. ನಾನು ನಿರ್ದುಃಖನಲ್ಲ ಎಂದು ನಞ್ ಸಮಭಿವ್ಯಾಹಾರವಿರುವಾಗ ಈ ತಾದಾತ್ಮ್ಯದ ಅಭಾವವು ಕಾಣುತ್ತದೆ. ಶಾಬ್ದಬೋಧದಲ್ಲಿ ತದಾತ್ಮ್ಯಾಭಾವ ಕಾಣುವುದರಿಂದ ಅದು ಉಲ್ಲೇಖಿಸುವ ವಕ್ತೃವಿನ ಜ್ಞಾನ ದಲ್ಲಿಯೂ ತಾದಾತ್ಮ್ಯಾಭಾವವೇ ಕಾಣಬೇಕು. ತಾದಾತ್ಮ್ಯದ ಅಭಾವವೇ ಅನ್ಯೋನ್ಯಾಭಾವ. ಹೀಗಾಗಿ 'ನಾನು ನಿರ್ದುಃಖನಲ್ಲ' ಎಂದು ಧರ್ಮಿಯಲ್ಲಿ ನಿರ್ದುಃಖ ತಾದಾತ್ಮ್ಯ ನಿಷೇಧ ರೂಪವಾದ ನಿರ್ದುಃಖಾನ್ಯೋನ್ಯಾಭಾವವೇ ಕಾಣಬೇಕು.

ನಿರ್ದುಃಖತಾದಾತ್ಮ್ಯವು ನಿರ್ದುಃಖತ್ವ ರೂಪವಾದ್ದರಿಂದ ಆದರ ನಿಷೇಧವು ನಿರ್ದುಃಖತ್ವದ ಅತ್ಯಂತಾಭಾವವೇ ಆಯಿತು ತಾನೆ? ಎಂದರೆ ತಾದಾತ್ಮ್ಯತ್ವೇನ ತಾದಾತ್ಮ್ಯ ನಿಷೇಧವು ಅನ್ಯೋನ್ಯಾಭಾವರೂಪವಾಗುವುದು. ಆದರಿಂದ ನಿರ್ದುಃಖಾನ್ಯೋನ್ಯಾಭಾವವೇ ನಿರ್ದುಃಖ ಭೇದವೇ ಕಾಣುತ್ತದೆ.

'ನಾನು ನಿರ್ದುಃಖನಲ್ಲ' ಎಂಬಲ್ಲಿ ನಿರ್ದುಃಖ ಪ್ರತಿಯೋಗಿಕವಾಗಿ ಕಾಣುವ ಭೇದದಲ್ಲಿ ನಿರ್ದುಃಖ ಪ್ರತಿಯೋಗಿಕತ್ವದಂತೆ ನಿರ್ದುಃಖ ತಾದಾತ್ಮ್ಯ ಪ್ರತಿಯೋಗಿಕತ್ವವು ಕೂಡ ಕಾಣುತ್ತದೆ. 'ನಿರ್ದುಃಖತ್ವವಿಲ್ಲ' ಎಂಬಲ್ಲಿ ಅಭಾವದಲ್ಲಿ ನಿರ್ದುಃಖತ್ವಪ್ರತಿಯೋಗಿಕತ್ವ ಮಾತ್ರ ಕಾಣುತ್ತದೆ ಹೊರತು ನಿರ್ದುಃಖತಾದಾತ್ಮ್ಯ ಪ್ರತಿಯೋಗಿಕತ್ವವು ಕಾಣುವುದಿಲ್ಲ. ಆದರಿಂದ 'ನಾನು ನಿರ್ದುಃಖನಲ್ಲ' 'ನನ್ನಲ್ಲಿ ನಿರ್ದುಃಖತ್ವವಿಲ್ಲ' ಎಂಬ ಪ್ರತೀತಿಗಳಿಗೆ ವಿಷಯವು ಒಂದೇ ಆಗುವುದಿಲ್ಲ.

**नन्वस्तु जीवेश्वरभेदप्रत्यक्षम् । किं त्वप्रमाणमेव । दर्शितप्रमाणबाधितत्वादित्यत आह — प्रत्यक्षप्रामाण्यमिति ।** सुदृढमुपपादितं मानान्तराबाध्यत्वेनोपपादितं न्यायामृतादौ । अन्यथा वह्निरनुष्णः कृतकत्वादित्यादौ बाधोच्छेदापत्तेरिति भावः । अस्यार्थस्य पूर्वाचार्यैरेवोक्तत्वादुक्तमित्यनुक्त्वोपपादितमित्युक्तम् । जीवेशाभेदप्रत्यक्षं तु नास्त्येवेति वक्ष्यते । यद्वा, प्रकृतस्य जीवेश्वरभेदप्रत्यक्षस्यैव प्रामाण्यं सुदृढमव्यभिचार्युपपादितम् । अस्य साक्षिप्रत्यक्षत्वात् साक्षिणश्च नियतप्रामाण्यकत्वादिति भावः ।

ಜೀವೇಶ್ವರ ಭೇದವು ಪ್ರತ್ಯಕ್ಷ ಯೋಗ್ಯವೆಂದು ಒಪ್ಪೋಣ. ಆದರೂ ಆ ಪ್ರತ್ಯಕ್ಷವು ಪ್ರಮಾಣವಲ್ಲ. ಹಿಂದೆ ಹೇಳಿದ ಪ್ರಮಾಣಗಳ ವಿರೋಧವಿರುವುದರಿಂದ ಅದು ಭ್ರಾಂತಿ ಎಂದರೆ ಹೇಳುತ್ತಾರೆ—ಪ್ರತ್ಯಕ್ಷವು ಪ್ರಮಾಣವೆಂದು ನ್ಯಾಯಾಮೃತಾದಿ ಗ್ರಂಥಗಳಲ್ಲಿ ನಾವು ದೃಢವಾಗಿ ಬೇರೆ ಪ್ರಮಾಣಗಳಿಂದ ಅಬಾಧ್ಯವೆಂದು ಉಪಪಾದನ ಮಾಡಿದ್ದೇವೆ ಎಂದು. ಪ್ರತ್ಯಕ್ಷವನ್ನು ಪ್ರಮಾಣವೆಂದು ಒಪ್ಪದಿದ್ದರೆ 'ಬೆಂಕಿ ಬಿಸಿ ಇಲ್ಲ ಕೃತಕವಾದ್ದರಿಂದ' ಎಂದು ಮುಂತಾಗಿ ಅನುಮಾನಗಳಿಗೆ ಎಲ್ಲಿಯೂ ಪ್ರಮಾಣ ಬಾಧವೇ ಇಲ್ಲ ಎಂದಾದೀತು ಎಂದು ಅಭಿಪ್ರಾಯ. ಇದನ್ನು ಭಾಷ್ಯ ಟೀಕಾದಿಗಳಲ್ಲಿಯೇ ಹೇಳಿರುವುದರಿಂದ 'ನಾವು ಹೇಳಿದ್ದೇವೆ' ಎನ್ನದೆ 'ನಾವು ಉಪಪಾದನ ಮಾಡಿದ್ದೇವೆ' ಎಂದು ವ್ಯಾಸರಾಜರು ಹೇಳಿದ್ದಾರೆ. 'ಬೇರೆ ಪ್ರತ್ಯಕ್ಷವು ಪ್ರಮಾಣವಾಗಲಿ, ಭೇದಪ್ರತ್ಯಕ್ಷವು ಪ್ರಮಾಣವಲ್ಲ, ಅಭೇದಪ್ರತ್ಯಕ್ಷದಿಂದ ಬಾಧಿತವಾದ್ದರಿಂದ ಅದು ಭ್ರಾಂತಿ' ಎಂದರೆ ಅಭೇದ ಪ್ರತ್ಯಕ್ಷವು ಇಲ್ಲವೇ ಇಲ್ಲ ಎಂದು ಮುಂದೆ ಹೇಳುತ್ತೇವೆ ಎಂದು ಅಭಿಪ್ರಾಯ. ಅಥವಾ ಪ್ರಕೃತವಾದ ಜೀವೇಶ್ವರ ಭೇದ ಪ್ರತ್ಯಕ್ಷವೇ ಪ್ರಮಾಣ ಎಂದು ದೃಢವಾಗಿ ನಿಃಸಂದಿಗ್ಧವಾಗಿ ಉಪಪಾದನ ಮಾಡಿದ್ದೇವೆ. ಇದು ಸಾಕ್ಷಿಪ್ರತ್ಯಕ್ಷವಾದ್ದರಿಂದ, ಸಾಕ್ಷಿಯು ನಿಯಮೇನ ಪ್ರಮಾಣವಾಗಿರುವುದರಿಂದ ಸಂದೇಹಕ್ಕೇ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಧರ್ಮಿಸಮಸತ್ತಾಕ ಭೇದ ಸಾಧ್ಯ**

**अनुमानानि च– जीवः ब्रह्मप्रतियोगिकधर्मिसत्तासमानसत्ताकभेदाधिकरणं ब्रह्माननुसंहितदुःखानुसन्धातृत्वात् व्यतिरेकेण ब्रह्मवत् । ब्रह्म वा जीवप्रतियोगिकधर्मिसत्तासमानसत्ताकभेदाधिकरणं जीवानुसंहितदुःखाननुसन्धातृत्वात् व्यतिरेकेण जीववत् । अत्र जीवब्रह्मप्रतियोगिकयोः घटसत्तया व्यावहारिक्या समानसत्ताकयोर्भेदयोर्घटे प्रसिद्धत्वान्नाप्रसिद्धविशेषणत्वम् । जीवब्रह्मणोश्च पारमार्थिकत्वात् तसत्तासमानसत्ताकत्वेन सिद्ध्यन् भेदः पारमार्थिक एव सिद्ध्यतीति न सिद्धसाधनम् । दुःखादीनामन्तःकरणाश्रितत्वेऽपि जीवस्यानुसन्धातृत्वात्, ब्रह्मणश्च दुःखानुसन्धातृत्वे तदभावलक्षणमुक्तेरपुरुषार्थत्वप्रसङ्गात् निरञ्जनश्रुतिविरोधाच्च तदभावावश्यम्भावान्नासिद्धिः ।।**

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶಗಳು 6, 7, 8 ನೋಡಿರಿ)

ಅನುಮಾನಗಳು ಹೀಗೆ— ಜೀವನು ಬ್ರಹ್ಮಪ್ರತಿಯೋಗಿಕ ಧರ್ಮಿಸತ್ತಾಸಮಾನ ಸತ್ತಾಕ ಭೇದಕ್ಕೆ ಅಧಿಕರಣ. ಬ್ರಹ್ಮನು ಅನುಭವಿಸದಿರುವ ದುಃಖವನ್ನು ಅನುಭವಿಸುವುದರಿಂದ, ಬ್ರಹ್ಮನು ಇಲ್ಲಿ ವ್ಯತಿರೇಕ ದೃಷ್ಟಾಂತ. ಅಥವಾ ಬ್ರಹ್ಮನು ಜೀವಪ್ರತಿಯೋಗಿಕ ಧರ್ಮಿಸತ್ತಾ ಸಮಾನ ಸತ್ತಾಕ ಭೇದಕ್ಕೆ ಅಧಿಕರಣ. ಜೀವನು ಅನುಭವಿಸುವ ದುಃಖವನ್ನು ಅನುಭವಿಸದಿರುವುದರಿಂದ. ಜೀವನು ಇಲ್ಲಿ ವ್ಯತಿರೇಕ ದೃಷ್ಟಾಂತ. ಜೀವಪ್ರತಿಯೋಗಿಕ ಭೇದವೂ ಬ್ರಹ್ಮಪ್ರತಿಯೋಗಿಕ ಭೇದವೂ ವ್ಯಾವಹಾರಿಕಸತ್ತಾಕವಾದ ಘಟದಲ್ಲಿ ವ್ಯಾವಹಾರಿಕವಾಗಿರುವುದರಿಂದ ಧರ್ಮಿಯಾದ ಘಟಕ್ಕೆ ಸಮಾನ ಸತ್ತಾಕವಾದ ಈ ಭೇದಗಳು ಘಟದಲ್ಲಿ ಪ್ರಸಿದ್ಧವಾಗಿವೆ. ಅದರಿಂದ ಧರ್ಮಿಸತ್ತಾ ಸಮಸತ್ತಾಕ ಜೀವಭೇದ ಬ್ರಹ್ಮಭೇದಗಳೆಂಬ ವಿಶೇಷಣ ಪ್ರಸಿದ್ಧ ವಿರುವುದರಿಂದ ಅನುಮಾನಕ್ಕೆ ಅಪ್ರಸಿದ್ಧ ವಿಶೇಷಣತ್ವ ದೋಷವಿಲ್ಲ. ಘಟವು ವ್ಯಾವಹಾರಿಕವಾದ್ದರಿಂದ ಅದರಲ್ಲಿರುವ ಧರ್ಮಿಸಮಸತ್ತಾಕ ಭೇದವು ವ್ಯಾವಹಾರಿಕ ವಾದರೂ ಜೀವ ಬ್ರಹ್ಮರಿಬ್ಬರೂ ಪಾರಮಾರ್ಥಿಕರಾದ್ದರಿಂದ ಅವರಲ್ಲಿ ಈ ಅನುಮಾನದಿಂದ ಸಿದ್ಧವಾಗುವ ಧರ್ಮಿ ಸಮಸತ್ತಾಕ ಭೇದವು ಪಾರಮಾರ್ಥಿಕವೇ ಆಗುತ್ತದೆ. ಹೀಗಾಗಿ ಅನುಮಾನಕ್ಕೆ ಸಿದ್ಧಸಾಧನತ್ವ ದೋಷವೂ ಇಲ್ಲ.

ದುಃಖಾದಿಗಳು ಅಂತಃಕರಣವನ್ನು ಆಶ್ರಯಿಸಿ ಇದ್ದರೂ ಜೀವನು ಅವುಗಳನ್ನು ಅನುಭವಿಸುತ್ತಾನೆ. ಬ್ರಹ್ಮನು ಅನುಭವಿಸುವುದಿಲ್ಲ. ಬ್ರಹ್ಮನೂ ದುಃಖವನ್ನು ಅನುಭವಿಸುವುದಾದರೆ ಅವನ ಅಭೇದ ರೂಪವಾದ ಬ್ರಹ್ಮಭಾವರೂಪವಾದ ಮುಕ್ತಿಯು ಅಪುರುಷಾರ್ಥವಾಗುವ ಪ್ರಸಂಗವಿದೆ. ಮತ್ತು ಬ್ರಹ್ಮನು ದುಃಖವನ್ನು ಅನುಭವಿಸುತ್ತಾನೆ ಎಂದರೆ ನಿರಂಜನತ್ವಪ್ರತಿಪಾದಕ ಶ್ರುತಿಗಳ ವಿರೋಧ ಬರುತ್ತದೆ. ಅದರಿಂದ ಬ್ರಹ್ಮನಿಗೆ ದುಃಖಾದ್ಯನುಭವವಿಲ್ಲವೆಂದು ಅವಶ್ಯ ಹೇಳಬೇಕು. ಅದರಿಂದ ಹೇತುಗಳಿಗೆ ಅಸಿದ್ಧಿಯೂ ಇಲ್ಲ.

ಬ್ರಹ್ಮನಿಗೆ ದುಃಖಾನುಭವವಿಲ್ಲ

**अनुमानानि चेति** । भेद इत्यादिः । उच्यन्त इति शेषः । यद्यपि पूर्वपक्षक्रमेण सामान्यत एवात्मनानात्वसाधकानुमानमादौ वक्तव्यम् । तथापि प्रधानसिद्धौ सुतरां गुणसिद्धिरिति भावेनाह —**जीव इति** । अत्र दुःखेति स्वरूपकीर्तनम् । न तु हेतुघटकम् । एवं च

नित्यसुखाद्यनुसन्धातरि ब्रह्मणि व्यभिचारवारणाय ब्रह्माननुसंहितेति सार्थकम् ।

न च ब्रह्मणः सर्वज्ञत्वेन ब्रह्माननुसंहिताप्रसिद्धिः । स्वीयत्वेनानुभवस्यैवानुसन्धानत्वात् । स्वीयत्वं च स्वनैच्याद्यापादकत्वम् । न तु स्वधर्मत्वम् । अतो नान्तःकरणवृत्तिदुःखासङ्ग्रहः । एतल्लाभार्थं च दुःखपदमिति ध्येयम् ।

यद्यपि अर्जुनाननुसंहितकिञ्चित्सुखाद्यनुसन्धातुरिन्द्रस्य तदभेदवदत्राप्यभेदोपपत्तेरप्रयोजकत्वम् । तथापि भेदतत्प्रतिनिधिविशेषोभयसाधारणभेदव्यवहारविषयमात्रस्य साध्यत्वान्न दोषः । जीवब्रह्मणोर्बाधकाभावेन भेदस्यैव सिद्धेः । स्वाभाविकविशेषसिद्ध्याऽपि परनिवृत्तेश्च ।

अत्रान्वयव्याप्तौ दृष्टान्ताभावादाह – **व्यतिरेकेणेति ।**

यद्यपि प्रथममीश्वरधर्मिकभेद एव प्रत्यक्षस्योक्तत्वादनुमानमपि तत्रैवादौ वक्तुमुचितम् । तथापि जीवधर्मिकभेदस्य जीवप्रत्यक्षसिद्धत्वेन तत्रानुमानव्युत्पादनसौकर्यात्तदेवादावुक्तम् । पूर्वपक्षक्रमेण च पूर्वमीश्वरधर्मिकभेदे प्रत्यक्षं प्रदर्शितम् । पूर्वपक्षिणा च प्राधान्यात्तदेवादौ प्रतिक्षिप्तमिति नासङ्गतिः ।

ಭೇದದಲ್ಲಿ ಅನುಮಾನಗಳನ್ನು ಹೇಳುವೆವು ಎನ್ನುತ್ತಿದ್ದಾರೆ. ಯದ್ಯಪಿ ಪೂರ್ವಪಕ್ಷ ಕ್ರಮದಿಂದ ಮೊದಲಿಗೆ ಸಾಮಾನ್ಯವಾಗಿ ಆತ್ಮಗಳು ನಾನಾ ಎಂದು ಸಾಧಿಸುವ ಅನುಮಾನವನ್ನು ಹೇಳಬೇಕಾಗಿತ್ತು. ಆದರೂ ಮುಖ್ಯವಾದ ಜೀವಬ್ರಹ್ಮಭೇದ ಸಿದ್ಧಿಸಿದರೆ ಅಮುಖ್ಯವಾದ ಆತ್ಮನಾನಾತ್ವವು ಸುತರಾಂ ಸಿದ್ಧವಾಗುವುದು ಎಂಬ ಅಭಿಪ್ರಾಯದಿಂದ ಜೀವಬ್ರಹ್ಮಭೇದಸಾಧಕ ಅನುಮಾನಗಳನ್ನು ಹೇಳುತ್ತಾರೆ. ಇಲ್ಲಿ ದುಃಖವೆಂದು ಸ್ವರೂಪ ಸಂಕೀರ್ತನವೇ ಹೊರತು ಹೇತುಘಟಕವಲ್ಲ. 'ಜೀವನು ಅನುಭವಿಸಿದ್ದನ್ನು ಬ್ರಹ್ಮ ಅನುಭವಿಸುವುದಿಲ್ಲ, ಬ್ರಹ್ಮನು ಅನುಭವಿಸದಿರುವುದನ್ನು ಜೀವನು ಅನುಭವಿಸುತ್ತಾನೆ' ಎಂದರೆ ಸಾಕು, ಜೀವಬ್ರಹ್ಮಭೇದ ಸಿದ್ಧಿಸುತ್ತದೆ. ಹೀಗಾಗಿ ಹೇತುವಿನಲ್ಲಿ 'ಬ್ರಹ್ಮನು ಅನುಭವಿಸದಿರುವ' ಎಂಬ ವಿಶೇಷಣವಿಲ್ಲದಿದ್ದರೆ,

ಬ್ರಹ್ಮನಲ್ಲಿ ಬ್ರಹ್ಮಪ್ರತಿಯೋಗಿಕ ಭೇದವಿಲ್ಲ. ನಿತ್ಯಸುಖಾದಿಗಳ ಅನುಭವವಿದೆ ಎಂದು ವ್ಯಭಿಚಾರ [illegible] ಆ ವಿಶೇಷಣ ಹಾಕಿದರೆ ನಿತ್ಯಸುಖಾದಿಗಳ ಅನುಭವವಿದ್ದರೂ ಬ್ರಹ್ಮನು ಅನುಭವಿಸದಿರುವುದರ ಅನುಭವ ಬ್ರಹ್ಮನಲ್ಲಿಲ್ಲದ್ದರಿಂದ ವ್ಯಭಿಚಾರ ಪರಿಹಾರವಾಗುತ್ತದೆ.

'ಬ್ರಹ್ಮನು ಸರ್ವಜ್ಞ ಸರ್ವೇಶ್ವರನಾದ್ದರಿಂದ, ಬ್ರಹ್ಮನು ಸ್ವೀಯತ್ವೇನ ಅಂದರೆ ಸ್ವಾಧೀನತ್ವೇನ ಅನುಭವಿಸದಿರುವ ವಸ್ತುವೇ ಅಪ್ರಸಿದ್ಧ' ಎನ್ನುವ ಸಮಸ್ಯೆಗೆ ಸ್ವೀಯತ್ವೇನ ಅನುಭವವನ್ನು ಹೇತು ಘಟಕವಾಗಿ ಮಾಡಬೇಕು. ಸ್ವೀಯತ್ವವೆಂದರೆ ತನ್ನ ಸ್ವರೂಪದಲ್ಲಿ ಸ್ವರೂಪಭೂತವಾದ ಇಂದ್ರಿಯಗಳಲ್ಲಿ ಸಂಕೋಚ ವಿಕಾಸರೂಪವಾದ ನೀಚತ್ವ ಉಚ್ಚತ್ವವೆಂಬ ವಿಕಾರಕ್ಕೆ ಕಾರಣವಾಗುವುದೇ ಹೊರತು ಸ್ವಾಧೀನತ್ವವಲ್ಲ. ತನ್ನಲ್ಲಿ ಧರ್ಮವಾಗಿ ಇರುವುದಲ್ಲ. ಜೀವನು ನಿರ್ವಿಕಾರನಾದರೂ ಅವನ ಸ್ವರೂಪದಲ್ಲಿ ಅಂತಃಕರಣವಿಕಾರ ರೂಪವಾದ ಸುಖದುಃಖ ಅನುಭವವಾದಾಗ ಅರಳಿ ಉಂಡೆಯಂತೆ ಭಿನ್ನಾಭಿನ್ನವಾದ ವಿಕಾಸಸಂಕೋಚರೂಪವಾದ ತಾತ್ಕಾಲಿಕ ವಿಕಾರಗಳಾಗುತ್ತವೆ. ಸುಖದಿಂದ ವಿಕಾಸವಾದಾಗ ಬಾಹ್ಯ ಶರೀರದಲ್ಲಿ ಮುಖ ಕಣ್ಣು ಅರಳುತ್ತವೆ ದುಃಖದಿಂದ ಸಂಕೋಚವಾದಾಗ ಶರೀರದಲ್ಲಿ ಅರಳಿದ್ದ ಮುಖ ಕಣ್ಣುಗಳು ಮುದುಡುತ್ತವೆ ಬಾಡುತ್ತವೆ. ಇದು ಜೀವನಲ್ಲಿ ಉತ್ಸಾಹ ನಿರುತ್ಸಾಹ ಜನಕವಾದ ಸುಖ ದುಃಖಭೋಗ ಸೂಚಕ. ಬ್ರಹ್ಮನಲ್ಲಿ ಅವನ ಚೈತನ್ಯವು ಸದಾ ಪೂರ್ಣಸುಖದಿಂದ ವಿಕಸಿತವಾಗಿಯೇ ಇರುತ್ತದೆ. ಜೀವನ ಸುಖದುಃಖ ಸಾಕ್ಷಾತ್ಕಾರದಿಂದ ಅವನಿಗೆ ಈ ಬಗೆಯ ವಿಕಾರ ಉಂಟಾಗುವುದಿಲ್ಲ. ಸದಾ ಅವನು ಉತ್ಸಾಹಿಯೇ ಆಗಿರುತ್ತಾನೆ. ಆದರಿಂದ 'ಜೀವನು ಅನುಭವಿಸುವ ಸುಖದುಃಖವು ಅಂತಃಕರಣ ಧರ್ಮವಾಗಿದ್ದು ಜೀವನ ಧರ್ಮವಾಗದೇ ಇರುವುದರಿಂದ ಅವನು ಅದನ್ನು ಸ್ವೀಯತ್ವೇನ ಅನುಭವಿಸುವುದು ಹೇಗೆ? ಹೀಗಾಗಿ ಹೇತುವಿನಲ್ಲಿ ದುಃಖವನ್ನು ಗ್ರಹಣ ಮಾಡಲಾಗದು' ಎನ್ನುವ ಸಮಸ್ಯೆ ಬರುವುದಿಲ್ಲ. ಹೀಗೆ ಸ್ವೀಯತ್ವೇನ ಅನುಭವವು ಹೇತುಘಟಕ ಎಂಬುದರ ಸೂಚನೆಗಾಗಿಯೂ ದುಃಖ ಶಬ್ದವಿದೆ. ಕೇವಲ ಸ್ವರೂಪ ಸಂಕೀರ್ತನೆಗಾಗಿ ಅಲ್ಲ.

ಯದ್ಯಪಿ ಅರ್ಜುನನು ಅನುಭವಿಸದಿರುವ ಕೆಲವು ಸುಖಾದಿಗಳನ್ನು ಇಂದ್ರನು ಅನುಭವಿಸುತ್ತಾನೆ. ಆದರೂ ಅವರಿಬ್ಬರಿಗೆ ಅಭೇದವಿದೆ. ಹಾಗೆಯೇ ಬ್ರಹ್ಮನು ಅನುಭವಿಸದಿರುವ ದುಃಖಾದಿಗಳನ್ನು ಅನುಭವಿಸುವ ಜೀವನಿಗೆ ಬ್ರಹ್ಮಾಭೇದವಿರಬಹುದು. ಆದರಿಂದ ಹೇತುವು ಅಪ್ರಯೋಜಕವಾಯಿತು. ಆದರೂ ಇಂದ್ರಾರ್ಜುನರಿಗೆ ಭೇದವಿಲ್ಲದಿದ್ದರೂ ಭೇದಪ್ರತಿನಿಧಿಯಾದ ವಿಶೇಷವಿದೆ. ಅದು ಭೇದ ವ್ಯವಹಾರ ವಿಷಯವಾಗಿದೆ. ಭೇದವಿರುವಲ್ಲಿ ಭೇದವ್ಯವಹಾರ ವಿಷಯವು ಭೇದವೆ. ಭೇದವಿಲ್ಲದಿರುವಲ್ಲಿ ಭೇದವ್ಯವಹಾರ ವಿಷಯವು ಭೇದಪ್ರತಿನಿಧಿಯಾದ ವಿಶೇಷ. ಆದರಿಂದ ಭೇದ ಮತ್ತು ವಿಶೇಷಗಳೆರಡರಲ್ಲಿ ಸಾಧಾರಣವಾಗಿರುವ ಭೇದ ವ್ಯವಹಾರ ವಿಷಯವನ್ನು ಮಾತ್ರ ಸಾಧ್ಯವಾಗಿ ಮಾಡುವುದರಿಂದ ಹೇತು ಅಪ್ರಯೋಜಕವಾಗುವುದಿಲ್ಲ. ಅದು ಭೇದವ್ಯವಹಾರ ವಿಷಯವನ್ನು ಸಾಧಿಸಿಕೊಡುತ್ತದೆ. ಭೇದ ವ್ಯವಹಾರ ವಿಷಯವು ಇಂದ್ರಾರ್ಜುನ ರಲ್ಲಿ ವಿಶೇಷವೇ ಆದರೂ ಜೀವಬ್ರಹ್ಮರಲ್ಲಿ ಭೇದವೇ ಇರಬಹುದು. ಭೇದಕ್ಕೆ ಬಾಧಕವಿದ್ದರೆ ಮಾತ್ರ

ವಿಶೇಷವನ್ನಿಟ್ಟುಕೊಳ್ಳಬೇಕಾಗುತ್ತದೆ. ಬಾಧಕವಿಲ್ಲದ್ದರಿಂದ ಭೇದವೇ ಸಿದ್ಧಿಸುವುದು. ವಿಶೇಷವನ್ನಿಟ್ಟುಕೊಂಡರೂ ಅದು ಸ್ವಾಭಾವಿಕ ಶಕ್ತಿರೂಪವಾಗಿದ್ದು ಅಭೇದವಾದಿಗಳು ಅದನ್ನು ಅಂಗೀಕರಿಸಿಲ್ಲವಾದ್ದರಿಂದ ಅದನ್ನು ಈ ಹೇತು ಸಾಧಿಸಿದರೂ ಅಭೇದವಾದಿ ಪರಾಜಿತನಾಗುತ್ತಾನೆ. ಜಲ್ಪದಲ್ಲಿ ತತ್ವನಿರ್ಣಯ ಪರಪರಾಜಯಗಳು ಉದ್ದೇಶವಾಗಿರುವುದರಿಂದ ಪರಪರಾಜಯವೆಂಬ ಉದ್ದೇಶ ಸಿದ್ಧಿಯು ಪ್ರಕೃತದಲ್ಲಿ ಇದ್ದೇ ಇದೆ. ಹೇತುವು ವ್ಯರ್ಥವಾಗುವುದಿಲ್ಲ.

ಅನ್ವಯವ್ಯಾಪ್ತಿಗೆ ದೃಷ್ಟಾಂತವಿಲ್ಲದಿರುವುದರಿಂದ ವ್ಯತಿರೇಕ ವ್ಯಾಪ್ತಿಯನ್ನಿಟ್ಟುಕೊಂಡು ವ್ಯತಿರೇಕದೃಷ್ಟಾಂತವನ್ನು ತೋರಿಸುತ್ತಾರೆ.

ಯದ್ಯಪಿ ಮೊದಲಿಗೆ ಈಶ್ವರಧರ್ಮಿಕ ಭೇದವಿಷಯ ದಲ್ಲಿಯೇ ಪ್ರತ್ಯಕ್ಷ ಉಕ್ತವಾದ್ದರಿಂದ ಅನುಮಾನವನ್ನೂ ಅದೇ ವಿಷಯದಲ್ಲಿ ಹೇಳುವುದು ಉಚಿತವಾಗಿತ್ತು. ಆದರೂ ಜೀವಧರ್ಮಿಕ ಭೇದವು ಜೀವನಿಗೆ ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಆ ವಿಷಯದಲ್ಲಿಯೇ ಅನುಮಾನವನ್ನು ಹೇಳುವುದು ಸುಕರವೆಂದು ಅದೇ ಮೊದಲಿಗೆ ಉಕ್ತವಾಗಿದೆ. ಹಿಂದೆ ಈಶ್ವರ ಧರ್ಮಿಕ ಭೇದವಿಷಯ ದಲ್ಲಿ ಮೊದಲಿಗೆ ಪ್ರತ್ಯಕ್ಷವನ್ನು ಹೇಳಿದ್ದು ಪೂರ್ವಪಕ್ಷ ಕ್ರಮಾನುಸಾರವಾಗಿ. ಪೂರ್ವಪಕ್ಷಿಯು ಈ ಪ್ರತ್ಯಕ್ಷವನ್ನು ಮೊದಲಿಗೆ ನಿರಾಕರಿಸಿದ್ದು ಅದು ಪ್ರಧಾನವೆಂಬ ಅಭಿಪ್ರಾಯದಿಂದ.

**ब्रह्म वेति** । अत्र जीवत्वावच्छिन्नप्रतियोगिताकभेदः साध्यः । तेन जीवप्रतियोगिकभेदस्य जीवसाधारण्येऽपि न व्यतिरेकाप्रसिद्धिः । तत्तज्जीवप्रतियोगिकभेद एव साध्य इत्यप्याहुः । अत्रापि हेतौ दुःखपदं स्वरूपकीर्तनमेव । न चैवं जीवानुसंहितदुःखाभावानुसन्धातृत्वस्य ब्रह्मण्यपि सत्त्वादसिद्धिरिति वाच्यम् । दुःखध्वंसप्रागभावयोरेव जीवानुसंहितत्वात् । ईश्वरस्य च दुःखात्यन्ताभावानुसन्धातृत्वेन दोषाभावात् । एवं चाननुसन्धातृत्वमात्रस्य ब्रह्मण्यभावादसिद्धिरतो जीवानुसंहितेति सार्थकम् ।

ಎರಡನೆ ಅನುಮಾನದಲ್ಲಿ ಜೀವನಲ್ಲಿ ಜೀವಪ್ರತಿಯೋಗಿಕ ಭೇದವಿಲ್ಲದ್ದರಿಂದ, ಜೀವನು ಅನುಭವಿಸದಿರುವ ದುಃಖದ ಅನುಭವವೂ ಜೀವನಲ್ಲಿ ಇಲ್ಲದ್ದರಿಂದ ಜೀವನನ್ನು ವ್ಯತಿರೇಕ ದೃಷ್ಟಾಂತ ಮಾಡಿದ್ದಾರೆ. ಆದರೆ ಒಬ್ಬ ಜೀವನ ಭೇದ ಇನ್ನೊಬ್ಬ ಜೀವನಲ್ಲಿ ಬರುವುದರಿಂದ ಜೀವಭೇದವಿಲ್ಲ ಎಂದಿದ್ದು ಹೇಗೆ? ಜೀವಭೇದ ವ್ಯತಿರೇಕ ಜೀವನಲ್ಲಿ ಬರುವುದಿಲ್ಲವೆಂದು ಅದು ಅಪ್ರಸಿದ್ಧವಾಗುವುದು ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಜೀವಪ್ರತಿಯೋಗಿಕ ಭೇದವೆಂದರೆ

ಜೀವತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದ ವಿವಕ್ಷಿತವೆನ್ನಬೇಕು. ಆಗ ಒಬ್ಬ ಜೀವನಲ್ಲಿ ಇನ್ನೊಬ್ಬ ಜೀವನ ಭೇದ ಬಂದರೂ ಜೀವತ್ವಾವಚ್ಛಿನ್ನಭೇದ ಬರುವುದಿಲ್ಲ, ಜೀವನು ಜೀವನೇ ಅಲ್ಲ ಎನ್ನಲಾಗದು. ಆದರಿಂದ ಜೀವಭೇದಾಭಾವರೂಪವಾದ ವ್ಯತಿರೇಕ ಜೀವನಲ್ಲಿ ಪ್ರಸಿದ್ಧವೇ ಆಗುವುದು. ಕೆಲವರು 'ಆಯಾ ಜೀವನ ಭೇದವೇ ಸಾಧ್ಯ. ಅದು ಆಯಾ ಜೀವನಲ್ಲಿ ಬರುವುದಿಲ್ಲ ಆದರಿಂದ ವ್ಯತಿರೇಕ ಪ್ರಸಿದ್ಧಿ' ಎಂದೂ ಹೇಳುತ್ತಾರೆ.

ಮೊದಲನೆ ಅನುಮಾನದಲ್ಲಿ ಹೇಳಿದಂತೆ ಈ ಎರಡನೇ ಅನುಮಾನದಲ್ಲಿಯೂ ಹೇತುವಿನಲ್ಲಿ ದುಃಖಶಬ್ದ ಸ್ವರೂಪ ಸಂಕೀರ್ತನೆಗಾಗಿಯೇ ಇದೆ. 'ಹಾಗಾದರೆ ಜೀವನು ಅನುಭವಿಸುವ ದುಃಖಾಭಾವದ ಅನುಭವವು ಬ್ರಹ್ಮನಲ್ಲಿಯೂ ಇರುವುದರಿಂದ ಹೇತ್ವಸಿದ್ಧಿ' ಎಂದರೆ, ಇದಕ್ಕೆ ಸಮಾಧಾನ ಜೀವನು ಅನುಭವಿಸುವುದು ದುಃಖದ ಧ್ವಂಸ ಪ್ರಾಗಭಾವಗಳನ್ನೇ ಹೊರತು ದುಃಖಾತ್ಯಂತಾಭಾವವನ್ನಲ್ಲ. ಈಶ್ವರನು ಕೇವಲ ದುಃಖಾತ್ಯಂತಾಭಾವವನ್ನು ಅನುಭವಿಸುವವನು. ಜೀವನು ಅನುಭವಿಸುವ ದುಃಖಧ್ವಂಸ ಪ್ರಾಗಭಾವಗಳನ್ನು ಈಶ್ವರನು ಅನುಭವಿಸುವುದಿಲ್ಲ. ಆದರಿಂದ ಹೇತ್ವಸಿದ್ಧಿ ಇಲ್ಲ. ಹೀಗಾಗಿ ಕೇವಲ ಅನನುಭವವನ್ನೇ ಹೇತು ಮಾಡಿದರೆ ಬ್ರಹ್ಮನಲ್ಲಿ ಅದು ಇಲ್ಲದ್ದರಿಂದ ಅಸಿದ್ಧಿ. ಆದರಿಂದ ಜೀವನು ಅನುಭವಿಸುವುದರ ಅನುಭವಾಭಾವವನ್ನೇ ಹೇತು ಮಾಡಬೇಕು. ಆದರಿಂದ ವಿಶೇಷಣ ಸಾರ್ಥಕವಾಗಿದೆ.

**न च व्यभिचारावारकत्वात्तद्वैयर्थ्यमिति शङ्क्यम् । व्यभिचारवदसिद्धेरप्यनुमितिविरोधित्वाविशेषेण 'विमतं कर्त्रजन्यं शरीराजन्यत्वादि' त्यादौ शरीरादिविशेषणवदसिद्धिवारकत्वेऽप्यवैयर्थ्यस्य शास्त्रे समर्थितत्वात् ।**

**अखण्डाभावसम्पादकत्वेनावैयर्थ्यं चोभयत्र तुल्यम् ।**

**केचित्तु दुःखानुसन्धातृत्वतदभावयोरेवात्र हेतुत्वम् । दुःखे ब्रह्माननुसंहितत्वाद्यभिधानं तु व्यतिरेकदृष्टान्ते हेत्वभावसत्त्वप्रदर्शनपरमित्याहुः । तच्चिन्त्यम् । तत्प्रदर्शनस्य दुःखादीनामित्यग्रिमग्रन्थेनैव लाभेन ब्रह्माननुसंहितत्वाद्यभिधानवैयर्थ्यस्य दुर्वारत्वात् ।**

**यद्यपि द्वितीयानुमाने घटादेरन्वयदृष्टान्तत्वं सम्भवत्येव । तथापि अन्वयदार्ढ्यायैव व्यतिरेकेण जीववदित्युक्तम् ।**

ಇಲ್ಲಿ ಪ್ರಶ್ನೆ— ಹೇತುಘಟಕ ವಿಶೇಷಣಕ್ಕೆ ವ್ಯಭಿಚಾರ ವಾರಣದಿಂದಲೆ ಸಾರ್ಥಕ್ಯ.

ಪ್ರಕೃತದಲ್ಲಿ ಅಸಿದ್ಧಿವಾರಕವಾಗಿ ಸಾರ್ಥಕ್ಯವನ್ನು ಹೇಳುವುದು ಹೇಗೆ? ಇದಕ್ಕೆ ಹೇಳುತ್ತೇವೆ— ವ್ಯಭಿಚಾರದಂತೆ ಅಸಿದ್ಧಿಯೂ ಅನುಮಿತಿಗೆ ವಿರೋಧಿಯಾಗಿರುವುದರಿಂದ ಅಸಿದ್ಧಿವಾರಕವಾದರೂ ವಿಶೇಷಣವು ಸಾರ್ಥಕವೆನಿಸುತ್ತದೆ. ವಿಮತವು ಕರ್ತೃಜನ್ಯ, ಶರೀರಾಜನ್ಯವಾದ್ದರಿಂದ ಎಂಬ ಅನುಮಾನದಲ್ಲಿ ಶರೀರವೆಂದು ವಿಶೇಷಣ ಕೊಟ್ಟಿದ್ದು ಅಸಿದ್ಧಿ ಪರಿಹಾರಕ್ಕಾಗಿ ಹೊರತು ವ್ಯಭಿಚಾರ ಪರಿಹಾರಕ್ಕಾಗಿ ಅಲ್ಲ. ಆದರೂ ವಿಶೇಷಣ ಸಾರ್ಥಕವಾಗಿದೆ ಎಂದು ಶಾಸ್ತ್ರದಲ್ಲಿ ಸಮರ್ಥಿಸಲಾಗಿದೆ.

ಶರೀರಾಜನ್ಯತ್ವವೆಂಬ ಹೇತುವಿನಲ್ಲಿ ಶರೀರವೆಂಬುದು ಜನ್ಯತ್ವಾಂಶದಲ್ಲಿ ಸ್ವನಿರೂಪಿತತ್ವ ಸಂಬಂಧೇನ ವಿಶೇಷಣವಾಗಿ ಸೇರಿಸಲ್ಪಟ್ಟಿದೆ. ಜನ್ಯತ್ವಾಭಾವದಲ್ಲಿ ಶರೀರವು ವಿಶೇಷಣವಲ್ಲ. ಜನ್ಯತ್ವಾಭಾವದಲ್ಲಿಯೇ ಶರೀರವು ವಿಶೇಷಣ ಎಂದಿದ್ದರೆ ಕೇವಲ ಜನ್ಯತ್ವಾಭಾವದಂತೆ ಶರೀರ ವಿಶಿಷ್ಟವಾದ ಜನ್ಯತ್ವಾಭಾವವೂ ಅಸಿದ್ಧವೇ ಆಗುತ್ತಿದ್ದುದರಿಂದ ವಿಶೇಷಣ ವ್ಯರ್ಥವಾಗುತ್ತಿತ್ತು. ಜನ್ಯತ್ವದಲ್ಲಿ ಶರೀರವನ್ನು ಸ್ವನಿರೂಪಿತತ್ವ ಸಂಬಂಧದಿಂದ ವಿಶೇಷಣ ಮಾಡಿದ್ದರಿಂದ ಶರೀರ ವಿಶಿಷ್ಟಜನ್ಯತ್ವದ ಅಖಂಡವಾದ ಅಭಾವವು ಬೇರೆಯೇ ಒಂದು ಸಂಪಾದಿತವಾಗುವುದು. ಅದಕ್ಕೆ ಅಸಿದ್ಧಿ ದೋಷ ಬರುವುದಿಲ್ಲ. ವಿಮತದಲ್ಲಿ ಕೇವಲ ಜನ್ಯತ್ವದ ಅಭಾವ ಬಾಧಿತವಾದರೂ ಶರೀರಜನ್ಯತ್ವದ ಅಭಾವವು ಅಬಾಧಿತವಾಗಿದೆ ತಾನೆ? ಹೀಗಾಗಿ ಪ್ರಕೃತದಲ್ಲಿಯೂ ಬ್ರಹ್ಮನಲ್ಲಿ ಅನುಭವಾಭಾವವು ಅಬಾಧಿತವಾದರೂ ಆ ಅಭಾವಕ್ಕಿಂತ ಬೇರೆಯೇ ಆದ, ಜೀವಾನುಭೂತ ವಿಷಯಕ ಅನುಭವದ ಅಖಂಡವಾದ ಅಭಾವವು ಬ್ರಹ್ಮನಲ್ಲಿ ಅಬಾಧಿತವಾಗಿದೆ. ಅಸಿದ್ಧಿ ಇಲ್ಲ.

ಕೆಲವರು ಹೇಳುತ್ತಾರೆ— ಇಲ್ಲಿ ದುಃಖದ ಅನುಭವ ಅನನುಭವಗಳೇ ಹೇತುವಾಗಿ ವಿವಕ್ಷಿತವಾಗಿವೆ. ದುಃಖದಲ್ಲಿ ಬ್ರಹ್ಮನು ಅನುಭವಿಸದಿರುವುದು ಮುಂತಾದುವು ವ್ಯತಿರೇಕ ದೃಷ್ಟಾಂತದಲ್ಲಿ ಹೇತು ಇಲ್ಲ ಎಂದು ತೋರಿಸುವುದಕ್ಕಾಗಿ ಹೇಳಿದ್ದು ಎಂದು. ಅದು ಸರಿಯಲ್ಲ. ವ್ಯತಿರೇಕ ದೃಷ್ಟಾಂತದಲ್ಲಿ ಹೇತು ಇಲ್ಲ ಎನ್ನುವುದನ್ನು ಮುಂದೆ ಮೂಲದಲ್ಲಿಯೇ ದುಃಖಾದಿಗಳು ಅಂತಃಕರಣವನ್ನಾಶ್ರಯಿಸಿರುವುವುಗಳೆಂದು ಮುಂತಾಗಿ ತೋರಿಸುತ್ತಾರೆ. ಇಲ್ಲಿ 'ಬ್ರಹ್ಮನು ಅನುಭವಿಸುವುದಿಲ್ಲ' ಎಂದು ಹೇಳಿದ್ದರ ವೈಯರ್ಥ್ಯ ಪರಿಹಾರವಾಗುವುದಿಲ್ಲ.

**यद्यपि च प्रथमे ब्रह्मानुसंहितसार्वज्ञाद्यननुसन्धातृत्वस्य, द्वितीये जीवाननुसंहितसार्वज्ञाद्यनुसन्धातृत्वस्य च हेतुत्वं सम्भवति । तथापि परमते शुद्धस्यानुसन्धातृत्वाभावादसिद्धिः स्यादतो न तदनुसरणम् ।**

**न चैवं प्रथमे ब्रह्मानुसंहिताप्रसिद्ध्या परस्य हेत्वप्रसिद्धिरिति वाच्यम् । ब्रह्माननुसंहितेत्यनेन ब्रह्मनिष्ठाभावप्रतियोग्यनुसन्धानविषय-त्वस्य विवक्षितत्वेन दोषाभावात् ।**

**अत्र साध्यशरीरे धर्मिसत्तासमानसत्ताकत्वविशेषणव्यावृत्तिं व्यञ्जयन् पारमार्थिकत्वेन भेदविशेषणाविशेषणयोः पूर्वपक्षोक्तसाध्याप्रसिद्धि-सिद्धसाधनरूपदोषानवकाशं दर्शयति – अत्रेति। एतदनुमानद्वय इत्यर्थः। अस्य च 'नाप्रसिद्धविशेषणत्वं' 'न सिद्धसाधन'मित्याभ्या-मन्वयः।**

ಯದ್ಯಪಿ ಎರಡನೆ ಅನುಮಾನದಲ್ಲಿ ಘಟವು ಅನ್ವಯ ದೃಷ್ಟಾಂತವಾಗಬಹುದು. ಜೀವನು ಅನುಭವಿಸುವುದನ್ನು ಘಟವು ಅನುಭವಿಸುವುದಿಲ್ಲ. ಆದರಲ್ಲಿ ಜೀವ ಪ್ರತಿಯೋಗಿಕ ಧರ್ಮಿಸತ್ತಾಕ ಭೇದಾಧಿಕರಣತ್ವವೂ ಇದೆ. ಹೇತುವೂ ಇದೆ, ಸಾಧ್ಯವೂ ಇದೆ. ಆದರೂ ಅನ್ವಯವ್ಯಾಪ್ತಿ ದೃಢ ವಾಗಲು ವ್ಯತಿರೇಕವ್ಯಾಪ್ತಿ ಇದ್ದರೆ ಒಳ್ಳೆಯದು. ವ್ಯಭಿಚಾರವಿಲ್ಲವೆಂದು ಆದರಿಂದ ನಿಶ್ಚಯ ವಾಗುವುದು. ಆದರಿಂದ ಜೀವನು ವ್ಯತಿರೇಕ ದೃಷ್ಟಾಂತ ಎಂದಿದ್ದಾರೆ.

ಯದ್ಯಪಿ ಮೊದಲನೆ ಅನುಮಾನದಲ್ಲಿ ಬ್ರಹ್ಮನು ಅನುಭವಿಸುವ ಸಾರ್ವಜ್ಞಾದಿಗಳ ಅನನುಭವವು ಹೇತುವಾಗಬಹುದು. ಎರಡನೆ ಅನುಮಾನದಲ್ಲಿ ಜೀವನು ಅನುಭವಿಸದಿರುವ ಸಾರ್ವಜ್ಞಾದಿಗಳ ಅನುಭವವು ಹೇತುವಾಗಬಹುದು. ಆದರೂ ಅದ್ವೈತಮತದಲ್ಲಿ ಶುದ್ಧ ಬ್ರಹ್ಮನಲ್ಲಿ ಯಾವ ಅನುಭವವೂ ಇಲ್ಲದಿರುವುದರಿಂದ ಅಸಿದ್ಧಿ ದೋಷ ಬಂದೀತು. ಆದರಿಂದ ಹಾಗೆ ಹೇತು ಮಾಡಲಿಲ್ಲ.

ಹಾಗಾದರೆ ಮೊದಲನೆ ಅನುಮಾನದಲ್ಲಿ 'ಬ್ರಹ್ಮನು ಅನುಭವಿಸದಿದ್ದುದರ ಅನುಭವ' ಎಂಬ ಹೇತು ಅದ್ವೈತಿಗೆ ಅಪ್ರಸಿದ್ಧವಾಗುವುದು. ಏಕೆಂದರೆ ಬ್ರಹ್ಮನು ಅನುಭವಿಸಿದ್ದೇ ಅಪ್ರಸಿದ್ಧವೆಂದ ಮೇಲೆ ಅದರ ನಿಷೇಧ ಮಾಡಲಾಗದು. ನಿಷೇಧಕ್ಕೆ ಪ್ರತಿಯೋಗಿಯು ಪ್ರಸಿದ್ಧವಾಗಿರಬೇಕು ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಬ್ರಹ್ಮನು ಅನುಭವಿಸದಿದ್ದುದೆಂದರೆ ಬ್ರಹ್ಮನಲ್ಲಿರುವ ಅನುಭವಕ್ಕೆ ವಿಷಯ ವಲ್ಲದ್ದು ಎಂದರ್ಥವಲ್ಲ, ಬ್ರಹ್ಮನಲ್ಲಿಲ್ಲದ ಅನುಭವಕ್ಕೆ ವಿಷಯವಾದುದೆಂದರ್ಥ. ಬ್ರಹ್ಮನಲ್ಲಿಲ್ಲದ ಅನುಭವ ಜೀವನಲ್ಲಿದೆ. ಅದಕ್ಕೆ ವಿಷಯವಾದುದು ಪ್ರಸಿದ್ಧವೆ ಇದೆ.

ಸಾಧ್ಯಶರೀರದಲ್ಲಿ ಧರ್ಮಿಸತ್ತಾ ಸಮಾನ ಸತ್ತಾಕ ಎಂದು ವಿಶೇಷಣ ಕೊಡುವುದರಿಂದ ಏನು ಪ್ರಯೋಜನ ಎಂಬುದನ್ನು ತಿಳಿಸುವುದಕ್ಕಾಗಿ 'ಭೇದದಲ್ಲಿ ಪಾರಮಾರ್ಥಿಕ ಎಂದು ವಿಶೇಷಣ ಕೊಟ್ಟರೆ ಪೂರ್ವಪಕ್ಷದಲ್ಲಿ ಹೇಳಿದಂತೆ ಸಾಧ್ಯ ಅಪ್ರಸಿದ್ಧವಾಗುವುದೆಂಬ ದೋಷ ಬರುತ್ತದೆ, ಹಾಗೆ ವಿಶೇಷಣ ಕೊಡದೆ ಹೋದರೆ ಸಿದ್ಧಸಾಧನತ್ವದೋಷ ಬರುತ್ತದೆ, ಧರ್ಮಿಸತ್ತಾ ಸಮಾನಸತ್ತಾಕತ್ವ ವಿಶೇಷಣ ಕೊಟ್ಟಾಗ ಈ ಎರಡೂ ದೋಷಗಳಿಗೆ ಅವಕಾಶವಿಲ್ಲ' ಎಂದು ತೋರಿಸುತ್ತಾರೆ. ಈ ಎರಡೂ ಅನುಮಾನಗಳಲ್ಲಿಯೂ ಅಪ್ರಸಿದ್ಧವಿಶೇಷಣತ್ವವೂ ಇಲ್ಲ, ಸಿದ್ಧ ಸಾಧನತ್ವವೂ ಇಲ್ಲ ಎನ್ನುತ್ತಾರೆ.

**ಧರ್ಮಿಸಮಸತ್ತಾಕತ್ವದ ಪರಿಷ್ಕಾರ**

अथ सत्तात्वादिना ब्रह्मसत्तासमानसत्ताकव्यावहारिकभेदमादाय सिद्धसाधनवारणाय पारमार्थिकत्वेनैव समानत्वं विवक्षणीयम् । तथा च परं प्रति साध्याप्रसिद्धिस्तदवस्थैव । पारमार्थिकत्वव्यावहारिकत्वा-न्यतररूपेण समानत्वोक्तौ तु सिद्धान्ते व्यावहारिकत्वाप्रसिद्ध्या साध्याप्रसिद्धिः । सत्तात्वव्याप्यरूपेण तद्विवक्षणे च पारमार्थिक-व्यावहारिकान्यतरत्वेन ब्रह्मसत्तासमानत्वमादाय सिद्धसाधनम् ।

यत्तु समानत्वमभेद एव । सिद्धान्ते भेदस्य धर्मिस्वरूपत्वेन तत्र धर्मिसत्तातिरिक्तसत्ताविरहादिति । तन्न । परमते घटादौ साध्यप्रसिद्ध्य-नुपपत्तेः ।

ಇಲ್ಲಿ ಪ್ರಶ್ನೆ ಬರುತ್ತದೆ—ವ್ಯಾವಹಾರಿಕ ಭೇದವು ಕೂಡ ಬ್ರಹ್ಮಸತ್ತಾ ಸಮಾನ ಸತ್ತಾಕವೆ. ಏಕೆಂದರೆ ಎರಡು ಸತ್ತೆಗಳೂ ಸತ್ತೆಗಳೇ ತಾನೆ? ಈ ಅಂಶದಲ್ಲಿ ಎರಡೂ ಸಮಾನ. ಹೀಗಾಗಿ ವ್ಯಾವಹಾರಿಕ ಭೇದವನ್ನಿಟ್ಟುಕೊಂಡು ಸಿದ್ಧಸಾಧನತ್ವವನ್ನು ಅಭೇದವಾದಿ ಹೇಳಬಹುದು. ಅದಕ್ಕೆ ಪಾರಮಾರ್ಥಿಕತ್ವಾಂಶದಲ್ಲಿಯೇ ಸಮಾನತ್ವವಿವಕ್ಷೆ ಮಾಡಬೇಕು. ಆಗ ವ್ಯಾವಹಾರಿಕ ಭೇದವನ್ನಿಟ್ಟು ಕೊಳ್ಳಲು ಶಕ್ಯವಾಗುವುದಿಲ್ಲ, ಆದರೂ ಪಾರಮಾರ್ಥಿಕ ಭೇದ ಎಂಬುದು ಅಭೇದವಾದಿ ಮತದಲ್ಲಿ ಇಲ್ಲವೆ ಇಲ್ಲ. ಅದರಿಂದ ಸಾಧ್ಯಾಪ್ರಸಿದ್ಧಿ ದೋಷ ಬಂದೇ ಬರುತ್ತದೆ. ಪಾರಮಾರ್ಥಿಕತ್ವ ವ್ಯಾವಹಾರಿಕತ್ವಗಳಲ್ಲಿ ಯಾವುದಾದರೊಂದು ಅಂಶದಲ್ಲಿ ಸಮಾನತ್ವ ಬರಬೇಕು ಎಂದು ವಿವಕ್ಷೆ ಮಾಡಿದರೆ ಭೇದ ಸಿದ್ಧಾಂತದಲ್ಲಿ ವ್ಯಾವಹಾರಿಕತ್ವವೆನ್ನುವುದು ಅಪ್ರಸಿದ್ಧವಾಗಿರುವುದರಿಂದ ತಿರುಗಿ ಸಾಧ್ಯಾಪ್ರಸಿದ್ಧಿಯೆ. ಸತ್ತಾತ್ವ ವ್ಯಾಪ್ಯರೂಪದಿಂದ ಸಮಾನತ್ವ ವಿವಕ್ಷೆ ಮಾಡಿದರೆ, ಪಾರಮಾರ್ಥಿಕ ವ್ಯಾವಹಾರಿಕ ಅನ್ಯತರತ್ವವು ಸತ್ತಾತ್ವಕ್ಕೆ ವ್ಯಾಪ್ಯವಾಗಿರುವುದರಿಂದ, ಅನ್ಯತರತ್ವರೂಪದ ಬ್ರಹ್ಮಸತ್ತಾಸಮಾನತ್ವವಿಟ್ಟುಕೊಂಡು ವ್ಯಾವಹಾರಿಕ ಭೇದವೇ ಸಿದ್ಧವಾಗುವುದರಿಂದ ಸಿದ್ಧಸಾಧನತ್ವ ದೋಷ ಬರುತ್ತದೆ.

'ಸಮಾನತ್ವವೆಂದರೆ ಅಭೇದವೇ ವಿವಕ್ಷಿತ. ಸಿದ್ಧಾಂತದಲ್ಲಿ ಭೇದವು ಧರ್ಮಿಸ್ವರೂಪ ವಾಗಿರುವುದರಿಂದ ಧರ್ಮಿಸತ್ತೆಗಿಂತ ಬೇರೆ ಸತ್ತೆಯೇ ಅದಕ್ಕೆ ಇಲ್ಲ ತಾನೆ?' ಎಂದು ಹೇಳುವುದು ಯುಕ್ತವಲ್ಲ. ಸಿದ್ಧಾಂತದಲ್ಲಿ ಭೇದವು ಧರ್ಮಿಸ್ವರೂಪವಾದರೂ ಅಭೇದಮತದಲ್ಲಿ ಅದು

ಧರ್ಮಿಗಿಂತ ಬೇರೆಯೆ. ಹೀಗಾಗಿ ಘಟದಲ್ಲಿ ಇರುವ ಭೇದದ ಸತ್ತೆ ಧರ್ಮಿಯಾದ ಘಟ ಸತ್ತೆಗಿಂತ ಬೇರೆಯೇ ಆದ್ದರಿಂದ ಅಭಿನ್ನಸತ್ತಾಕ ಭೇದವು ಅಪ್ರಸಿದ್ಧ. ಆದರಿಂದ ಸಾಧ್ಯಪ್ರಸಿದ್ಧಿ ಘಟದಲ್ಲಿ ಕೂಡುವುದಿಲ್ಲ. ಹೀಗಾಗಿ ಸಮಾನತ್ವವು ಯಾವ ಅಂಶದಲ್ಲಿ ವಿವಕ್ಷಿತವಾಗಿದೆ ಎಂಬ ಪ್ರಶ್ನೆ ಹಾಗೇ ಉಳಿಯುತ್ತದೆ.

**मैवम् । तदधिकरणयावत्कालवृत्तित्वं तत्समानत्वमित्यङ्गीकारात् । व्यावहारिकस्य व्यवहारनिवृत्तिकालावृत्तित्वेन सिद्धसाधनाद्यनवकाशात् । यद्वा, ब्रह्मसत्ताभिन्नत्वतदभिन्नत्वान्यतररूपेण समानत्वं विवक्षणीयम् । ब्रह्मसत्ताभिन्नत्वेन धर्मिसत्तासमानसत्ताकभेदस्य घटादौ प्रसिद्धत्वान्नाप्रसिद्धविशेषणत्वम् । ब्रह्मणि ब्रह्मसत्ताभिन्नत्वेन ब्रह्मसत्तासमानत्वासम्भवेन तदभिन्नत्वेन तत्समानसत्ताकभेदः सिद्ध्यन् ब्रह्माभिन्नः पारमार्थिक एव सिद्ध्यतीति दिक् ।**

ಇದಕ್ಕೆ ಸಮಾಧಾನ ಹೀಗೆ— ಧರ್ಮಿಸತ್ತಾ ಸಮಾನಸತ್ತಾ ಎಂದರೆ ಧರ್ಮಿ ಇರುವಷ್ಟು ಕಾಲವಿರುವ ಸತ್ತೆ ಎಂದು ವಿವಕ್ಷಿತವಾಗಿದೆ. ಈಗ ವ್ಯಾವಹಾರಿಕ ಭೇದವನ್ನು ಜೀವನಲ್ಲಿ ಹೇಳಿದರೆ ಅದು ಜೀವನಿರುವಷ್ಟು ಕಾಲ ಇರುವುದಿಲ್ಲ. ವ್ಯವಹಾರ ನಿವೃತ್ತಿಕಾಲದಲ್ಲಿಯೂ ಜೀವನಿರುತ್ತಾನೆ. ಆಗ ವ್ಯಾವಹಾರಿಕ ಭೇದವಿರುವುದಿಲ್ಲ. ಆದರಿಂದ ಪಾರಮಾರ್ಥಿಕ ಭೇದವನ್ನೇ ಇಟ್ಟುಕೊಳ್ಳಬೇಕಾಗುವುದರಿಂದ ಸಿದ್ಧಸಾಧನತ್ವ ದೋಷಕ್ಕೆ ಅವಕಾಶವಿಲ್ಲ. ಅಥವಾ ಬ್ರಹ್ಮ ಸತ್ತಾಭಿನ್ನತ್ವ ತದಭಿನ್ನತ್ವ ಅನ್ಯತರರೂಪದಿಂದ ಸಮಾನತ್ವವು ವಿವಕ್ಷಿತವೆಂದು ಹೇಳಬೇಕು. ಇದು ಬ್ರಹ್ಮನಲ್ಲಿ ಜೀವಭೇದ ಸಾಧನೆ ಮಾಡುವ ಸ್ಥಳದಲ್ಲಿ. ಜೀವನಲ್ಲಿ ಬ್ರಹ್ಮಭೇದ ಸಾಧನೆ ಮಾಡುವಾಗ ಅದರಲ್ಲಿ ಜೀವಸತ್ತಾಭಿನ್ನತ್ವ ತದಭಿನ್ನತ್ವ ಅನ್ಯತರರೂಪದಿಂದ ಸಮಾನತ್ವವು ವಿವಕ್ಷಿತ.

ಘಟದಲ್ಲಿ ಬ್ರಹ್ಮಸತ್ತಾಭಿನ್ನತ್ವೇನ ಧರ್ಮಿಸತ್ತಾಸಮಾನವಾದುದು ವ್ಯಾವಹಾರಿಕವಾದ ಭೇದಸತ್ತೆ. ವ್ಯಾವಹಾರಿಕವಾದ ಘಟವು ಧರ್ಮಿಯಾದ್ದರಿಂದ ಧರ್ಮಿಸತ್ತೆಯೂ ಬ್ರಹ್ಮಸತ್ತಾಭಿನ್ನ, ಭೇದಸತ್ತೆಯೂ ಬ್ರಹ್ಮಸತ್ತಾಭಿನ್ನ. ಇಂಥ ಸತ್ತೆಯುಳ್ಳ ವ್ಯಾವಹಾರಿಕ ಭೇದವು ಘಟದಲ್ಲಿ ಪ್ರಸಿದ್ಧವೆ. ಆದರಿಂದ ಅಪ್ರಸಿದ್ಧ ವಿಶೇಷಣತ್ವ ದೋಷವಿಲ್ಲ.

ಬ್ರಹ್ಮನಲ್ಲಿ ಸಿದ್ಧವಾಗುತ್ತಿರುವ ಪಾರಮಾರ್ಥಿಕ ಭೇದದ ಪಾರಮಾರ್ಥಿಕ ಸತ್ತೆಯು ಬ್ರಹ್ಮಸತ್ತಾಭಿನ್ನತ್ವೇನ ಬ್ರಹ್ಮಸತ್ತಾಸಮಾನವಾಗಲು ಶಕ್ಯವಿಲ್ಲ. ಪಾರಮಾರ್ಥಿಕ ಸತ್ತೆಯು ಬ್ರಹ್ಮಸತ್ತೆಗಿಂತ ಭಿನ್ನವಲ್ಲ. ಅದರಿಂದ ಬ್ರಹ್ಮಸತ್ತಾ–ಅಭಿನ್ನತ್ವರೂಪದಿಂದಲೇ ಬ್ರಹ್ಮಸತ್ತಾಸಮಾನತ್ವವನ್ನು

ಪಾರಮಾರ್ಥಿಕ ಸತ್ತೆಗೆ ಹೇಳಬೇಕು. ಹೀಗಾಗಿ ಪಾರಮಾರ್ಥಿಕ ಭೇದ ಸಿದ್ಧಿಸುವುದು. ಇದೊಂದು ದಿಕ್‌ಪ್ರದರ್ಶನ. ಈ ದಿಶೆಯಲ್ಲಿ ಇನ್ನೂ ವಿಚಾರ ಮಾಡಬಹುದು.

**अत्र च घटादिसत्तासमानसत्ताकभेदस्य ब्रह्मण्यभ्युपगमात् सिद्धसाधनमतो धर्मीति ।**

**यद्यपि घटादेर्मेयत्वादिकं प्रति धर्मित्वमस्त्येव । तथापि स्वधर्मित्वं विवक्षितम् । स्वपदस्य च तत्तद्भेदपरत्वान्न दोषः । न चैवमात्मधर्मिकभेदस्य परमते स्वधर्मिसत्तासमानसत्ताकत्वाभावात् साध्याप्रसिद्धिरिति वाच्यम् । सजातीयसाध्यस्य घटादौ प्रसिद्ध्यैवानु-माननिर्वाहात् । अन्यथा पक्षीयवह्नेः प्रागसिद्धत्वेनानुमानोच्छेदप्रसङ्गात् ।**

ಧರ್ಮಿಸತ್ತಾಸಮಾನ ಸತ್ತಾಕಭೇದವೆಂಬ ಸಾಧ್ಯಶರೀರದಲ್ಲಿ ಧರ್ಮಿ ಎಂಬಂಶವಿಲ್ಲದಿದ್ದರೆ ಘಟಾದಿಸತ್ತಾಸಮಾನ ಸತ್ತಾಕವಾದ ವ್ಯಾವಹಾರಿಕ ಭೇದವಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಬಹುದು. ಆದರಿಂದ ಧರ್ಮಿ ಎಂಬ ಅಂಶ ಬೇಕು. ಯದ್ಯಪಿ ಘಟಾದಿಗಳೂ ಮೇಯತ್ವಾದಿ ಧರ್ಮಗಳಿಗೆ ಧರ್ಮಿಯೇ ಆಗಿದೆ. ಆದರೆ ಸ್ವಧರ್ಮಿತ್ವವನ್ನು ವಿವಕ್ಷೆ ಮಾಡಬೇಕು. ಸ್ವಪದದಿಂದ ಆಯಾ ಭೇದವನ್ನಿಟ್ಟುಕೊಳ್ಳಬೇಕು. ಆದರಿಂದ ದೋಷವಿಲ್ಲ.

ಯದ್ಯಪಿ ಆತ್ಮಧರ್ಮಿಕ ಭೇದವನ್ನು ಸಾಧನೆ ಮಾಡುವಾಗ ಸ್ವಧರ್ಮಿಯಾದ ಆತ್ಮನ ಸತ್ತೆ ಪಾರಮಾರ್ಥಿಕಸತ್ತೆ, ಅದಕ್ಕೆ ಸಮಾನವಾದ ಸತ್ತೆಯು ವ್ಯಾವಹಾರಿಕ ಭೇದಕ್ಕೆ ಇಲ್ಲ, ಪಾರಮಾರ್ಥಿಕ ಭೇದ ಅಪ್ರಸಿದ್ಧ. ಆದರಿಂದ ಧರ್ಮಿಸತ್ತಾಸಮಾನ ಸತ್ತಾಕವಾದ ಭೇದವೆಂಬ ಸಾಧ್ಯ ಅಪ್ರಸಿದ್ಧ. ಆದರೂ ಘಟಾದಿಗಳಲ್ಲಿ ಧರ್ಮಿಸತ್ತಾ ಸಮಾನ ಸತ್ತಾಕವಾದ ಭೇದ ಸಿದ್ಧವೇ ಇದೆ. ಅದು ಆತ್ಮನಲ್ಲಿ ಸಿದ್ಧವಾಗುತ್ತಿರುವ ಧರ್ಮಿಸತ್ತಾ ಸಮಾನಸತ್ತಾಕವಾದ ಭೇದಕ್ಕೆ ಸಜಾತೀಯವಾಗಿದೆ. ಸಜಾತೀಯ ವಾದ ಸಾಧ್ಯ ಸಿದ್ಧವಾಗಿದ್ದರೆ ಸಾಕು. ಅನುಮಾನ ನಿರ್ವಾಹವಾಗುತ್ತದೆ. ಹೀಗೆ ಹೇಳದಿದ್ದರೆ ಪರ್ವತದಲ್ಲಿ ವಹ್ನಿಯ ಅನುಮಾನ ಮಾಡುವಾಗಲೂ ಕೂಡ ಸಾಧ್ಯವಾದ ಪರ್ವತೀಯ ವಹ್ನಿಯು ಈ ಅನುಮಾನಕ್ಕಿಂತ ಪೂರ್ವದಲ್ಲಿ ಸಿದ್ಧವಾಗಿಲ್ಲದಿರುವುದರಿಂದ ಸಾಧ್ಯಾಪ್ರಸಿದ್ಧಿದೋಷ ಬಂದೀತು. ಹೀಗೆ ಯಾವ ಅನುಮಾನವೂ ನಿರ್ವಾಹವಾಗದೆ ಹೋಗುವ ಪ್ರಸಂಗ ಬರುತ್ತದೆ.

**वस्तुतः स्वनिष्ठत्व स्वनिष्ठसत्तासमानसत्ताकत्वोभयसम्बन्धेन धर्मिविशिष्टो भेदः साध्यः । एवं च साध्यस्यानुगतत्वाद्धटादौ तत्प्रसिद्धिः सुलभैव ।**

**एतेन भेदस्यानुगतत्वपक्षे घटादिसत्तासमसत्ताकतद्धर्मिकभेदस्यैवात्मन्यभ्युपगमेऽपि न सिद्धसाधनावकाशः । गुणादौ द्रव्यवृत्तित्वविशिष्टसत्ताया इव घटादिवृत्तित्वविशिष्टभेदस्यात्मन्यभावादिति ।**

ವಸ್ತುತಃ ಸ್ವಧರ್ಮಿಸತ್ತಾಸಮಾನ ಸತ್ತಾಕತ್ವವನ್ನು ಭೇದದಲ್ಲಿ ನಿವೇಶಮಾಡುವುದಿಲ್ಲ. ಸ್ವನಿಷ್ಠತ್ವ ಮತ್ತು ಸ್ವನಿಷ್ಠಸತ್ತಾಸಮಾನಸತ್ತಾಕತ್ವವೆಂಬ ಉಭಯ ಸಂಬಂಧದಿಂದ ಧರ್ಮಿವಿಶಿಷ್ಟತ್ವವನ್ನು ಭೇದದಲ್ಲಿ ನಿವೇಶ ಮಾಡುತ್ತಿದ್ದೇವೆ. ಈಗ ಪಕ್ಷ ದೃಷ್ಟಾಂತಗಳಲ್ಲಿ ಸಾಧ್ಯವು ಏಕರೂಪವಾಗಿರುವುದರಿಂದ ಘಟಾದಿಗಳಲ್ಲಿ ಸಾಧ್ಯಪ್ರಸಿದ್ಧಿ ಸುಲಭವೇ ಆಗಿದೆ.

ಭೇದದಲ್ಲಿ ಹೀಗೆ ಧರ್ಮಿವಿಶಿಷ್ಟತ್ವವನ್ನು ನಿವೇಶ ಮಾಡಿದ್ದರಿಂದ ಇನ್ನೊಂದು ಪ್ರಯೋಜನವೂ ಲಭ್ಯವಿದೆ. ಅದೇನೆಂದರೆ, ಭೇದವು ಅನುಗತವೆನ್ನುವ ಪಕ್ಷವಿದೆ. ಅಧಿಕರಣ ಭೇದದಿಂದ ಭೇದವು ಭಿನ್ನವಾಗುವುದಿಲ್ಲ ಎಂದು. ಹೀಗಾಗಿ ಘಟಾದಿಸತ್ತಾ ಸಮಸತ್ತಾಕವಾದ ಘಟಧರ್ಮಿಕವಾದ ಭೇದವೇ ಘಟದಲ್ಲಿರುವಂತೆ ಆತ್ಮನಲ್ಲಿಯೂ ಇರುವುದರಿಂದ ಘಟಾದಿಗಳಲ್ಲಿ ಪ್ರಸಿದ್ಧವಾದ ಸಾಧ್ಯ ಆತ್ಮನಲ್ಲಿಯೂ ಸಿದ್ಧವೇ ಆಗಿದೆ ಎಂದು ಸಿದ್ಧ ಸಾಧನ ದೋಷಕ್ಕೆ ಅವಕಾಶವಿದೆ. ಧರ್ಮಿವಿಶಿಷ್ಟತ್ವ ನಿವೇಶ ಮಾಡಿದಾಗ ಈ ದೋಷಕ್ಕೆ ಅವಕಾಶವಿಲ್ಲ. ದ್ರವ್ಯದಲ್ಲಿರುವ ಸತ್ತೆ, ಗುಣದಲ್ಲಿರುವ ಸತ್ತೆಗಳು ಬೇರೆಯಲ್ಲ. ದ್ರವ್ಯದಲ್ಲಿರುವ ಸತ್ತೆಯೇ ಗುಣದಲ್ಲಿಯೂ ಇದೆ. ಆದರೆ ದ್ರವ್ಯವೃತ್ತಿತ್ವ ವಿಶಿಷ್ಟವಾದ ಸತ್ತೆ ಗುಣದಲ್ಲಿ ಇಲ್ಲ. ಹಾಗೇ ಘಟಾದಿಧರ್ಮಿವೃತ್ತಿತ್ವವಿಶಿಷ್ಟವಾದ ಭೇದವು ಆತ್ಮನಲ್ಲಿ ಇಲ್ಲವೆಂದು ಸಿದ್ಧಸಾಧನತ್ವ ದೋಷ ಪರಿಹಾರವಾಗುತ್ತದೆ.

ननु ज्ञानसुखदुःखादीनामैकाधिकरण्यनियमेन दुःखानधिकरणे जीवे तदनुसन्धानस्याप्यभावात् प्रथमानुमाने स्वरूपासिद्धिः । अन्यथा ब्रह्मणोऽप्यविशेषेण दुःखानुसन्धानापत्त्या द्वितीये तद्दोष इत्यत आह **— दुःखादीनामिति ।** वृत्त्यात्मकानामेव ज्ञानसुखादीनामैकाधिकारण्यनियमात् तदनुसन्धानस्य च साक्षिप्रत्यक्षत्वेन जीवगतत्वे बाधकाभावान्न प्रथमेऽसिद्धिः । ब्रह्मणश्च दुःखानुसन्धातृत्वे तद्भावं प्राप्तस्यापि तदापत्त्या, मुक्तित्वेन पराङ्गीकृतब्रह्मभावस्य पुरुषार्थत्वानुपपत्तेः 'निरनिष्ठः' इत्यादिश्रुत्यप्रामाण्यप्रसङ्गाच्च ब्रह्मणो दुःखाननुसन्धातृत्वावश्यकत्वान्न द्वितीयेऽपि दोष इति भावः ।

ಜ್ಞಾನ ಸುಖ ದುಃಖಾದಿಗಳಿಗೆ ಏಕಾಧಿಕರಣತ್ವನಿಯಮವಿದೆ. ಒಬ್ಬನಲ್ಲಿ ದುಃಖ, ಇನ್ನೊಬ್ಬನಲ್ಲಿ ಅದರ ಅನುಭವ ಎನ್ನುವಂತಿಲ್ಲ. ಹೀಗಾಗಿ ಅಂತಃಕರಣದಲ್ಲಿರುವ ದುಃಖದ ಅನುಭವ ಜೀವನಲ್ಲಿರಲಾರದು. ದುಃಖಾನುಭವವನ್ನು ಹೇತು ಮಾಡಿದ್ದೇವೆ. ದುಃಖವಿಲ್ಲದ ಜೀವನಲ್ಲಿ ದುಃಖಾನುಭವವೂ ಇಲ್ಲ, ಹೀಗಾಗಿ ಪ್ರಥಮಾನುಮಾನದಲ್ಲಿ ಸ್ವರೂಪಾಸಿದ್ಧಿ. ದುಃಖವಿರುವಲ್ಲಿಯೇ ಅದರ ಅನುಭವ ಎಂಬ ನಿಯಮವನ್ನು ಒಪ್ಪದಿದ್ದಲ್ಲಿ ದುಃಖವಿಲ್ಲದ ಬ್ರಹ್ಮನಲ್ಲಿಯೂ ದುಃಖಾನುಭವ ಪ್ರಸಂಗವಿರುವುದರಿಂದ ಎರಡನೆ ಅನುಮಾನದಲ್ಲಿಯೂ ದುಃಖಾನನುಭವವೆಂಬ ಹೇತುವಿಗೆ ಸ್ವರೂಪಾಸಿದ್ಧಿ. ಈ ಸಮಸ್ಯೆಗೆ ಹೀಗೆ ಸಮಾಧಾನ– ಅಂತಃಕರಣವೃತ್ತಿರೂಪವಾದ ಅನುಭವಕ್ಕೆ ಮಾತ್ರ ದುಃಖಾದಿಗಳ ಏಕಾಧಿಕರಣತ್ವ ನಿಯಮ. ಹೇತು ಮಾಡಿರುವ ಅನುಭವವು ಸಾಕ್ಷಿಪ್ರತ್ಯಕ್ಷರೂಪ. ಅದರಿಂದ ದುಃಖವಿಲ್ಲದ ಜೀವನಲ್ಲಿ ಅದು ಇರುವುದಕ್ಕೆ ಬಾಧಕವಿಲ್ಲ. ಅದರಿಂದ ಮೊದಲ ಅನುಮಾನದಲ್ಲಿ ಅಸಿದ್ಧಿ ಇಲ್ಲ. ಎರಡನೇ ಅನುಮಾನದಲ್ಲಿಯೂ ಬ್ರಹ್ಮನಲ್ಲಿ ದುಃಖಾನುಭವ ಪ್ರಸಂಗವಿಲ್ಲದ್ದರಿಂದ ಅಸಿದ್ಧಿ ಇಲ್ಲ. ಬ್ರಹ್ಮನಲ್ಲಿ ದುಃಖಾನುಭವವನ್ನು ಒಪ್ಪಿದರೆ ಬ್ರಹ್ಮಭಾವರೂಪವಾದ ಮುಕ್ತಿಯನ್ನು ಹೊಂದುವ ಜೀವನಿಗೂ ದುಃಖಾನುಭವ ಬರಬೇಕಾಗುತ್ತದೆ. ಹೀಗಾಗಿ ಬ್ರಹ್ಮಭಾವವನ್ನೇ ಮುಕ್ತಿ ಎಂದು ಅಂಗೀಕರಿಸುವ ಅಭೇದಮತದಲ್ಲಿ ದುಃಖಾನುಭವ ಪ್ರಸಕ್ತಿಉಳ್ಳ ಈ ಬ್ರಹ್ಮಭಾವವು ಪುರುಷಾರ್ಥವಾಗದೆ ಹೋಗುವ ಪ್ರಸಕ್ತಿ ಇದೆ. ಮತ್ತು 'ನಿರನಿಷ್ಟಃ' ಎಂದು ಮುಂತಾಗಿ ಬ್ರಹ್ಮನಲ್ಲಿ ದುಃಖಾನುಭವಾಭಾವ ಬೋಧಕವಾದ ಶ್ರುತಿಗೆ ಅಪ್ರಾಮಾಣ್ಯ ಪ್ರಸಂಗವೂ ಇದೆ.

**ಜೀವಬ್ರಹ್ಮರಿಗೆ ಪಕ್ಷದೃಷ್ಟಾಂತಭಾವ ಯುಕ್ತ**

**नन्वत्र जीवशब्देनानवच्छिन्नचैतन्यविवक्षायां तस्य दुःखाननुसन्धातृत्वेनासिद्धिप्रसङ्गादन्तःकरणेन वाऽज्ञानेन वाऽवच्छिन्नं चैतन्यं विवक्षणीयम्। न च तद्युक्तम्। अवच्छिन्नस्य मिथ्यात्वेन तत्सत्ता-समानसत्ताकत्वेन सिध्यतो भेदस्य पारमार्थिकत्वासिद्धेरिति चेत्। कस्तर्हि तवापि जीवशब्दार्थः। अवच्छिन्नमेवेति चेत्। तर्हि जीवमुक्तिर्मिथ्या स्यात्। ननु जीवभाव एव मिथ्या चैतन्यं तु सत्यमेवेति चेत् यत्र चैतन्ये मिथ्याभूतो जीवस्तच्चैतन्यं जीवशब्देनास्माभिर्विवक्षितमिति सन्तोष्टव्यम्। तदेव चैतन्यं दुःखानुसन्धात्रिति नासिद्धिः। दुःखानुसन्धातृत्वं मिथ्यैवेति**

**चेत् । किमनेनाकाण्डताण्डवेन ? न ह्यस्माभिः सत्यत्वं हेतौ विशेषणीकृतम् । ननु जीवब्रह्मणोर्भेदसिद्धेः पूर्वं कथं पक्षदृष्टान्तभाव इति चेन्न । त्वयाऽभ्युपगतेन व्यावहारिक-भेदेनैव पक्षदृष्टान्तभावोपपत्तेः ॥**

ಇಲ್ಲಿ 'ಜೀವ' ಶಬ್ದದಿಂದ ಅನವಚ್ಛಿನ್ನ ಚೈತನ್ಯವನ್ನು ವಿವಕ್ಷೆ ಮಾಡಿದರೆ ಅವನಲ್ಲಿ ದುಃಖಾನುಭವವಿಲ್ಲದ್ದರಿಂದ ಅಸಿದ್ಧಿ ಪ್ರಸಂಗ. ಆದರಿಂದ ಅಂತಃಕರಣದಿಂದ ಅಥವಾ ಅಜ್ಞಾನದಿಂದ ಅವಚ್ಛಿನ್ನವಾದ ಚೈತನ್ಯವನ್ನೇ ಪಕ್ಷವೆಂದು ವಿವಕ್ಷೆ ಮಾಡಬೇಕು. ಅದು ಕೂಡುವುದಿಲ್ಲ. ಅವಚ್ಛಿನ್ನ ಚೈತನ್ಯ ಮಿಥ್ಯೆಯಾದ್ದರಿಂದ ಅವನ ಸತ್ತೆಗೆ ಸಮಾನ ಸತ್ತಾಕವಾಗಿ ಸಿದ್ಧವಾಗುವ ಭೇದವೂ ಪಾರಮಾರ್ಥಿಕವೆಂದಾಗಲಾರದು' ಎಂದು ಅಭೇದವಾದಿ ಆಕ್ಷೇಪಿಸುತ್ತಾನೆ. ಅದಕ್ಕೆ ಅವನನ್ನೇ ಕೇಳಬೇಕು 'ಹಾಗಾದರೆ ನಿನ್ನ ಪಕ್ಷದಲ್ಲಿ ಜೀವ ಎಂದರೇನು? ಅವಚ್ಛಿನ್ನ ಚೈತನ್ಯವೇ ಜೀವ ಎನ್ನುತ್ತೀನೆ ಎಂದರೆ ಜೀವನಿಗೆ ಮುಕ್ತಿ ಎಂಬುದು ಸುಳ್ಳಾದೀತು. ಚೈತನ್ಯ ಸುಳ್ಳಲ್ಲ, ಅವನಲ್ಲಿರುವ ಜೀವಭಾವ ಸುಳ್ಳು. ಅವನು ಸತ್ಯನೆ. ಅವನಿಗೆ ಮುಕ್ತಿಯೂ ಸತ್ಯ ಎನ್ನುತ್ತೀನೆ ಎಂದರೆ ಯಾವ ಚೇತನನಲ್ಲಿ ಜೀವಭಾವ ಮಿಥ್ಯೆಯಾಗಿ ಇರುವುದೋ ಆ ಚೇತನನನ್ನೇ ನಾವು ಜೀವ ಎಂದು ವಿವಕ್ಷೆ ಮಾಡುತ್ತೇವೆ. ಇಷ್ಟರಿಂದ ನೀನು ತೃಪ್ತಿಪಡಬೇಕು. ಈಗ ಆ ಚೈತನ್ಯವೇ ದುಃಖಾನುಭವವುಳ್ಳವನಾದ್ದರಿಂದ ಅಸಿದ್ಧಿ ಇಲ್ಲ. ದುಃಖಾನುಭವ ಮಿಥ್ಯೆಯೇ ಎಂದರೆ ಅಕಾಂಡ ತಾಂಡವ ಅನುಕ್ರೋಪಾಲಂಭವೇಕೆ? ನಾವು ಸತ್ಯತ್ವವನ್ನು ಹೇತುವಿಗೆ ವಿಶೇಷಣವಾಗಿ ಕೊಟ್ಟಿಲ್ಲ. ಅದನ್ನೇಕೆ ನಿಷೇಧ ಮಾಡುವೆ? ಆದರೂ ಜೀವಬ್ರಹ್ಮರಿಗೆ ಭೇದ ಸಿದ್ಧವಾಗುವುದಕ್ಕೆ ಮೊದಲು ಒಬ್ಬನಲ್ಲಿಯೇ ಪಕ್ಷತ್ವ ದೃಷ್ಟಾಂತತ್ವಗಳು ಹೇಗೆ ಕೂಡುತ್ತವೆ? ಎಂದರೆ ನೀನು ಒಪ್ಪಿರುವ ವ್ಯಾವಹಾರಿಕಭೇದದಿಂದಲೇ ಪಕ್ಷತ್ವದೃಷ್ಟಾಂತತ್ವಗಳು ಕೂಡುತ್ತವೆ ಎನ್ನುತ್ತೇವೆ.

आद्यानुमाने पक्षं परिष्कर्तुमाशङ्कते — **नन्विति । अनव-च्छिन्नेति ।** यद्यपि यावद्विशेषणानवच्छिन्नस्य बोधयितुमशक्यत्वान्न पक्षत्वसम्भवः । सिद्धान्ते पक्षाप्रसिद्धिश्च । तथाप्यनवच्छिन्नपदस्यान्तः-करणाद्यनवच्छिन्नपरतया तदनवच्छिन्नत्वेन पक्षत्वे तात्पर्यान्न दोषः । बहुजीवपक्षेऽन्तःकरणेनेति, एकजीवपक्षेऽज्ञानेनेति। अवच्छिन्नं विशिष्टम् ।

तस्य च मिथ्यात्वमपारमार्थिकत्वं, व्यावहारिकत्वमिति यावत् । तथाच तत्सत्तासमानसत्ताकभेदस्य सिद्धत्वात् सिद्धसाधनं, पारमार्थिकभेदा-सिद्धेरर्थान्तरं चेत्याशयः ।

ಮೊದಲನೆ ಅನುಮಾನದಲ್ಲಿ ಪಕ್ಷವನ್ನು ಪರಿಷ್ಕರಿಸಲು ಆಶಂಕೆ ಮಾಡಿಕೊಳ್ಳುತ್ತಾರೆ, ಅನವಚ್ಛಿನ್ನ ಚೈತನ್ಯವಿವಕ್ಷೆ ಮಾಡಿದರೆ ಅಸಿದ್ಧಿ ದೋಷ ಎಂದು. ಯದ್ಯಪಿ ಯಾವ ವಿಶೇಷಣದಿಂದಲೂ ಅವಚ್ಛಿನ್ನವಾಗದುದನ್ನು ಶಬ್ದದಿಂದ ಹೇಳುವುದೇ ಶಕ್ಯವಿಲ್ಲ, ಅದರಿಂದ ಅದನ್ನು ಪಕ್ಷ ಮಾಡಲಾಗುವುದಿಲ್ಲ. ಸಿದ್ಧಾಂತದಲ್ಲಿ ಅಂಥ ಪಕ್ಷ ಅಪ್ರಸಿದ್ಧವೂ ಆಗಿದೆ. ಆದರೂ 'ಅನವಚ್ಛಿನ್ನ' ಎಂದರೆ ಅಂತಃಕರಣಾದಿಗಳಿಂದ ಅವಚ್ಛಿನ್ನವಲ್ಲ ಎಂದರ್ಥ. ಅದರಿಂದ ಅಂತಃಕರಣಾದಿಗಳಿಂದ ಅವಚ್ಛಿನ್ನವಲ್ಲದ ಚೈತನ್ಯವನ್ನು ಪಕ್ಷ ಮಾಡುವ ತಾತ್ಪರ್ಯವಿರುವುದರಿಂದ ದೋಷವಿಲ್ಲ. ಬಹುಜೀವವಾದಪಕ್ಷದಲ್ಲಿ ಅಂತಃಕರಣಾವಚ್ಛಿನ್ನ ಚೈತನ್ಯ ಜೀವ. ಏಕಜೀವವಾದಪಕ್ಷದಲ್ಲಿ ಅಜ್ಞಾನದಿಂದ ಅವಚ್ಛಿನ್ನ ಚೈತನ್ಯ ಜೀವನೆಂದು ಅವರು ಒಪ್ಪಿದ್ದಾರೆ. 'ಅವಚ್ಛಿನ್ನ' ಎಂದರೆ ವಿಶಿಷ್ಟ ಎಂದರ್ಥ. ಅವಚ್ಛಿನ್ನ ಚೈತನ್ಯನೇ ಜೀವನೆನ್ನುವುದಾದರೆ ಅವನು ಪಾರಮಾರ್ಥಿಕನಲ್ಲ, ವ್ಯಾವಹಾರಿಕನಾಗಿದ್ದಾನೆ. ಅವನ ಸತ್ತೆಗೆ ಸಮಾನ ಸತ್ತೆ ಉಳ್ಳ ಭೇದವೆಂದರೆ ವ್ಯಾವಹಾರಿಕ. ಅದು ಅಭೇದ ಮತದಲ್ಲಿ ಸಿದ್ಧವೇ ಆಗಿದೆ. ಅದರಿಂದ ಸಿದ್ಧಸಾಧನ. ಪಾರಮಾರ್ಥಿಕ ಭೇದ ಸಾಧನೆ ಮಾಡುವ ಉದ್ದೇಶ ಸಿದ್ಧಿಸದಿರುವುದರಿಂದ ಅರ್ಥಾಂತರ ದೋಷವೆಂದು ಆಶಂಕೆಯ ಆಶಯ.

अत्र विशिष्टघटकविशेष्यांशस्यैव पक्षत्वमङ्गीकृत्य समाधास्यन् उक्तसिद्धसाधनाद्यभावस्फुटीकरणाय पृच्छति – **कस्तर्हि तवेति** । **अवच्छिन्नमिति** । सामान्ये नपुंसकम् । अवच्छिन्नं चैतन्यमिति वा । **मिथ्या स्यादिति** । शशशृङ्गादिवदसती स्यादित्यर्थः । जीवस्य मिथ्यात्वेनाज्ञानवत् प्रविलीनस्य ब्रह्मभावायोगादिति भावः । तथाच निष्प्रयोजनत्वेन वेदान्तानामनारम्भणीयत्वप्रसङ्ग इति ध्येयम् । जीव-शब्दार्थविशिष्टघटकविशेष्यांशस्य ब्रह्मत्वापत्तिरेव जीवमुक्तिशब्दार्थः । तत्र च नोक्तदोष इत्याशङ्कते – **नन्विति** । जीवभावोपलक्षितचैतन्यस्य पक्षत्वान्नार्थान्तरादीत्याशयेन समाधत्ते – **यत्रेति** । सन्तोष्टव्य-मित्यनेनाभ्युपेत्यैवेदमुक्तम्, वस्तुतो विशिष्टस्यापि सत्यत्वमेवेति

सूचितम् – **तदेवेति** । दुःखानुसन्धातृत्वस्य जीवभावनियतत्वादिति भावः ।

नन्वपारमार्थिकदुःखानुसन्धातृत्वस्य ब्रह्मण्यनैकान्त्यात् पारमार्थिकत्वेन हेतुर्विशेषणीयः । तथाच परमते हेत्वसिद्धिरित्याशङ्कते – **दुःखानुसन्धातृत्वमिति** । स्यादेवं यदि पारमार्थिकत्वेन हेतुर्विशेषितः स्यान्न चैवं, प्रातिभासिकानैकान्त्यस्यादोषत्वात् । अन्यथाऽनुमानमात्रोच्छेदापत्तेरिति भावेनाह – **किमनेनेति** । अनवसरताण्डवायितेनानेनानुक्तोपालम्भेन किमस्माकमनिष्टम्? न किमपीत्यर्थः ।

ಇಲ್ಲಿ ವಿಶಿಷ್ಟ ಘಟಕವಾದ ವಿಶೇಷ್ಯಾಂಶವನ್ನೇ ಪಕ್ಷ ಮಾಡುವ ಅಭಿಪ್ರಾಯವೆಂದು ಉತ್ತರ ನೀಡುವುದಕ್ಕೆ, ಮೊದಲಿಗೆ ಅವನು ಹೇಳಿದ ಸಿದ್ಧಸಾಧನ ಅರ್ಥಾಂತರಗಳಿಲ್ಲವೆನ್ನುವುದನ್ನು ಸ್ಪಷ್ಟೀಕರಿಸುವ ಉದ್ದೇಶದಿಂದ ಕೇಳುತ್ತಾರೆ— 'ಹಾಗಾದರೆ ನಿನ್ನ ಪಕ್ಷದಲ್ಲಿ ಜೀವ ಎಂದರೇನು?' ಎಂದು. 'ಅವಚ್ಛಿನ್ನಂ' ಎಂದು ನಪುಂಸಕಲಿಂಗ ಸಾಮಾನ್ಯಾಭಿಪ್ರಾಯದಿಂದ ಅಥವಾ ಚೈತನ್ಯ ಶಬ್ದ ನಪುಂಸಕವಾದ್ದರಿಂದ ಅದಕ್ಕೆ ವಿಶೇಷಣವಾಗಿ ನಪುಂಸಕ ಶಬ್ದಪ್ರಯೋಗಿಸಿದ್ದಾರೆ. ಅವಚ್ಛಿನ್ನ ಚೇತನನೇ ಜೀವನೆಂದಾದರೆ ಅವನಿಗೆ ಮುಕ್ತಿ ಎಂಬುದು ಸುಳ್ಳಾದೀತು, ಅಂದರೆ, ಮೊಲದ ಕೊಂಬಿನಂತೆ ಅಸತ್ತಾದೀತು ಎಂದರ್ಥ. ಜೀವನು ಮಿಥ್ಯೆಯಾದರೆ ಅಜ್ಞಾನದಂತೆಯೆ ಜ್ಞಾನದಿಂದ ನಾಶ ಹೊಂದುತ್ತಾನೆ ಎಂದಮೇಲೆ ಅವನಿಗೆ ಬ್ರಹ್ಮಭಾವ ಬರುವುದು ಕೂಡಲಾರದು ಎಂದು ಅಭಿಪ್ರಾಯ. ಹೀಗೆ ಮುಕ್ತಿ ಸುಳ್ಳಾದರೆ ವೇದಾಂತದ ಅಧ್ಯಯನ ನಿಷ್ಫಲವಾಗುವುದರಿಂದ ವೇದಾಂತವು ಅಧ್ಯಯನಕ್ಕೆ ಅಯೋಗ್ಯವೆನಿಸುವ ಪ್ರಸಂಗವಿದೆ ಎಂದು ತಿಳಿಯಬೇಕು.

ಜೀವ ಶಬ್ದಾರ್ಥವಾದ ವಿಶಿಷ್ಟದಲ್ಲಿ ಘಟಕವಾದ ವಿಶೇಷ್ಯಾಂಶಕ್ಕೆ ಬ್ರಹ್ಮಭಾವ ಬರುವುದೇ 'ಜೀವಮುಕ್ತಿ' ಶಬ್ದಾರ್ಥ ಎನ್ನುತ್ತೇನೆ. ಈಗ ಹಿಂದೆ ಹೇಳಿದ ದೋಷವಿಲ್ಲ ಎಂದು ಆಶಂಕಾ ಮಾಡಿಕೊಂಡು, ಹಾಗಾದರೆ ಜೀವಭಾವದಿಂದ ಉಪಲಕ್ಷಿತವಾದ ಚೈತನ್ಯವನ್ನೇ ಪಕ್ಷ ಮಾಡುತ್ತೇವೆ. ಹೀಗಾಗಿ ಅರ್ಥಾಂತರಾದಿ ದೋಷಕ್ಕೆ ಪ್ರಸಕ್ತಿ ಇಲ್ಲ ಎಂಬ ಅಭಿಪ್ರಾಯದಿಂದ ಸಮಾಧಾನ ಹೇಳುತ್ತಾರೆ. 'ಇಷ್ಟರಿಂದ ತೃಪ್ತಿ ಪಡು' ಎಂಬ ಮಾತಿನಿಂದ 'ಇದು ಅಭ್ಯುಪಗಮವಾದದಿಂದ ಹೇಳಿದ್ದು, ವಸ್ತುತಃ ಜೀವಭಾವ ವಿಶಿಷ್ಟ ಚೇತನನೂ ಸತ್ಯನೇ ಆಗಿದ್ದಾನೆ' ಎಂದು ಸೂಚಿಸುತ್ತಾರೆ. ಜೀವಭಾವದಿಂದ ಉಪಲಕ್ಷಿತನಾದ ಆ ಚೇತನನಲ್ಲಿಯೇ ದುಃಖಾನುಭವವಿರುವುದರಿಂದ ಅಸಿದ್ಧಿ ಇಲ್ಲ, ದುಃಖಾನುಭವವು ಜೀವಭಾವಕ್ಕೆ ವ್ಯಾಪಕವಾಗಿರುತ್ತದೆ ಎಂದು ಅಭಿಪ್ರಾಯ.

ಯದ್ಯಪಿ ಅಪಾರಮಾರ್ಥಿಕ ದುಃಖಾನುಭವವು ಬ್ರಹ್ಮನಲ್ಲಿ ವ್ಯಭಿಚರಿತವಾಗುವುದರಿಂದ ಪಾರಮಾರ್ಥಿಕತ್ವವೆಂಬ ವಿಶೇಷಣವನ್ನು ಹೇತುವಿಗೆ ಸೇರಿಸಬೇಕಾಗುತ್ತದೆ. ಆಗ ಅಭೇದ ಮತದಲ್ಲಿ ಹೇತ್ವಸಿದ್ಧಿ ಬರುತ್ತದೆ ಎಂಬ ಸಮಸ್ಯೆ ಇದೆ. ಆದರೆ ಪಾರಮಾರ್ಥಿಕತ್ವ ವಿಶೇಷಣವನ್ನು ನಾವು ಕೊಡುವುದಿಲ್ಲ. ಏಕೆಂದರೆ ಬ್ರಹ್ಮನಲ್ಲಿ ಅಪಾರಮಾರ್ಥಿಕ ದುಃಖಾನುಭವವೆಂದರೆ ವ್ಯಾವಹಾರಿಕವಾದ ದುಃಖಾನುಭವವಂತೂ ಅಲ್ಲ. ಅದನ್ನು ಅಭೇದವಾದಿ ಒಪ್ಪಿಲ್ಲ. ಪ್ರಾತಿಭಾಸಿಕವಾದ ದುಃಖಾನುಭವ ಎನ್ನಬೇಕು. ಪ್ರಾತಿಭಾಸಿಕ ವ್ಯಭಿಚಾರ ದೋಷವಲ್ಲ. ಅದನ್ನು ದೋಷವೆಂದು ಒಪ್ಪಿದರೆ ಎಲ್ಲ ಸದನುಮಾನದಲ್ಲಿಯೂ ಹೀಗೆ ಪ್ರಾತಿಭಾಸಿಕ ವ್ಯಭಿಚಾರವನ್ನು ಹೇಳಲು ಬರುವುದರಿಂದ ಅನುಮಾನ ಪ್ರಮಾಣವೇ ಇಲ್ಲವೆಂದಾದೀತು. ಈ ಅಭಿಪ್ರಾಯದಿಂದ ಹೇಳುತ್ತಾರೆ ಏಕೆ ಈ ಅಕಾಂಡ ತಾಡವ? ಎಂದು ಅಕಾಲದಲ್ಲಿ ಮಾಡುವ ತಾಂಡವ ನೃತ್ಯದಂತಿರುವ ನಿನ್ನ ಈ ಅನುಕ್ತೋಪಾಲಂಭದಿಂದ ನಮಗೇನು ಅನಿಷ್ಟ? ಏನೂ ಅನಿಷ್ಟವಿಲ್ಲ ಎಂದರ್ಥ.

अथायं पूर्वपक्षाभिप्रायः । दुःखानुसन्धातृत्वस्य मिथ्यात्वान्न पक्षधर्मत्वम् । सत्यानृतयोः सम्बन्धानुपपत्तेः । यद्यप्यध्यस्ताधिष्ठानभावरूपः सम्बन्धोऽस्ति । तथापि नासौ हेतुत्वनियामकः । सिद्धान्ते दुःखानुसन्धातृत्वस्यानारोपितत्वेन तदनुपपत्तेः । किन्त्वाश्रयाश्रयिभावः । तथाच परेषामसिद्धिरिति । अत्र ब्रूमः । अनुसन्धातृत्वसम्बन्धेन दुःखवत्त्वस्यैवात्र हेतुत्वम् । अनुसन्धातृत्वं च परमते स्वाधिष्ठान एव, सिद्धान्ते च स्वाधार एव दुःखादेर्वृत्तिनियामकमिति न कोऽपि दोषः ।

**कथं पक्षदृष्टान्तभाव इति** । यद्यपि प्रकृते वादिविप्रतिपत्त्या भेदस्य सन्दिग्धत्वान्न सन्दिग्धसाध्यकत्वादिलक्षणपक्षत्वानुपपत्तिरस्ति । तथापि पक्षत्वसहितदृष्टान्तत्वानुपपत्तेर्विवक्षितत्वान्न दोषः । यद्वा, भेदसिद्धेः पूर्वमभेदनिश्चये यथा जीवस्य पक्षत्वमनुपपन्नं तथा तत्सन्देहे ब्रह्मणो दृष्टान्तत्वमनुपपन्नमित्यर्थे तात्पर्यम् । अत एव भेदसिद्धेः पूर्वमित्यपि सङ्गच्छते । अन्यथा भेदसिद्ध्युत्तरमपि पक्षत्वानुपपत्तिसत्त्वेन तदसङ्गतेः ।

ಇಲ್ಲಿ ಪೂರ್ವಪಕ್ಷದ ಅಭಿಪ್ರಾಯವಿದು— ದುಃಖಾನುಭವವು ಮಿಥ್ಯೆಯಾದ್ದರಿಂದ ಅದು

ಪಕ್ಷದ ಧರ್ಮವಾಗಲಾರದು. ಸತ್ಯ ಮಿಥ್ಯೆಗಳಿಗೆ ಸಂಬಂಧ ಕೂಡಲಾರದು. ಯದ್ಯಪಿ ಸತ್ಯದಲ್ಲಿ ಮಿಥ್ಯೆಯ ಆರೋಪವಿರುವುದರಿಂದ ಅಧ್ಯಸ್ತ-ಅಧಿಷ್ಠಾನಭಾವ ರೂಪವಾದ ಸಂಬಂಧವಿದೆ. ಆದರೆ ಅದು ಹೇತುತ್ವಕ್ಕೆ ನಿಯಾಮಕವಾಗದು. ಸಿದ್ಧಾಂತದಲ್ಲಿ ದುಃಖಾನುಭವವು ಅನಾರೋಪಿತವಾದ್ದರಿಂದ ಅಧ್ಯಸ್ತಾಧಿಷ್ಠಾನಭಾವರೂಪವಾದ ಸಂಬಂಧ ಕೂಡುವುದೂ ಇಲ್ಲ. ಆದರಿಂದ ಆಶ್ರಯ-ಆಶ್ರಯಿ ಭಾವ ಸಂಬಂಧವೇ ಹೇತುತ್ವ ನಿಯಾಮಕ. ಹೀಗಾಗಿ ಅಭೇದ ಮತದವರಿಗೆ ದುಃಖಾನುಭವ ರೂಪವಾದ ಹೇತು ಅಸಿದ್ಧ ಎಂದು.

ಇದಕ್ಕೆ ನಾವು ಹೇಳುತ್ತೇವೆ— ದುಃಖಾನುಭವವನ್ನು ನಾವು ಹೇತುವನ್ನಾಗಿ ಮಾಡುವುದಿಲ್ಲ. ದುಃಖವನ್ನೇ ಅನುಭವ ಸಂಬಂಧದಿಂದ ಹೇತುವನ್ನಾಗಿ ಮಾಡುತ್ತೇವೆ. ಅನುಭವವು ಅಭೇದ ಮತದಲ್ಲಿ ದುಃಖದ ಆರೋಪವುಳ್ಳ ಅಧಿಷ್ಠಾನದಲ್ಲಿಯೇ, ಸಿದ್ಧಾಂತದಲ್ಲಿ ದುಃಖದ ಆಶ್ರಯದಲ್ಲಿಯೇ ದುಃಖಕ್ಕೆ ಆತ್ಮನಲ್ಲಿ ವೃತ್ತಿಗೆ ನಿಯಾಮಕವಾಗುತ್ತದೆ. ಅನುಸಂಧಾತೃತ್ವ ಅಂದರೆ ಅನುಭವವೆ. ಅದರಿಂದ ಅಸಿದ್ಧ್ಯಾದಿ ಯಾವ ದೋಷಕ್ಕೂ ಅವಕಾಶವಿಲ್ಲ ಎಂದು.

ಜೀವಬ್ರಹ್ಮರಿಗೆ ಭೇದ ಸಿದ್ಧವಾಗುವ ಮೊದಲು ಪಕ್ಷ ದೃಷ್ಟಾಂತಭಾವ, ಜೀವನು ಪಕ್ಷ, ಬ್ರಹ್ಮನು ದೃಷ್ಟಾಂತವೆನ್ನುವುದು ಹೇಗೆ? ಎಂದು ಪೂರ್ವಪಕ್ಷಿ ಕೇಳುತ್ತಾನೆ. ಯದ್ಯಪಿ ವಾದಿ ವಿಪ್ರತಿಪತ್ತಿಯಿಂದ ಭೇದವು ಸಂದಿಗ್ಧವಾಗಿರುವುದರಿಂದ ಸಂದಿಗ್ಧ ಸಾಧ್ಯಕತ್ವಾದಿರೂಪವಾದ ಪಕ್ಷತ್ವ ಬರಲು ಅಡ್ಡಿ ಇಲ್ಲ. ದೃಷ್ಟಾಂತತ್ವ ಕೂಡದಿರುವುದರಿಂದ ದೃಷ್ಟಾಂತತ್ವ ಹೇಗೆ ಎಂದು ಆಕ್ಷೇಪಿಸಬೇಕಾಗಿತ್ತು. ಆದರೂ ಪಕ್ಷತ್ವ ಸಹಿತ ದೃಷ್ಟಾಂತತ್ವ ಕೂಡುವುದಿಲ್ಲವೆಂದು ಅಭಿಪ್ರಾಯ. ಅಥವಾ ಭೇದ ಸಿದ್ಧವಾಗುವ ಮೊದಲು, ಅಂದರೆ, ಅಭೇದ ನಿಶ್ಚಯವಿರುವಾಗ ಹೇಗೆ ಜೀವನಿಗೆ ಪಕ್ಷತ್ವವು ಕೂಡುವುದಿಲ್ಲವೋ ಹಾಗೇ ಅಭೇದ ಸಂದೇಹವಿರುವಾಗ ಬ್ರಹ್ಮನಿಗೆ ದೃಷ್ಟಾಂತತ್ವವೂ ಕೂಡುವುದಿಲ್ಲ. ಪಕ್ಷತ್ವ ದೃಷ್ಟಾಂತತ್ವಗಳೆರಡೂ ಹೇಗೆ ಕೂಡುವುವೆಂದು ಆಕ್ಷೇಪದ ಅಭಿಪ್ರಾಯ. ಆದರಿಂದಲೆ 'ಭೇದಸಿದ್ಧಿಗೆ ಮೊದಲು' ಎನ್ನುವುದು ಸಂಗತವಾಗುತ್ತದೆ. ಇಲ್ಲದಿದ್ದರೆ ಭೇದಸಿದ್ಧಿಯ ಅನಂತರವೂ ಪಕ್ಷತ್ವ ಕೂಡುವುದಿಲ್ಲ. 'ಭೇದಸಿದ್ಧಿಯ ಮೊದಲು ಕೂಡುವುದಿಲ್ಲ' ಎಂದೇಕೆ ಹೇಳುತ್ತಾರೆ? ಅದು ಅಸಂಗತವಾದೀತು.

**अत्र जीवे ब्रह्मभेदसन्देहेऽपि ब्रह्मणि तदभेदनिश्चयान्नोक्तदोषः । न चाभेदे तदनुपपत्तिः, व्यावहारिकभेदेनैव तदुपपत्तेरित्याशयेन समाधत्ते –त्वयेति । यद्यपि केवलचैतन्यभेदः परेण नाभ्युपगतः । तथापि विशिष्टभेदस्य विशेष्यीभूतचैतन्यप्रतियोगिकत्वमस्तीति स एव पक्षदृष्टान्तभावोपपादक इति भावः । यद्वा, सार्वज्ञादिविशिष्टचैतन्यमेव**

**दृष्टान्तः । तत्प्रतियोगिकभेद एव साध्य इति न कश्चिद्दोषः । अथ तथापि जीवब्रह्मणोरभेदवादिनां ब्रह्मचैतन्येऽपि दुःखानुसन्धातृत्वसत्वाद् व्यभिचारः । अभेदस्य विप्रतिपत्त्या सन्दिग्धत्वेऽपि सन्दिग्धानैकान्त्यं दुर्वारमिति चेन्न । हेतुमति साध्याभावसन्देहाधीनव्यभिचारसन्देहस्या-दोषत्वात् । प्रकृते च तस्य हेतुमति जीवे ब्रह्माभेदसन्देहमूलत्वात् अन्यथा पक्षीयव्यभिचारसन्देहस्य सार्वत्रिकत्वेनानुमानोच्छेदप्रसङ्गादिति ।**

ಪೂರ್ವಪಕ್ಷಿಯ ಈ ಆಕ್ಷೇಪಕ್ಕೆ ಹೀಗೆ ಉತ್ತರ ಹೇಳುತ್ತಾರೆ. ಜೀವನಲ್ಲಿ ಬ್ರಹ್ಮನ ಭೇದ ಸಂದೇಹವಿದ್ದರೂ ಬ್ರಹ್ಮನಲ್ಲಿ ಬ್ರಹ್ಮನ ಅಭೇದ ನಿಶ್ಚಯವೇ ಇರುವುದರಿಂದ ಜೀವನು ಪಕ್ಷ, ಬ್ರಹ್ಮನು ವ್ಯತಿರೇಕ ದೃಷ್ಟಾಂತ ಎನ್ನುವುದು ಯುಕ್ತವೆ. ಜೀವಬ್ರಹ್ಮರಿಗೆ ಅಭೇದಪಕ್ಷದಲ್ಲಿ ಈ ವ್ಯತ್ಯಾಸ ಹೇಗೆ ಕೂಡುತ್ತದೆ ಎಂದರೆ ವ್ಯಾವಹಾರಿಕ ಭೇದದಿಂದ ಅದು ಕೂಡುತ್ತದೆ ಎಂದು.

ಯದ್ಯಪಿ ಕೇವಲ ಚೈತನ್ಯದಲ್ಲಿ ವ್ಯವಹಾರದಲ್ಲಿಯೂ ತನ್ನ ಭೇದ ತನ್ನಲ್ಲಿ ಇರುವುದಿಲ್ಲ. ಆದರೆ ವಿಶಿಷ್ಟ ಚೈತನ್ಯದಿಂದ ವ್ಯವಹಾರದಲ್ಲಿ ಭೇದವಿದೆ, ಆ ಭೇದಕ್ಕೆ ವಿಶಿಷ್ಟವು ಪ್ರತಿಯೋಗಿಯಾಗುವಾಗ ತದಂತರ್ಗತವಾದ ವಿಶೇಷ್ಯ ಚೈತನ್ಯವೂ ಪ್ರತಿಯೋಗಿಯಾಗುತ್ತದೆ. ಹೀಗಾಗಿ ಚೈತನ್ಯದ ಭೇದ ಚೈತನ್ಯದಲ್ಲಿ ಬಂದಂತಾಗುತ್ತದೆ. ಅಷ್ಟರಿಂದಲೆ ಪಕ್ಷತ್ವ ದೃಷ್ಟಾಂತತ್ವಗಳೆರಡೂ ಒಂದೇ ಚೈತನ್ಯದಲ್ಲಿ ಬರಬಹುದು. ಅಥವಾ ಇಲ್ಲಿ ದೃಷ್ಟಾಂತ ಶುದ್ಧ ಚೈತನ್ಯವಲ್ಲ. ಸಾರ್ವಜ್ಞಾದಿ ವಿಶಿಷ್ಟ ಚೈತನ್ಯವು ದೃಷ್ಟಾಂತ. ಅದರಲ್ಲಿ ಅಲ್ಪಜ್ಞತ್ವಾದಿ ವಿಶಿಷ್ಟ ಜೀವಚೈತನ್ಯದ ವ್ಯಾವಹಾರಿಕ ಭೇದವಿದೆ. ಆದರಿಂದ ಒಂದು ಪಕ್ಷ, ಇನ್ನೊಂದು ದೃಷ್ಟಾಂತವೆನ್ನಲು ಏನೂ ಅಡ್ಡಿಯಿಲ್ಲ. ವಿಶಿಷ್ಟ ಜೀವನಲ್ಲಿ ಸಾರ್ವಜ್ಞಾದಿ ವಿಶಿಷ್ಟ ಚೈತನ್ಯ ಭೇದವೇ ಸಾಧ್ಯ. ಆದರಿಂದ ಏನೂ ದೋಷವಿಲ್ಲ.

ಆದರೂ ಜೀವಬ್ರಹ್ಮರಿಗೆ ಅಭೇದವನ್ನು ಹೇಳುವ ಪಕ್ಷದಲ್ಲಿ ಬ್ರಹ್ಮಚೈತನ್ಯದಲ್ಲಿಯೂ ದುಃಖಾನುಭವವಿದೆ, ಆದರಿಂದ ವ್ಯಭಿಚಾರ. ಅಭೇದದ ವಿಷಯದಲ್ಲಿ ವಿಪ್ರಪತ್ತಿ ಇರುವುದರಿಂದ ಬ್ರಹ್ಮಚೈತನ್ಯದಲ್ಲಿ ದುಃಖಾನುಭವವು ಸಂದಿಗ್ಧವೇ ಆದರೂ ಸಂದಿಗ್ಧವ್ಯಭಿಚಾರವೆಂಬ ದೋಷವಿದ್ದೇ ಇದೆ ಎಂಬ ಆಕ್ಷೇಪ ಬರುತ್ತದೆ. ಆದರೆ ಇದು ಸರಿಯಲ್ಲ. ಹೇತು ಉಳ್ಳ ಸ್ಥಳದಲ್ಲಿ ಸಾಧ್ಯಾಭಾವ ಸಂದೇಹಪ್ರಯುಕ್ತವಾದ ವ್ಯಭಿಚಾರಸಂದೇಹವು ದೋಷವಲ್ಲ. ಪ್ರಕೃತ ಹೇತುಉಳ್ಳ ಜೀವನಲ್ಲಿ ಬ್ರಹ್ಮನ ಅಭೇದ ಸಂದೇಹ ಪ್ರಯುಕ್ತವಾಗಿ ಬ್ರಹ್ಮಚೈತನ್ಯದಲ್ಲಿ ವ್ಯಭಿಚಾರ ಸಂದೇಹ. ಇದು ದೋಷವಲ್ಲ. ಹೇತುವಿರುವಲ್ಲಿ ಸಾಧ್ಯ ಸಂದೇಹಪ್ರಯುಕ್ತ ವ್ಯಭಿಚಾರವು ಕೂಡ ದೋಷವೇ ಎಂದರೆ, ಪಕ್ಷದಲ್ಲಿ ಎಲ್ಲ ಅನುಮಾನಗಳಲ್ಲಿಯೂ ಹೀಗೇ ವ್ಯಭಿಚಾರ ಸಂದೇಹವಿರುವುದರಿಂದ ಅನುಮಾನ ಪ್ರಮಾಣವೇ ಇಲ್ಲದಂತಾಗುವ ಪ್ರಸಂಗವಿದೆ.

यद्वा जीवो ब्रह्मप्रतियोगिकतादात्म्याधिकरणं न भवति, ब्रह्म वा जीवप्रतियोगिकतादात्म्याधिकरणं न भवति इति पूर्वोक्तहेत्वोरेव साध्यनिर्देशो द्रष्टव्यः। न चैवमप्रसिद्धविशेषणत्वं दोषाय। तद्धि साध्यकोटेरप्रसिद्धेः साध्यतदभाववत्त्वेन सन्देहानुदयात्पक्षताविघटनद्वारा पक्षधर्मताविघटकत्वेन दोषः? उताप्रसिद्धे साध्ये तेन हेतोर्व्याप्तिग्रहणायोगेन व्याप्तिविघटनेन वा ? उभयविघटनेन वा ? नाद्यः। ब्रह्म जीवप्रतियोगिकतादात्म्यावच्छिन्नं न वेति संशयाभावेऽपि जीवप्रतियोगिकतादात्म्यं ब्रह्मण्यस्ति न वेति सन्देहमात्रेणाभिधेयत्वसाधकानुमान इव पक्षतोपपत्तेः। न द्वितीयः। केवलव्यतिरेकिणि साध्याभावस्यैव व्याप्तिग्रहात्। अत्र साध्याभावस्य जीवतादात्म्यस्य जीवे प्रसिद्धेः। यत्र तु व्यतिरेकिणि भावः साध्यः, तत्राभावस्य व्याप्त्युपयोगिनो भावज्ञानाधीनत्वात् साध्याप्रसिद्धिर्दोषाय। प्रकृते त्वभावस्य साध्यत्वान्न दोषः। न तृतीयः। उभयाविघटनेनादूषणत्वात्। व्याप्तिपक्षधर्मतान्यतरविघटकत्वेनैव हि दूषणम्।

ಅಥವಾ ಜೀವನು ಬ್ರಹ್ಮಪ್ರತಿಯೋಗಿಕ ತಾದಾತ್ಮ್ಯಾಧಿಕರಣನಲ್ಲ. ಬ್ರಹ್ಮನೂ ಜೀವಪ್ರತಿಯೋಗಿಕ ತಾದಾತ್ಮ್ಯಾಧಿಕರಣನಲ್ಲ ಎಂದು ಎರಡು ಅನುಮಾನಗಳು. ಹಿಂದೆ ಹೇಳಿದ ಎರಡು ಹೇತುಗಳಿಂದಲೇ ಕ್ರಮವಾಗಿ ಈ ಎರಡು ಸಾಧ್ಯಗಳನ್ನು ಇಟ್ಟುಕೊಳ್ಳಬೇಕು.

ಇಲ್ಲಿ ಅಪ್ರಸಿದ್ಧ ವಿಶೇಷಣತ್ವವು ದೋಷ ಎನ್ನಲಾಗದು. ಏಕೆಂದರೆ ಅಪ್ರಸಿದ್ಧ ವಿಶೇಷಣತ್ವವು ಸಾಧ್ಯಕೋಟಿ ಅಪ್ರಸಿದ್ಧವಾದಾಗ ಸಾಧ್ಯ, ಸಾಧ್ಯಾಭಾವ ಕೋಟಿಕವಾದ ಸಂದೇಹ ಬಾರದಿರುವುದರಿಂದ, ಪಕ್ಷತಾ ವಿಘಟನ ದ್ವಾರಾ ಪಕ್ಷಧರ್ಮತಾವಿಘಟಕ ವಾದ್ದರಿಂದ ದೋಷವೆ? ಅಥವಾ ಸಾಧ್ಯ ಅಪ್ರಸಿದ್ಧವಾದಾಗ ಅದರಿಂದ ಹೇತುವಿಗೆ

ವ್ಯಾಪ್ತಿಗ್ರಹಣವಾಗದಿರುವುದರಿಂದ ವ್ಯಾಪ್ತಿವಿಘಟನದಿಂದ ದೋಷವೆ? ಅಥವಾ ಎರಡನ್ನೂ ವಿಘಟನ ಮಾಡುವುದರಿಂದ ದೋಷವೆ?

ಪಕ್ಷಧರ್ಮತಾ ವಿಘಟನದಿಂದ ದೋಷವೆನ್ನಬಾರದು. ಬ್ರಹ್ಮನು ಜೀವಪ್ರತಿಯೋಗಿಕ ತಾದಾತ್ಮ್ಯ ಉಳ್ಳವನೆ ಅಲ್ಲವೆ ಎಂಬ ಸಂಶಯವು ಬಾರದಿದ್ದರೂ ಜೀವಪ್ರತಿಯೋಗಿಕ ತಾದಾತ್ಮ್ಯವು ಬ್ರಹ್ಮನಲ್ಲಿ ಉಂಟೆ ಇಲ್ಲವೆ ಎಂಬ ಸಂದೇಹ ಮಾತ್ರದಿಂದಲೇ ಪಕ್ಷತಾ ಕೂಡುವುದರಿಂದ ಪಕ್ಷಧರ್ಮತಾ ವಿಘಟನವಾಗುವುದಿಲ್ಲ, ಅಭಿಧೇಯತ್ವ ಸಾಧಕಾನುಮಾನದಂತೆಯೆ.

ವ್ಯಾಪ್ತಿವಿಘಟನದಿಂದ ಎನ್ನಲೂ ಸಾಧ್ಯವಿಲ್ಲ. ಕೇವಲ ವ್ಯತಿರೇಕಿಯಲ್ಲಿ ಸಾಧ್ಯಾಭಾವ ದಲ್ಲಿಯೇ ವ್ಯಾಪ್ತಿಗ್ರಹಣವಿರುವುದರಿಂದ ಪ್ರಕೃತ ಸಾಧ್ಯಾಭಾವವು ಜೀವತಾದಾತ್ಮ್ಯ ರೂಪವಾಗಿದ್ದು ಜೀವನಲ್ಲಿ ಪ್ರಸಿದ್ಧವಿದೆ. ಎಲ್ಲಿ ವ್ಯತಿರೇಕ್ಯನುಮಾನದಲ್ಲಿ ಭಾವವು ಸಾಧ್ಯವಾಗಿರುವುದೋ ಅಲ್ಲಿ ವ್ಯಾಪ್ಯುಪಯೋಗಿ ಯಾದ ಅಭಾವವು ಭಾವಜ್ಞಾನಾಧೀನ ವಾದ್ದರಿಂದ ಸಾಧ್ಯವು ಅಪ್ರಸಿದ್ಧವಾದರೆ ಅದು ದೋಷವಾಗುತ್ತದೆ. ಪ್ರಕೃತದಲ್ಲಿ ಅಭಾವವು ಸಾಧ್ಯವಾದ್ದರಿಂದ ದೋಷವಿಲ್ಲ.

ಪಕ್ಷಧರ್ಮತಾ–ವ್ಯಾಪ್ತಿ ಈ ಎರಡರ ವಿಘಟನಗಳಿಂದ ದೋಷ ಎನ್ನುವ ಮೂರನೇ ಪಕ್ಷವೂ ಸರಿಯಲ್ಲ. ಏಕೆಂದರೆ ಎರಡಕ್ಕೂ ವಿಘಟನ ಮಾಡುವ ಮೂಲಕ ದೋಷವಾಗುವ ದೋಷ ಎಲ್ಲಿಯೂ ಇಲ್ಲದಿರುವುದರಿಂದ ಆ ದೋಷಕ್ಕೆ ಅವಕಾಶ ವಿಲ್ಲ. ವ್ಯಾಪ್ತಿ ಪಕ್ಷಧರ್ಮತಾಗಳಲ್ಲಿ ಒಂದರ ವಿಘಟನದಿಂದಲೇ ದೋಷವು ದೋಷವೆನಿಸುತ್ತದೆ.

भेदे धर्मिसत्तासमानसत्ताकत्वमनिवेश्यापि पारमार्थिकभेदसाधन प्रकारमारभते — **यद्वेति** । पूर्वोक्तहेत्वोः क्रमेणेति शेषः । तथाच जीवो ब्रह्मप्रतियोगिकतादात्म्याधिकरणं न भवति, ब्रह्माननुसंहितदुःखानुसन्धातृत्वाद् व्यतिरेकेण ब्रह्मवत् । ब्रह्म वा जीवप्रतियोगिकतादात्म्याधिकरणं न भवति, जीवानुसंहितदुःखाननुसन्धातृत्वाद् व्यतिरेकेण जीववदित्युक्तं भवति । न च ब्रह्मतादात्म्याधिकरणीभूतब्रह्मप्रतियोगिकव्यावहारिकभेदस्य जीवेऽभ्युपगमात्सिद्धसाधनमिति वाच्यम् । ब्रह्मतादात्म्याधिकरणत्वावच्छिन्नप्रतियोगिताकभेदस्य साध्यत्वात् । घटाकाशे महाकाशप्रति-

**योगिकभेदाभ्युपगमेऽपि महाकाशतादात्म्यानधिकरणत्वाप्रतीत्या तदधिकरणत्वावच्छिन्नप्रतियोगिताकभेदस्येव जीवे व्यावहारिकस्यापि ब्रह्मतादात्म्याधिकरणत्वावच्छिन्नप्रतियोगिताकभेदस्य परानभ्युपगतत्वेन दोषाभावात् ।**

ಭೇದದಲ್ಲಿ ಧರ್ಮಿಸತ್ತಾಸಮಾನ ಸತ್ತಾಕತ್ವವನ್ನು ನಿವೇಶ ಮಾಡದೆಯೂ ಪಾರಮಾರ್ಥಿಕ ಭೇದಸಾಧನ ಮಾಡುವ ಪ್ರಕಾರವನ್ನು ಆರಂಭಿಸುತ್ತಾರೆ— 'ಅಥವಾ ಜೀವನು ಬ್ರಹ್ಮಪ್ರತಿಯೋಗಿಕ ತಾದಾತ್ಮ್ಯಾಧಿಕರಣನಲ್ಲ' ಎಂದು ಮುಂತಾಗಿ. 'ಹಿಂದೆ ಹೇಳಿದ ಹೇತುಗಳಿಂದ' ಎಂದರೆ, ಕ್ರಮವಾಗಿ ಆ ಎರಡು ಹೇತುಗಳಿಂದಲೇ ಈ ಎರಡು ಸಾಧ್ಯಗಳ ಸಾಧನೆ ಎಂದಿಟ್ಟುಕೊಳ್ಳಬೇಕು. ಹೀಗಾಗಿ ಎರಡು ಅನುಮಾನಗಳ ಸ್ವರೂಪ- 'ಜೀವನು ಬ್ರಹ್ಮಪ್ರತಿಯೋಗಿಕ ತಾದಾತ್ಮ್ಯಾಧಿಕರಣನಲ್ಲ, ಬ್ರಹ್ಮನು ಅನುಭವಿಸದಿರುವ ದುಃಖವನ್ನು ಜೀವನು ಅನುಭವಿಸುವುದರಿಂದ. ಇದಕ್ಕೆ ವ್ಯತಿರೇಕ ದೃಷ್ಟಾಂತ ಬ್ರಹ್ಮ. ಅಥವಾ ಬ್ರಹ್ಮನು ಜೀವಪ್ರತಿಯೋಗಿಕ ತಾದಾತ್ಮ್ಯಾಧಿಕರಣನಲ್ಲ, ಜೀವನು ಅನುಭವಿಸುವ ದುಃಖವನ್ನು ಬ್ರಹ್ಮನು ಅನುಭವಿಸದಿರುವುದರಿಂದ. ಇಲ್ಲಿ ವ್ಯತಿರೇಕ ದೃಷ್ಟಾಂತ ಜೀವ' ಎಂದು ಹೇಳಿದಂತಾಗುವುದು.

'ಜೀವನು ಬ್ರಹ್ಮ ತಾದಾತ್ಮ್ಯಾಧಿಕರಣನಲ್ಲ' ಎಂದರೆ ಬ್ರಹ್ಮತಾದಾತ್ಮ್ಯಾಧಿಕರಣದಿಂದ ಭಿನ್ನ ಎಂದರ್ಥ. ಬ್ರಹ್ಮತಾದಾತ್ಮ್ಯಾಧಿಕರಣನು ಬ್ರಹ್ಮನೆ. ಅವನಿಂದ ವ್ಯಾವಹಾರಿಕ ಭೇದವು ಜೀವನಲ್ಲಿರುವುದರಿಂದ ಜೀವನು ಭಿನ್ನ ಎಂದು ಅಂಗೀಕರಿಸಿದ್ದರಿಂದ ಸಿದ್ಧ ಸಾಧನವಾಯಿತು ಎಂದರೆ, ಹೀಗೆ ಸಮಾಧಾನ— ಬ್ರಹ್ಮತಾದಾತ್ಮ್ಯಾಧಿಕರಣದಿಂದ ಭೇದವಿದ್ದರೆ ಸಾಲದು, ಬ್ರಹ್ಮತಾದಾತ್ಮ್ಯಾಧಿಕರಣತ್ವಾವಚ್ಛಿನ್ನ ಭೇದ ಬರಬೇಕು. ಅಭೇದಮತದಲ್ಲಿ ಇಂಥ ಭೇದವನ್ನು ಒಪ್ಪಿಲ್ಲ. ಘಟಾಕಾಶದಲ್ಲಿ ಮಹಾಕಾಶದಿಂದ ಭೇದವನ್ನು ಒಪ್ಪಿದರೂ ಮಹಾಕಾಶತಾದಾತ್ಮ್ಯಾನಧಿಕರಣತ್ವ ಪ್ರತೀತಿ ಇಲ್ಲ. ಮಹಾಕಾಶ ತಾದಾತ್ಮ್ಯಾಧಿಕರಣತ್ವವೇ ಕಾಣುತ್ತದೆ. ಅದರಿಂದ ತದಧಿಕರಣತ್ವಾವಚ್ಛಿನ್ನ-ಪ್ರತಿಯೋಗಿತಾಕ ಭೇದವನ್ನು ಒಪ್ಪಿಲ್ಲ. ಹಾಗೆಯೇ ಜೀವನಲ್ಲಿ ಬ್ರಹ್ಮ ತಾದಾತ್ಮ್ಯಾಧಿಕರಣತ್ವಾವಚ್ಛಿನ್ನ ಪ್ರತಿಯೋಗಿತಾಕವಾದ ವ್ಯಾವಹಾರಿಕವಾದ ಭೇದವನ್ನೂ ಕೂಡ ಅಭೇದ ಮತಗಳಲ್ಲಿ ಒಪ್ಪಿಲ್ಲ. ಅದರಿಂದ ದೋಷವಿಲ್ಲ.

### ಬ್ರಹ್ಮ ತಾದಾತ್ಮ್ಯಾಧಿಕರಣಭೇದದ ಅಪ್ರಸಿದ್ಧಿ ದೋಷವಲ್ಲ

**नन्वेवं परमते सर्वस्यैव ब्रह्मतादात्म्याधिकरणत्वात् तदवच्छिन्नप्रतियोगिताकभेदरूपसाध्याप्रसिद्धिरत आह —न चैवमिति । यद्यपि काञ्चनमयवह्न्यादेः साध्यतायामिव साध्ये साध्यतावच्छेदका-**

**भावरूपसाध्याप्रसिद्धिः साक्षादनुमितिविरोधितया दोष एव । तथापि प्रकृते न तादृशासिद्धिरुद्भावयितुं शक्या । विप्रतिपत्त्या भेदे ब्रह्मतादात्म्याधिकरणत्वावच्छिन्नप्रतियोगिताकत्वसन्देहेन तदनिर्णयात् । तत्सन्देहस्य च साध्यसन्देहाधायकत्वेनाविरोधित्वात् । किन्तूक्तसाध्यस्य क्वचिदगृहीतत्वादज्ञानरूपासिद्धिरेवोद्भाव्या । सा च नाभावसाध्यकव्यतिरेक्यनुमाने दोष इति भावः । एतदेवोपपादयति –तद्धीति । 'पक्षधर्मताविघटनेन वा व्याप्तिविघटनेन वोभयविघटनेन वा दोष' इति सम्बन्धः ।**

ಅಭೇದ ಮತದಲ್ಲಿ ಸರ್ವವೂ ಬ್ರಹ್ಮತಾದಾತ್ಮ್ಯಾಧಿಕರಣವೇ ಆಗಿರುವುದರಿಂದ ತದವಚ್ಛಿನ್ನ ಪ್ರತಿಯೋಗಿತಾಕ ಭೇದರೂಪ ಸಾಧ್ಯ ಅಪ್ರಸಿದ್ಧ. ಈ ಆಕ್ಷೇಪಕ್ಕೆ ಪರಿಹಾರವನ್ನು ಹೇಳುತ್ತಾರೆ— ಅಪ್ರಸಿದ್ಧ ವಿಶೇಷಣತ್ವವು ಅಭಾವಸಾಧ್ಯಕ ವ್ಯತಿರೇಕಿ ಅನುಮಾನದಲ್ಲಿ ದೋಷವೆನಿಸುವುದಿಲ್ಲ. ಏಕೆಂದರೆ ಅದು ಪಕ್ಷಧರ್ಮತಾವನ್ನಾಗಲಿ ವ್ಯಾಪ್ತಿಯನ್ನಾಗಲಿ ವಿಘಟನ ಮಾಡುವುದಿಲ್ಲ, ಎಂದು. ಯದ್ಯಪಿ ಕಾಂಚನಮಯ ವಹ್ನ್ಯಾದಿ ಸಾಧ್ಯಕ ಸ್ಥಳದಂತೆ ಸಾಧ್ಯದಲ್ಲಿ ಸಾಧ್ಯತಾವಚ್ಛೇದಕದ ವಿರಹ ರೂಪವಾದ ಸಾಧ್ಯಾಪ್ರಸಿದ್ಧಿಯು ಸಾಕ್ಷಾತ್ ಅನುಮಿತಿ ವಿರೋಧಿಯಾಗಿ ದೋಷವಾಗಬಲ್ಲುದು. ಆದರೆ ಪ್ರಕೃತದಲ್ಲಿ ಅಂಥ ಸಾಧ್ಯಾಪ್ರಸಿದ್ಧಿಯನ್ನು ಹೇಳಲು ಬರುವುದಿಲ್ಲ. ವಿಪ್ರತಿಪತ್ತಿ ಇರುವುದರಿಂದ ಭೇದದಲ್ಲಿ ಬ್ರಹ್ಮತಾದಾತ್ಮ್ಯಾಧಿಕರಣತ್ವಾವಚ್ಛಿನ್ನ ಪ್ರತಿಯೋಗಿತಾಕತ್ವದ ಸಂದೇಹವೆ ಇದೆ. ಅದರ ಅಭಾವ ನಿರ್ಣಯವಿಲ್ಲ. ಸಂದೇಹವು ಸಾಧ್ಯಸಂದೇಹಕ್ಕೆ ಕಾರಣವಾಗುವುದರಿಂದ ಅನುಮಾನಕ್ಕೆ ವಿರೋಧಿಯಾಗುವುದಿಲ್ಲ. ಆದರಿಂದ ಪ್ರಕೃತ ಸಾಧ್ಯವು ಎಲ್ಲಿಯೂ ಗೃಹೀತವಾಗದಿರುವುದರಿಂದ ಅಜ್ಞಾನರೂಪ ಅಸಿದ್ಧಿಯನ್ನೇ ಹೇಳಬೇಕಾಗುತ್ತದೆ. ಈ ದೋಷವು ಅಭಾವಸಾಧ್ಯಕ ವ್ಯತಿರೇಕಿ ಸ್ಥಳದಲ್ಲಿ ದೋಷವಾಗುವುದಿಲ್ಲ ಎಂದು ಅಭಿಪ್ರಾಯ. ಇದನ್ನೇ ಉಪಪಾದನ ಮಾಡುತ್ತಾರೆ— ಅಪ್ರಸಿದ್ಧವಿಶೇಷಣತ್ವವು ಪಕ್ಷಧರ್ಮತಾವಿಘಟನದಿಂದ ದೋಷವೆ? ಅಥವಾ ವ್ಯಾಪ್ತಿವಿಘಟನದಿಂದ ದೋಷವೆ? ಅಥವಾ ಉಭಯವಿಘಟನದಿಂದ ದೋಷವೆ? ಎಂದು ಅನ್ವಯ.

**ननु साध्यस्याप्रसिद्धावपि हेतोः पक्षधर्मत्वसम्भवात् कथं तस्यास्तद्विघटकत्वमित्यत उक्तम् –पक्षताविघटनेनेति । तदपि कथम् अतः साध्यकोटीत्यादि । अथ पक्षताविशिष्टपक्षधर्मताज्ञानं नानुमितिहेतुः । पक्षतायाः स्वरूपसत्याः पृथगेव हेतुत्वात् । किन्तु पक्षतावच्छेदकवति**

हेतोर्धर्मत्वज्ञानमेव हेतुरिति कथं पक्षताविघटकस्यानुमित्यौपयिक-पक्षधर्मताविघटकत्वमिति चेत् सत्यम् । तथापि पक्षतायाः स्वातन्त्र्येण हेतुत्वे तद्विशिष्टपक्षधर्मताया अनुमितिप्रयोजकत्वानपायात् एकदेश-विघटकस्य विशिष्टविघटकत्वमव्याहतमेव । अप्रसिद्धेनेत्याद्ययोगादित्यन्तं व्याप्तिविघटने हेतुः । साध्यस्याप्रसिद्धौ तन्निरूपितव्याप्तिग्रहायोगादित्यर्थः **— उभयविघटनेनेति ।** उक्तरीत्या व्याप्तिपक्षधर्मतोभयविघटनेने-त्यर्थः ।

ಸಾಧ್ಯ ಅಪ್ರಸಿದ್ಧವಾದರೂ ಹೇತುವಿಗೆ ಪಕ್ಷಧರ್ಮತ್ವ ಸಂಭವವಿರುವುದರಿಂದ ಅದು ಹೇಗೆ ಪಕ್ಷಧರ್ಮತಾವಿಘಟಕವಾಗುತ್ತದೆ ಎಂದರೆ ಪಕ್ಷತಾ ವಿಘಟನ ಮಾಡುವುದರಿಂದ ಎನ್ನುತ್ತಾರೆ. ಆದಾದರೂ ಹೇಗೆ ಎಂದರೆ, ಸಾಧ್ಯಕೋಟಿ ಅಪ್ರಸಿದ್ಧವಾದಾಗ ಸಾಧ್ಯ ಸಂದೇಹ ಬಾರದಿರುವುದರಿಂದ ಎನ್ನುತ್ತಾರೆ.

ಇಲ್ಲಿ ಪ್ರಶ್ನೆ ಬರುತ್ತದೆ— ಪಕ್ಷತಾ ವಿಶಿಷ್ಟವಾದ ಪಕ್ಷ ಧರ್ಮತಾ ಜ್ಞಾನವು ಅನುಮಿತಿಗೆ ಹೇತುವಲ್ಲ. ಪಕ್ಷತಾವು ಸ್ವರೂಪಸತ್ತಾಗಿ ಪ್ರತ್ಯೇಕವಾಗಿಯೇ ಹೇತು. ಪಕ್ಷತಾವಚ್ಛೇದಕವತ್ತಿನಲ್ಲಿ ಹೇತುವಿಗೆ ಧರ್ಮತ್ವಜ್ಞಾನವೇ ಅನುಮಿತಿಗೆ ಹೇತು. ಅದರಿಂದ ಪಕ್ಷತಾವಿಘಟಕವು ಅನುಮಿತಿ ಹೇತುವಾದ ಪಕ್ಷಧರ್ಮತಾಕ್ಕೆ ವಿಘಟಕವಾಗುವುದು ಹೇಗೆ? ಇದಕ್ಕೆ ಹೀಗೆ ಸಮಾಧಾನ— ಪಕ್ಷತಾವು ಸ್ವತಂತ್ರವಾಗಿ ಅನುಮಿತಿ ಹೇತುವಾದರೆ ಅದರಿಂದ ವಿಶಿಷ್ಟ ಪಕ್ಷಧರ್ಮತಾಕ್ಕೆ ಅನುಮಿತಿ ಪ್ರಯೋಜಕತ್ವವಿದ್ದೇ ಇರುತ್ತದೆ. ಈ ವಿಶಿಷ್ಟದಲ್ಲಿ ಒಂದಂಶಕ್ಕೆ ವಿಘಟಕವಾದುದು ವಿಶಿಷ್ಟಕ್ಕೆ ವಿಘಟಕವಾಗಿಯೇ ಆಗುತ್ತದೆ.

ಸಾಧ್ಯ ಅಪ್ರಸಿದ್ಧವಾಗಿರುವಾಗ ಅದರಿಂದ ಹೇತುವಿಗೆ ವ್ಯಾಪ್ತಿಗ್ರಹಣ ಶಕ್ಯವಿಲ್ಲ ಎನ್ನುವುದು ವ್ಯಾಪ್ತಿ ವಿಘಟನಕ್ಕೆ ಉಪಪಾದಕ. ಉಭಯವಿಘಟನದಿಂದ ಎಂದರೆ ಹಿಂದೆ ಹೇಳಿದಂತೆ ವ್ಯಾಪ್ತಿಪಕ್ಷಧರ್ಮತಾ ಉಭಯ ವಿಘಟನದಿಂದ ಎಂದರ್ಥ.

ब्रह्मधर्मिकभेदानुमानस्य प्राधान्यादन्योपलक्षकतया तत्र साध्या-प्रसिद्धेरदोषत्वमुपपादयति **— नाद्य इत्यादिना ।** ननु पक्षधर्मिकसाध्य-तदभावकोटिकसन्देहस्यैव पक्षतात्वात् कथमन्यविधसंशयेन पक्षतो-पपत्तिरत आह **— अभिधेयत्वसाध्यकानुमान इति ।** अभिधेयत्वं

शब्देऽस्ति न वेति संशयेनेति शेषः । यथा शब्दोऽभिधेयः प्रमेयत्वादित्यादौ साध्याभावाप्रसिद्ध्या साध्यतदभावकोटिकसंशयासम्भवेऽपि साध्ये पक्षनिष्ठत्वतदभावकोटिकसंशयस्य पक्षतात्वमुपेयते, तथाऽत्र जीवतादात्म्यरूपसाध्याभावे पक्षनिष्ठत्वतदभावकोटिकसंशयस्य पक्षतात्वमुररीक्रियते, विशेषाभावादिति भावः । इदमुपलक्षणम् । विप्रतिपत्त्यधीनसाध्यसंशयस्य सिषाधयिषाविरहविशिष्टसिद्ध्यभावस्य च पक्षतात्वसम्भवो द्रष्टव्यः । ननु साध्याप्रसिद्धौ कथं साध्याभावस्यापि व्याप्तिग्रहः । प्रतियोगिप्रसिद्धेरभावधीहेतुत्वादित्यत आह **—यत्रेति ।** शब्दो गगनविशेषगुणः शब्दत्वाद् व्यतिरेकेण रूपवदित्यादौ । व्याप्त्युपयोगिनः साध्याभावे हेत्वभावनिरूपितव्याप्तिग्रहप्रयोजकस्य । अभावस्य साध्याभावज्ञानस्य । भावज्ञानाधीनत्वात् साध्यज्ञानप्रयोज्यत्वात् । साध्याप्रसिद्धिर्दोषाय व्याप्तिग्रहविघटनद्वाराऽनुमितिविघटनायेत्यर्थः ।

अयमाशयः । व्यतिरेकिणि तद्धर्मावच्छिन्नाभावसाध्यकानुमितौ तद्धर्मावच्छिन्नाभावाभावत्वेन व्याप्तिज्ञानवत् तद्धर्मेण व्याप्तिज्ञानमपि हेतुः । वह्न्यभावाभावत्वेनेव वह्नित्वेन व्याप्तिज्ञानादपि वह्न्यभावानुमितिदर्शनात् । तथाच प्रकृते प्रसिद्धजीवतादात्म्यत्वेन व्याप्तिग्रहात्तदवच्छिन्नाभावसाध्यकानुमितिर्न साध्यसिद्धिमपेक्षत इति ।

ಬ್ರಹ್ಮಧರ್ಮಿಕ ಭೇದಾನುಮಾನ ಮುಖ್ಯವಾದ್ದರಿಂದ ಅದರಲ್ಲಿ ಸಾಧ್ಯಾಪ್ರಸಿದ್ಧಿ ದೋಷವಲ್ಲ ಎಂಬುದನ್ನು ತೋರಿಸುತ್ತಾರೆ. ಪಕ್ಷದಲ್ಲಿ ಸಾಧ್ಯ ಸಾಧ್ಯಾಭಾವ ಕೋಟಿಕ ಸಂದೇಹವೇ ಪಕ್ಷತಾರೂಪವಾದ್ದರಿಂದ, ಬೇರೆ ಬಗೆಯ ಸಂದೇಹದಿಂದ ಪಕ್ಷತಾ ಇದೆ ಎಂದು ಉಪಪಾದನ ಮಾಡುವುದು ಹೇಗೆ? ಎಂದರೆ ಹೇಳುತ್ತಾರೆ— ಶಬ್ದವು ಅಭಿಧೇಯ. ಪ್ರಮೇಯವಾದ್ದರಿಂದ ಎಂದು ಸಾಧಿಸುವ ಸ್ಥಳದಲ್ಲಿ ಅಭಿಧೇಯತ್ವವು ಕೇವಲಾನ್ವಯಿಯಾದ್ದರಿಂದ ಸಾಧ್ಯಾಭಾವ ಅಪ್ರಸಿದ್ಧ. ಅದರಿಂದ ಸಾಧ್ಯಸಾಧ್ಯಾಭಾವ ಕೋಟಿಕ ಸಂದೇಹ ಅಸಂಭವ. ಅದರಿಂದ ಅಭಿಧೇಯತ್ವವು ಪಕ್ಷದಲ್ಲಿ ಉಂಟೆ ಇಲ್ಲವೆ ಎಂದು ಸಾಧ್ಯದಲ್ಲಿಯೇ ಪಕ್ಷನಿಷ್ಠತ್ವ ತದಭಾವ ಕೋಟಿಕ ಸಂಶಯವನ್ನೇ ಪಕ್ಷತಾ ಎಂದು ಸ್ವೀಕರಿಸುತ್ತಾರೆ. ಹಾಗೇ ಪ್ರಕೃತದಲ್ಲಿ ಜೀವತಾದಾತ್ಮ್ಯರೂಪವಾದ ಸಾಧ್ಯಾಭಾವದಲ್ಲಿಯೇ

ಪಕ್ಷನಿಷ್ಠತ್ವ ತದಭಾವ ಕೋಟಿಕ ಸಂಶಯವನ್ನು ಪಕ್ಷತಾ ಎಂದು ಸ್ವೀಕರಿಸಬಹುದು. ಅದಕ್ಕಿಂತ ಇದರಲ್ಲಿ ಏನೂ ವೈಲಕ್ಷಣ್ಯವಿಲ್ಲ. ಇದು ಉಪಲಕ್ಷಣ. ಪಕ್ಷದಲ್ಲಿ ಸಾಧ್ಯ ಅಪ್ರಸಿದ್ಧವಾದರೂ ಅದು ಉಂಟು ಇಲ್ಲ ಎಂಬ ವಿಪ್ರತಿಪತ್ತಿಯಿಂದ ಸಾಧ್ಯಸಂಶಯಬರಬಹುದು. ಅಥವಾ ಸಿಷಾಧಯಿಷಾ ವಿರಹ ವಿಶಿಷ್ಟ ಸಿದ್ಧ್ಯಭಾವರೂಪವಾದ ಪಕ್ಷತಾವನ್ನಿಟ್ಟುಕೊಳ್ಳಬಹುದು.

ಸಾಧ್ಯ ಅಪ್ರಸಿದ್ಧವಾಗಿರುವಾಗ ಸಾಧ್ಯಭಾವಕ್ಕೂ ಕೂಡ ವ್ಯಾಪ್ತಿಗ್ರಹಣ ಹೇಗೆ ಸಾಧ್ಯ? ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನವು ಕಾರಣ ತಾನೆ? ಎಂದರೆ ಹೇಳುತ್ತಾರೆ, 'ಶಬ್ದವು ಆಕಾಶದ ವಿಶೇಷಗುಣ, ಶಬ್ದತ್ವವಿರುವುದರಿಂದ, ಇದಕ್ಕೆ ವ್ಯತಿರೇಕದೃಷ್ಟಾಂತವು ರೂಪ' ಎಂಬ ಅನುಮಾನದಲ್ಲಿ ವ್ಯತಿರೇಕವ್ಯಾಪ್ತಿ ಗ್ರಹಣಕ್ಕೆ, ಅಂದರೆ ಸಾಧ್ಯಾಭಾವದಲ್ಲಿ ಹೇತ್ವಭಾವದಿಂದ ವ್ಯಾಪ್ತಿಗ್ರಹಣ ಮಾಡುವುದಕ್ಕೆ, ಮೊದಲಿಗೆ ಸಾಧ್ಯಾಭಾವ ಜ್ಞಾನಬೇಕು. ಅದಕ್ಕೆ ಪ್ರತಿಯೋಗಿಯಾದ ಸಾಧ್ಯದ ಜ್ಞಾನಬೇಕು. ಸಾಧ್ಯ ಅಪ್ರಸಿದ್ಧ. ಈ ಸಾಧ್ಯಾಪ್ರಸಿದ್ಧಿಯು ವ್ಯಾಪ್ತಿಗ್ರಹ ವಿಘಟನದ್ವಾರಾ ಅನುಮಿತಿ ವಿಘಟಕವಾಗುತ್ತದೆ. ಆದರೆ ಪ್ರಕೃತದಲ್ಲಿ ಜೀವತಾದಾತ್ಮ್ಯವು ಸಾಧ್ಯಾಭಾವರೂಪವಾಗಿದ್ದು ಪ್ರಸಿದ್ಧವೇ ಆಗಿರುವುದರಿಂದ ಅದರಲ್ಲಿ ಹೇತ್ವಭಾವವ್ಯಾಪ್ತಿ ಗ್ರಹಣವು ಶಕ್ಯವೇ ಆಗಿದೆ.

ವ್ಯತಿರೇಕಿಯಲ್ಲಿ, ಅಂದರೆ ತದ್ಧರ್ಮಾವಚ್ಛಿನ್ನಾಭಾವ ಸಾಧ್ಯಕ ಅನುಮಿತಿ ಸ್ಥಳದಲ್ಲಿ ತದ್ಧರ್ಮಾವಚ್ಛಿನ್ನಾಭಾವಾಭಾವತ್ವೇನ ಸಾಧ್ಯಾಭಾವದಲ್ಲಿ ಹೇತ್ವಭಾವವ್ಯಾಪ್ತಿ ಗ್ರಹಣವೇ ಕಾರಣ ವಾಗುತ್ತದೆ ಎಂಬ ನಿಯಮವಿಲ್ಲ. ತದ್ಧರ್ಮೇಣ ವ್ಯಾಪ್ತಿಗ್ರಹಣವೂ ಅನುಮಿತಿಗೆ ಕಾರಣ ವಾಗಬಹುದು. ವಹ್ನ್ಯಭಾವಾನುಮಿತಿಗೆ ವಹ್ನ್ಯಭಾವಾಭಾವತ್ವೇನ ಸಾಧ್ಯಾಭಾವರೂಪವಾದ ವಹ್ನಿಯಲ್ಲಿ ಹೇತ್ವಭಾವರೂಪವಾದ ಧೂಮದ ವ್ಯಾಪ್ತಿಜ್ಞಾನದಂತೆ ವಹ್ನಿತ್ವೇನ ವಹ್ನಿಯಲ್ಲಿ ಧೂಮ ವ್ಯಾಪ್ತಿ ಜ್ಞಾನವೂ ಕಾರಣವಾಗುವುದು ಕಂಡಿದೆ. ಹಾಗೇ ಪ್ರಕೃತದಲ್ಲಿ ಪ್ರಸಿದ್ಧ ಜೀವತಾದಾತ್ಮ್ಯತ್ವೇನ ಸಾಧ್ಯಾಭಾವದಲ್ಲಿ ವ್ಯಾಪ್ತಿಗ್ರಹಣದಿಂದ ತದವಚ್ಛಿನ್ನಾಭಾವಸಾಧ್ಯಕ ಅನುಮಿತಿ ಬರಬಹುದು. ಅದಕ್ಕೆ ಸಾಧ್ಯಪ್ರಸಿದ್ಧಿ ಬೇಕಾಗಿಲ್ಲ.

अथ सिद्धान्ते व्यतिरेकस्यान्वयमुखेनैव साध्यसाधकतया कथमप्रसिद्धसाध्यव्याप्त्यनुमापकत्वं तस्येति चेन्न। यो यद्व्यापकीभूताभावप्रतियोगी स तदभावव्याप्यः। वह्न्यभावव्यापकीभूताभावप्रतियोगिधूमवदिति सामान्यव्याप्त्या पक्षधर्मताबलादप्रसिद्धसाध्यव्याप्त्यनुमितिसम्भवादिति विभावनीयम्। **उभयाविघटनेनेति।** उक्तरीत्या व्याप्तिपक्षधर्मताग्रहाविघटकत्वेन अनुमित्यविघटकत्वादित्यर्थः। ननु तथापि बाधादिवदसिद्धेरपि साक्षादनुमितिविरोधित्वेनैव दोषत्वमस्त्वत

**आह – व्याप्तीति । बाधादेरपि साध्यसन्देहरूपपक्षताविघटकत्वेन दोषत्वं बोध्यम् ॥**

ಸಿದ್ಧಾಂತದಲ್ಲಿ ವ್ಯತಿರೇಕವ್ಯಾಪ್ತಿಯು ಅನ್ವಯವ್ಯಾಪ್ತಿದ್ವಾರಾ ಸಾಧ್ಯಸಾಧಕ. ಹೀಗಿರುವಾಗ ಹೇತುವಿನಲ್ಲಿರುವ ಅಪ್ರಸಿದ್ಧ ಸಾಧ್ಯವ್ಯಾಪ್ತಿಯನ್ನು ಸಾಧ್ಯಾಭಾವದಲ್ಲಿರುವ ಹೇತ್ವಭಾವ ವ್ಯಾಪ್ತಿಯು ಹೇಗೆ ತಿಳಿಸಿ ಸಾಧ್ಯಸಾಧಕವಾಗುವುದು ಎಂಬ ಪ್ರಶ್ನೆ ಸಹಜ. ಅದಕ್ಕೆ ಸಮಾಧಾನ ಹೀಗೆ ಹೇಳಬೇಕು. ಯಾವುದು ಯಾವುದರ ಅಭಾವಕ್ಕೆ ವ್ಯಾಪಕವಾದ ಅಭಾವಕ್ಕೆ ಪ್ರತಿಯೋಗಿಯೋ ಅದು ಅದಕ್ಕೆ ವ್ಯಾಪ್ಯವಾಗಿರುತ್ತದೆ. ಧೂಮವು ವಹ್ನ್ಯಭಾವ ವ್ಯಾಪಕೀಭೂತಾಭಾವ ಪ್ರತಿಯೋಗಿ, ವಹ್ನಿಗೆ ವ್ಯಾಪ್ಯ ಹೇಗೋ ಹಾಗೆ ಎಂಬ ಸಾಮಾನ್ಯ ವ್ಯಾಪ್ತಿಯ ಬಲದಿಂದಲೇ ಹೇತುವಿಗೆ ಪಕ್ಷ ಧರ್ಮತಾಬಲದಿಂದ ಅಪ್ರಸಿದ್ಧ ಸಾಧ್ಯವ್ಯಾಪ್ತಿಯ ಅನುಮಾನ ಶಕ್ಯವಿದೆ.

ಯಾವ ದೋಷವೂ ಕೂಡ ಉಭಯವಿಘಟನದಿಂದ ದೂಷಣವಾಗುವುದಿಲ್ಲ, ವ್ಯಾಪ್ತಿ ಪಕ್ಷಧರ್ಮತಾಗಳಲ್ಲಿ ಯಾವುದಾದರೊಂದನ್ನು ವಿಘಟನ ಮಾಡುತ್ತಲೇ ಅನುಮಾನಕ್ಕೆ ವಿಘಟಕ ವಾಗುತ್ತದೆ. ಆದ್ದರಿಂದ ಸಾಧ್ಯಾಪ್ರಸಿದ್ಧಿಯು ಉಭಯವಿಘಟನದಿಂದ ಅನುಮಿತಿಗೆ ವಿಘಟಕ ವಾಗುವುದಿಲ್ಲ ಎಂದರ್ಥ. ಬಾಧಾದಿಗಳಂತೆ ಸಾಧ್ಯಾಪ್ರಸಿದ್ಧಿಯೂ ಸಾಕ್ಷಾತ್ ಅನುಮಿತಿ ವಿರೋಧಿ ಯಾಗಿಯೇ ದೋಷವಾಗುತ್ತದೆ ಎನ್ನೋಣ ಎಂದರೆ, ಅದು ಸರಿಯಲ್ಲ. ಸಾಧ್ಯಾಪ್ರಸಿದ್ಧಿಯೂ ವ್ಯಾಪ್ತಿ ಪಕ್ಷಧರ್ಮತಾಗಳಲ್ಲಿ ಯಾವುದಾದರೊಂದನ್ನು ವಿಘಟನ ಮಾಡಿಯೇ ಅನುಮಿತಿಗೆ ವಿಘಟಕವಾಗುತ್ತದೆ ಎನ್ನಬೇಕು. ಬಾಧಾದಿಗಳೂ ಕೂಡ ಎರಡರಲ್ಲಿ ಒಂದಾದ ಪಕ್ಷತಾವನ್ನು ವಿಘಟನ ಮಾಡಿಯೇ ಅನುಮಿತಿಗೆ ವಿರೋಧಿಯಾಗುತ್ತದೆ ಎಂದು ತಿಳಿಯಬೇಕು.

**ಬ್ರಹ್ಮಾಭೇದ ಜೀವನಲ್ಲಿಲ್ಲ, ಜೀವಾಭೇದ ಬ್ರಹ್ಮನಲ್ಲಿಲ್ಲ**

**यद्वा, ब्रह्मप्रतियोगिकाभेदो न जीवधर्मिको भवति । ब्रह्मधर्मिको भेदो न जीवप्रतियोगिकः । जीवानुसंहितदुःखाननुसन्धातुरभेदत्वात् । व्यतिरेकेण जीवप्रतियोगिकजीवधर्मिकैक्यवत् ।**

**जीवप्रतियोगिकमैक्यं वा न ब्रह्मधर्मिकं, जीवधर्मिकमैक्यं वा न ब्रह्मप्रतियोगिकम् । ब्रह्माननुसंहितदुःखानुसन्धातुरभेदत्वात् । व्यतिरेकेण ब्रह्मधर्मिकब्रह्मप्रतियोगिकैक्यवत् । एवं यज्ञदत्तादिभ्यो देवदत्तादीनां भेदः साध्यः ।**

**ಅಥವಾ ಬ್ರಹ್ಮಪ್ರತಿಯೋಗಿಕವಾದ ಅಭೇದವು ಜೀವಧರ್ಮಿಕವಲ್ಲ. ಬ್ರಹ್ಮಧರ್ಮಿಕ ಅಭೇದವೂ ಜೀವಪ್ರತಿಯೋಗಿಕವಲ್ಲ. ಜೀವನು ಅನುಭವಿಸುವ ದುಃಖವನ್ನು ಅನುಭವಿಸದಿರುವವನ ಅಭೇದವಾಗಿರುವುದರಿಂದ. ಇದಕ್ಕೆ ವ್ಯತಿರೇಕ ದೃಷ್ಟಾಂತ ಜೀವಪ್ರತಿಯೋಗಿಕ ಜೀವಧರ್ಮಿಕ ಐಕ್ಯ.**

**ಅಥವಾ ಜೀವಪ್ರತಿಯೋಗಿಕ ಐಕ್ಯವು ಬ್ರಹ್ಮಧರ್ಮಿಕವಲ್ಲ, ಜೀವಧರ್ಮಿಕ ಐಕ್ಯವೂ ಬ್ರಹ್ಮಪ್ರತಿಯೋಗಿಕವಲ್ಲ, ಬ್ರಹ್ಮನು ಅನುಭವಿಸದಿರುವ ದುಃಖವನ್ನು ಅನುಭವಿಸುವವನ ಐಕ್ಯವಾದ್ದರಿಂದ. ಇಲ್ಲಿ ವ್ಯತಿರೇಕದೃಷ್ಟಾಂತ ಬ್ರಹ್ಮಧರ್ಮಿಕ ಬ್ರಹ್ಮ ಪ್ರತಿಯೋಗಿಕ ಐಕ್ಯ. ಹೀಗೆಯೇ ಯಜ್ಞದತ್ತಾದಿಗಳಿಂದ ದೇವದತ್ತಾದಿಗಳಿಗೆ ಭೇದವನ್ನು ಸಾಧಿಸಬಹುದು.**

अप्रसिद्धविशेषणत्वशङ्कानास्कन्दितमनुमानान्तरमाह — **यद्वेति ।** अभेदस्तादात्म्यम् । यद्यपि ब्रह्मप्रतियोगिकाभेदो न जीवप्रतियोगिकः, ब्रह्मधर्मिकाभेदो वा न जीवधर्मिक इत्युक्तावप्यर्थाज्जीवब्रह्मणोर्भेदः सिद्ध्यति । तथापि अभेदसाधकत्वेन पराभिमतस्य तत्त्वमसीत्यादिवाक्यस्य ब्रह्मणि जीवप्रतियोगिकाभेदो, जीवे ब्रह्मप्रतियोगिकाभेदो वा प्रतिपाद्यः । साक्षात्तद्विरोधित्वं च यथोक्तानुमानानामेवेति तदनुसरणम् । तत्र प्रथमचतुर्थयोः द्वितीयविरोधित्वं, द्वितीयतृतीययोः प्रथमविरोधित्वमिति द्रष्टव्यम् । हेतौ तादात्म्यत्वमात्रस्य दृष्टान्तेऽनैकान्त्यादननुसन्धातृतादात्म्यत्वस्य चासिद्धेर्जीवानुसंहितेत्यादि व्याख्यातार्थकम् । अत्र जडतादात्म्यस्य पक्षसमत्वेनान्वयदृष्टान्ताभावादाह — **व्यतिरेकेणेति ।**

न च परमते जीवप्रतियोगिकैक्यस्य ब्रह्मप्रतियोगिकत्वमप्यस्त्येवेति न व्यतिरेकदृष्टान्तस्यापि सम्भव इति वाच्यम् । जीवैक्यादेर्जीवत्वादिरूपतया तत्र दुःखाननुसन्धातृत्वत्वरूपहेत्वभावस्योभयवादिसिद्धत्वात् **। एवमिति ।** देवदत्तो यज्ञदत्तप्रतियोगिकधर्मिसत्तासमानसत्ताकभेदाधिकरणं तदननुसंहितदुःखाद्यनुसन्धातृत्वाद् व्यतिरेकेण यज्ञदत्तवदित्यादिप्रकारेणेत्यर्थः ।

ಅಪ್ರಸಿದ್ಧ ವಿಶೇಷಣತ್ವ ಶಂಕೆಗೆ ಆಸ್ಪದವಿಲ್ಲದಂತೆ ಬೇರೆ ಅನುಮಾನಗಳನ್ನು ಹೇಳುತ್ತಾರೆ. ಅಥವಾ ಎಂದು. ಅಭೇದವೆಂದರೆ ತಾದಾತ್ಮ್ಯ. ಯದ್ಯಪಿ ಬ್ರಹ್ಮಪ್ರತಿಯೋಗಿಕವಾದ ಅಭೇದವು ಜೀವಪ್ರತಿಯೋಗಿಕವಲ್ಲ, ಬ್ರಹ್ಮಧರ್ಮಿಕವಾದ ಅಭೇದವು ಜೀವಧರ್ಮಿಕವಲ್ಲ ಎಂದು ಹೇಳಿದ್ದರೂ ಜೀವಬ್ರಹ್ಮರಿಗೆ ಭೇದವು ಸಿದ್ಧಿಸುತ್ತಿತ್ತು. ಆದರೂ ಅಭೇದಸಾಧಕವಾಗಿ ಅಭೇದಮತದವರು ಇಟ್ಟುಕೊಂಡಿರುವ ತತ್ತ್ವಮಸಿ ಎಂದು ಮುಂತಾದ ವಾಕ್ಯವು ಬ್ರಹ್ಮನಲ್ಲಿ ಜೀವಪ್ರತಿಯೋಗಿಕಾ ಭೇದವನ್ನಾಗಲಿ ಜೀವನಲ್ಲಿ ಬ್ರಹ್ಮಪ್ರತಿಯೋಗಿಕಾಭೇದವನ್ನಾಗಲಿ ಪ್ರತಿಪಾದಿಸುತ್ತಿದೆ. ಈ ಎರಡಕ್ಕೆ ಸಾಕ್ಷಾತ್ ವಿರೋಧಿಯಾಗುವುದು ಇಲ್ಲಿ ಹೇಳುವ ಈ ನಾಲ್ಕು ಅನುಮಾನಗಳೇ ಎಂದು ಈ ನಾಲ್ಕು ಅನುಮಾನಗಳನ್ನೇ ಹೇಳುತ್ತಿದ್ದಾರೆ. ಈ ನಾಲ್ಕು ಅನುಮಾನಗಳಲ್ಲಿ ಮೊದಲನೆ ಮತ್ತು ನಾಲ್ಕನೇ ಅನುಮಾನಗಳು ಎರಡನೆಯದಕ್ಕೂ ಎರಡನೇ ಮೂರನೇ ಅನುಮಾನಗಳು ಮೊದಲನೆಯದಕ್ಕೂ ವಿರೋಧಿಯಾಗಿವೆ ಎನ್ನುವುದನ್ನು ಗಮನಿಸಬೇಕು. ಹೇತುವಿನಲ್ಲಿ ತಾದಾತ್ಮ್ಯತ್ವ ಮಾತ್ರವು ದೃಷ್ಟಾಂತದಲ್ಲಿ ವ್ಯಭಿಚರಿತವಾಗುತ್ತದೆ. ದುಃಖಾನುಭವ ರಹಿತನ ತಾದಾತ್ಮ್ಯ ಎಂದಿಷ್ಟೇ ಹೇಳಿದರೆ ಅಸಿದ್ಧಿ. ಆದರಿಂದ ಜೀವನು ಅನುಭವಿಸುವ ಎಂದು ಮುಂತಾಗಿ ಹೇತು ಸ್ವರೂಪವನ್ನು ಪೂರ್ತಿ ಹೇಳಬೇಕು. ಅದರ ಅರ್ಥವನ್ನು ಹಿಂದೆಯೇ ಹೇಳಿದ್ದೇವೆ. ಈ ಅನುಮಾನಗಳಿಗೆ ಅನ್ವಯ ದೃಷ್ಟಾಂತವಿಲ್ಲ. ಏಕೆಂದರೆ ಜಡತಾದಾತ್ಮ್ಯವು ಪಕ್ಷಸಮವಾಗಿದ್ದು ಸಂದಿಗ್ಧವೇ ಆಗಿದೆ. ಅದರಿಂದ ವ್ಯತಿರೇಕದೃಷ್ಟಾಂತವನ್ನೇ ಹೇಳುತ್ತಿದ್ದಾರೆ.

'ಅಭೇದಮತದಲ್ಲಿ ಜೀವಪ್ರತಿಯೋಗಿಕವಾದ ಐಕ್ಯವು ಕೂಡ ಬ್ರಹ್ಮಪ್ರತಿಯೋಗಿಕ ವಾಗುವುದರಿಂದ ಹೇತುಸತ್ವವಿರುವುದರಿಂದ ವ್ಯತಿರೇಕದೃಷ್ಟಾಂತವಾಗಲಾರದು, ಹೀಗಾಗಿ ವ್ಯತಿರೇಕ ದೃಷ್ಟಾಂತವೂ ಅಸಂಭವ' ಎಂದು ಆಕ್ಷೇಪ ಮಾಡುವುದು ಸರಿಯಲ್ಲ. ಏಕೆಂದರೆ ಜೀವೈಕ್ಯಾದಿಗಳು ಜೀವತ್ವಾದಿರೂಪವಾದ್ದರಿಂದ. ಅವುಗಳಲ್ಲಿ ದುಃಖಾನುಭವರಹಿತಾಭೇದತ್ವರೂಪ ಹೇತುವಿನ ಅಭಾವವು ಉಭಯವಾದಿ ಸಿದ್ಧವಾಗಿದೆ.

ಹೀಗೆಯೇ ಯಜ್ಞದತ್ತಾದಿಗಳಿಂದ ದೇವದತ್ತಾದಿಗಳಿಗೆ ಭೇದವನ್ನು ಸಾಧಿಸಬಹುದು. ದೇವದತ್ತನು ಯಜ್ಞದತ್ತಪ್ರತಿಯೋಗಿಕ ಧರ್ಮಿಸತ್ತಾ ಸಮಾನಸತ್ತಾಕ ಭೇದಾಧಿಕರಣನಾಗಿದ್ದಾನೆ. ಅವನು ಅನುಭವಿಸದಿರುವ ದುಃಖಾದಿಗಳನ್ನು ಅನುಭವಿಸುವುದರಿಂದ, ಯಜ್ಞದತ್ತನು ವ್ಯತಿರೇಕದೃಷ್ಟಾಂತ ಎಂದು ಮುಂತಾಗಿ ಹೇಳಬೇಕು.

**ಅನುಸಂಧಾನ ತದಭಾವಗಳು ಔಪಾಧಿಕಭೇದದಿಂದ ಕೂಡುವುದಿಲ್ಲ**

**नन्वौपाधिकभेदमात्रेण दुःखानुसन्धातृत्वाननुसन्धातृत्वोपपत्तेः पारमार्थिकभेदसाधनेऽप्रयोजकत्वमेवेति चेन्मैवम् । औपाधिकभेदेऽपि योगिनो नानादेहजन्यसुखाद्यनुसन्धान-**

**स्यैव दर्शनात् । अत्र देहस्य चान्तःकरणस्य चोपाधेर्भिन्नत्वात् । न ह्यन्यदेहस्थमन्तःकरणमन्यदेहस्थं भवति । तत्राविद्योपाधिरेक एव भवतीति चेत् । इहाप्येकजीववादिन एक एव । बहुजीववादिनस्तु सुप्तावपि कारणात्मनाऽन्तःकरणानुवृत्तिं वदतो नाविद्यावच्छेदो जीवभावहेतुः । किं तर्ह्यन्तःकरणमेव । ततश्च तदेव व्यवस्थानियामकं वाच्यम् । तच्च योगिष्वपि विद्यत इत्युक्तम् ।**

**ಕೇವಲ ಔಪಾಧಿಕಭೇದದಿಂದಲೇ ದುಃಖಾನುಭವ ಅನನುಭವಗಳು ಕೂಡುವುದರಿಂದ ಪಾರಮಾರ್ಥಿಕ ಭೇದ ಸಾಧನೆಗೆ ಅವು ಅಪ್ರಯೋಜಕವೇ ಆಗುವುವು ಎಂದರೆ ಇದು ಸರಿಯಲ್ಲ. ಏಕೆಂದರೆ ಯೋಗಿಗೆ ನಾನಾ ದೇಹಗಳಿಂದ ಉಂಟಾಗುವ ಸುಖಾದಿಗಳು ಅವನಿಗೆ ಒಬ್ಬನಿಗೇ ಅನುಭವಕ್ಕೆ ಬರುವುದು ಕಂಡಿದೆ. ಇಲ್ಲಿ ದೇಹವೆಂಬ ಉಪಾಧಿಗಳೂ ಅಂತಃಕರಣವೆಂಬ ಉಪಾಧಿಗಳೂ ಬೇರೆಬೇರೆಯಾಗಿರುತ್ತವೆ. ಒಂದು ದೇಹದಲ್ಲಿರುವ ಅಂತಃಕರಣವು ಇನ್ನೊಂದು ದೇಹದಲ್ಲಿಯೂ ಇರಲಾರದು ತಾನೆ? ಅಲ್ಲಿ ಅವಿದ್ಯೆ ಎಂಬ ಉಪಾಧಿ ಒಂದೇ ಇರುತ್ತದೆ ಎಂದರೆ ಹೇಳುತ್ತೇವೆ, ಇಲ್ಲಿಯೂ ಏಕಜೀವವಾದಿಪಕ್ಷದಲ್ಲಿ ಅವಿದ್ಯೋಪಾಧಿ ಒಂದೇ. ಬಹುಜೀವವಾದಿಪಕ್ಷದಲ್ಲಿ ಸುಷುಪ್ತಿಯಲ್ಲಿ ಕಾರಣರೂಪ ದಿಂದ ಅಂತಃಕರಣ ಉಳಿಯುತ್ತದೆ ಎನ್ನುವುದರಿಂದ ಅವಿದ್ಯೋಪಾಧಿಯು ಜೀವಭಾವಕ್ಕೆ ಹೇತುವೆನಿಸಲಾರದು. ಅಂತಃಕರಣವೇ ಹೇತುವೆನ್ನಬೇಕು. ಅದರಿಂದ ಅದೇ ದುಃಖಾನುಭವ ಅನನುಭವ ವ್ಯವಸ್ಥೆಗೆ ನಿಯಾಮಕವೆನ್ನಬೇಕು. ಅದು ಯೋಗಿಗಳಲ್ಲಿಯೂ ಇದೆ ಎಂದಿದ್ದೇವೆ.**

ननूक्तानुमानेषु विपक्षे बाधकाभावादप्रयोजकत्वम् । न चैवमेकस्यैव स्वाननुसंहितानुसन्धातृत्वापत्तिः । तत्प्रतियोगिकभेदमात्रस्य तत्प्रयोजकत्वेनाप्युपपत्तेः पारमार्थिकभेदस्यानावश्यकत्वादित्याशङ्कते **— नन्विति ।** उपाधिभेदमात्रेण पारमार्थिकभेदाभावेऽप्यविद्याद्युपाधिकृतभेदेन । दुःखेत्यादेर्जीवेश्वरयोरित्यादिः । अप्रयोजकत्वम् उक्तहेतूनामिति शेषः । तदननुसंहितानुसन्धातृत्वादौ तत्प्रतियोगिकपारमार्थिकभेद

एव प्रयोजको वाच्यः । अन्यथा योगसिद्धसौभर्यादीनां स्वेच्छागृहीतनानादेहावच्छिन्नचैतन्यानुसंहितानुसन्धातृत्वानुपपत्तेः । तथाच विपक्षे हेत्वनुपपत्तिरेव बाधिकेत्याशयेन समाधत्ते – **मैवमिति** । उपाधेर्भिन्नत्वादित्यन्तमौपाधिकभेदे हेतुः । नन्वन्तःकरणकृतभेदस्यैवाननुसन्धानप्रयोजकत्वान्न देहभेदेऽप्यनुसन्धानानुपपत्तिरित्यत आह – **अन्तःकरणस्य चेति** । ननु देहभेदेऽप्यन्तःकरणैक्यमस्त्वत आह – **न हीति** । अन्तःकरणस्याकाशादिवदव्याप्तत्वादिति भावः। अथ तस्य यावद्देहव्यापित्वे को दोष इति चेत् तर्हि तदन्तरानुवर्तिपुरुषान्तरस्यापि तदन्तःकरणग्रस्तत्वेन तत्कृतभेदाभावात्तत्पुरुषीयानुसन्धानापत्तेः ।

ನೀವು ಹೇಳಿದ ಅನುಮಾನಗಳು ಪಕ್ಷದಲ್ಲಿ ಸಾಧ್ಯವಿಲ್ಲದಿದ್ದರೂ ಬಾಧಕವಿಲ್ಲದಿರುವುದರಿಂದ ಅಪ್ರಯೋಜಕವಾಗಿವೆ. ಆತ್ಮಭೇದವಿಲ್ಲದಿದ್ದ ಪಕ್ಷದಲ್ಲಿ ಒಬ್ಬನಿಗೆ ತಾನು ಅನುಭವಿಸದಿರುವುದನ್ನು ಅನುಭವಿಸುವ ಪ್ರಸಂಗವಿದೆ ಎನ್ನಲಾಗದು. ಆತ್ಮಪ್ರತಿಯೋಗಿಕಭೇದ ಯಾವುದೇ ಇದ್ದರೂ ಅದು ಅನುಭವ-ಅನನುಭವ ವ್ಯವಸ್ಥೆಗೆ ಪ್ರಯೋಜಕವಾಗಬಲ್ಲದು. ಪಾರಮಾರ್ಥಿಕ ಭೇದವೇ ಇರಬೇಕೆಂದಿಲ್ಲ ಎಂದು ಅಭೇದಮತದವರ ಶಂಕೆ ಇದೆ. ಉಪಾಧಿಭೇದ ಮಾತ್ರ ಸಾಕು ಎಂದರೆ ಪಾರಮಾರ್ಥಿಕ ಭೇದವಿಲ್ಲದಿದ್ದರೂ ಅವಿದ್ಯಾದಿ ಉಪಾಧಿಕೃತ ಭೇದದಿಂದಲೆ ಜೀವ ಈಶ್ವರರಿಗೆ ದುಃಖಾನುಭವ ಅನನುಭವ ಕೂಡುತ್ತವೆ ಎಂದರ್ಥ. ನೀವು ಹೇಳಿದ ಯುಕ್ತಿಗಳೆಲ್ಲವೂ ಭೇದ ಸಾಧನೆಯಲ್ಲಿ ಅಪ್ರಯೋಜಕವೆಂದು ಅಭೇದವಾದಿ ಹೇಳುತ್ತಾನೆ.

ವ್ಯಾಸರಾಜರು ಹೇಳುತ್ತಾರೆ— ಒಬ್ಬನು ಅನುಭವಿಸದಿರುವುದು ಇನ್ನೊಬ್ಬನು ಅನುಭವಿಸುವುದು ಎನ್ನುವ ವ್ಯವಸ್ಥೆಗೆ ಆತ್ಮಪ್ರತಿಯೋಗಿಕ ಪಾರಮಾರ್ಥಿಕಭೇದವನ್ನೇ ಪ್ರಯೋಜಕವೆನ್ನಬೇಕು. ಇಲ್ಲದಿದ್ದರೆ ಯೋಗಸಿದ್ಧಿ ಉಳ್ಳ ಸೌಭರಿ ಮುಂತಾದವರು ಸ್ವೇಚ್ಛೆಯಿಂದ ನಾನಾ ದೇಹಗಳನ್ನು ಸ್ವೀಕರಿಸಿ ಆ ದೇಹದಲ್ಲಿರುವ ಚೈತನ್ಯನು ಅನುಭವಿಸಿದ್ದನ್ನು ತಾನು ಅನುಭವಿಸುವುದು ಕೂಡಲಾರದು. ಆದರಿಂದ ಪಕ್ಷದಲ್ಲಿ ಸಾಧ್ಯವಾದ ಭೇದವಿಲ್ಲದಿದ್ದರೆ, ಅನುಭವ-ಅನನುಭವ ವ್ಯವಸ್ಥೆ ಎಂಬ ಹೇತು ಕೂಡಲಾರದೆನ್ನುವುದೇ ಬಾಧಕ ಎಂದು.

'ಉಪಾಧಿಗಳು ಬೇರೆಬೇರೆಯಾಗಿವೆ' ಎನ್ನುವುದು ಔಪಾಧಿಕ ಭೇದಕ್ಕೆ ಹೇತು. ಅಂತಃಕರಣ ಕೃತವಾದ ಭೇದವೆ ಅನನುಭವಕ್ಕೆ ಪ್ರಯೋಜಕವಾದ್ದರಿಂದ ದೇಹಭೇದವಿದ್ದರೂ ಅನುಭವಾನುಪಪತ್ತಿ ಇಲ್ಲ ಎಂದರೆ ಹೇಳುತ್ತಾರೆ— ಅಂತಃಕರಣವೂ ಬೇರೆಬೇರೆಯೆ ಎಂದು. ದೇಹ ಬೇರೆಬೇರೆ

ಯಾದರೂ ಅಂತಃಕರಣ ಒಂದೇ ಎನ್ನೋಣ ಎಂದರೆ ಹೇಳುತ್ತಾರೆ—ಅಂತಃಕರಣ ಒಂದೇ ಆಕಾಶದಂತೆ ವ್ಯಾಪಕವಾಗಿ ಅನೇಕ ದೇಹಗಳಲ್ಲಿರುವುದಿಲ್ಲ ಎಂದು. ವ್ಯಾಪಕವಾಗಿ ಅನೇಕ ದೇಹಗಳಲ್ಲಿರುತ್ತದೆ ಎಂದರೆ ಏನು ದೋಷ ಎಂದರೆ ವ್ಯಾಪಕವಾಗಿ ಹಬ್ಬಿರುವ ಒಬ್ಬನ ಅಂತಃಕರಣದ ನಡುವೆ ಇನ್ನೊಬ್ಬ ಜೀವಾತ್ಮನು ಬಂದಾಗ ಅವನಿಗೂ ಆ ಅಂತಃಕರಣವು ಉಪಾಧಿಯಾಗಿ ಅಂತಃಕರಣಕೃತ ಭೇದವಿಲ್ಲ ಎಂದಾಗುವುದರಿಂದ ಅವನಿಗೂ ಆ ಒಬ್ಬನ ದುಃಖಾದಿ ಅನುಭವಕ್ಕೆ ಬರಬೇಕಾದೀತು.

**किं च किमन्तःकरणैक्ये चैतन्यैक्यं नियामकमुत देहैक्यम् । नाद्यः । अयोगिनामपि अन्तःकरणैक्यप्रसङ्गात् । नान्त्यः । योगिनामपि तदनुपपत्तेः । न च तत्तद्देहगतभोगानुसन्धानं तत्तद्देहगतान्तःकरणैक्यनियामकमतो नोक्तदोष इति वाच्यम् । भोगानुसन्धानस्यान्तःकरणैक्यनिबन्धनत्वेनान्योन्याश्रयात् । सिद्धान्ते त्वन्तःकरणांशानां देहभेदेन भेदेऽप्यात्मैक्यस्यानुसन्धाननियामकत्वान्न कश्चिद्दोषः ।**

अस्तु तर्ह्यविद्योपाधिकृतभेद एवाननुसन्धाननियामकः । चैत्रमैत्रादेरविद्याभेदादननुसन्धानस्य योगिनो देहभेदेऽप्यविद्यैक्यादनुसन्धानस्य चोपपत्तेः । न च भेदकाभावात्कथमविद्याभेद इति वाच्यम् । तस्या अनादित्वाभ्युपगमादित्याशयेनाशङ्कते **— तत्रेति ।** नानादेहवति योगिनीत्यर्थः । अविद्याभेदस्याननुसन्धाननियामकत्वं किमेकजीववादमाश्रित्योच्यते किं वा बहुजीववादम् ? आद्ये दोषमाह **— इहेति ।** अयोगिनि चैत्रादावित्यर्थः **। एक एवेति ।** अविद्योपाधिरित्यनुवर्तते । मत इति शेषः । तथाचैक एव हिरण्यगर्भो जीवस्तदन्ये तु घटादिवत्स्वरूपेणैव मिथ्याभूता इति मते परस्परानानुसन्धानप्रयोजकस्याविद्योपहितपरस्परभेदस्य चैत्रमैत्रादिषु दुर्वचत्वेन परस्परानानुसन्धानानुपपत्तिरिति भावः ।

ಅಂತಃಕರಣ ಒಂದೆನಿಸಲು ಚೈತನ್ಯೈಕ್ಯವು ನಿಯಾಮಕವೆ ಅಥವಾ ದೇಹೈಕ್ಯವೆ?

ಚೈತನ್ಯೈಕ್ಯವು ನಿಯಾಮಕವೆನ್ನುವ ಪಕ್ಷದಲ್ಲಿ ಅಯೋಗಿಗಳಿಗೂ ಅಂತಃಕರಣೈಕ್ಯ ಪ್ರಸಂಗ. ದೇಹೈಕ್ಯವು ನಿಯಾಮಕವೆಂದರೆ ಯೋಗಿಗಳಿಗೂ ಅಂತಃಕರಣೈಕ್ಯ ಬಾರದಿರುವ ಪ್ರಸಂಗ. ಆಯಾ ದೇಹಗತ ದುಃಖಾದಿಗಳ ಅನುಭವವು ಆಯಾ ದೇಹಗತ ಅಂತಃಕರಣೈಕ್ಯಕ್ಕೆ ನಿಯಾಮಕ ಎನ್ನುವುದರಿಂದ ಈ ದೋಷವಿಲ್ಲ ಎಂದರೆ ಅನ್ಯೋನ್ಯಾಶ್ರಯ ಬರುತ್ತದೆ, ಅಂತಃಕರಣೈಕ್ಯಪ್ರಯುಕ್ತ ಅನುಭವ, ಅನುಭವ ಪ್ರಯುಕ್ತ ಅಂತಃಕರಣೈಕ್ಯ ಎಂದು. ಸಿದ್ಧಾಂತದಲ್ಲಿ ಅಂತಃಕರಣ ಅಂಶಗಳು ಬೇರೆಬೇರೆ ದೇಹಗಳಲ್ಲಿ ಬೇರೆಬೇರೆ ಇದ್ದರೂ ಆತ್ಮೈಕ್ಯವು ಅನುಭವಕ್ಕೆ ನಿಯಾಮಕವಾಗಿರುವುದರಿಂದ ಯಾವ ದೋಷವೂ ಇಲ್ಲ.

ಹಾಗಾದರೆ ಅವಿದ್ಯೋಪಾಧಿಕೃತ ಭೇದವೆ ಅನನುಭವಕ್ಕೆ ನಿಯಾಮಕ ಎನ್ನುತ್ತೇವೆ, ಚೈತ್ರ ಮೈತ್ರಾದಿಗಳಲ್ಲಿ ಅವಿದ್ಯೆ ಬೇರೆ ಬೇರೆಯಾಗಿರುವುದರಿಂದ ಅನನುಭವ, ಯೋಗಿಗಳಲ್ಲಿ ದೇಹಭೇದವಿದ್ದರೂ ಅವಿದ್ಯೆ ಒಂದೇ ಇರುವುದರಿಂದ ಅನುಭವ ಎನ್ನುವುದು ಕೂಡುತ್ತದೆ. ಅವಿದ್ಯೆ ಬೇರೆಬೇರೆ ಇರಲು ಏನು ಕಾರಣವೆಂದರೆ ಅವಿದ್ಯೆ ಅನಾದಿ ಎಂದು ಅಂಗೀಕರಿಸಿರುವುದರಿಂದ ಈ ಪ್ರಶ್ನೆ ಬರುವುದಿಲ್ಲ ಎಂದು ಅಭೇದಮತದವರ ಶಂಕೆ.

ಅವಿದ್ಯೆ ಎಂಬ ಉಪಾಧಿ ಒಂದೇ ಎಂದರೆ ನಾನಾ ದೇಹಉಳ್ಳ ಯೋಗಿಯಲ್ಲಿ ಅವಿದ್ಯೆ ಉಪಾಧಿ ಒಂದೇ ಎಂದರ್ಥ.

ಈ ಶಂಕೆಗೆ ಸಮಾಧಾನ ಹೇಳಲು ಕೇಳುತ್ತಾರೆ— ಅವಿದ್ಯೆ ಬೇರೆಯಾಗಿರುವುದು ಅನನುಭವಕ್ಕೆ ನಿಯಾಮಕ ಎನ್ನುವುದು ಏಕಜೀವವಾದವಿಟ್ಟುಕೊಂಡೆ? ಅಥವಾ ಬಹುಜೀವವಾದ ವನ್ನಿಟ್ಟುಕೊಂಡೆ? ಏಕಜೀವವಾದ ಪಕ್ಷದಲ್ಲಿ ಅಯೋಗಿಗಳಾದ ಚೈತ್ರಾದಿಗಳಲ್ಲಿಯೂ ಅವಿದ್ಯೋಪಾಧಿಯು ಒಂದೇ. ಏಕೆಂದರೆ ಈ ಮತದಲ್ಲಿ ಒಬ್ಬನೇ ಹಿರಣ್ಯಗರ್ಭನು ಜೀವ. ಅನ್ಯರೆಲ್ಲರೂ ಘಟಾದಿಗಳಂತೆ ಸ್ವರೂಪದಿಂದಲೆ ಮಿಥ್ಯಾಭೂತರು ಎನ್ನುವ ಈ ಮತದಲ್ಲಿ ಪರಸ್ಪರರ ದುಃಖಾದಿಗಳ ಅನನುಭವಕ್ಕೆ ಪ್ರಯೋಜಕವಾದ ಅವಿದ್ಯೋಪಹಿತ ಪರಸ್ಪರ ಭೇದವನ್ನು ಚೈತ್ರಮೈತ್ರಾದಿಗಳಲ್ಲಿ ಹೇಳಲಾಗದಿರುವುದರಿಂದ ಪರಸ್ಪರ ಅನನುಭವ ಕೂಡುವುದಿಲ್ಲ.

द्वितीये दोषमह — **बहुजीवेति** । सुप्तौ कार्यात्मनाऽन्तःकरण-वृत्त्यसम्भवात् कारणात्मनेत्युक्तम् । तथाचाविद्योपाधेर्जीवभावहेतुत्वे तत एव सुप्तौ जीवभावोपपत्तेरन्तःकरणानुवृत्तिवैयर्थ्यमिति भावः । नन्वविद्योपाधेर्जीवभावहेतुत्वाभावेऽप्युक्तव्यवस्थानियामकत्वमस्त्वत आह — **ततश्चेति** । **व्यवस्थानियामकमिति** । चैतन्यैक्येऽपि परस्पर-भोगाननुसन्धाननियामकपरस्परभेदप्रयोजकतया तस्यैव तदनुसन्धानमिति

**नियमनिर्वाहकमित्यर्थः । ऐक्यवादे निरुक्तव्यवस्थानिर्वाहार्थमेव जीवभेदस्य कल्पितत्वेन तन्नियामकस्यैव तन्नियामकत्वप्राप्तेरिति भावः तच्चेति । स्वसम्बद्धदेहभेदेन परस्परानानुसन्धानप्रयोजकमन्तःकरणं चेत्यर्थः । तथाच योगिनो नानादेहगतभोगानुसन्धानानुपपत्तितादवस्थ्यमिति भावः ।**

ಎರಡನೆಯದಾದ ಬಹುಜೀವವಾದದಲ್ಲಿ ದೋಷವನ್ನು ಹೇಳುತ್ತಾರೆ-ಸುಷುಪ್ತಿಯಲ್ಲಿ ಅಂತಃಕರಣವು ಕಾರ್ಯರೂಪದಿಂದಿರುವುದು ಅಸಂಭವವಾದ್ದರಿಂದ ಕಾರಣರೂಪದಿಂದ ಇರುತ್ತದೆ ಎಂದಿದ್ದಾರೆ. ಅವಿದ್ಯೋಪಾಧಿಯೇ ಜೀವಭಾವಕ್ಕೆ ಪ್ರಯೋಜಕವಾಗಿದ್ದಲ್ಲಿ ಅದರಿಂದ ಸುಷುಪ್ತಿಯಲ್ಲಿಯೂ ಜೀವಭಾವ ಕೂಡುವುದರಿಂದ ಅಂತಃಕರಣವು ಕಾರಣರೂಪದಿಂದಲಾದರೂ ಇರುತ್ತದೆ ಎನ್ನುವುದು ವ್ಯರ್ಥವಾಗುವುದು.

ಅವಿದ್ಯೋಪಾಧಿ ಜೀವಭಾವಕ್ಕೆ ಹೇತುವಾಗದೆ ಹೋದರೂ ಅನುಭವ ಅನನುಭವ ವ್ಯವಸ್ಥೆಗೆ ನಿಯಾಮಕವಾಗಿದೆ ಎನ್ನೋಣ ಎಂದರೆ ಹೇಳುತ್ತಾರೆ— ಚೈತನ್ಯ ಒಂದೇ ಆದರೂ ಪರಸ್ಪರ ಭೋಗಾನನುಭವಕ್ಕೆ ನಿಯಾಮಕವಾದ ಪರಸ್ಪರಭೇದಕ್ಕೆ ಅಂತಃಕರಣವೇ ಪ್ರಯೋಜಕವಾಗುವುದರಿಂದ ಅಂತಃಕರಣವೇ 'ಅವನಿಗೇ ಅವನ ದುಃಖಾದಿ ಅನುಭವ' ಎನ್ನುವ ನಿಯಮಕ್ಕೆ ನಿರ್ವಾಹಕ. ಐಕ್ಯವಾದದಲ್ಲಿ ಈ ಅನುಭವ ವ್ಯವಸ್ಥಾ ನಿರ್ವಾಹಕ್ಕಾಗಿಯೇ ಜೀವಭೇದವನ್ನು ಕಲ್ಪಿಸಿರುವುದರಿಂದ ಜೀವಭೇದ ನಿಯಾಮಕವಾದ ಅಂತಃಕರಣೋಪಾಧಿಯನ್ನೇ ಅನುಭವ ವ್ಯವಸ್ಥಾ ನಿಯಾಮಕವೆನ್ನಬೇಕಾಗುತ್ತದೆ. ತನ್ನ ಸಂಬಂಧವನ್ನು ಹೊಂದಿರುವ ದೇಹಗಳ ಭೇದದ ಮೂಲಕ ಪರಸ್ಪರ ಭೋಗಾನನುಭವಕ್ಕೆ ಪ್ರಯೋಜಕವಾಗಿರುವ ಅಂತಃಕಣವು ಯೋಗಿಗಳಲ್ಲಿಯೂ ಬೇರೆಬೇರೆ ದೇಹಗಳಲ್ಲಿ ಬೇರೆಬೇರೆಯೇ ಇರುತ್ತದೆ ಎಂದು ಹೇಳಿದ್ದೇವೆ. ಅದರಿಂದ ಒಬ್ಬ ಯೋಗಿಗೆ ಬೇರೆಬೇರೆ ದೇಹಗತವಾದ ಎಲ್ಲ ಭೋಗಗಳ ಅನುಭವ ಕೂಡುವುದಿಲ್ಲ ಎಂಬ ಅನುಪಪತ್ತಿ ಹಾಗೇ ಇದೆ.

**ಆತ್ಮತ್ವ ಜಾತಿಸಾಧಕ ಪೃಥಿವೀತ್ವಾದಿ ಪಕ್ಷಕಾನುಮಾನಗಳು**

**अपि च पृथिवीत्वं जलतेजोवायुमनस्त्वेतरद्रव्यत्वसाक्षाद्व्याप्यजातिभिन्नम् । जातित्वात् प्रमेयत्वाद्वा जलत्ववत् । न च पृथिवीत्वेतरत्वमुपाधिः । तस्य पक्षेतरत्वात् । अनुकूलतर्काणां वक्ष्यमाणत्वाच्च । एवं जलतेजोवायुमनस्त्वपक्षीकारेणानुमानचतुष्टयमूहनीयम् ।**

ಪೃಥಿವೀತ್ವವು ಜಲತ್ವ ತೇಜಸ್ತ್ವ ವಾಯುತ್ವ ಮನಸ್ತ್ವಗಳಿಗಿಂತ ಇತರವಾದ ದ್ರವ್ಯತ್ವಸಾಕ್ಷಾದ್ ವ್ಯಾಪ್ಯವಾದ ಜಾತಿಗಿಂತ ಭಿನ್ನವಾಗಿದೆ, ಜಾತಿತ್ವವಿರುವುದರಿಂದ, ಪ್ರಮೇಯತ್ವವಿರುವುದರಿಂದ, ಜಲತ್ವದಂತೆ. ಪೃಥಿವೀತ್ವೇತರತ್ವವನ್ನು ಇಲ್ಲಿ ಉಪಾಧಿ ಎನ್ನುವಂತಿಲ್ಲ. ಏಕೆಂದರೆ ಅದು ಪಕ್ಷೇತರತ್ವರೂಪವಾಗಿದೆ. ಮತ್ತು ಅನುಕೂಲ ತರ್ಕಗಳನ್ನು ಮುಂದೆ ಹೇಳಲಿದ್ದೇವೆ. ಹೀಗೇ ಜಲತ್ವ ತೇಜಸ್ತ್ವ ವಾಯುತ್ವ ಮನಸ್ತ್ವಗಳನ್ನು ಪಕ್ಷಮಾಡಿ ನಾಲ್ಕು ಅನುಮಾನಗಳನ್ನು ಹೇಳುವ ಕ್ರಮವನ್ನು ಊಹಿಸಿಕೊಳ್ಳಬೇಕು.

इदानीमात्मत्वं नानाव्यक्तिनिष्ठं जातित्वात् घटत्ववदित्याद्यनुमानेषु पूर्वपक्षोक्तदोषमुद्दिधीर्षुराद्यानुमानेऽसिद्धिशङ्कापरिहारायाऽत्मत्वस्य जातित्वसाधकप्रमाणं तावदाह —**अपि चेति** । 'इत्यनुमानान्यात्मत्वजातिसाधनद्वाराऽऽत्मभेदं साधयन्ती'ति सम्बन्धः । अत्र पृथिवीत्वभेदमादाय दृष्टान्ते साध्यसत्त्वं, पक्षे तु तदयोगादात्मत्वजातिभेदमादायैव साध्यपर्यवसानादुद्देश्यसिद्धिः। न चाकाशत्वादिजात्यन्तरसिद्ध्याऽर्थान्तरमाशङ्क्यम्। तर्कविरोधेन तदसिद्धेर्वक्ष्यमाणत्वात् । आत्मैक्यग्राहकतर्काणां च बलवत्प्रमाणविरुद्धत्वेनाभासत्वादिति । एतेन विभुत्वादिजात्यन्तरसिद्ध्याऽर्थान्तरमित्यपास्तम् । द्रव्यत्वव्याप्यजातिराकाशाद्यवृत्तिः सत्ताद्रव्यत्वातिरिक्तजातित्वात् पृथिवीत्ववदित्यादितर्कविरुद्धत्वात् । संस्कारशून्यावृत्तित्वेन जातिर्विशेषणीयेत्यप्याहुः ।

अत्र च जलत्वादिजातिभेदमादाय सिद्धसाधनवारणाय जलत्वाद्यतिरिक्तत्वं जातिविशेषणम् । घटत्वादिभेदमादाय तद्दोषवारणाय द्रव्यत्वसाक्षाद्व्याप्येति । द्रव्यत्वसाक्षाद्व्याप्यत्वं च द्रव्यत्वव्याप्यजात्यव्याप्यत्वे सति द्रव्यत्वव्याप्यत्वम् । घटत्वादिवारणाय सत्यन्तम् । द्रव्यत्वव्याप्यभूतत्वादिव्याप्यस्य पृथिवीत्वादेः सङ्ग्रहाय तत्र जातिपदम् । गुणत्वादिवारणाय विशेष्यदलम् ।

ಹಿಂದೆ ಪೂರ್ವಪಕ್ಷಿಯು ಆತ್ಮತ್ವವು ಜಾತಿಯಾದ್ದರಿಂದ ನಾನಾ ವ್ಯಕ್ತಿ ನಿಷ್ಠವಾಗಿರಬೇಕು. ಪೃಥಿವೀತ್ವದಂತೆ. ಆದರಿಂದ ಆತ್ಮನಾನಾತ್ವವು ಸಿದ್ಧವಾಗುವುದು ಎಂದು ಆಶಂಕಾ ಮಾಡಿಕೊಂಡು ಈ ಅನುಮಾನಕ್ಕೆ ಅಸಿದ್ಧಿ ದೋಷವನ್ನು ಹೇಳಿದ್ದಾನೆ. ಅದಕ್ಕೆ ಈಗ ಸಿದ್ಧಾಂತದಲ್ಲಿ ಆತ್ಮತ್ವವನ್ನು ಜಾತಿ ಎಂದು ಸಾಧನ ಮಾಡಿ ಆತ್ಮಭೇದ ಸಾಧನಮಾಡುತ್ತಾರೆ.

ನೈಯಾಯಿಕ ಮತದಂತೆ ಈ ಅನುಮಾನಗಳು ಪ್ರವೃತ್ತವಾಗಿವೆ. ಅವರ ಮತ ಪ್ರಕ್ರಿಯೆ ಹೀಗಿದೆ— ಪೃಥಿವಿ ಅಪ್ ತೇಜಸ್ ವಾಯು ಆಕಾಶ ಕಾಲ ದಿಕ್ ಆತ್ಮ ಮನಸುಗಳು ಎಂದು ದ್ರವ್ಯಗಳು ಒಂಬತ್ತು ಬಗೆ. ಇವುಗಳಲ್ಲಿ ಆಕಾಶತ್ವ ಕಾಲತ್ವ ದಿಕ್‌ತ್ವಗಳು ಜಾತಿಯಲ್ಲ. ಏಕ ವ್ಯಕ್ತಿಯಲ್ಲಿರುವುದರಿಂದ. ಪೃಥಿವೀತ್ವಾದಿ ಆರು ಮಾತ್ರ ಜಾತಿ ಎಂದು. ಅವುಗಳಲ್ಲಿ ಪೃಥಿವೀತ್ವಕ್ಕೆ ಜಲತ್ವಾದಿ ನಾಲ್ಕು ಜಾತಿಗಳಿಗಿಂತ ಇತರವಾದ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯವಾದ ಜಾತಿಗಿಂತ ಭೇದವಿದೆ ಎಂದು ಸಿದ್ಧವಾದರೆ ಅಂಥ ಜಾತಿ ಆತ್ಮತ್ವಕ್ಕಿಂತ ಬೇರೆಯಲ್ಲವಾದ್ದರಿಂದ ಆತ್ಮತ್ವಕ್ಕೆ ಹೀಗೆ ಜಾತಿತ್ವ ಸಿದ್ಧವಾಯಿತೆಂದರೆ ಜಾತಿತ್ವ ನಿರ್ವಾಹಕ್ಕಾಗಿ ಆತ್ಮನಾನಾತ್ವವನ್ನು ಅಂಗೀಕರಿಸಲೇಬೇಕಾಗುತ್ತದೆ. ಹೀಗೆ ಆತ್ಮಭೇದವು ಸಿದ್ಧವಾಗುತ್ತದೆ. ಹೀಗೇ ಮುಂದಿನ ಅನುಮಾನಗಳಲ್ಲಿಯೂ ತಿಳಿಯಬೇಕು.

ಅನುಮಾನದಲ್ಲಿ ಜಲತ್ವಾದಿ ನಾಲ್ಕಕ್ಕಿಂತ ಬೇರೆಯಾದ ಯಾವ ದ್ರವ್ಯತ್ವಸಾಕ್ಷಾದ್ ವ್ಯಾಪ್ಯವಾದ ಜಾತಿ ಇದೆಯೋ–ಅದು ಆತ್ಮತ್ವ–ಅದಕ್ಕಿಂತ ಬೇರೆಯಾದುದು ಪೃಥಿವೀತ್ವ ಎಂದರ್ಥ. ದೃಷ್ಟಾಂತದಲ್ಲಿ ಜಲತ್ವಾದಿ ನಾಲ್ಕಕ್ಕಿಂತ ಬೇರೆಯಾದ ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯವಾದ ಪೃಥಿವೀತ್ವ ಜಾತಿಗಿಂತ ಬೇರೆಯಾದ ಜಾತಿ ಜಲತ್ವವೆಂದು ಸಾಧ್ಯವನ್ನು ಕೂಡಿಸಬೇಕು.

ಈ ಸಾಧ್ಯದಲ್ಲಿ ಸತ್ತಾಘಟತ್ವಾದಿ ಜಾತಿಯನ್ನು ಇಟ್ಟುಕೊಂಡು ಅದಕ್ಕಿಂತ ಬೇರೆ ಪೃಥಿವೀತ್ವ ಜಾತಿಯೆಂದು ಹೇಳಿದರೆ ಆತ್ಮತ್ವ ಜಾತಿ ಸಿದ್ಧವಾಗದು. ಅದಕ್ಕೆ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಎಂದು ಜಾತಿಗೆ ವಿಶೇಷಣ ಬೇಕು. ಈಗ ಸತ್ತಾ ಘಟತ್ವಾದಿ ಜಾತಿ ಭೇದವನ್ನಾಗಲಿ ಪೃಥಿವೀತ್ವ ಭೇದವನ್ನಾಗಲಿ ಇಟ್ಟುಕೊಂಡು ಪಕ್ಷವಾದ ಪೃಥಿವೀತ್ವದಲ್ಲಿ ಸಾಧ್ಯವನ್ನು ಕೂಡಿಸಲಾಗಗದು. ಆತ್ಮತ್ವಜಾತಿ ಭೇದವನ್ನೇ ಇಟ್ಟುಕೊಂಡು ಸಾಧ್ಯವನ್ನು ಕೂಡಿಸಬೇಕಾಗುತ್ತದೆ. ಅದರಿಂದ ಆತ್ಮತ್ವ ಜಾತಿಸಿದ್ಧಿ ಎಂಬ ಉದ್ದೇಶ್ಯ ಸಿದ್ಧಿಸುತ್ತದೆ.

ಬೇರೆ ಆಕಾಶತ್ವಾದಿಜಾತಿ ಸಿದ್ಧಿಯಾಗಲಿ, ಆತ್ಮತ್ವಜಾತಿಯೇ ಏಕೆ ಸಿದ್ಧವಾಗುವುದು? ಅದರಿಂದ ನಿಮ್ಮ ಉದ್ದೇಶ ಸಿದ್ಧಿಯಾಗಲಾರದು, ಎಂದು ಹೇಳಬಾರದು, ಆಕಾಶತ್ವಾದಿಗಳು ಧರ್ಮಿಗ್ರಾಹಕ ಪ್ರಮಾಣ ಲಾಘವತರ್ಕಗಳಿಂದ ಜಾತಿಯಲ್ಲವೆಂದೇ ಸಿದ್ಧವಾಗಿರುವುದರಿಂದ ಈ ಅನುಮಾನದಿಂದ ಜಾತಿಯೆಂದು ಸಾಧಿಸಲು ಹೊರಟರೆ ಆ ಪ್ರಮಾಣ ಲಾಘವತರ್ಕಗಳ ವಿರೋಧ ಬರುತ್ತದೆ ಎಂದು ಮೂಲಕಾರರೆ ಮುಂದೆ ಹೇಳುತ್ತಾರೆ. ಇಲ್ಲಿಯೂ ಆತ್ಮೈಕ್ಯಗ್ರಾಹಕ ತರ್ಕಗಳ ವಿರೋಧವಿದೆ ಎನ್ನಬಾರದು. ಭೇದಗ್ರಾಹಕವಾದ ಪ್ರಬಲ ಪ್ರಮಾಣತರ್ಕಗಳಿಂದ ಆತ್ಮೈಕ್ಯಗ್ರಾಹಕ ತರ್ಕಗಳಿಗೆ ವಿರೋಧವಿರುವುದರಿಂದ ಅವು ಆತ್ಮೈಕ್ಯ ಸಾಧಕವಾಗಲಾರವು. ಇಲ್ಲಿ 'ತರ್ಕ' ಎಂದರೆ ಅನುಮಾನ. ಅನಿಷ್ಟಾಪಾದನವಲ್ಲ.

ಬೇರೆ ವಿಭುತ್ವ ಮುಂತಾದ ಜಾತಿ ಸಿದ್ಧಿಯಿಂದ ಉದ್ದೇಶಸಿದ್ಧಿಯಾಗದೆ ಪಕ್ಷದಲ್ಲಿ ಸಾಧ್ಯ ಪರ್ಯವಸಾನವಾಗದೆ ಅರ್ಥಾಂತರತ್ವ ದೋಷ ಉಂಟಾಗುವುದು ಎಂದೂ ತಿಳಿಯಬಾರದು. ದ್ರವ್ಯತ್ವ ವ್ಯಾಪ್ಯಜಾತಿ ಯಾವುದೂ ಆಕಾಶ ಮುಂತಾದ ವಿಭು ಪದಾರ್ಥಗಳಲ್ಲಿ ಇರುವುದಿಲ್ಲ, ಏಕೆಂದರೆ ಸತ್ತಾಜಾತಿ ದ್ರವ್ಯತ್ವಜಾತಿಗಳು ಮಾತ್ರ ವಿಭು ಪದಾರ್ಥಗಳಲ್ಲಿ ಇರುತ್ತವೆ, ಬೇರೆ ಯಾವ ಜಾತಿಯೂ ಇರುವುದಿಲ್ಲ, ಪೃಥಿವೀತ್ವ ಇದಕ್ಕೆ ಉದಾಹರಣೆ. ಇಂಥ ಅನುಮಾನಗಳ ವಿರೋಧ ಬರುವುದರಿಂದ ವಿಭುತ್ವಾದಿ ಜಾತಿ ಸಿದ್ಧವಾಗುವುದಿಲ್ಲ.

'ವಿಭುತ್ವ ಜಾತಿ ಸಿದ್ಧಿಯಾಗದಿರಬೇಕಾದರೆ ಪ್ರಕೃತ ಸಾಧ್ಯದಲ್ಲಿ ಸಂಸ್ಕಾರಶೂನ್ಯಾವೃತ್ತಿತ್ವವಿಶೇಷಣವನ್ನು ಜಾತಿಯಲ್ಲಿ ಸೇರಿಸಬೇಕು. ಪೃಥಿವಿಯಲ್ಲಿ ವೇಗ ಸ್ಥಿತಿಸ್ಥಾಪಕಗಳೆಂಬ ಸಂಸ್ಕಾರವಿರುವುದರಿಂದ ಪೃಥಿವೀತ್ವವು ಸಂಸ್ಕಾರಶೂನ್ಯವೃತ್ತಿಯಲ್ಲ. ಸಂಸ್ಕಾರಶೂನ್ಯ ಗುಣಾದಿಗಳಲ್ಲಿ ಅವೃತ್ತಿಯಾದ್ದರಿಂದ ಸಂಸ್ಕಾರಶೂನ್ಯ ಅವೃತ್ತಿ ಜಾತಿ ಪೃಥಿವೀತ್ವ, ತದ್ಭಿನ್ನತ್ವ ಜಲತ್ವದಲ್ಲಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯಕೂಡುತ್ತದೆ. ಪಕ್ಷದಲ್ಲಿ ಪೃಥಿವೀತ್ವದಲ್ಲಿ ಸಾಧ್ಯವು ಕೂಡುತ್ತದೆ.. ಜಲತ್ವಾದಿ ಭಿನ್ನವಾದ ಆತ್ಮತ್ವಜಾತಿಯು ಭಾವನಾ ಎಂಬ ಸಂಸ್ಕಾರಉಳ್ಳ ಆತ್ಮನಲ್ಲಿಯೇ ಇರುವುದರಿಂದ ಸಂಸ್ಕಾರ ಶೂನ್ಯಾವೃತ್ತಿಯಾಗಿದೆ. ತದ್ಭಿನ್ನತ್ವವು ಪೃಥಿವೀತ್ವದಲ್ಲಿದೆ. ವಿಭುತ್ವವು ಸಂಸ್ಕಾರ ಶೂನ್ಯ ಆಕಾಶ ಕಾಲಾದಿಗಳಲ್ಲಿ ಇರುವುದರಿಂದ 'ಸಂಸ್ಕಾರಶೂನ್ಯಾವೃತ್ತಿ ಜಾತಿ' ಎಂದು ವಿಭುತ್ವವನ್ನಿಟ್ಟುಕೊಂಡು ಪಕ್ಷದಲ್ಲಿ ಸಾಧ್ಯವನ್ನು ಕೂಡಿಸಲಾಗುವುದಿಲ್ಲ. ಆದರಿಂದ ವಿಭುತ್ವಾದಿ ಜಾತಿಸಿದ್ಧಿಯಿಂದ ಅರ್ಥಾಂತರತ್ವದೋಷ ಬರಲು ಅವಕಾಶವಿಲ್ಲ' ಎಂದು ಕೂಡ ಕೆಲವರು ಹೇಳುತ್ತಾರೆ.

ಸಾಧ್ಯದಲ್ಲಿ ಜಲತ್ವಾದಿ ಜಾತಿಭೇದವಿಟ್ಟುಕೊಂಡು ಸಿದ್ಧಸಾಧನತ್ವವಾರಣಕ್ಕೆ ಜಲತ್ವಾದ್ಯತಿರಿಕ್ತತ್ವ ವಿಶೇಷಣವನ್ನು ಜಾತಿಯಲ್ಲಿ ಹಾಕಿದ್ದಾರೆ. ಘಟತ್ವಾದಿ ಭೇದವಿಟ್ಟುಕೊಂಡು ಸಿದ್ಧಸಾಧನತ್ವವಾರಣಕ್ಕೆ ದ್ರವ್ಯತ್ವಸಾಕ್ಷಾದ್ ವ್ಯಾಪ್ಯತ್ವವಿಶೇಷಣ.

'ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯ'ವೆಂದರೆ ದ್ರವ್ಯತ್ವವ್ಯಾಪ್ಯಜಾತಿಗೆ ಅವ್ಯಾಪ್ಯವಾಗಿದ್ದು ದ್ರವ್ಯತ್ವಕ್ಕೆ ವ್ಯಾಪ್ಯವಾಗಿರಬೇಕೆಂದರ್ಥ. ದ್ರವ್ಯತ್ವವ್ಯಾಪ್ಯಜಾತಿ ಎಂದು ಘಟತ್ವವಿಟ್ಟುಕೊಂಡರೆ ಅದರ ಭೇದ ಪೃಥಿವೀತ್ವದಲ್ಲಿ ಇದೆ ಎಂದು ಸಿದ್ಧಸಾಧನವಾಗುವುದರಿಂದ ಘಟತ್ವಾದಿ ವಾರಣೆಗಾಗಿ ದ್ರವ್ಯತ್ವವ್ಯಾಪ್ಯ ಜಾತ್ಯವ್ಯಾಪ್ಯತ್ವ ವಿಶೇಷಣ. ಜಾತ್ಯವ್ಯಾಪ್ಯವೆಂದು ಹೇಳದಿದ್ದರೆ ದ್ರವ್ಯತ್ವವ್ಯಾಪ್ಯ ಭೂತತ್ವಾದಿ ವ್ಯಾಪ್ಯವೇ ಪೃಥಿವೀತ್ವಾದಿಗಳೆಂದು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬಂದೀತು. ಆದರಿಂದ ಅವನ್ನಿಟ್ಟುಕೊಳ್ಳಲಾಗದೆಂದಾದೀತು. ಅದಕ್ಕೆ ಜಾತಿಪದ ಹಾಕಬೇಕು. ಪೃಥಿವೀತ್ವಕ್ಕೆ ಭೂತತ್ವಾದಿ ವ್ಯಾಪ್ಯತ್ವ ಬಂದರೂ ಭೂತತ್ವಾದಿಗಳು ಜಾತಿಯಲ್ಲದ್ದರಿಂದ ತದ್‌ವ್ಯಾಪ್ಯತ್ವ ಬಂದರೆ ಅನುಪಪತ್ತಿ ಇಲ್ಲ. ಗುಣತ್ವಾದಿವಾರಣೆಗಾಗಿ ದ್ರವ್ಯತ್ವವ್ಯಾಪ್ಯತ್ವವೆಂಬ ವಿಶೇಷ್ಯದಳ ಬೇಕು. ಇಲ್ಲದಿದ್ದರೆ ದ್ರವ್ಯತ್ವವ್ಯಾಪ್ಯಜಾತ್ಯವ್ಯಾಪ್ಯ ಗುಣತ್ವದ ಭೇದ ಪೃಥಿವೀತ್ವದಲ್ಲಿದೆ. ಆದರಿಂದ ಸಿದ್ಧಸಾಧನ ದೋಷ ಬಂದೀತು.

अथ व्याप्यत्वस्य तदभाववदवृत्तित्वरूपत्वेन द्रव्यत्वस्यापि द्रव्यत्वव्याप्यत्वसम्भवात्तद्भेदमादाय सिद्धसाधनम् । यत्तु द्रव्यत्वस्य द्रव्यत्वव्याप्यद्रव्यत्वरूपजातिव्याप्यतया न द्रव्यत्वसाक्षाद्व्याप्यत्वमिति । तन्न । तथासति पृथिवीत्वादेरपि द्रव्यत्वव्याप्यद्रव्यत्वरूपजातिव्याप्यतया द्रव्यत्वसाक्षाद्व्याप्यजात्यसिद्ध्यापत्तेः । द्रव्यत्वव्याप्यद्रव्यत्वभिन्नजात्यव्याप्यत्वविवक्षणे तु द्रव्यत्वस्यापि द्रव्यत्वसाक्षाद्व्याप्यत्वाक्षतेः । एवं द्रव्यत्वव्याप्यजात्यव्याप्यत्वस्य द्रव्यत्वव्याप्यजात्यभाववद्वृत्तित्वरूपतया पृथिवीत्वादेरसङ्ग्रहः । पृथिव्यां द्रव्यत्वव्याप्यजातिसत्त्वेन तदभावासम्भवात् । द्रव्यत्वव्याप्ययत्किञ्चिज्जात्यभाववद्वृत्तित्वविवक्षणे च घटत्वादेरपि सङ्ग्रहप्रसङ्ग इति चेन्मैवम् । न्यूनवृत्तित्वरूपव्याप्यत्वस्य विवक्षितत्वात् ।

'ತದ್'ವ್ಯಾಪ್ಯತ್ವ'ವೆಂದರೆ ತದಭಾವವದವೃತ್ತಿತ್ವ. ಅದಿಲ್ಲದಿದ್ದಲ್ಲಿ ಇಲ್ಲದಿರುವುದು ಅದಕ್ಕೆ ವ್ಯಾಪ್ಯ. ವಹ್ನ್ಯಭಾವವದವೃತ್ತಿಯಾದ್ದರಿಂದ ಧೂಮವು ವಹ್ನಿವ್ಯಾಪ್ಯ. ಹೀಗೆ ಹೇಳಿದರೆ ಸಿದ್ಧಸಾಧನದೋಷ ಬಂದೀತು. ಏಕೆಂದರೆ ಅದಿಲ್ಲದಿದ್ದಲ್ಲಿ ಅದೇ ಇಲ್ಲ! ತದಭಾವವದವೃತ್ತಿಯು ತತ್ತೆ! ಹೀಗಾಗಿ ದ್ರವ್ಯತ್ವ ವ್ಯಾಪ್ಯವು ದ್ರವ್ಯತ್ವವೇ ಆಗುತ್ತದೆ. ದ್ರವ್ಯತ್ವದ ಭೇದ ಪೃಥಿವೀತ್ವದಲ್ಲಿ ಇರುವುದರಿಂದ ಸಿದ್ಧಸಾಧನ.

ಇಲ್ಲಿ ಕೆಲವರು ಹೇಳುತ್ತಾರೆ. 'ದ್ರವ್ಯತ್ವದಲ್ಲಿ ದ್ರವ್ಯತ್ವ ವ್ಯಾಪ್ಯ ಜಾತ್ಯವ್ಯಾಪ್ಯತ್ವವು ಬರುವುದಿಲ್ಲ. ದ್ರವ್ಯತ್ವವ್ಯಾಪ್ಯ ಜಾತಿಯು ಹಿಂದೆ ಹೇಳಿದಂತೆ ದ್ರವ್ಯತ್ವವೆ. ಅದಕ್ಕೆ ಪುನಃ ವ್ಯಾಪ್ಯವು ಅದೇ. ದ್ರವ್ಯತ್ವವ್ಯಾಪ್ಯಜಾತಿವ್ಯಾಪ್ಯತ್ವ ಬರುವುದರಿಂದ ಅವ್ಯಾಪ್ಯತ್ವ ಬರುವುದಿಲ್ಲ. ಹೀಗಾಗಿ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯತ್ವ ಬಾರದಿರುವುದರಿಂದ ದ್ರವ್ಯತ್ವ ಜಾತಿಯನ್ನಿಟ್ಟುಕೊಂಡು 'ಅದರ ಭೇದವನ್ನು ಪೃಥಿವೀತ್ವದಲ್ಲಿ ಹೇಳಿ ಸಿದ್ಧ ಸಾಧನತ್ವದೋಷ ಬಂದಿದೆ' ಎನ್ನುವಂತಿಲ್ಲ' ಎಂದು.

ಆದರೆ ಹೀಗೆ ಸಮಾಧಾನ ಹೇಳಲು ಹೊರಟರೆ ದ್ರವ್ಯತ್ವದಂತೆಯೇ ಪೃಥಿವೀತ್ವವೂ ದ್ರವ್ಯತ್ವ ವ್ಯಾಪ್ಯದ್ರವ್ಯತ್ವ ಜಾತಿಗೆ ವ್ಯಾಪ್ಯವೇ ಆಗುವುದರಿಂದ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿಯೆ ಒಂದೂ ಇಲ್ಲವಾಗುವ ಪ್ರಸಂಗ. ಸಾಧ್ಯವೈಕಲ್ಯಪ್ರಸಂಗ.

ಆದಕ್ಕೆ 'ದ್ರವ್ಯತ್ವ ವ್ಯಾಪ್ಯ ದ್ರವ್ಯತ್ವಭಿನ್ನ ಜಾತಿಗೆ ಅವ್ಯಾಪ್ಯ' ಎಂದು ಸೇರಿಸಿ ಹೇಳಿದರೆ

ದ್ರವ್ಯತ್ವವೂ ದ್ರವ್ಯತ್ವವ್ಯಾಪ್ಯದ್ರವ್ಯತ್ವ ಭಿನ್ನ ಜಾತಿಗೆ ಅವ್ಯಾಪ್ಯವೇ ಆದ್ದರಿಂದ ದ್ರವ್ಯತ್ವಕ್ಕೆ ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯತ್ವ ಬಂದೇ ಬರುವುದು.

ಇಲ್ಲಿ ಇನ್ನೊಂದು ದೋಷವೂ ಬರುತ್ತದೆ ಏನೆಂದರೆ, ದ್ರವ್ಯತ್ವ ವ್ಯಾಪ್ಯ ಜಾತ್ಯವ್ಯಾಪ್ಯತ್ವ ವೆಂದರೆ ದ್ರವ್ಯತ್ವವ್ಯಾಪ್ಯಜಾತ್ಯಭಾವವದ್‌ವೃತ್ತಿತ್ವರೂಪವಾಗುತ್ತದೆ. ಇದು ಪೃಥಿವೀತ್ವಾದಿಗಳಲ್ಲಿಯೂ ಬರಲಾರದು. ಪೃಥಿವೀತ್ವವಿರುವುದು ಪೃಥಿವಿಯಲ್ಲಿ. ಪೃಥಿವಿಯಲ್ಲಿ ದ್ರವ್ಯತ್ವ ವ್ಯಾಪ್ಯ ಜಾತಿ ಇರುವುದರಿಂದ ಅದರ ಅಭಾವ ಅದರಲ್ಲಿ ಬರಲಾರದು. ಅಭಾವವದ್ ವೃತ್ತಿತ್ವವು ಪೃಥಿವೀತ್ವದಲ್ಲಿ ಬರಲಾರದು. ದ್ರವ್ಯತ್ವವ್ಯಾಪ್ಯ ಯತ್‌ಕಿಂಚಿಜ್ಜಾತ್ಯಭಾವವದ್ ವೃತ್ತಿತ್ವ ವಿವಕ್ಷೆ ಮಾಡಿದರೆ ಘಟತ್ವಾದಿಗಳಿಗೂ ಇದು ಬರುತ್ತದೆ. ದ್ರವ್ಯತ್ವವ್ಯಾಪ್ಯ ಯತ್ಕಿಂಚಿದ್‌ಜಾತಿ ಎಂದರೆ ಜಲತ್ವಾದಿ, ತದಬಾವವದ್ ವೃತ್ತಿತ್ವ ಘಟತ್ವದಲ್ಲಿದೆ. ಆದರಿಂದ ಘಟತ್ವಾದಿಗಳನ್ನು ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿ ಎಂದಿಟ್ಟುಕೊಂಡು ತದ್‌ಭೇದವನ್ನು ಪೃಥಿವೀತ್ವದಲ್ಲಿ ಹೇಳಿ ಸಿದ್ಧಸಾಧನವೆನ್ನಬಹುದು.

ಹೀಗಾಗಿ ತದ್‌ವ್ಯಾಪ್ಯತ್ವವೆಂದರೆ ತದಭಾವವದವೃತ್ತಿತ್ವರೂಪವೆನ್ನಬಾರದು.

न्यूनवृत्तित्वं च तत्समानाधिकरणभेदप्रतियोगितावच्छेदकत्वे सति तत्समानाधिकरणत्वम् । सत्तागुणत्वयोः द्रव्यत्वव्याप्यत्ववारणाय सत्यन्तविशेष्यभागयोः प्रवेशः । द्रव्यत्वस्य च द्रव्यत्वसमानाधिकरणभेदप्रतियोगितावच्छेदकत्वाभावान्न द्रव्यत्वव्याप्यत्वम् । द्रव्यत्वव्याप्यजात्यव्याप्यत्वशरीरे च द्रव्यत्वव्याप्यत्वं द्रव्यत्वसमानाधिकरणभेदप्रतियोगितावच्छेदकत्वमात्रम् । अधिकस्य वैयर्थ्यात् । तदव्याप्यत्वं च तत्समानाधिकरणत्वे सति तत्समानाधिकरणभेदप्रतियोगितावच्छेदकं यत्तदन्यत्वम् । स्वसमानाधिकरणभेदप्रतियोगितावच्छेदकत्वस्वसमानाधिकरणत्वोभयसम्बन्धेन तादृशजातिविशिष्टान्यत्वमिति यावत् । पृथिवीत्वादेर्द्रव्यत्वव्याप्यजलत्वसमानाधिकरणभेदप्रतियोगितावच्छेदकत्वात् तथाविधघटत्वादिसमानाधिकरणत्वाच्चासङ्ग्रहापत्तिरतो दलद्वयनिवेशः । इत्थं च द्रव्यत्वव्याप्यं पृथिवीत्वादि । तद्व्याप्यं घटत्वादि । तदन्यत्वं च पृथिवीत्वादेरिति तत्सङ्ग्रहः । गगनावृत्तिविशेषगुणवत्त्वादिधर्मभेदमादाय सिद्धसाधनवारणाय जातिपदम् ।

ನ್ಯೂನವೃತ್ತಿತ್ವರೂಪವಾದ ವ್ಯಾಪ್ಯತ್ವವನ್ನು ವಿವಕ್ಷೆ ಮಾಡಬೇಕು. ನ್ಯೂನವೃತ್ತಿತ್ವವೆಂದರೆ ತತ್‌ಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವೇ ಸತಿ ತತ್‌ಸಮಾನಾಧಿಕರಣತ್ವ ತತ್‌ಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವದಿಂದ ಸತ್ತಾಜಾತಿ ವ್ಯಾವೃತ್ತವಾಗುವುದು. ದ್ರವ್ಯತ್ವಸಮಾನಾಧಿಕರಣವಾದ ಭೇದವು 'ದ್ರವ್ಯಂ ನ ಗುಣಃ' ಎಂದು ಮುಂತಾಗಿ ಗುಣಾದಿ ಭೇದವೆ. ಹೊರತು ಸತ್ತಾವದ್‌ಭೇದವಲ್ಲ. ಸತ್ತಾದಲ್ಲಿ ಭೇದಪ್ರತಿಯೋಗಿತಾವಚ್ಛೇದಕತ್ವವು ಬರುವುದಿಲ್ಲ. ಆದರಿಂದ ಸತ್ತಾದಲ್ಲಿ ದ್ರವ್ಯತ್ವಸಮಾನಾಧಿಕರಣತ್ವ ಬಂದರೂ ದ್ರವ್ಯತ್ವಸಮಾನಾಧಿ ಕರಣ ಭೇದಪ್ರತಿಯೋಗಿತಾವಚ್ಛೆದಕತ್ವ ಬಾರದಿರುವುದರಿಂದ ನ್ಯೂನವೃತ್ತಿತ್ವವಾರಣೆಯಾಯಿತು. ಗುಣತ್ವದಲ್ಲಿ ದ್ರವ್ಯತ್ವಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವವು, 'ದ್ರವ್ಯಂ ನ ಗುಣಃ' ಎಂಬ ಭೇದವಿರುವುದರಿಂದ ಬರುತ್ತದೆ. ಆದರೆ ದ್ರವ್ಯತ್ವ ಸಮಾನಾಧಿಕರಣತ್ವರೂಪವಾದ ವಿಶೇಷ್ಯದಳ ಬಾರದಿರುವುದರಿಂದ ಗುಣತ್ವಾದಿಗಳಿಗೆ ದ್ರವ್ಯತ್ವ ನ್ಯೂನವೃತ್ತಿತ್ವವಾರಣವಾಗುವುದು. ದ್ರವ್ಯತ್ವವು ದ್ರವ್ಯತ್ವ ಸಮಾನಾಧಿಕರಣ ಭೇದ ಪ್ರತಿಯೋಗಿತಾವಚ್ಛೇದಕವಾಗುವುದಿಲ್ಲ. 'ಪೃಥಿವೀ ನ ದ್ರವ್ಯಂ' ಎಂದು ಭೇದವಿಲ್ಲ. ಆದರಿಂದ ದ್ರವ್ಯತ್ವದಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವರೂಪವಾದ ವಿಶೇಷ್ಯದಳ ಬಂದರೂ ದ್ರವ್ಯತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾವಚ್ಛೇದಕತ್ವರೂಪ ವಿಶೇಷಣದಳ ಬಾರದಿರುವುದರಿಂದ ದ್ರವ್ಯತ್ವ ವ್ಯಾಪ್ಯತ್ವವು ಬರುವುದಿಲ್ಲ.

'ದ್ರವ್ಯತ್ವವ್ಯಾಪ್ಯ ಜಾತ್ಯವ್ಯಾಪ್ಯತ್ವಂ' ಎನ್ನುವಲ್ಲಿ ದ್ರವ್ಯತ್ವ ವ್ಯಾಪ್ಯತ್ವವು ದ್ರವ್ಯತ್ವ ಸಮಾನಾಧಿ ಕರಣಭೇದ ಪ್ರತಿಯೋಗಿ ತಾವಚ್ಛೇದಕತ್ವ ಮಾತ್ರವೇ ವಿವಕ್ಷಿತ. ದ್ರವ್ಯತ್ವ ಸಮಾನಾಧಿಕರಣತ್ವಾಂಶ ಆದರಲ್ಲಿ ಬೇಕಾಗಿಲ್ಲ. ಅದರಲ್ಲಿ ಅದು ವ್ಯರ್ಥವಾಗುತ್ತದೆ. ಏಕೆಂದರೆ ಹಿಂದೆ, ದ್ರವ್ಯತ್ವವ್ಯಾಪ್ಯತ್ವಂ ಎಂಬ ವಿಶೇಷ್ಯದಳದಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವಾಂಶವಿಲ್ಲದಿದ್ದರೆ ಗುಣತ್ವಾದಿಗಳೂ ದ್ರವ್ಯತ್ವಸಮಾನಾಧಿಕರಣ ಭೇದಪ್ರತಿಯೋಗಿ ತಾವಚ್ಛೇದಕವೇ ಆಗಿರುವುದರಿಂದ ದ್ರವ್ಯತ್ವ ನ್ಯೂನವೃತ್ತಿ ಎನಿಸುತ್ತವೆ. ಗುಣತ್ವಾದಿಭೇದವು ಪೃಥಿವೀತ್ವದಲ್ಲಿ ಸಿದ್ಧವಾಗಿರುವುದರಿಂದ ಸಿದ್ಧಸಾಧನತ್ವ ದೋಷವೆಂದು ಪ್ರಸಂಗವಿದ್ದಿತು. ಆದಕ್ಕೆ ದ್ರವ್ಯತ್ವ ಸಮಾನಾಧಿಕರಣತ್ವವನ್ನು ಸೇರಿಸಿ ಗುಣತ್ವಾದಿ ಗಳನ್ನು ವ್ಯಾವೃತ್ತಿ ಮಾಡಿರುವುದರಿಂದ ಆ ಪ್ರಸಂಗಪರಿಹಾರವಾಗಿದೆ. ಇದೀಗ ವಿಶೇಷಣದಳದಲ್ಲಿ 'ದ್ರವ್ಯತ್ವವ್ಯಾಪ್ಯ' ಎಂಬಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವವನ್ನು ಸೇರಿಸುವುದು ವ್ಯರ್ಥ. 'ದ್ರವ್ಯತ್ವ ವ್ಯಾಪ್ಯಜಾತಿ' ಎಂದರೆ ದ್ರವ್ಯತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾವಚ್ಛೇದಕ ಜಾತಿ ಎಂದಿಷ್ಟೇ ಅರ್ಥ. ಈ ಅರ್ಥದಲ್ಲಿ ಗುಣತ್ವವು ದ್ರವ್ಯತ್ವವ್ಯಾಪ್ಯ ಜಾತಿಯೇ ಆದರೂ ಅನಿಷ್ಟವಿಲ್ಲ. ತದವ್ಯಾಪ್ಯತ್ವವು ಪೃಥಿವೀತ್ವದಲ್ಲಿ ಇದ್ದೇ ಇದೆ ತಾನೆ? ತದವ್ಯಾಪ್ಯತ್ವವೆಂದರೆ ತತ್ ಸಮಾನಾಧಿಕರಣಂ ತತ್‌ಸಮಾನಾಧಿಕರಣ ಭೇದ ಪ್ರತಿಯೋಗಿತಾವಚ್ಛೇದಕಂ ಚ ಯತ್ ತದ್ಭಿನ್ನತ್ವಂ ಎಂದು ವಿವಕ್ಷಿತವಾಗಿದೆ. ಸ್ಪಷ್ಟ ಹೇಳಬೇಕೆಂದರೆ, ಸ್ವಸಮಾನಾಧಿಕರಣಭೇದ ಪ್ರತಿಯೋಗಿತಾ ವಚ್ಛೇದಕತ್ವ ಮತ್ತು ಸ್ವಸಮಾನಾಧಿಕರಣತ್ವ ಎಂಬ ಈ ಉಭಯ ಸಂಬಂಧಗಳಿಂದ ದ್ರವ್ಯತ್ವ ವ್ಯಾಪ್ಯಜಾತಿ ಯೊಂದಿಗೆ ಯಾವುದು ವಿಶಿಷ್ಟವೋ ಅದಕ್ಕಿಂತ ಭಿನ್ನತ್ವವೇ ದ್ರವ್ಯತ್ವ ವ್ಯಾಪ್ಯ ಜಾತ್ಯವ್ಯಾಪ್ಯತ್ವ.

ದ್ರವ್ಯತ್ವವ್ಯಾಪ್ಯ ಪೃಥಿವೀತ್ವಾದಿ ವ್ಯಾಪ್ಯಗಳು ಘಟತ್ವಾದಿಗಳು, ಅವ್ಯಾಪ್ಯಗಳು ಪೃಥಿವೀತ್ವಾದಿಗಳು ಎಂದು ಪೃಥಿವೀತ್ವಾದಿ ಸಂಗ್ರಹವಾಗುತ್ತದೆ.

ಇಲ್ಲಿ ಎರಡು ಸಂಬಂಧಗಳಲ್ಲಿ ಸ್ವಸಮಾನಾಧಿಕರಣತ್ವ ಎಂಬ ಸಂಬಂಧವಿಲ್ಲದಿದ್ದರೆ ಸ್ವಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವವೆಂಬ ಒಂದು ಸಂಬಂಧದಿಂದ ದ್ರವ್ಯತ್ವ ವ್ಯಾಪ್ಯಜಾತಿ ವಿಶಿಷ್ಟವು ದ್ರವ್ಯತ್ವವ್ಯಾಪ್ಯ ಜಲತ್ವಸಮಾಧಿಕರಣ ಭೇದ ಪ್ರತಿಯೋಗಿತಾವಚ್ಛೇಕದವಾದ ಪೃಥಿವೀತ್ವವೇ ಆಗುತ್ತದೆ. ತದ್ಭಿನ್ನತ್ವವು ಪೃಥಿವೀತ್ವದಲ್ಲಿ ಬರುವುದಿಲ್ಲ ಎಂದು ಪೃಥಿವೀತ್ವ-ಅಸಂಗ್ರಹಾಪತ್ತಿ ಇದೆ. ಸ್ವಸಮಾನಾಧಿಕರಣತ್ವ ಸಂಬಂಧವನ್ನು ಸೇರಿಸಿದರೆ ಜಲತ್ವ ಸಮಾನಾಧಿಕರಣತ್ವ ಸಂಬಂಧವು ಪೃಥಿವೀತ್ವದಲ್ಲಿ ಬಾರದಿರುವುದರಿಂದ ಜಲತ್ವ ಸಮಾನಾಧಿಕರಣ ಜಲತ್ವ ಭಿನ್ನತ್ವವು ಬರುವುದರಿಂದ ಪೃಥಿವೀತ್ವ ಸಂಗ್ರಹವಾಗುತ್ತದೆ. ಸ್ವಸಮಾನಾಧಿಕರಣತ್ವ ಸಂಬಂಧ ಮಾತ್ರವನ್ನೇ ಹಾಕಿದರೆ ದ್ರವ್ಯತ್ವ ವ್ಯಾಪ್ಯ ಘಟತ್ವ ಸಮಾನಾಧಿಕರಣ ಪೃಥಿವೀತ್ವವಾಗುವುದರಿಂದ ತದ್ಭಿನ್ನತ್ವ ಬಾರದಿರುವುದರಿಂದ ಪೃಥಿವೀತ್ವ ಅಸಂಗ್ರಹಾಪತ್ತಿ ಇದೆ. ಸ್ವಸಮಾನಾಧಿಕರಣ ಭೇದಪ್ರತಿಯೋಗಿತಾ ವಚ್ಛೇದಕತ್ವ ಸಂಬಂಧವನ್ನು ಸೇರಿಸಿದಾಗ ಘಟತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾ ವಚ್ಛೇದಕತ್ವವು ಪೃಥಿವೀತ್ವದಲ್ಲಿ ಬಾರದಿರುವುದರಿಂದ ಘಟತ್ವ ಸಮಾನಾಧಿಕರಣ ಭೇದಪ್ರತಿ ಯೋಗಿತಾವಚ್ಛೇದಕ ಜಲತ್ವ ಭಿನ್ನತ್ವವೇ ಬರುವುದರಿಂದ ಪೃಥಿವೀತ್ವ ಸಂಗ್ರಹವಾಗುತ್ತದೆ.

ವಿಭುತ್ವಾದಿ ಜಾತ್ಯಂತರ ಸಿದ್ಧಿಯಿಂದ ಅರ್ಥಾಂತರತ್ವ ಬರಬಾರದೆಂಬ ಉದ್ದೇಶದಿಂದ 'ಜಲತ್ವಾದೀತರ ದ್ರವ್ಯತ್ವ ಸಾಕ್ಷಾದ್ವ್ಯಾಪ್ಯಜಾತಿ ಭಿನ್ನತ್ವ' ಎಂಬ ಸಾಧ್ಯದಲ್ಲಿ ಜಾತಿಗೆ ಸಂಸ್ಕಾರ ಶೂನ್ಯಾವೃತ್ತಿತ್ವ ವಿಶೇಷಣ ನೀಡಿದೆ. ವಿಭುತ್ವಾದಿಗಳು ಸಂಸ್ಕಾರಶೂನ್ಯ ಗಗನಾದಿ ವೃತ್ತಿಯೇ ಆದ್ದರಿಂದ ಅದು ಸಾಧ್ಯದಲ್ಲಿ ಸೇರುವುದಿಲ್ಲ. ಈಗ ಜಾತಿಪದ ಸ್ಥಾನದಲ್ಲಿ ಧರ್ಮಪದ ನಿವೇಶಮಾಡಿದರೆ, ಸಂಸ್ಕಾರಶೂನ್ಯಾವೃತ್ತಿ ಧರ್ಮಭಿನ್ನತ್ವವನ್ನೇ ಸಾಧ್ಯ ಮಾಡಿದರೆ ಸಂಸ್ಕಾರಶೂನ್ಯ ಗಗನಾವೃತ್ತಿ ವಿಶೇಷಗುಣವತ್ವರೂಪ ಧರ್ಮಭಿನ್ನತ್ವವು ಪೃಥಿವೀತ್ವದಲ್ಲಿ ಸಿದ್ಧವೇ ಇರುವುದರಿಂದ ಸಿದ್ಧಸಾಧನತ್ವ ದೋಷ ಬರುತ್ತದೆ. ಅದರಿಂದ ಜಾತಿಪದವೇ ಬೇಕು. ವಿಶೇಷಗುಣವತ್ವರೂಪ ಧರ್ಮವು ಜಾತಿಯಲ್ಲದ್ದರಿಂದ ತದ್ಭಿನ್ನತ್ವವಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಲು ಬರುವುದಿಲ್ಲ.

**यद्यपि तादृशजातिनिष्ठप्रतियोगिताकस्य पृथिवीत्वघटोभयभेदस्य पृथिवीत्वेऽपि सत्त्वात्सिद्धसाधनम् । तादृशजातित्वानधिकरणत्वसाधने च पृथिवीत्वस्यापि तादृशजातित्वाधिकरणत्वाद्बाधः । तथापि तादृशजाति-प्रतियोगिकप्रतियोग्यवृत्तिभेदसाधनाददोषः । उभयभेदस्य प्रतियोगि-वृत्तित्वात् । जातित्वं चाखण्डोपाधिः । अतो गुरुधर्मस्य हेतुतान-वच्छेदकत्वे नित्यानेकसमवेतत्वस्य हेतुत्वासम्भवेऽपि न क्षतिः ।**

ನ್ಯೂನವೃತ್ತಿತ್ವರೂಪವಾದ ವ್ಯಾಪ್ಯತ್ವವನ್ನು ವಿವಕ್ಷೆ ಮಾಡಬೇಕು. ನ್ಯೂನವೃತ್ತಿತ್ವವೆಂದರೆ ತತ್‌ಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವೇ ಸತಿ ತತ್‌ಸಮಾನಾಧಿಕರಣತ್ವ ತತ್‌ಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವದಿಂದ ಸತ್ತಾಜಾತಿ ವ್ಯಾವೃತ್ತವಾಗುವುದು. ದ್ರವ್ಯತ್ವಸಮಾನಾಧಿಕರಣವಾದ ಭೇದವು 'ದ್ರವ್ಯಂ ನ ಗುಣಃ' ಎಂದು ಮುಂತಾಗಿ ಗುಣಾದಿ ಭೇದವೆ. ಹೊರತು ಸತ್ತಾವದ್‌ಭೇದವಲ್ಲ. ಸತ್ತಾದಲ್ಲಿ ಭೇದಪ್ರತಿಯೋಗಿತಾವಚ್ಛೇದಕತ್ವವು ಬರುವುದಿಲ್ಲ. ಆದರಿಂದ ಸತ್ತಾದಲ್ಲಿ ದ್ರವ್ಯತ್ವಸಮಾನಾಧಿಕರಣತ್ವ ಬಂದರೂ ದ್ರವ್ಯತ್ವಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವ ಬಾರದಿರುವುದರಿಂದ ನ್ಯೂನವೃತ್ತಿತ್ವವಾರಣೆಯಾಯಿತು. ಗುಣತ್ವದಲ್ಲಿ ದ್ರವ್ಯತ್ವಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವವು, 'ದ್ರವ್ಯಂ ನ ಗುಣಃ' ಎಂಬ ಭೇದವಿರುವುದರಿಂದ ಬರುತ್ತದೆ. ಆದರೆ ದ್ರವ್ಯತ್ವ ಸಮಾನಾಧಿಕರಣತ್ವರೂಪವಾದ ವಿಶೇಷ್ಯದಳ ಬಾರದಿರುವುದರಿಂದ ಗುಣತ್ವಾದಿಗಳಿಗೆ ದ್ರವ್ಯತ್ವ ನ್ಯೂನವೃತ್ತಿತ್ವವಾರಣವಾಗುವುದು. ದ್ರವ್ಯತ್ವವು ದ್ರವ್ಯತ್ವ ಸಮಾನಾಧಿಕರಣ ಭೇದ ಪ್ರತಿಯೋಗಿತಾವಚ್ಛೇದಕವಾಗುವುದಿಲ್ಲ. 'ಪೃಥಿವೀ ನ ದ್ರವ್ಯಂ' ಎಂದು ಭೇದವಿಲ್ಲ. ಆದರಿಂದ ದ್ರವ್ಯತ್ವದಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವರೂಪವಾದ ವಿಶೇಷ್ಯದಳ ಬಂದರೂ ದ್ರವ್ಯತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾವಚ್ಛೇದಕತ್ವರೂಪ ವಿಶೇಷಣದಳ ಬಾರದಿರುವುದರಿಂದ ದ್ರವ್ಯತ್ವ ವ್ಯಾಪ್ಯತ್ವವು ಬರುವುದಿಲ್ಲ.

'ದ್ರವ್ಯತ್ವವ್ಯಾಪ್ಯ ಜಾತ್ಯವ್ಯಾಪ್ಯತ್ವಂ' ಎನ್ನುವಲ್ಲಿ ದ್ರವ್ಯತ್ವ ವ್ಯಾಪ್ಯತ್ವವು ದ್ರವ್ಯತ್ವ ಸಮಾನಾಧಿಕರಣಭೇದ ಪ್ರತಿಯೋಗಿ ತಾವಚ್ಛೇದಕತ್ವ ಮಾತ್ರವೇ ವಿವಕ್ಷಿತ. ದ್ರವ್ಯತ್ವ ಸಮಾನಾಧಿಕರಣತ್ವಾಂಶ ಆದರಲ್ಲಿ ಬೇಕಾಗಿಲ್ಲ. ಅದರಲ್ಲಿ ಅದು ವ್ಯರ್ಥವಾಗುತ್ತದೆ. ಏಕೆಂದರೆ ಹಿಂದೆ, ದ್ರವ್ಯತ್ವವ್ಯಾಪ್ಯತ್ವಂ ಎಂಬ ವಿಶೇಷ್ಯದಳದಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವಾಂಶವಿಲ್ಲದಿದ್ದರೆ ಗುಣತ್ವಾದಿಗಳೂ ದ್ರವ್ಯತ್ವಸಮಾನಾಧಿಕರಣ ಭೇದಪ್ರತಿಯೋಗಿ ತಾವಚ್ಛೇದಕವೇ ಆಗಿರುವುದರಿಂದ ದ್ರವ್ಯತ್ವ ನ್ಯೂನವೃತ್ತಿ ಎನಿಸುತ್ತವೆ. ಗುಣತ್ವಾದಿಭೇದವು ಪೃಥಿವೀತ್ವದಲ್ಲಿ ಸಿದ್ಧವಾಗಿರುವುದರಿಂದ ಸಿದ್ಧಸಾಧನತ್ವ ದೋಷವೆಂದು ಪ್ರಸಂಗವಿದ್ದಿತು. ಅದಕ್ಕೆ ದ್ರವ್ಯತ್ವ ಸಮಾನಾಧಿಕರಣತ್ವವನ್ನು ಸೇರಿಸಿ ಗುಣತ್ವಾದಿಗಳನ್ನು ವ್ಯಾವೃತ್ತಿ ಮಾಡಿರುವುದರಿಂದ ಆ ಪ್ರಸಂಗಪರಿಹಾರವಾಗಿದೆ. ಇದೀಗ ವಿಶೇಷಣದಳದಲ್ಲಿ 'ದ್ರವ್ಯತ್ವವ್ಯಾಪ್ಯ' ಎಂಬಲ್ಲಿ ದ್ರವ್ಯತ್ವ ಸಮಾನಾಧಿಕರಣತ್ವವನ್ನು ಸೇರಿಸುವುದು ವ್ಯರ್ಥ. 'ದ್ರವ್ಯತ್ವ ವ್ಯಾಪ್ಯಜಾತಿ' ಎಂದರೆ ದ್ರವ್ಯತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾವಚ್ಛೇದಕ ಜಾತಿ ಎಂದಿಷ್ಟೇ ಅರ್ಥ. ಈ ಅರ್ಥದಲ್ಲಿ ಗುಣತ್ವವು ದ್ರವ್ಯತ್ವವ್ಯಾಪ್ಯ ಜಾತಿಯೇ ಆದರೂ ಅನಿಷ್ಟವಿಲ್ಲ. ತದವ್ಯಾಪ್ಯತ್ವವು ಪೃಥಿವೀತ್ವದಲ್ಲಿ ಇದ್ದೇ ಇದೆ ತಾನೆ? ತದವ್ಯಾಪ್ಯತ್ವವೆಂದರೆ ತತ್ ಸಮಾನಾಧಿಕರಣಂ ತತ್‌ಸಮಾನಾಧಿಕರಣ ಭೇದ ಪ್ರತಿಯೋಗಿತಾವಚ್ಛೇದಕಂ ಚ ಯತ್ ತದ್ಭಿನ್ನತ್ವಂ ಎಂದು ವಿವಕ್ಷಿತವಾಗಿದೆ. ಸ್ಪಷ್ಟ ಹೇಳಬೇಕೆಂದರೆ, ಸ್ವಸಮಾನಾಧಿಕರಣಭೇದ ಪ್ರತಿಯೋಗಿತಾ ವಚ್ಛೇದಕತ್ವ ಮತ್ತು ಸ್ವಸಮಾನಾಧಿಕರಣತ್ವ ಎಂಬ ಈ ಉಭಯ ಸಂಬಂಧಗಳಿಂದ ದ್ರವ್ಯತ್ವ ವ್ಯಾಪ್ಯಜಾತಿಯೊಂದಿಗೆ ಯಾವುದು ವಿಶಿಷ್ಟವೋ ಅದಕ್ಕಿಂತ ಭಿನ್ನತ್ವವೇ ದ್ರವ್ಯತ್ವ ವ್ಯಾಪ್ಯ ಜಾತ್ಯವ್ಯಾಪ್ಯತ್ವ.

ದ್ರವ್ಯತ್ವವ್ಯಾಪ್ಯ ಪೃಥಿವೀತ್ವಾದಿ ವ್ಯಾಪ್ಯಗಳು ಘಟತ್ವಾದಿಗಳು, ಅವ್ಯಾಪ್ಯಗಳು ಪೃಥಿವೀತ್ವಾದಿಗಳು ಎಂದು ಪೃಥಿವೀತ್ವಾದಿ ಸಂಗ್ರಹವಾಗುತ್ತದೆ.

ಇಲ್ಲಿ ಎರಡು ಸಂಬಂಧಗಳಲ್ಲಿ ಸ್ವಸಮಾನಾದಿಕರಣತ್ವ ಎಂಬ ಸಂಬಂಧವಿಲ್ಲದಿದ್ದರೆ ಸ್ವಸಮಾನಾಧಿಕರಣ ಭೇದಪ್ರತಿಯೋಗಿತಾವಚ್ಛೇದಕತ್ವವೆಂಬ ಒಂದು ಸಂಬಂಧದಿಂದ ದ್ರವ್ಯತ್ವ ವ್ಯಾಪ್ಯಜಾತಿ ವಿಶಿಷ್ಟವು ದ್ರವ್ಯತ್ವವ್ಯಾಪ್ಯ ಜಲತ್ವಸಮಾಧಿಕರಣ ಭೇದ ಪ್ರತಿಯೋಗಿತಾವಚ್ಛೇಕದವಾದ ಪೃಥಿವೀತ್ವವೇ ಆಗುತ್ತದೆ. ತದ್ಭಿನ್ನತ್ವವು ಪೃಥಿವೀತ್ವದಲ್ಲಿ ಬರುವುದಿಲ್ಲ ಎಂದು ಪೃಥಿವೀತ್ವ-ಅಸಂಗ್ರಹಾಪತ್ತಿ ಇದೆ. ಸ್ವಸಮಾನಾಧಿಕರಣತ್ವ ಸಂಬಂಧವನ್ನು ಸೇರಿಸಿದರೆ ಜಲತ್ವ ಸಮಾನಾಧಿಕರಣತ್ವ ಸಂಬಂಧವು ಪೃಥಿವೀತ್ವದಲ್ಲಿ ಬಾರದಿರುವುದರಿಂದ ಜಲತ್ವ ಸಮಾನಾಧಿಕರಣ ಜಲತ್ವ ಭಿನ್ನತ್ವವು ಬರುವುದರಿಂದ ಪೃಥಿವೀತ್ವ ಸಂಗ್ರಹವಾಗುತ್ತದೆ. ಸ್ವಸಮಾನಾಧಿಕರಣತ್ವ ಸಂಬಂಧ ಮಾತ್ರವನ್ನೇ ಹಾಕಿದರೆ ದ್ರವ್ಯತ್ವ ವ್ಯಾಪ್ಯ ಘಟತ್ವ ಸಮಾನಾಧಿಕರಣ ಪೃಥಿವೀತ್ವವಾಗುವುದರಿಂದ ತದ್ಭಿನ್ನತ್ವ ಬಾರದಿರುವುದರಿಂದ ಪೃಥಿವೀತ್ವ ಅಸಂಗ್ರಹಾಪತ್ತಿ ಇದೆ. ಸ್ವಸಮಾನಾಧಿಕರಣ ಭೇದಪ್ರತಿಯೋಗಿತಾ ವಚ್ಛೇದಕತ್ವ ಸಂಬಂಧವನ್ನು ಸೇರಿಸಿದಾಗ ಘಟತ್ವ ಸಮಾನಾಧಿಕರಣಭೇದ ಪ್ರತಿಯೋಗಿತಾ ವಚ್ಛೇದಕತ್ವವು ಪೃಥಿವೀತ್ವದಲ್ಲಿ ಬಾರದಿರುವುದರಿಂದ ಘಟತ್ವ ಸಮಾನಾಧಿಕರಣ ಭೇದಪ್ರತಿ ಯೋಗಿತಾವಚ್ಛೇದಕ ಜಲತ್ವ ಭಿನ್ನತ್ವವೇ ಬರುವುದರಿಂದ ಪೃಥಿವೀತ್ವ ಸಂಗ್ರಹವಾಗುತ್ತದೆ.

ವಿಭುತ್ವಾದಿ ಜಾತ್ಯಂತರ ಸಿದ್ಧಿಯಿಂದ ಅರ್ಥಾಂತರತ್ವ ಬರಬಾರದೆಂದು ಉದ್ದೇಶದಿಂದ 'ಜಲತ್ವಾದೀತರ ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯಜಾತಿ ಭಿನ್ನತ್ವ' ಎಂಬ ಸಾಧ್ಯದಲ್ಲಿ ಜಾತಿಗೆ ಸಂಸ್ಕಾರ ಶೂನ್ಯಾವೃತ್ತಿತ್ವ ವಿಶೇಷಣ ನೀಡಿದೆ. ವಿಭುತ್ವಾದಿಗಳು ಸಂಸ್ಕಾರಶೂನ್ಯ ಗಗನಾದಿ ವೃತ್ತಿಯೇ ಆದ್ದರಿಂದ ಅದು ಸಾಧ್ಯದಲ್ಲಿ ಸೇರುವುದಿಲ್ಲ. ಈಗ ಜಾತಿಪದ ಸ್ಥಾನದಲ್ಲಿ ಧರ್ಮಪದ ನಿವೇಶಮಾಡಿದರೆ, ಸಂಸ್ಕಾರಶೂನ್ಯಾವೃತ್ತಿ ಧರ್ಮಭಿನ್ನತ್ವವನ್ನೇ ಸಾಧ್ಯ ಮಾಡಿದರೆ ಸಂಸ್ಕಾರಶೂನ್ಯ ಗಗನಾವೃತ್ತಿ ವಿಶೇಷಗುಣವತ್ವರೂಪ ಧರ್ಮಭಿನ್ನತ್ವವು ಪೃಥಿವೀತ್ವದಲ್ಲಿ ಸಿದ್ಧವೇ ಇರುವುದರಿಂದ ಸಿದ್ಧಸಾಧನತ್ವ ದೋಷ ಬರುತ್ತದೆ. ಅದರಿಂದ ಜಾತಿಪದವೇ ಬೇಕು. ವಿಶೇಷಗುಣವತ್ವರೂಪ ಧರ್ಮವು ಜಾತಿಯಲ್ಲದ್ದರಿಂದ ತದ್ಭಿನ್ನತ್ವವಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಲು ಬರುವುದಿಲ್ಲ.

**यद्यपि तादृशजातिनिष्ठप्रतियोगिताकस्य पृथिवीत्वघटोभयभेदस्य पृथिवीत्वेऽपि सत्त्वात्सिद्धसाधनम् । तादृशजातित्वानधिकरणत्वसाधने च पृथिवीत्वस्यापि तादृशजातित्वाधिकरणत्वाद्बाधः । तथापि तादृशजाति-प्रतियोगिकप्रतियोग्यवृत्तिभेदसाधनाददोषः । उभयभेदस्य प्रतियोगि-वृत्तित्वात् । जातित्वं चाखण्डोपाधिः । अतो गुरुधर्मस्य हेतुतान-वच्छेदकत्वे नित्यानेकसमवेतत्वस्य हेतुत्वासम्भवेऽपि न क्षतिः ।**

**आधेयत्वमात्रं वा हेतुत्वेन विवक्षितम् । प्रमेयत्वाद्वेत्यत्र प्रशब्दः प्रकृतसाधनस्य प्रामाणिकत्वद्योतनार्थः ।**

ಜಲತ್ವಾದೀತರಜಾತಿಭಿನ್ನತ್ವರೂಪ ಸಾಧ್ಯಶರೀರದಲ್ಲಿ ಜಾತಿಭಿನ್ನತ್ವವೆಂದರೆ ಜಾತಿನಿಷ್ಠ ಪ್ರತಿಯೋಗಿತಾಕ ಭೇದವೆಂದಿಷ್ಟೇ ವಿವಕ್ಷೆ ಮಾಡಿದರೆ ಪೃಥಿವೀತ್ವ ಘಟಉಭಯಭೇದವೂ ಜಾತಿನಿಷ್ಠ ಪ್ರತಿಯೋಗಿತಾಕ ಭೇದವೇ ಆಗಿರುವುದರಿಂದ ಈ ಭೇದವು ಪೃಥಿವೀತ್ವದಲ್ಲಿಯೂ ಇರುವುದರಿಂದ ಸಿದ್ಧಸಾಧನ. ಅದಕ್ಕೆ ಜಾತಿತ್ವಾನಧಿಕರಣತ್ವರೂಪವಾದ ಜಾತಿಭಿನ್ನತ್ವವನ್ನು ವಿವಕ್ಷೆ ಮಾಡಿದರೆ ಪೃಥಿವೀತ್ವದಲ್ಲಿ ಜಾತಿತ್ವವಿರುವುದರಿಂದ ಜಾತಿತ್ವಾನಧಿಕರಣತ್ವವು ಬಾಧಿತ, ಬಾಧದೋಷ ಬರುತ್ತದೆ. ಆದರಿಂದ ಜಾತಿ ಪ್ರತಿಯೋಗಿಕ ಪ್ರತಿಯೋಗ್ಯವೃತ್ತಿ ಭೇದವನ್ನೇ ಜಾತಿಭಿನ್ನತ್ವವೆಂಬ ಶಬ್ದದಿಂದ ವಿವಕ್ಷೆ ಮಾಡಬೇಕು. ಉಭಯಭೇದವು ಪ್ರತಿಯೋಗ್ಯವೃತ್ತಿಯಲ್ಲ. 'ಘಟಃ ಘಟಪಟೋಭಯಭಿನ್ನಃ' ಎಂಬಂತೆ ವ್ಯಾಸಜ್ಯವೃತ್ತಿ ಉಭಯತ್ವಾದಿ ಧರ್ಮಾವಚ್ಛಿನ್ನ ಭೇದವು ಏಕದೇಶವಾದ ಪ್ರತಿಯೋಗಿಯಲ್ಲಿಯೂ ಇರುತ್ತದೆ.

ಜಾತಿತ್ವ ಅಥವಾ ಪ್ರಮೇಯತ್ವವು ಹೇತು ಎಂದಿದ್ದಾರೆ. ಪ್ರಮೇಯತ್ವವು ಕೇವಲಾನ್ವಯಿ. ಅದು ಹೇತುವಾಗುವುದಾದರೆ ಜಾತಿತ್ವವನ್ನೇಕೆ ಹೇತು ಮಾಡಬೇಕು? ಜಾತಿತ್ವವು ಗುರುಭೂತವಾದ ಧರ್ಮ. ನಿತ್ಯಮೇಕಮನೇಕಾನುಗತಂ ಸಾಮಾನ್ಯಂ ಎಂದು ಹೇಳಿದಂತೆ ನಿತ್ಯತ್ವವಿಶಿಷ್ಟ ಅನೇಕ ಸಮವೇತತ್ವವೆ ಜಾತಿತ್ವ. ಆದರಲ್ಲಿ ನಿತ್ಯತ್ವ ವಿಶೇಷಣವೇಕೆ? ಅನೇಕ ಸಮವೇತತ್ವವೂ ಅನೇಕ ನಿರೂಪಿತ ಸಮವಾಯಸಂಬಂಧಾವಚ್ಛಿನ್ನಾಧೇಯತ್ವರೂಪವಾಗಿದೆ. ಆದರಲ್ಲಿರುವ ಆಧೇಯತ್ವವೇ ಸಾಕು, ಆದಕ್ಕೆ ಅನೇಕ ನಿರೂಪಿತತ್ವ ಸಮವಾಯಸಂಬಂಧಾವಚ್ಛಿನ್ನತ್ವ ವಿಶೇಷಣಗಳೇಕೆ? ಇವೆಲ್ಲವೂ ವ್ಯರ್ಥವಿಶೇಷಣಗಳಾಗುತ್ತವೆ. ವ್ಯರ್ಥವಿಶೇಷಣ ಘಟಿತವಾದ ಗುರುಭೂತವಾದ ಧರ್ಮವು ಹೇತುತಾವಚ್ಛೇದಕವಾಗುವುದಿಲ್ಲ. ಆದರಿಂದ ಜಾತಿತ್ವವು ಹೇತುವಾಗಲಾರದು ಎಂಬ ಶಂಕೆಗೆ ಜಾತಿತ್ವವು ಜಾತಿಯಂತೆಯೆ ಅಖಂಡವಾದ ಒಂದು ಧರ್ಮ. ಆದರಿಂದ ಗುರುಭೂತವಲ್ಲ ಎಂದು ಒಂದು ಸಮಾಧಾನ. ಅಥವಾ ಆಧೇಯತ್ವಮಾತ್ರವೇ ಹೇತುವಾಗಿ ವಿವಕ್ಷಿತವಾಗಿದೆ, ನಿತ್ಯತ್ವಾದಿಗಳು ಪರಿಚಾಯಕ ವಿಶೇಷಣಗಳು. ಹೇತುತಾವಚ್ಛೇದಕಗಳೆಂದು ವಿವಕ್ಷಿತವಾಗಿಲ್ಲ ಎಂದು ಇನ್ನೊಂದು ಸಮಾಧಾನ. ಇದೇರೀತಿ ಪ್ರಮೇಯತ್ವವೂ ಯಥಾರ್ಥಜ್ಞಾನ ನಿರೂಪಿತ ವಿಷಯತ್ವರೂಪವಾಗಿದ್ದು ಆದರಲ್ಲಿ ಸೇರಿರುವ ವಿಷಯತ್ವಮಾತ್ರವೇ ಹೇತು. ಯಥಾರ್ಥಜ್ಞಾನ ನಿರೂಪಿತತ್ವವು ಹೇತುತಾವಚ್ಛೇದಕವಾಗಿ ವಿವಕ್ಷಿತವಾಗಿಲ್ಲ. ಪ್ರಶಬ್ದದಿಂದ ಈ ಹೇತುವು ಪ್ರಾಮಾಣಿಕವೆಂದು ದ್ಯೋತನ ಮಾಡುವುದಕ್ಕಾಗಿ ಉಕ್ತವಾಗಿದೆ.

**न चेति । यद्यपि पक्षे साध्यसन्देहान्न पक्षेतरत्वे साध्य-व्यापकत्वनिश्चयः सम्भवति । तथापि तस्य सन्दिग्धोपाधित्वमव्याहतम् ।**

**न च तस्य न प्रतिपक्षोन्नायकत्वं, तदधीनप्रतिपक्षसन्देहस्य च साध्यसन्देहतया न विरोधित्वमिति वाच्यम् । स्वारसिकसन्देहस्याविरोधित्वेऽप्याहितसन्देहस्यानुमानविरोधित्वादिति भावः ।**

ಪಕ್ಷೇತರತ್ವವನ್ನು ಇಲ್ಲಿ ಉಪಾಧಿ ಎನ್ನಬಾರದು. ಯದ್ಯಪಿ ಪಕ್ಷದಲ್ಲಿ ಸಾಧ್ಯ ನಿಶ್ಚಯವಿರುವುದಿಲ್ಲ, ಸಾಧ್ಯಾಭಾವ ನಿಶ್ಚಯವೂ ಇರುವುದಿಲ್ಲ. ಪಕ್ಷೇತರತ್ವವನ್ನು ಉಪಾಧಿ ಎನ್ನಬೇಕಾದರೆ ಅದಕ್ಕೆ ಸಾಧ್ಯವ್ಯಾಪಕತ್ವ ನಿಶ್ಚಯವಿರಬೇಕು. ಪಕ್ಷದಲ್ಲಿ ಸಾಧ್ಯ ಸಂದೇಹವೇ ಇರುವುದರಿಂದ ಒಂದುವೇಳೆ ಪಕ್ಷದಲ್ಲಿ ಸಾಧ್ಯವಿದ್ದರೆ ಅಲ್ಲಿ ಪಕ್ಷೇತರತ್ವಕ್ಕೆ ಸಾಧ್ಯವ್ಯಾಪಕತ್ವ ನಿಶ್ಚಯ ಉಂಟಾಗದು. ಆದರಿಂದ ಪಕ್ಷೇತರತ್ವವನ್ನು ಉಪಾಧಿ ಎನ್ನುವುದ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಸಮಾಧಾನ– ಪಕ್ಷದಲ್ಲಿ ಸಾಧ್ಯವಿಲ್ಲದಿದ್ದಲ್ಲಿ ಪಕ್ಷೇತರತ್ವಕ್ಕೆ ಸಾಧ್ಯವ್ಯಾಪಕತ್ವ ಬರುತ್ತದೆ. ಪಕ್ಷದಲ್ಲಿ ಸಾಧ್ಯವಿದ್ದರೆ ಸಾಧ್ಯವ್ಯಾಪಕತ್ವ ಬರಲಾರದು ಎಂದು ಸಾಧ್ಯವ್ಯಾಪಕತ್ವ ಸಂದೇಹ ಬರುವುದರಿಂದ ಪಕ್ಷೇತರತ್ವವು ಸಂದಿಗ್ಧೋಪಾಧಿಯಾಗುವುದು. ಉಪಾಧಿಯೇ ಆಗುವುದಿಲ್ಲ ಎನ್ನಲಾಗದು.

ಇದರ ಮೇಲೆ ಪ್ರಶ್ನೆ– ಈ ಸಂದಿಗ್ಧೋಪಾಧಿ ಹೇಗೆ ದೋಷವಾಗುವುದು ಎಂದು. ಏಕೆಂದರೆ ಉಪಾಧಿಯು ಸತ್ಪ್ರತಿಪಕ್ಷೋನ್ನಾಯಕವಾಗಿಯೇ ಅನುಮಿತಿಗೆ ವಿರೋಧಿಯಾಗಿ ದೋಷವೆನಿಸುತ್ತದೆ. ಸಾಧ್ಯವ್ಯಾಪಕವಾದ ಉಪಾಧಿಯು ಪಕ್ಷೇತರತ್ವವು ಪಕ್ಷದಲ್ಲಿಲ್ಲವೆಂದರೆ ವ್ಯಾಪಕಾಭಾವೇ ವ್ಯಾಪ್ಯಾಭಾವ. ವ್ಯಾಪಕವಾದ ಉಪಾಧಿ ಇಲ್ಲದ್ದರಿಂದ ವ್ಯಾಪ್ಯವಾದ ಸಾಧ್ಯವಿಲ್ಲ. ಇದು ಸತ್ಪ್ರತಿಪಕ್ಷ. ಆದರೆ ಇಲ್ಲಿ ಉಪಾಧಿಗೆ ಸಾಧ್ಯವ್ಯಾಪಕತ್ವ ಸಂದಿಗ್ಧ. ಹೀಗಾಗಿ ಉಪಾಧಿಯು ಸಾಧ್ಯಕ್ಕೆ ವ್ಯಾಪಕವಾಗಿದ್ದರೆ ಅದು ಇಲ್ಲದ್ದರಿಂದ ಸಾಧ್ಯವೂ ಇಲ್ಲವೆನ್ನಬಹುದು ಎಂದು ಸಂದೇಹ. ಈ ಸಂದೇಹದಿಂದ ಅನುಮಿತಿಗೆ ತೊಂದರೆ ಇಲ್ಲ. ಪಕ್ಷದಲ್ಲಿ ಸಾಧ್ಯವಿರಬಹುದು ಇಲ್ಲದೆಯೂ ಇರಬಹುದು ಎಂದು ಮೊದಲೇ ಸಂದೇಹವಿತ್ತು. ಈ ಸಂದೇಹವಿರುವುದರಿಂದಲೇ ಸಾಧ್ಯನಿಶ್ಚಯಕ್ಕಾಗಿ ಅನುಮಾನ ಹೊರಟಿರುತ್ತದೆ. ಆದರಿಂದ ಅದು ಅನುಮಾನಕ್ಕೆ ವಿರೋಧಿಯಲ್ಲ, ಅನುಕೂಲವೆ ಎಂದು ಪ್ರಶ್ನೆ. ಇದಕ್ಕೆ ಸಮಾಧಾನ— ಪಕ್ಷದಲ್ಲಿ ಸಾಧ್ಯಸಂದೇಹ ಮೊದಲಿಗೆ ಬಂದಿದ್ದು ನಿಶ್ಚಾಯಕ ಪ್ರಮಾಣವಿಲ್ಲದ್ದರಿಂದ, ಸ್ವರಸವಾಗಿ ಬಂದಿರುತ್ತದೆ. ಇದು ಸ್ವಾರಸಿಕ ಸಂದೇಹ. ಈ ಸಂದೇಹ ಪರಿಹಾರಕ್ಕಾಗಿ ನಿಶ್ಚಾಯಕ ಪ್ರಮಾಣವಾಗಿ ಅನುಮಾನ ಹೊರಡುತ್ತದೆ. ಆದರಿಂದ ಈ ಸ್ವಾರಸಿಕ ಸಂದೇಹ ಅನುಮಿತಿಗೆ ವಿರೋಧಿಯಲ್ಲ. ಆದರೆ ಪ್ರಕೃತ ಉಪಾಧಿಯಲ್ಲಿ ಸಾಧ್ಯ ವ್ಯಾಪಕತ್ವ ಸಂದೇಹದಿಂದ, 'ಪಕ್ಷದಲ್ಲಿ ವ್ಯಾಪಕವಾದ ಉಪಾಧಿ ಇಲ್ಲದ ಪ್ರಯುಕ್ತ ವ್ಯಾಪ್ಯವಾದ ಸಾಧ್ಯವಿರುವ ಸಂಭವವಿಲ್ಲ, ಸಾಧ್ಯ ಹೇಗೆ ಇದ್ದೀತು' ಎನ್ನುವ ಸಂದೇಹ ಪ್ರತಿಪಕ್ಷ ಸಂದೇಹ, ಇದರಿಂದ ಪಕ್ಷದಲ್ಲಿ ಬರುವ ಸಾಧ್ಯ ಸಂದೇಹವು ಆಹಿತ ಸಂದೇಹ. ಇದು ಪ್ರಬಲವಾಗಿದ್ದು ಅನುಮಿತಿಗೆ ವಿರೋಧಿಯೇ ಆಗುತ್ತದೆ.

पक्षेतरत्वस्य सन्दिग्धोपाधित्वेऽपि न दूषकत्वम् । अन्यथाऽनुमितिमात्रोच्छेदापत्तेरित्याशयेनाह **— तस्येति ।** नन्वनुकूलतर्कसत्त्व एव सन्दिग्धोपाधेरदूषकत्वम् । अन्यथा वह्निरनुष्णः कृतकत्वादित्यादौ वह्नीतरत्वोपाधेर्दूषकत्वानुपपत्तेरित्यत आह **— अनुकूलतर्काणामिति ।** 'विपक्षे गौरवप्रसङ्गरूपाणा' मित्यादिः ।

ಪೂರ್ವಪಕ್ಷಿಯ ಈ ಆಕ್ಷೇಪಕ್ಕೆ ಹೀಗೆ ಸಮಾಧಾನ— ಪಕ್ಷೇತರತ್ವವು ಸಂದಿಗ್ಧೋಪಾಧಿ ಎನಿಸಿದರೂ ಅದು ಎಲ್ಲ ಕಡೆ ದೋಷವಾಗುವುದಿಲ್ಲ. ಎಲ್ಲ ಕಡೆ ದೋಷವೆನ್ನುವುದಾದರೆ ಅನುಮಾನ ಪ್ರಮಾಣವೆಂಬುದೇ ಇಲ್ಲವೆಂದಾದೀತು ಎಂದು. ಯದ್ಯಪಿ ಬೆಂಕಿ ಬಿಸಿಯಲ್ಲ, ಕೃತಕವಾದ್ದರಿಂದ ಎಂಬ ಅನುಮಾನವು ಪಕ್ಷೇತರತ್ವವೆಂಬ ಉಪಾಧಿಯಿಂದ ದುಷ್ಟವಾದುದು ಕಂಡಿದೆ. ಸಂದಿಗ್ಧೋಪಾಧಿ ದೋಷವೆ ಅಲ್ಲ ಎಂದರೆ ಈ ಅನುಮಾನವೂ ದುಷ್ಟವಲ್ಲ ಎಂದಾದೀತು. ಆದರಿಂದ ಅನುಕೂಲ ತರ್ಕವಿರುವಲ್ಲಿ ಸಂದಿಗ್ಧೋಪಾದಿ ದೋಷವಾಗುವುದಿಲ್ಲ, ಅನುಕೂಲ ತರ್ಕವಿಲ್ಲದಿದ್ದಲ್ಲಿ ದೋಷವಾಗುತ್ತದೆ ಎಂದು ವ್ಯವಸ್ಥೆಯನ್ನು ಒಪ್ಪಬೇಕು. ಪ್ರಕೃತದಲ್ಲಿ ಅನುಕೂಲತರ್ಕಗಳಿವೆ. ವಿಪಕ್ಷೇ ಗೌರವಪ್ರಸಂಗವಿದೆ. ಆತ್ಮಶಬ್ದ ಪ್ರವೃತ್ತಿನಿಮಿತ್ತವು ಆತ್ಮತ್ವಜಾತಿ ಎಂದರೆ ಲಾಘವ. ಜಾತಿ ಎಂದೊಪ್ಪದಿದ್ದರೆ ಸಖಂಡ ಉಪಾಧಿ ಎಂದರೆ ಗೌರವ ಎಂದು.

**एवमिति ।** जलत्वं पृथिवीत्वतेजस्त्ववायुत्वमनस्त्वेतरद्रव्यत्वसाक्षाद्व्याप्यजातिभिन्नं जातित्वात् पृथिवीत्ववदित्यादिप्रकारेणेत्यर्थः । इदमुपलक्षणम् । पृथिवीत्वं जलाद्यवृत्तिद्रव्यवृत्तिकिञ्चिज्जातिमदवृत्ति, द्रव्यत्वव्याप्यजातित्वाज्जलत्वादिवत् । पृथिवीत्वं गन्धज्ञानान्यतरवद्वृत्तिद्रव्यत्वसाक्षाद्व्याप्यजातिभिन्नं, मेयत्वाद्घटत्ववदित्यादिकमप्यात्मत्वजातिसाधकमूहनीयम् ।

ಪೃಥಿವೀತ್ವವನ್ನು ಪಕ್ಷಮಾಡಿ ಜಲತ್ವಾದೀತರ ದ್ರವ್ಯತ್ವಸಾಕ್ಷಾದ್‌ವ್ಯಾಪ್ಯ ಆತ್ಮತ್ವಜಾತಿ ಭಿನ್ನತ್ವವನ್ನು ಸಾಧಿಸುವಂತೆ ಜಲತ್ವವನ್ನು ಪಕ್ಷಮಾಡಿ ಪೃಥಿವೀತ್ವಾದೀತರ ದ್ರವ್ಯತ್ವಸಾಕ್ಷಾದ್‌ವ್ಯಾಪ್ಯ ಆತ್ಮತ್ವ ಜಾತಿಭಿನ್ನತ್ವವನ್ನು ಸಾಧಿಸಬಹುದು. ಹಾಗೇ ತೇಜಸ್ತ್ವ ಮುಂತಾದುವನ್ನು ಪಕ್ಷಮಾಡಿ ಆತ್ಮತ್ವಭೇದವನ್ನು ಸಾಧಿಸ ಬಹುದು.

ಪೃಥಿವೀತ್ವವು ಜಲಾದಿಗಳಲ್ಲಿಲ್ಲದ ಅಂದರೆ ಜಲ ತೇಜೋ ವಾಯು ಮನಸುಗಳಲ್ಲಿಲ್ಲದ

ದ್ರವ್ಯದಲ್ಲಿರುವ ಒಂದು ಜಾತಿ ಇರುವಲ್ಲಿ ಇಲ್ಲದುದು. ದ್ರವ್ಯತ್ವವ್ಯಾಪ್ಯ ಜಾತಿಯಾದ್ದರಿಂದ, ಜಲತ್ವಾದಿಗಳಂತೆ ಎಂದು ಅನುಮಾನ. ಜಲತ್ವವು ಜಲಾದಿಗಳಲ್ಲಿಲ್ಲದ ದ್ರವ್ಯದಲ್ಲಿರುವ ಪೃಥಿವೀತ್ವ ವಿರುವಲ್ಲಿ ಇಲ್ಲದುದು ಹೇಗೋ ಹಾಗೇ ಪೃಥಿವೀತ್ವವು ಜಲಾದಿಗಳಲ್ಲಿಲ್ಲದ ದ್ರವ್ಯದಲ್ಲಿರುವ ಆತ್ಮತ್ವಜಾತಿ ಇರುವಲ್ಲಿ ಇಲ್ಲದುದೇ ಆಗಿದೆ ಎಂದು ಅನುಮಾನ. ಇಲ್ಲಿ 'ದ್ರವ್ಯದಲ್ಲಿರುವ' ಎಂಬ ವಿಶೇಷಣವು ಗುಣತ್ವಜಾತಿವಾರಣೆಗಾಗಿ. ಗುಣತ್ವವಿರುವಲ್ಲಿ ಇಲ್ಲದುದು ಪೃಥಿವೀತ್ವವೆಂದು ಸಿದ್ಧಸಾಧನಪರಿಹಾರಕ್ಕಾಗಿ. ಜಲಾದಿವೃತ್ತಿ ಜಲತ್ವಾದಿವಾರಣೆಗಾಗಿ 'ಜಲಾದಿಗಳಲ್ಲಿಲ್ಲದ' ಎಂದು ವಿಶೇಷಣ. ಜಾತಿತ್ವಮಾತ್ರವನ್ನೇ ಹೇತುಮಾಡಿದರೆ ದ್ರವ್ಯತ್ವದಲ್ಲಿ ವ್ಯಭಿಚಾರ. ಅದರಲ್ಲಿ ಜಾತಿತ್ವಹೇತುವಿದೆ, ಆದರೆ ಜಲಾದಿಗಳಲ್ಲಿಲ್ಲದ ದ್ರವ್ಯದಲ್ಲಿರುವ ಪೃಥಿವೀತ್ವವಿರುವಲ್ಲಿ ಅದು ಇದೆ. ದ್ರವ್ಯತ್ವವಾರಣೆಗಾಗಿ ದ್ರವ್ಯತ್ವವ್ಯಾಪ್ಯತ್ವ ವಿಶೇಷಣವಿದೆ.

ಪೃಥಿವೀತ್ವವು ಗಂಧ ಅಥವಾ ಜ್ಞಾನವಿರುವಲ್ಲಿ ಇರುವ ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯ ಜಾತಿಗಿಂತ ಭಿನ್ನವಾಗಿದೆ. ಪ್ರಮೇಯವಾದ್ದರಿಂದ, ಘಟತ್ವದಂತೆ ಎಂದು ಅನುಮಾನ. ಗಂಧವಿರುವಲ್ಲಿರುವ ಜಾತಿಯು ಪೃಥಿವೀತ್ವ, ಜ್ಞಾನವಿರುವಲ್ಲಿರುವ ಜಾತಿಯು ಆತ್ಮತ್ವ, ಘಟತ್ವದೃಷ್ಟಾಂತದಲ್ಲಿ ಗಂಧವಿರು ವಲ್ಲಿರುವ ದ್ರವ್ಯತ್ವಸಾಕ್ಷಾದ್ ವ್ಯಾಪ್ಯವಾದ ಪೃಥಿವೀತ್ವಕ್ಕಿಂತ ಭಿನ್ನತ್ವವಿದೆ. ಪಕ್ಷವಾದ ಪೃಥಿವೀತ್ವದಲ್ಲಿ ಜ್ಞಾನವಿರುವಲ್ಲಿರುವ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯವಾದ ಆತ್ಮತ್ವ ಜಾತಿಗಿಂತ ಭಿನ್ನತ್ವವಿದೆ.

### ದ್ರವ್ಯತ್ವಪಕ್ಷಕಾನುಮಾನ

**द्रव्यत्वं पृथिवीजलतेवायुमनस्त्वेतरजातिं प्रति साक्षाद्-व्यापकं सत्तासाक्षाद्व्याप्यजातित्वात् गुणत्ववत् ।**

**ದ್ರವ್ಯತ್ವವು ಪೃಥಿವೀತ್ವ ಜಲತ್ವ ತೇಜಸ್ತ್ವ ವಾಯುತ್ವ ಮನಸ್ತ್ವ ಇವುಗಳಿಗಿಂತ ಇತರವಾದ ಜಾತಿಗೆ ಸಾಕ್ಷಾದ್ ವ್ಯಾಪಕವಾಗಿದೆ, ಸತ್ತಾಸಾಕ್ಷಾದ್ ವ್ಯಾಪ್ಯಜಾತಿಯಾದ್ದರಿಂದ ಗುಣತ್ವದಂತೆ.**

**द्रव्यत्वमिति ।** अत्र रूपत्वादिजातिमादाय दृष्टान्ते, आत्मत्वजातिमादाय पक्षे साध्यसत्त्वं बोध्यम् । द्रव्यत्वस्य पृथिवीत्वादि-साक्षाद्व्यापकतया सिद्धसाधनवारणायेतरान्तम् । अष्टद्रव्यवृत्त्युपाधि-व्यापकत्वमादाय तद्दोषवारणाय जातिपदम् । तादृशजातित्वाव-च्छिन्नव्यापकत्वं जातेर्बाधितमतस्तादृशयत्किञ्चिदेकजातिव्यापकत्वलाभाय

**समासमुपेक्ष्य जातिं प्रतीत्येकवचनान्तं पृथगुपात्तम् । पृथिवीत्वादि-भिन्नघटत्वव्यापकत्वमादाय सिद्धसाधनमतः साक्षात्पदम् ।**

ಇಲ್ಲಿ ಗುಣತ್ವವೆಂಬ ದೃಷ್ಟಾಂತವು ಪೃಥಿವೀತ್ವಾದೀತರ ಜಾತಿಯಾದ ರೂಪತ್ವಕ್ಕೆ ಸಾಕ್ಷಾದ್ ವ್ಯಾಪಕವಾಗಿದೆ. ದ್ರವ್ಯತ್ವರೂಪವಾದ ಪಕ್ಷವು ಪೃಥಿವೀತ್ವಾದೀತರಜಾತಿಯಾದ ಆತ್ಮತ್ವಕ್ಕೇ ಸಾಕ್ಷಾದ್ ವ್ಯಾಪಕವಾಗಿದೆ ಎಂದು ಸಾಧ್ಯವನ್ನು ಕೂಡಿಸಬೇಕು.

ದ್ರವ್ಯತ್ವವು ಪೃಥಿವೀತ್ವಾದಿ ಜಾತಿಗೆ ಸಾಕ್ಷಾದ್ ವ್ಯಾಪಕವಾಗುವುದರಿಂದ ಸಿದ್ಧಸಾಧನತ್ವ ಬಂದೀತೆಂದು ಪೃಥಿವೀತ್ವಾದೀತರ ಜಾತಿ ಎಂದು ವಿಶೇಷಣ ನೀಡಲಾಗಿದೆ. ಪೃಥಿವೀತ್ವಾದೀತರ ಜಾತಿ ಎಂದು ಜಾತಿಪದವಿಲ್ಲದಿದ್ದರೆ ಪೃಥಿವ್ಯಾದಿ ಅಷ್ಟದ್ರವ್ಯ ವೃತ್ತಿಯಾದ 'ಅಷ್ಟಾನ್ಯತಮತ್ವ' 'ಎಂಟರಲ್ಲೊಂದು' ಎಂಬ ಉಪಾಧಿಯನ್ನಿಟ್ಟುಕೊಂಡು ಅದಕ್ಕೆ ದ್ರವ್ಯತ್ವವು ಸಾಕ್ಷಾದ್ ವ್ಯಾಪಕವಾಗಿದೆ ಎಂದು ಸಾಧ್ಯವನ್ನು ಕೂಡಿಸಬಹುದು, ಆತ್ಮತ್ವಜಾತಿಯನ್ನೇ ಇಟ್ಟುಕೊಳ್ಳಬೇಕಾಗಿಲ್ಲ. ಹೀಗಾಗಿ ಸಿದ್ಧಸಾಧನತ್ವ ಉಂಟಾಗುವುದು.

'ಇತರ ಜಾತಿಂ ಪ್ರತಿ ಸಾಕ್ಷಾದ್‌ವ್ಯಾಪಕಂ' ಎಂಬಲ್ಲಿ 'ಇತರಜಾತಿಸಾಕ್ಷಾದ್‌ವ್ಯಾಪಕಂ' ಎಂದು ಸಮಾಸ ಮಾಡಬಹುದಿತ್ತು ಮಾಡಿಲ್ಲ. ಏಕೆಂದರೆ ಸಮಾಸ ಮಾಡಿದ್ದರೆ 'ಇತರ ಎಲ್ಲ ಜಾತಿಗಳಿಗೂ ವ್ಯಾಪಕ' ಎಂದು ಅರ್ಥವಾಗುತ್ತಿತ್ತು. ಆಗ ಇತರವಾದ ಸತ್ತಾ ಜಾತಿಗೂ ದ್ರವ್ಯತ್ವವು ವ್ಯಾಪಕವೆಂದು ಹೇಳಿದಂತಾಗುತ್ತಿತ್ತು. ಇದು ಅಸಂಭವ, ಬಾಧಿತ. ಅದಕ್ಕೆ 'ಜಾತಿಂ ಪ್ರತಿ' ಬಿಡಿಸಿ ಏಕವಚನ ಜಾತಿಶಬ್ದಪ್ರಯೋಗ ಮಾಡಿ ಯತ್‌ಕಿಂಚಿತ್ ಏಕಜಾತಿಗೆ ವ್ಯಾಪಕವೆಂದು ಹೇಳಿದ್ದಾರೆ. ಆ ಏಕಜಾತಿಯು ದೃಷ್ಟಾಂತದಲ್ಲಿ ರೂಪತ್ವ, ಪಕ್ಷದಲ್ಲಿ ಆತ್ಮತ್ವ. ರೂಪತ್ವ ಸಾಕ್ಷಾದ್ ವ್ಯಾಪಕತ್ವವು ಗುಣತ್ವದಲ್ಲಿ ಅಬಾಧಿತ. ಆತ್ಮತ್ವಸಾಕ್ಷಾದ್ ವ್ಯಾಪಕತ್ವ ದ್ರವ್ಯತ್ವದಲ್ಲಿ ಅಬಾಧಿತ. ಸಾಕ್ಷಾತ್ ಪದವನ್ನು ಹಾಕದಿದ್ದರೆ ಪೃಥಿವೀತ್ವಾದಿಭಿನ್ನವಾದ ಘಟತ್ವ ಜಾತಿಗೆ ದ್ರವ್ಯತ್ವವು ವ್ಯಾಪಕವಾಗುವುದರಿಂದ ಸಿದ್ಧಸಾಧನತ್ವ ಬರುತ್ತಿತ್ತು. ಸಾಕ್ಷಾತ್ ಪದವನ್ನು ಹಾಕಿದಾಗ ಘಟತ್ವಕ್ಕೆ ದ್ರವ್ಯತ್ವವು ಸಾಕ್ಷಾತ್ ವ್ಯಾಪಕವಾಗದಿರುವುದರಿಂದ ಆತ್ಮತ್ವಕ್ಕೇ ಅದು ಸಾಕ್ಷಾತ್ ವ್ಯಾಪಕವೆಂದು ಸಾಧ್ಯವನ್ನು ಕೂಡಿಸಬೇಕಾಗುತ್ತದೆ, ಆಗ ಆತ್ಮತ್ವಜಾತಿ ಸಿದ್ಧವಾಗುತ್ತದೆ.

**साक्षाद्व्यापकत्वं च तद्व्यापकजात्यव्यापकत्वम् । व्यापकत्वं चाधिकदेशवृत्तित्वम् । तच्च तदवच्छिन्नभेदवद्वृत्तित्वे सति तद्वद्वृत्तित्वम् । पृथिवीत्वादिभिन्नं यद्रूपत्वादि तद्वद्वृत्तिरूपत्वादिकं प्रति तदवच्छिन्न-भेदवद्वृत्तिरसत्वादिकं प्रति च गुणत्वस्य व्यापकत्वात् दृष्टान्तस्य साध्यवैकल्यापत्तिरतः सत्यन्तविशेष्यदलयोर्निवेशः । तादृशधर्मा-**

**व्यापकत्वस्य साध्यत्वे गुणत्वस्य विशेषगुणत्वादिरूपतादृशधर्मव्यापकतया साध्यवैकल्यमतस्तादृशजात्यव्यापकत्वमनुसृतम् । न च पृथिवीत्वादि-व्यतिरिक्तरूपत्वादिव्यापकगुणत्वाव्यापकत्वस्य द्रव्यत्वे सिद्धत्वात्सिद्ध-साधनमिति वाच्यम् । तदव्यापकत्वस्य तदवच्छिन्नभेदवदवृत्तित्वरूपतया तादृशगुणत्वाव्यापकत्वस्य द्रव्यत्वे बाधितत्वात् । न च पृथिवीत्वादिव्यतिरिक्तगुणत्वव्यापकसत्ताजात्यवच्छिन्नभेदवदवृत्तित्वमादाय सिद्धसाधनमिति वाच्यम् । तदवच्छिन्नभेदवदसमवेतत्वस्य विवक्षितत्वात् । सत्ताजात्यवच्छिन्नभेदवत्समवेतत्वस्यैवाप्रसिद्ध्या सिद्धसाधनानवकाशात् ।**

'ಸಾಕ್ಷಾದ್ ವ್ಯಾಪಕ' ಎಂದರೆ 'ತದ್‌ವ್ಯಾಪಕ ಜಾತ್ಯವ್ಯಾಪಕ' ಎಂದರ್ಥ. 'ವ್ಯಾಪಕ' ಎಂದರೆ ಅಧಿಕದೇಶವೃತ್ತಿ, ಎಂದರೆ 'ತದವಚ್ಛಿನ್ನಭೇದವದ್‌ವೃತ್ತಿತ್ವೇ ಸತಿ ತದ್ವದ್‌ವೃತ್ತಿತ್ವಂ' ಎಂದು ಹೇಳಿದಂತಾಯಿತು. ಇಲ್ಲಿ ವಿಶೇಷಣಾಂಶವಿಲ್ಲದಿದ್ದರೆ 'ತದ್ವದ್‌ವೃತ್ತಿತ್ವ' ಮಾತ್ರವನ್ನೇ ಹೇಳಿದರೆ ಪೃಥಿವೀತ್ವಾದಿ ಭಿನ್ನವಾದ ರೂಪತ್ವಕ್ಕೆ ತದ್ವದ್‌ವೃತ್ತಿಯಾದ್ದರಿಂದ ರೂಪತ್ವವೇ ವ್ಯಾಪಕ. ಅದಕ್ಕೆ ಗುಣತ್ವವು ಅವ್ಯಾಪಕವಾಗುವುದಿಲ್ಲ. ಸಾಕ್ಷಾದ್ ವ್ಯಾಪಕವಾಗುವುದಿಲ್ಲ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ವಿಶೇಷ್ಯಾಂಶವಿಲ್ಲದೆ ಕೇವಲ ತದವಚ್ಛಿನ್ನಭೇದವದ್ ವೃತ್ತಿತ್ವ ಮಾತ್ರವನ್ನೇ ಹೇಳಿದರೆ ಪೃಥಿವೀತ್ವಾದಿ ಭಿನ್ನವಾದ ರೂಪತ್ವಕ್ಕೆ ತದವಚ್ಛಿನ್ನಭೇದವದ್ ವೃತ್ತಿಯಾದ್ದರಿಂದ ರಸತ್ವವೇ ವ್ಯಾಪಕ, ಅದಕ್ಕೆ ಗುಣತ್ವವು ಅವ್ಯಾಪಕವಾಗುವುದಿಲ್ಲ. ಸಾಕ್ಷಾದ್ ವ್ಯಾಪಕವಾಗುವುದಿಲ್ಲ, ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೇ ಉಂಟಾಗುತ್ತದೆ. ಆದಕ್ಕೆ ತದ್ವದ್ ವೃತ್ತಿತ್ವ ಹಾಗೂ ತದವಚ್ಛಿನ್ನಭೇದವದ್ ವೃತ್ತಿತ್ವ ಎರಡೂ ಬೇಕು. ಆಗ ಪೃಥಿವ್ಯಾದಿ ಭಿನ್ನವಾದ ರೂಪತ್ವಕ್ಕೆ ರೂಪತ್ವವು ತದ್ವದ್‌ವೃತ್ತಿಯಾದರೂ ತದವಚ್ಛಿನ್ನ ಭೇದವದ್‌ವೃತ್ತಿಯಾಗುವುದಿಲ್ಲ, ಗುಣತ್ವವೇ ರೂಪತ್ವಕ್ಕೆ ತದ್ವದ್ ವೃತ್ತಿಯೂ ತದವಚ್ಛಿನ್ನಭೇದವದ್ ವೃತ್ತಿಯೂ ಆಗುವುದು. ಆ ಗುಣತ್ವಕ್ಕೆ ಗುಣತ್ವವು ಅವ್ಯಾಪಕವಾದ್ದರಿಂದ ತದ್ವ್ಯಾಪಕ ಜಾತ್ಯವ್ಯಾಪಕತ್ವರೂಪ ಸಾಕ್ಷಾದ್ ವ್ಯಾಪಕತ್ವವು ಗುಣತ್ವದಲ್ಲಿ ಬರುತ್ತದೆ. ದೃಷ್ಟಾಂತದಲ್ಲಿ ಸಾಧ್ಯ ಬರುತ್ತದೆ.

'ತದ್‌ವ್ಯಾಪಕಜಾತ್ಯವ್ಯಾಪಕತ್ವ' ಶರೀರದಲ್ಲಿ ಜಾತಿ ಪದದ ಬದಲು ಧರ್ಮಪದವನ್ನು ಹಾಕಿದರೆ, ತದ್ ವ್ಯಾಪಕಧರ್ಮವೆಂದರೆ ವಿಶೇಷಗುಣತ್ವವನ್ನಿಟ್ಟುಕೊಂಡು ತದ್ವ್ಯಾಪಕತ್ವವೇ ಗುಣತ್ವ ದಲ್ಲಿ ಬರುವುದರಿಂದ ಅವ್ಯಾಪಕತ್ವ ಬರುವುದಿಲ್ಲ. ಸಾಕ್ಷಾದ್ ವ್ಯಾಪಕತ್ವ ಬರುವುದಿಲ್ಲ. ದೃಷ್ಟಾಂತ ದಲ್ಲಿ ಸಾಧ್ಯವೈಕಲ್ಯ ಬರುತ್ತದೆ ಎನ್ನಬಹುದು. ಜಾತಿಪದವನ್ನು ಹಾಕಿದರೆ ವಿಶೇಷಗುಣತ್ವವನ್ನಿಟ್ಟು ಕೊಂಡು ಸಾಧ್ಯ ವೈಕಲ್ಯದೋಷವನ್ನು ಹೇಳಲು ಬರುವುದಿಲ್ಲ.

ಪೃಥವೀತ್ವಾದೀತರ ರೂಪತ್ವ ವ್ಯಾಪಕ ಗುಣತ್ವಕ್ಕೆ ದ್ರವ್ಯತ್ವವು ಅವ್ಯಾಪಕ. ಇದು ಸಿದ್ಧವೇ ಆದ್ದರಿಂದ ಸಿದ್ಧಸಾಧನತ್ವ ದೋಷವಿದೆ ಎಂದರೆ ಹೀಗೆ ಹೇಳಬಾರದು. ಗುಣತ್ವಕ್ಕೆ ದ್ರವ್ಯತ್ವ ಅವ್ಯಾಪಕವಾಗುವುದಿಲ್ಲ ಏಕೆಂದರೆ ಅವ್ಯಾಪಕತ್ವವೆಂದರೆ ತದವಚ್ಛಿನ್ನಭೇದವದವೃತ್ತಿತ್ವ. ಗುಣತ್ವಾವಚ್ಛಿನ್ನ ಭೇದಉಳ್ಳ ದ್ರವ್ಯದಲ್ಲಿ ದ್ರವ್ಯತ್ವವಿದೆ ಹೊರತು ತದವೃತ್ತಿತ್ವ ಬರುವುದಿಲ್ಲ. ಅದು ಬಾಧಿತ

ಪೃಥಿವೀತ್ವಾದೀತರ ಗುಣತ್ವ ವ್ಯಾಪಕ ಸತ್ತಾಜಾತಿಗೆ ದ್ರವ್ಯತ್ವವು ಅವ್ಯಾಪಕ, ಏಕೆಂದರೆ ತದವಚ್ಛಿನ್ನ ಭೇದವತ್ ಸತ್ತಾಜಾತ್ಯವಚ್ಛಿನ್ನಭೇದವತ್ ಸಾಮಾನ್ಯಾದಿಗಳು, 'ಸಾಮಾನ್ಯಂ ನ ಸತ್' ಎಂದು ಭೇದವಿದೆ. ಅಂಥ ಸಾಮಾನ್ಯದಲ್ಲಿ ದ್ರವ್ಯತ್ವವಿಲ್ಲ, ತದವೃತ್ತಿತ್ವವೇ ಬಂದಿದೆ. ಆದರಿಂದ ಸಿದ್ಧಸಾಧನದೋಷ ಎಂದು ಆಕ್ಷೇಪ ಬಂದರೆ ಅವ್ಯಾಪಕತ್ವವೆಂದರೆ ತದವಚ್ಛಿನ್ನಭೇದವದ ಸಮವೇತತ್ವ ವನ್ನು ವಿವಕ್ಷೆ ಮಾಡುತ್ತೇವೆ. ಈ ಸತ್ತಾಜಾತ್ಯವಚ್ಛಿನ್ನ ಭೇದವತ್ತಾದ ಸಾಮಾನ್ಯದಲ್ಲಿ ಯಾವುದೂ ಸಮವೇತವಾಗದಿರುವುದರಿಂದ ತತ್ಸಮವೇತತ್ವ ಅಪ್ರಸಿದ್ಧವಾದ್ದರಿಂದ ತದಸಮೇವೇತತ್ವವನ್ನು ದ್ರವ್ಯತ್ವದಲ್ಲಿ ಹೇಳಲಾಗುವುದಿಲ್ಲ, ಸಿದ್ಧಸಾಧನತ್ವವಿಲ್ಲ.

**एवं च स्वाधिकरणवृत्तित्वस्वावच्छिन्नभेदवद्वृत्तित्वोभयसम्बन्धेन पृथिवीत्वादिव्यतिरिक्तकिञ्चिज्जातिविशिष्टजात्यवच्छिन्नभेदवदसमवेतत्वं साध्यमिति निष्कर्षः । उभयसम्बन्धप्रवेशात् पृथिवीत्वादिव्यतिरिक्तरूपत्वाद्यवच्छिन्नभेदवद्वृत्तिस्तादृशरसत्वादिमद्वृत्तिश्च या रसत्वादिजातिः तद्व्यापकत्वेऽपि गुणत्वरूपदृष्टान्तस्य न साध्यवैकल्यम् । तेन रूपत्वव्यापकगुणत्वं प्रति गुणत्वस्य स्वाधिकरणवृत्त्यभावाप्रतियोगित्वेन व्यापकत्वादव्यापकत्वरूपसाध्यवैकल्यं दृष्टान्तस्येति निरस्तम् । अधिकदेशवृत्तित्वरूपव्यापकत्वस्यैव विवक्षितत्वादिति ।**

ಈಗ ಪರಿಷ್ಕೃತವಾದ ಸಾಧ್ಯಸ್ವರೂಪ ಹೀಗಾಯಿತು— ಸ್ವಾಧಿಕರಣ ವೃತ್ತಿತ್ವ ಮತ್ತು ಸ್ವಾವಚ್ಛಿನ್ನ ಭೇದವದ್ ವೃತ್ತಿತ್ವ ಈ ಉಭಯ ಸಂಬಂಧದಿಂದ ಪೃಥಿವೀತ್ವಾದೀತರ ಕಿಂಚಿತ್ ಜಾತಿಯಿಂದ ವಿಶಿಷ್ಟವಾದ ಜಾತಿಗೆ ತದವಚ್ಛಿನ್ನ ಭೇದವದಸಮವೇತವಾಗಿದೆ ದ್ರವ್ಯತ್ವ ಎಂದು.

ಇಲ್ಲಿ ಉಭಯಸಂಬಂಧ ನಿವೇಶ ಮಾಡದೆ ಕೇವಲ ಸ್ವಾವಚ್ಛಿನ್ನ ಭೇದವದ್ ವೃತ್ತಿತ್ವ ಸಂಬಂಧವನ್ನು ಮಾತ್ರವಿಟ್ಟುಕೊಂಡರೆ ಪೃಥಿವೀತ್ವಾದೀತರ ರೂಪತ್ವಾವಚ್ಛಿನ್ನಭೇದವದ್ ವೃತ್ತಿಯಾದ ಜಾತಿಯು ರಸತ್ವಜಾತಿ. ಅಂಥ ರಸತ್ವಕ್ಕೆ ವ್ಯಾಪಕವು ಗುಣತ್ವ, ಹೊರತು ಅವ್ಯಾಪಕವಲ್ಲ,

ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ಸ್ವಾಧಿಕರಣವೃತ್ತಿತ್ವ ಸಂಬಂಧವನ್ನು ಕೂಡ ಸೇರಿಸಿದರೆ ರೂಪತ್ವಕ್ಕೆ ರಸತ್ವವು ಸ್ವಾಧಿಕರಣ ವೃತ್ತಿಯಾಗದಿರುವುದರಿಂದ ಸ್ವಾಧಿಕರಣವೃತ್ತಿತ್ವ ಮತ್ತು ಸ್ವಾವಚ್ಛಿನ್ನ ಭೇದವದ್ ವೃತ್ತಿತ್ವೋಭಯ ಸಂಬಂಧದಿಂದ ರೂಪತ್ವ ವಿಶಿಷ್ಟವು ಗುಣತ್ವವೆ, ರೂಪತ್ವಾಧಿಕರಣದಲ್ಲಿ ಗುಣತ್ವವಿದೆ. ರೂಪತ್ವಾವಚ್ಛಿನ್ನಭೇದವತ್ತಾದ ರಸದಲ್ಲಿಯೂ ವೃತ್ತಿಯಾಗಿದೆ. ಇಂಥ ಗುಣತ್ವಕ್ಕೆ ಅವ್ಯಾಪಕ ಗುಣತ್ವವೆ ಎಂದು ಸಾಧ್ಯವು ದೃಷ್ಟಾಂತದಲ್ಲಿ ಬರುತ್ತದೆ.

ಉಭಯ ಸಂಬಂಧಗಳಲ್ಲಿ ಸ್ವಾಧಿಕರಣ ವೃತ್ತಿತ್ವ ಎಂಬ ಸಂಬಂಧವನ್ನು ಮಾತ್ರ ಇಟ್ಟುಕೊಂಡರೆ ಪೃಥಿವೀತ್ವಾದೀತರ ರಸತ್ವಜಾತಿಯಿಂದ ಸ್ವಾಧಿಕರಣವೃತ್ತಿತ್ವ ಸಂಬಂಧದಿಂದ ವಿಶಿಷ್ಟವಾದ ರಸತ್ವಜಾತಿಗೆ ಗುಣತ್ವವು ವ್ಯಾಪಕವೇ ಆದ್ದರಿಂದ ಅವ್ಯಾಪಕತ್ವ ಬಾರದಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ದೋಷವೇ ಇದೆ. ಅದಕ್ಕೆ ಸ್ವಾವಚ್ಛಿನ್ನಭೇದವದ್‌ವೃತ್ತಿತ್ವವನ್ನೂ ಕೂಡ ಸೇರಿಸಿದರೆ ರಸತ್ವಾವಚ್ಛಿನ್ನಭೇದವದ್‌ವೃತ್ತಿತ್ವವು ರಸತ್ವಕ್ಕೆ ಇಲ್ಲ, ಗುಣತ್ವಕ್ಕೆ ಇದೆ, ಗುಣತ್ವಾವ್ಯಾಪಕತ್ವವು ಗುಣತ್ವದಲ್ಲಿದೆ ಎಂದು ಸಾಧ್ಯವೈಕಲ್ಯ ಪರಿಹಾರವಾಗುತ್ತದೆ.

'ಗುಣತ್ವಕ್ಕೆ ಗುಣತ್ವವು ಸ್ವಾಧಿಕರಣವೃತ್ತ್ಯಭಾವಪ್ರತಿಯೋಗಿಯಾಗುವುದಿಲ್ಲ. 'ಗುಣದಲ್ಲಿ ಗುಣತ್ವವಿಲ್ಲ' ಎನ್ನಲಾಗದು ತಾನೆ? ಆದರಿಂದ ಅಪ್ರತಿಯೋಗಿಯಾಗುತ್ತದೆ, ವ್ಯಾಪಕವೇ ಆಗುತ್ತದೆ, ಅವ್ಯಾಪಕವಾಗುವುದಿಲ್ಲ ಅವ್ಯಾಪಕತ್ವರೂಪಸಾಧ್ಯವು ಗುಣತ್ವ ದೃಷ್ಟಾಂತದಲ್ಲಿಲ್ಲ' ಎಂಬ ಪ್ರಶ್ನೆ ಸರಿಯಲ್ಲ. ನಾವು ಸ್ವಾಧಿಕರಣ ವೃತ್ತ್ಯಭಾವಾಪ್ರತಿಯೋಗಿತ್ವರೂಪ ವ್ಯಾಪಕತ್ವವನ್ನು ನಿವೇಶಮಾಡಿಲ್ಲ. ಸ್ವಾಧಿಕರಣ ವೃತ್ತಿತ್ವ–ಸ್ವಾವಚ್ಛಿನ್ನ ಭೇದವದ್ ವೃತ್ತಿತ್ವ ಉಭಯಸಂಬಂಧೇನ ಸ್ವವಿಶಿಷ್ಟತ್ವರೂಪವಾದ ಅಧಿಕದೇಶವೃತ್ತಿತ್ವರೂಪ ವ್ಯಾಪಕತ್ವವನ್ನು ನಿವೇಶ ಮಾಡಿದ್ದೇವೆ. ಗುಣತ್ವಕ್ಕೆ ಗುಣತ್ವವು ಅಧಿಕದೇಶ ವೃತ್ತಿರೂಪವ್ಯಾಪಕವಲ್ಲ. ಅವ್ಯಾಪಕವೇ ಆಗಿದೆ. ಸಾಧ್ಯಪರಿಷ್ಕಾರದಲ್ಲಿ ಉಭಯಸಂಬಂಧೇನ ಸ್ವವಿಶಿಷ್ಟತ್ವರೂಪ ವ್ಯಾಪಕತ್ವದ ಅಭಾವವನ್ನು ಹೇಳದೆ ಲಾಘವಕ್ಕಾಗಿ ಕೇವಲ ಸ್ವಾವಚ್ಛಿನ್ನ ಭೇದವದವೃತ್ತಿತ್ವವನ್ನೇ ಹೇಳಿದ್ದೇವೆ.

**हेतौ जातित्वमात्रस्य सत्तायामनैकान्त्यात् सत्ताव्याप्येति। व्याप्यत्व च पूर्ववन्न्यूनवृत्तित्वरूपं ग्राह्यम् । अतः स्वस्य स्वव्याप्यत्वमादाय न दोषः । घटत्वादौ व्यभिचारवारणाय साक्षात्पदम् । यद्यपि घटत्वादौ पृथिवीत्वादिभिन्नघटत्वादिसाक्षाद्व्यापकत्वरूपसाध्यसत्त्वान्न व्यभिचाराव-काशः । तथापि पृथिवीत्वादिभिन्नद्रव्यत्वव्यापकद्रव्यगुणान्यतरत्वरूपधर्मा-न्तराव्यापकत्वसिद्ध्याऽर्थान्तरवारणाय तद्व्यापकजात्यव्यापकत्वे सति**

**तद्व्यापकत्वमेव साक्षाद्व्यापकत्वपदेन विवक्षणीयमित्याशयेन तदुपादानात् । अन्यथा तु नोपादेयमेव साक्षात्पदमित्यवधेयम् ।**

ಕೇವಲ ಜಾತಿತ್ವ ಮಾತ್ರವನ್ನೇ ಹೇತು ಮಾಡಿದರೆ ಸತ್ತಾಜಾತಿಯಲ್ಲಿ ವ್ಯಭಿಚಾರ ಬರುತ್ತದೆ. ಸತ್ತಾ ಜಾತಿಯಲ್ಲಿ ಸ್ವಾವಚ್ಛಿನ್ನ ಭೇದವದವೃತ್ತಿತ್ವ ಬರಲಾರದು. ದ್ರವ್ಯತ್ವಾದಿ ಎಲ್ಲ ಜಾತಿಗೂ ಸತ್ತಾ ಪರಜಾತಿಯಾದ್ದರಿಂದ ತದವಚ್ಛಿನ್ನ ಭೇದವದ್ ವೃತ್ತಿತ್ವವೇ ಬರುತ್ತದೆ. ಆದಕ್ಕೆ 'ಸತ್ತಾಸಾಕ್ಷಾದ್ ವ್ಯಾಪ್ಯ ಜಾತಿತ್ವಾತ್' ಎಂದೇ ಹೇತು ಮಾಡಬೇಕು. ಸತ್ತಾವ್ಯಾಪ್ಯ ಎಂದಿಷ್ಟೇ ಹೇಳಿದರೂ ತನಗೆ ತಾನು ತದಭಾವವದವೃತ್ತಿತ್ವರೂಪ ವ್ಯಾಪ್ಯತ್ವ ಉಳ್ಳದ್ದೇ ಆಗುವುದರಿಂದ ಪುನಃ ಸತ್ತಾಜಾತಿಯಲ್ಲಿ ಸತ್ತಾವ್ಯಾಪ್ಯ ಜಾತಿತ್ವ ಬರುವುದರಿಂದ ವ್ಯಭಿಚಾರ ಬರುತ್ತದೆ. ಯದ್ಯಪಿ ಹಿಂದಿನಂತೆ ನ್ಯೂನವೃತ್ತಿತ್ವ ರೂಪ ವ್ಯಾಪ್ಯತ್ವವನ್ನು ನಿವೇಶ ಮಾಡಿದಾಗ ಸತ್ತಾದಲ್ಲಿ ಸತ್ತಾವ್ಯಾಪ್ಯತ್ವ ಬರುವುದಿಲ್ಲ. ವ್ಯಭಿಚಾರವಿಲ್ಲ. ಆದರೂ ಘಟತ್ವಾದಿ ಜಾತಿಗಳಲ್ಲಿ ಸತ್ತಾವ್ಯಾಪ್ಯ ಜಾತಿತ್ವವಿದೆ, ಹೇತುವಿದೆ. ಪೃಥಿವೀತ್ವಾದೀತರ ಘಟತ್ವ ಜಾತ್ಯವಚ್ಛಿನ್ನ ಭೇದವದಸಮವೇತತ್ವ ರೂಪವಾದ ತದ್‌ವ್ಯಾಪಕ ಜಾತ್ಯವ್ಯಾಪಕತ್ವ ಬಂದರೂ ತದ್‌ವ್ಯಾಪಕತ್ವ ಬರುವುದಿಲ್ಲವಾದ್ದರಿಂದ ಸಾಕ್ಷಾದ್ ವ್ಯಾಪಕತ್ವವಿಲ್ಲ, ಸಾಧ್ಯವಿಲ್ಲ ಎಂದು ವ್ಯಭಿಚಾರ. ಅದಕ್ಕೆ ಹೇತುವಿನಲ್ಲಿ 'ಸತ್ತಾ ಸಾಕ್ಷಾದ್‌ವ್ಯಾಪ್ಯಜಾತಿತ್ವಾತ್' ಎಂದು ಸಾಕ್ಷಾತ್‌ಪದ ನಿವೇಶ ಮಾಡಬೇಕು.

ಯದ್ಯಪಿ ಘಟತ್ವಾದಿಗಳಲ್ಲಿ ಪೃಥಿವೀತ್ವಾದೀತರ ಘಟತ್ವ ಜಾತ್ಯವಚ್ಛಿನ್ನ ಭೇದವದ ಸಮವೇತತ್ವರೂಪ ಸಾಧ್ಯವಿದೆ. ತದ್‌ವ್ಯಾಪಕತ್ವವನ್ನು ಜೊತೆಗೆ ನಾವು ಸೇರಿಸಿಯೇ ಇಲ್ಲ. ಸಾಧ್ಯಾಭಾವ ಪ್ರಸಕ್ತಿ ಇಲ್ಲ. ಹೇತು ಬಂದರೂ ವ್ಯಭಿಚಾರವಿಲ್ಲ. ಆದರೂ ಪೃಥಿವೀತ್ವಾದೀತರ ದ್ರವ್ಯತ್ವವ್ಯಾಪಕ ದ್ರವ್ಯಗುಣಾನ್ಯತರತ್ವರೂಪ ಜಾತಿಗೆ ದ್ರವ್ಯತ್ವವು ಅವ್ಯಾಪಕವೆಂದು ದ್ರವ್ಯತ್ವ ರೂಪವಾದ ಪಕ್ಷದಲ್ಲಿ ಸಾಧ್ಯಪರ್ಯವಸಾನ ಸಂಭವವಿರುವುದರಿಂದ ಅರ್ಥಾಂತರತ್ವ ದೋಷವಿದೆ. ಅನ್ಯತರತ್ವವು ತದ್‌ಭಿನ್ನಭಿನ್ನತ್ವರೂಪವೇ ಹೊರತು ಜಾತಿಯಲ್ಲ, ಅದನ್ನಿಟ್ಟುಕೊಂಡು ಹೇಗೆ ಪಕ್ಷದಲ್ಲಿ ಸಾಧ್ಯ ಪರ್ಯವಸಾನ? ಹೇಗೆ ಅರ್ಥಾಂತರತ್ವ? ನಿಜ. ಆದರೂ ಈ ಅನುಮಾನದಿಂದಲೇ ಆತ್ಮತ್ವದಂತೆಯೇ ಅನ್ಯತರತ್ವವು ಜಾತಿ ಎಂದು ಸಿದ್ಧವಾಗಲಿ ಎಂದು ಅಭೇದವಾದಿ ಹೇಳಬಹುದು. ಆಗ ನಾವು ಹೇಳುತ್ತೇವೆ. 'ತದ್‌ವ್ಯಾಪಕ ಜಾತ್ಯವ್ಯಾಪಕತ್ವದೊಂದಿಗೆ ತದ್‌ವ್ಯಾಪಕತ್ವವನ್ನು ಸೇರಿಸಿಯೇ ಸಾಧ್ಯ ಮಾಡಿದ್ದೇವೆ. ದ್ರವ್ಯತ್ವದಲ್ಲಿ ಪೃಥಿವೀತ್ವಾದೀತರ ದ್ರವ್ಯತ್ವ ವ್ಯಾಪಕ ದ್ರವ್ಯಗುಣಾನ್ಯತರತ್ವಜಾತ್ಯವ್ಯಾಪಕತ್ವ ಬಂದರೂ ದ್ರವ್ಯತ್ವವ್ಯಾಪಕತ್ವ ಬಾರದಿರುವುದರಿಂದ ಸಾಧ್ಯಪರ್ಯವಸಾನ ಶಕ್ಯವಿಲ್ಲ, ಅರ್ಥಾಂತರತ್ವ ಪ್ರಸಕ್ತಿ ಇಲ್ಲ' ಎಂದು. ಹೀಗೆ ತದ್‌ವ್ಯಾಪಕತ್ವವನ್ನು ನಿವೇಶ ಮಾಡಿರುವುದರಿಂದ ಘಟತ್ವದಲ್ಲಿ ಘಟತ್ವವ್ಯಾಪಕತ್ವವಿಲ್ಲದ್ದರಿಂದ ಸಾಧ್ಯವಿಲ್ಲವೆಂದು ವ್ಯಭಿಚಾರ. ಅದರ ಪರಿಹಾರಕ್ಕಾಗಿ ಹೇತುವಿನಲ್ಲಿ ಸಾಕ್ಷಾತ್‌ಪದ ನಿವೇಶ ಬೇಕು.

ವಸ್ತುತಃ ದ್ರವ್ಯಗುಣಾನ್ಯತರತ್ವವು ಆತ್ಮತ್ವದಂತೆ ವಿವಾದಗ್ರಸ್ತವಲ್ಲ. ಆತ್ಮತ್ವವು ಜಾತಿ ಹೌದೇ ಅಲ್ಲವೆ ಎಂದು ವಿವಾದವಿದೆ. ಅದು ಈ ಅನುಮಾನದಿಂದ ಜಾತಿ ಎಂದು ಸಿದ್ಧವಾಗುವುದು. ಅನ್ಯತರತ್ವವು ಜಾತಿಯಲ್ಲ ಎಂಬುದು ನಿರ್ವಿವಾದ. ಆದರಿಂದ ಅದನ್ನಿಟ್ಟುಕೊಂಡು ಸಾಧ್ಯ ಪರ್ಯವಸಾನ ಮಾಡಿ ಅರ್ಥಾಂತರತ್ವವನ್ನು ಹೇಳಲು ಪ್ರಸಕ್ತಿ ಇಲ್ಲ. ಆದರಿಂದ ತದ್ ವ್ಯಾಪಕತ್ವ ವನ್ನು ಸಾಧ್ಯಕೋಟಿಯಲ್ಲಿ ನಿವೇಶಮಾಡಬೇಕಾಗಿಲ್ಲ. ಹೀಗಾಗಿ ಘಟತ್ವದಲ್ಲಿ ವ್ಯಭಿಚಾರವಿಲ್ಲ. ಹೇತುವಿನಲ್ಲಿ ಸಾಕ್ಷಾತ್ ಪದ ಸರ್ವಥಾ ಬೇಡ.

**गगनावृत्तिधर्मसमवायित्वे व्यभिचारवारणाय जातित्वनिवेशः । एतच्चोपलक्षणम् । द्रव्यत्वं मूर्तावृत्तिजातिमद्वृत्ति, सत्तासाक्षाद्व्याप्यजातित्वादमूर्तवृत्तिजातित्वाद्वा गुणत्वादिवत् । द्रव्यत्वमात्मवृत्तिजातिव्यापकम्, आत्मानात्मवृत्तिजातित्वात् सत्तावदित्यादिकमप्यूह्यम्।**

ಸಾಧ್ಯದಲ್ಲಿ ತದ್‌ವ್ಯಾಪಕತ್ವ ನಿವೇಶಪಕ್ಷದಲ್ಲಿ ಗಗನಾವೃತ್ತಿ ಧರ್ಮ ಸಮವಾಯಿತ್ವದಲ್ಲಿ ತದ್‌ವ್ಯಾಪಕತ್ವ ಬರುವುದಿಲ್ಲವಾದ್ದರಿಂದ ಸತ್ತಾಸಾಕ್ಷಾದ್ ವ್ಯಾಪ್ಯತ್ವರೂಪ ಹೇತು ಬರುವುದರಿಂದ ವ್ಯಭಿಚಾರ. ಸಮವಾಯಿತ್ವವು ಸಮವಾಯಾನುಯೋಗಿತ್ವರೂಪವಾದ್ದರಿಂದ ಅದು ಎಲ್ಲಿಯೂ ಸಮವೇತವಲ್ಲ. ಪೃಥಿವೀತ್ವಾದೀತರ ರೂಪತ್ವ ವ್ಯಾಪಕ ಗುಣತ್ವಾವಚ್ಛಿನ್ನ ಭೇದವದಸಮವೇತತ್ವವು ಸುಲಭವಾಗಿ ಬರುತ್ತದೆ. ಆದರೆ ಗುಣತ್ವಕ್ಕೆ ಅದು ಸಮವಾಯೇನ ವ್ಯಾಪಕವಲ್ಲದ್ದರಿಂದ ಸಾಧ್ಯವಿಲ್ಲ. ಗಗನದಲ್ಲಿ ಬಿಟ್ಟು ಬೇರೆ ಎಲ್ಲ ದ್ರವ್ಯಗಳಲ್ಲಿ ಗುಣಕರ್ಮಗಳಲ್ಲಿ ಇರುವುದರಿಂದ ಸತ್ತಾಸಾಕ್ಷಾದ್ ವ್ಯಾಪ್ಯತ್ವಹೇತು ಬರುತ್ತದೆ. ಅದಕ್ಕೆ ಹೇತುವಿನಲ್ಲಿ ಜಾತಿತ್ವನಿವೇಶ ಮಾಡಬೇಕು. ಈಗ ಸತ್ತಾಸಾಕ್ಷಾದ್‌ವ್ಯಾಪ್ಯ ಜಾತಿತ್ವ ಹೇತು ಬಾರದಿರುವುದರಿಂದ ವ್ಯಭಿಚಾರ ಪರಿಹಾರ.

'ದ್ರವ್ಯತ್ವವು ಮೂರ್ತದಲ್ಲಿಲ್ಲದ ಜಾತಿಮತ್ತಾದ್ದರಲ್ಲಿ ವೃತ್ತಿಯಾಗಿದೆ. ಸತ್ತಾಸಾಕ್ಷಾದ್ ವ್ಯಾಪ್ಯಜಾತಿಯಾದ್ದರಿಂದ, ಅಥವಾ ಅಮೂರ್ತವೃತ್ತಿ ಜಾತಿಯಾದ್ದರಿಂದ, ಗುಣತ್ವಾದಿಗಳಂತೆ, ಎಂದು ಅನುಮಾನ. ಇಲ್ಲಿ ಗುಣತ್ವಾದಿಗಳು ಸತ್ತಾಸಾಕ್ಷಾದ್ ವ್ಯಾಪ್ಯ ಜಾತಿಗಳಾಗಿವೆ, ಅಮೂರ್ತವೃತ್ತಿ ಜಾತಿಗಳಾಗಿವೆ. ಮತ್ತು ಮೂರ್ತದಲ್ಲಿಲ್ಲದ ರೂಪತ್ವಾದಿ ಜಾತಿಮತ್ತಾದ ರೂಪಾದಿಗಳಲ್ಲಿ ಇವೆ. ಹಾಗೇ ದ್ರವ್ಯತ್ವವೂ ಸತ್ತಾಸಾಕ್ಷಾದ್‌ವ್ಯಾಪ್ಯಜಾತಿಯಾಗಿದ್ದು ಅಮೂರ್ತಗಗನಾದಿವೃತ್ತಿ ಜಾತಿಯಾಗಿದ್ದು ಮೂರ್ತಾವೃತ್ತಿಯಾದ ಆತ್ಮತ್ವ ಜಾತಿಮತ್ತಾದ ಆತ್ಮನಲ್ಲಿದೆ ಎಂದು ಸಾಧ್ಯವನ್ನು ಕೂಡಿಸಬೇಕು. ಗಗನತ್ವಾದಿಗಳು ಮೂರ್ತ ಅವೃತ್ತಿಯಾದರೂ ಜಾತಿಯಲ್ಲದ್ದರಿಂದ ಅವುಗಳನ್ನಿಟ್ಟು ಕೊಂಡು ಸಾಧ್ಯಪರ್ಯವಸಾನ ಶಕ್ಯವಿಲ್ಲ. ಆತ್ಮತ್ವವು ಜಾತಿ ಎಂದು ಸಿದ್ಧವಾಗಿಲ್ಲದಿದ್ದರೂ ಈ ಅನುಮಾನದಿಂದಲೇ ಜಾತಿ ಎಂದು ಸಿದ್ಧವಾಗುತ್ತದೆ.

'ದ್ರವ್ಯತ್ವವು ಆತ್ಮವೃತ್ತಿ ಜಾತಿಗೆ ವ್ಯಾಪಕ, ಆತ್ಮಅನಾತ್ಮವೃತ್ತಿಜಾತಿಯಾದ್ದರಿಂದ' ಸತ್ತಾದಂತೆ ಎಂದು ಅನುಮಾನ. ಇಲ್ಲಿ ಸತ್ತಾ ಆತ್ಮಅನಾತ್ಮವೃತ್ತಿಜಾತಿಯಾಗಿದೆ, ಆತ್ಮವೃತ್ತಿ ದ್ರವ್ಯತ್ವಜಾತಿಗೆ ವ್ಯಾಪಕವಾಗಿದೆ. ಹಾಗೇ ದ್ರವ್ಯತ್ವವು ಆತ್ಮಅನಾತ್ಮವೃತ್ತಿಜಾತಿಯಾದ್ದರಿಂದ ಆತ್ಮವೃತ್ತಿ ಆತ್ಮತ್ವಜಾತಿಗೆ ವ್ಯಾಪಕವಾಗಿದೆ ಎಂದು ಸಾಧ್ಯಪರ್ಯವಸಾನ ಮಾಡಬೇಕು. ಹೀಗೆ ಆತ್ಮತ್ವ ಜಾತಿ ಸಿದ್ಧಿಯಾಗುತ್ತದೆ. ಮೂಲದಲ್ಲಿ ಹೇಳಿದ ಅನುಮಾನಗಳು ಈ ರೀತಿಯ ಬೇರೆ ಅನುಮಾನಗಳಿಗೂ ಉಪಲಕ್ಷಣ.

**ಮನಃಪಕ್ಷಕಾನುಮಾನ**

**सर्वाणि मनांसि स्पर्शानधिकरणद्रव्यत्वसाक्षाद्व्याप्यजातिमद्व्यतिरिक्तानि द्रव्यत्वात्, सत्ताधिकरणत्वात् प्रमेयत्वाद्वा पृथिवीवत् । दिग्भेदवादिनां तु सर्वत्र दिक्त्वानधिकरणत्वग्रहणं कार्यम् ।**

**ಎಲ್ಲ ಮನಸುಗಳು ಸ್ಪರ್ಶಾನಧಿಕರಣವಾದ ದ್ರವ್ಯತ್ವಸಾಕ್ಷಾದ್‌ವ್ಯಾಪ್ಯಜಾತಿಮತ್ತಾದ ವಸ್ತುಗಳಿಗಿಂತ ವ್ಯತಿರಿಕ್ತವಾಗಿವೆ. ದ್ರವ್ಯತ್ವ, ಸತ್ತಾಧಿಕರಣತ್ವ ಅಥವಾ ಪ್ರಮೇಯತ್ವ ವಿರುವುದರಿಂದ, ಪೃಥಿವಿಯಂತೆ. ದಿಗ್‌ಭೇದವಾದಿ ಮತದಲ್ಲಿ ಈ ಅನುಮಾನದಲ್ಲಿ ದಿಕ್ತ್ವಅನಧಿಕರಣತ್ವವನ್ನು ನಿವೇಶ ಮಾಡಬೇಕು.**

**सर्वाणि मनांसीति ।** दृष्टान्ते मनस्त्वजातिमद्व्यतिरिक्तत्वेन पक्षे चात्मत्वजातिमद्व्यतिरिक्तत्वेन साध्यपर्यवसानं बोध्यम् ।

अत्र यत्किञ्चिन्मनसः पक्षत्वे मनोऽन्तरव्यतिरिक्तत्वमादाय सिद्धसाधनात् सर्वाणीत्युक्तमिति केचित् । तच्चिन्त्यम् । सर्वेषामपि मनसां चालिनीन्यायेन तादृशजातिमन्मनःप्रतियोगिकभेदवत्त्वेन सर्वपदोपादानेऽपि सिद्धसाधनानुद्धारात् । तादृशजात्यवच्छिन्नप्रतियोगिताकभेदवत्त्वस्य साध्यार्थत्वे च सर्वपदवैयर्थ्यात् ।

न च तादृशजातिमत्प्रतियोगिकयत्किञ्चिदेकभेदस्य साध्यत्वान्न दोषः । एकमनोभेदस्य सर्वमनस्स्वभावादिति वाच्यम् । तादृशभेद-

**प्रतियोगिन्यनैकान्त्यात् । साध्ये साक्षात्पदवैयर्थ्यप्रसङ्गाच्च । मनस्त्वावान्तरजातिमत्प्रतियोगिकैकभेदस्य सर्वमनस्स्वभावादेव सिद्ध-साधनानवकाशात् ।**

ದೃಷ್ಟಾಂತವಾದ ಪೃಥಿವಿಯಲ್ಲಿ ದ್ರವ್ಯತ್ವ-ಸತ್ತಾಧಿಕರಣತ್ವ-ಪ್ರಮೇಯತ್ವಗಳಿವೆ. ಮತ್ತು ಸ್ಪರ್ಶಾನಧಿಕರಣವಾದ ದ್ರವ್ಯತ್ವಸಾಕ್ಷಾದ್‌ವ್ಯಾಪ್ಯ ಮನಸ್ತ್ವಜಾತಿಮತ್ತಾದ ಮನಸಿಗಿಂತ ವ್ಯತಿರಿಕ್ತ ವಾಗಿದೆ, ಪೃಥಿವಿ. ಪಕ್ಷವಾದ ಮನಸುಗಳಲ್ಲಿ ಸ್ಪರ್ಶಾನಧಿಕರಣವಾದ ದ್ರವ್ಯತ್ವಸಾಕ್ಷಾದ್ ವ್ಯಾಪ್ಯ ಆತ್ಮತ್ವಜಾತಿಮತ್ತಾದ ಆತ್ಮನಿಗಿಂತ ವ್ಯತಿರಿಕ್ತತ್ವವನ್ನಿಟ್ಟುಕೊಂಡೇ ಸಾಧ್ಯ ಪರ್ಯವಸಾನ ಮಾಡಬೇಕು. ಅದರಿಂದ ಆತ್ಮತ್ವಜಾತಿಸಿದ್ಧಿ.

ಇಲ್ಲಿ ಯಾವುದಾದರೊಂದು ಮನಸ್ಸನ್ನು ಪಕ್ಷಮಾಡಿದರೆ ಇನ್ನೊಂದು ಮನಸಿಗಿಂತ ಅದು ವ್ಯತಿರಿಕ್ತವೆಂದು ಸಾಧ್ಯಪರ್ಯವಸಾನ ಸುಲಭವಾದ್ದರಿಂದ ಸಿದ್ಧಸಾಧನ. ಅದಕ್ಕೆ ಎಲ್ಲ ಮನಸು ಗಳನ್ನು ಪಕ್ಷಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಎಲ್ಲ ಮನಸುಗಳನ್ನು ಪಕ್ಷಮಾಡಿದರೂ, ಜಲ್ಲಡೆಯಲ್ಲಿ ಒಂದೇ ತೂತಿನಲ್ಲಿ ಎಲ್ಲ ಕಸ ಒಟ್ಟಿಗೆ ಬೀಳುವುದಿಲ್ಲ. ಒಂದೊಂದು ರಂಧ್ರದಲ್ಲಿ ಒಂದೊಂದರಂತೆ ಎಲ್ಲ ಕಸಗಳೂ ಬೀಳುತ್ತವೆ, ಹೇಗೋ ಹಾಗೆ ಎಲ್ಲ ಮನಸುಗಳಲ್ಲಿ ಎಲ್ಲ ಮನೋಭೇದಗಳು ಒಟ್ಟಿಗೆ ಬಾರದಿದ್ದರೂ ಪ್ರತಿಯೊಂದು ಮನಸ್ಸಿನಲ್ಲಿಯೂ ಇತರ ಮನೋಭೇದ ಗಳು ಪ್ರತ್ಯೇಕವಾಗಿ ಬರುತ್ತವೆ. ಅದರಿಂದ ಎಲ್ಲ ಮನಸುಗಳನ್ನು ಪಕ್ಷಮಾಡಿದರೂ ಸಿದ್ಧಸಾಧನ ದೋಷ ಪರಿಹಾರವಾಗುವುದಿಲ್ಲ.

'ಜಾತ್ಯವಚ್ಛಿನ್ನ ಭೇದವನ್ನು ಸಾಧ್ಯ ಮಾಡುತ್ತೇವೆ, ಕೇವಲ ಜಾತಿಮತ್‌ಪ್ರತಿಯೋಗಿಕ ಭೇದವನ್ನಲ್ಲ. ಮನಸ್ತ್ವ ಜಾತ್ಯವಚ್ಛಿನ್ನ ಭೇದವು ಯಾವ ಮನಸಿನಲ್ಲಿಯೂ ಬಾರದಿರುವುದರಿಂದ ಆತ್ಮತ್ವಜಾತ್ಯವಚ್ಛಿನ್ನಾತ್ಮಭೇದವನ್ನೇ ಎಲ್ಲ ಮನಸುಗಳಲ್ಲಿ ಕೂಡಿಸಿಕೊಳ್ಳಬೇಕಾಗುವುದರಿಂದ ಸಿದ್ಧಸಾಧನ ದೋಷವಿಲ್ಲ' ಎನ್ನುವುದಾದರೆ ಎಲ್ಲ ಮನಸುಗಳನ್ನು ಏಕೆ ಪಕ್ಷ ಮಾಡಬೇಕು? ಒಂದು ಮನಸಿನಲ್ಲಿ ಆತ್ಮತ್ವ ಜಾತ್ಯವಚ್ಛಿನ್ನ ಭೇದ ಸಿದ್ಧವಾದರೂ ಆತ್ಮತ್ವಜಾತಿ ಸಿದ್ಧಿಯಾಗುವುದರಿಂದ ಸರ್ವಾಣಿ ಮನಾಂಸಿ' ಎಂದು ಸರ್ವಪದ ವ್ಯರ್ಥ.

'ಜಾತಿಮತ್ ಪ್ರತಿಯೋಗಿಕ ಯತ್ಕಿಂಚಿದ್ ಏಕಭೇದವನ್ನು ಸಾಧ್ಯ ಮಾಡುತ್ತೇವೆ. ಎಲ್ಲ ಮನಸುಗಳನ್ನು ಪಕ್ಷಮಾಡುತ್ತೇವೆ. ಈಗ ಯಾವ ಮನೋಭೇದವೂ ಕೂಡ ಅದರ ಪ್ರತಿಯೋಗಿಯಲ್ಲಿ ಬಾರದಿರುವುದರಿಂದ ಎಲ್ಲ ಮನಸುಗಳಲ್ಲಿ ಒಂದು ಮನೋಭೇದವನ್ನು ಪರ್ಯವಸಾನ ಮಾಡಲಾಗುವುದಿಲ್ಲ. ಸಿದ್ಧಸಾಧನ ದೋಷವಿಲ್ಲ. ಆತ್ಮತ್ವಜಾತಿಮತ್ತಾದ ಆತ್ಮನ ಒಂದು ಭೇದವನ್ನೇ ಎಲ್ಲ ಮನಸುಗಳಲ್ಲಿ ಹೇಳಬೇಕಾಗುವುದರಿಂದ ಆತ್ಮತ್ವಜಾತಿಸಿದ್ಧಿ' ಎಂದೂ ಹೇಳಬಾರದು. ಏಕೆಂದರೆ ಒಂದು ಮನೋಭೇದ ಬೇರೆ ಎಲ್ಲ ಮನಸುಗಳಲ್ಲಿ ಇದ್ದರೂ

ಪ್ರತಿಯೋಗಿಯಾದ ಮನಸಿನಲ್ಲಿ ಇರುವುದಿಲ್ಲವಾದ್ದರಿಂದ ಆ ಮನಸಿನಲ್ಲಿ ಹೇತುವಿದೆ, ಸಾಧ್ಯವಿಲ್ಲ ಎಂದು ವ್ಯಭಿಚಾರ ಬರುತ್ತದೆ. ಮತ್ತು ದ್ರವ್ಯತ್ವಸಾಕ್ಷಾದ್ ವ್ಯಾಪ್ಯ ಜಾತಿ ಎಂದು ಸಾಕ್ಷಾತ್ ಪದವೂ ವ್ಯರ್ಥವಾಗುತ್ತದೆ. ಸಾಕ್ಷಾತ್ ಪದ ಮನಸ್ತ್ವಾವಾಂತರ ಚಿತ್ತತ್ವಾದಿ ಜಾತಿ ವ್ಯಾವೃತ್ತಿಗಾಗಿ ಇದೆ. ಈ ಅವಾಂತರ ಜಾತಿ ಮತ್ ಪ್ರತಿಯೋಗಿಕ ಒಂದೊಂದು ಭೇದವನ್ನು ತೆಗೆದುಕೊಂಡರೂ ಅದು ಎಲ್ಲ ಮನಸುಗಳಲ್ಲಿಲ್ಲ, ಪ್ರತಿಯೋಗಿಯಲ್ಲಿಯೇ ಇಲ್ಲ, ಸಿದ್ಧಸಾಧನ ದೋಷವಿಲ್ಲವೆನ್ನಲು ಬರುತ್ತದೆ ತಾನೆ?

यत्तु द्रव्यत्वव्याप्यद्रव्यत्ववद्गगनादिभेदमादाय सिद्धसाधनवारणाय साक्षात्पदम् । द्रव्यत्वस्य च द्रव्यत्वव्याप्याव्याप्यत्वाभावान्न दोष इति । तन्न । द्रव्यत्वसाधारणद्रव्यत्वव्याप्यत्वविवक्षायां द्रव्यत्वव्याप्याव्याप्यत्वे सति द्रव्यत्वव्याप्यजात्यप्रसिद्ध्या साध्याप्रसिद्धेः ।

यदप्यात्मत्वस्य द्रव्यत्वसाक्षाद्व्याप्यत्वसिद्ध्यर्थं साक्षात्पदमिति । तदपि न । तत्सिद्धेः प्रकृतानुपयुक्तत्वात् ।

तस्मात्तादृशजात्यवच्छिन्नप्रतियोगिताकभेद एव साध्यः । सर्वपदं त्ववच्छेदकावच्छेदेन साधनस्यापि साधुत्वज्ञापनार्थम् ।

ಕೆಲವರು ಹೇಳುತ್ತಾರೆ— 'ದ್ರವ್ಯತ್ವವ್ಯಾಪ್ಯವು ದ್ರವ್ಯತ್ವವೇ ಆಗುತ್ತದೆ. ಇಂಥ ದ್ರವ್ಯತ್ವ ಜಾತಿಮದ್ ಗಗನಾದಿ ಭೇದವನ್ನಿಟ್ಟುಕೊಂಡು ಸಿದ್ಧಸಾಧನ ದೋಷವನ್ನು ಹೇಳಲು ಅವಕಾಶವಿದೆ. ಅದಕ್ಕೆ ಸಾಕ್ಷಾತ್ ಪದವನ್ನು ನಿವೇಶಮಾಡಿ, ದ್ರವ್ಯತ್ವ ಸಾಕ್ಷಾತ್ ವ್ಯಾಪ್ಯತ್ವವನ್ನು ಹೇಳಬೇಕು. ಆಗ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯತ್ವವೆಂದರೆ ದ್ರವ್ಯತ್ವ ವ್ಯಾಪ್ಯಾವ್ಯಾಪ್ಯತ್ವ. ಇದು ದ್ರವ್ಯತ್ವದಲ್ಲಿ ಬರುವುದಿಲ್ಲ. ದ್ರವ್ಯತ್ವವು ದ್ರವ್ಯತ್ವವ್ಯಾಪ್ಯವಾದ ದ್ರವ್ಯತ್ವಕ್ಕೆ ವ್ಯಾಪ್ಯವೇ ಆಗಿದೆ, ಅವ್ಯಾಪ್ಯವಲ್ಲ. ಹೀಗಾಗಿ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿ ಎಂದು ದ್ರವ್ಯತ್ವವಿಟ್ಟುಕೊಂಡು ಜಾತಿಮತ್ತಾದ ಗಗನಾದಿ ಭೇದವನ್ನು ಮನಸಿನಲ್ಲಿ ಹೇಳಿ ಸಿದ್ಧಸಾಧನತ್ವ ದೋಷವನ್ನು ಹೇಳಲಾಗುವುದಿಲ್ಲ' ಎಂದು. ಇದೂ ಸರಿಯಲ್ಲ. ದ್ರವ್ಯತ್ವವು ದ್ರವ್ಯತ್ವಾಭಾವವದವೃತ್ತಿ, ದ್ರವ್ಯತ್ವವ್ಯಾಪ್ಯ ಎಂದಿಟ್ಟುಕೊಂಡರೆ ದ್ರವ್ಯತ್ವಸಾಕ್ಷಾದ್ ವ್ಯಾಪ್ಯ ಜಾತಿ ಒಂದೂ ಸಿಗಲಾರದು. ಪೃಥಿವೀತ್ವಾದಿ ಜಾತಿ ಎಲ್ಲವೂ ದ್ರವ್ಯತ್ವವ್ಯಾಪ್ಯದ್ರವ್ಯತ್ವಕ್ಕೆ ವ್ಯಾಪ್ಯವೇ ಆಗಿವೆ. ದ್ರವ್ಯತ್ವಕ್ಕೆ ಅವ್ಯಾಪ್ಯವಾಗಿದ್ದು ದ್ರವ್ಯತ್ವ ವ್ಯಾಪ್ಯವಾಗಬೇಕೆಂದರೆ ಇದು ವಿರುದ್ಧ. ಅದರಿಂದ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿ ಅಪ್ರಸಿದ್ಧವಾಗುವುದರಿಂದ ಸಾಧ್ಯಾಪ್ರಸಿದ್ಧಿ.

ಇನ್ನು ಕೆಲವರು ಹೇಳುತ್ತಾರೆ. ಆತ್ಮತ್ವವು ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯವಾದ ಜಾತಿ ಎಂದು ಸಿದ್ಧವಾಗಲಿ ಎಂಬ ಉದ್ದೇಶದಿಂದ ಸಾಕ್ಷಾತ್‌ಪದ ನಿವೇಶ ಮಾಡಿದ್ದೇವೆ ಎಂದು. ಆದರೆ ಆತ್ಮತ್ವಜಾತಿಸಿದ್ಧಿ ಆತ್ಮಭೇದ ಸಾಧನೆಗೆ ಬೇಕಾಗಿರುವುದರಿಂಗ ಅದು ಪ್ರಕೃತಕ್ಕೆ ಉಪಯೋಗಿಯಾಗಿದೆ. ಆದರೆ ಆ ಜಾತಿಯನ್ನು ಆ ದ್ರವ್ಯತ್ವಕ್ಕೆ ಸಾಕ್ಷಾದ್ ವ್ಯಾಪ್ಯವೆಂದು ಸಾಧನೆ ಮಾಡಿದ್ದರಿಂದ ಪ್ರಕೃತಕ್ಕೆ ಏನೂ ಉಪಯೋಗವಿಲ್ಲ.

ಆದರಿಂದ 'ಸರ್ವಾಣಿ ಮನಾಂಸಿ' ಎಂದು ಸರ್ವಪದದ ಉದ್ದೇಶವನ್ನು ಹೀಗೆ ಹೇಳಬೇಕು– ಇಲ್ಲಿ ಜಾತ್ಯವಚ್ಛಿನ್ನಪ್ರತಿಯೋಗಿತಾಕ ಭೇದವೇ ಸಾಧ್ಯ. ಇದನ್ನು ಪಕ್ಷತಾವಚ್ಛೇದಕ ಮನಸ್ತ್ವ ಸಾಮಾನಾಧಿಕರಣ್ಯೇನ, ಅಂದರೆ ಯಾವುದಾದರೂ ಒಂದು ಮನಸಿನಲ್ಲಿ ಸಾಧನೆ ಮಾಡಿದರೂ ಆತ್ಮತ್ವ ಜಾತಿಸಿದ್ಧಿಯಾಗುತ್ತದೆ. ಆದರೂ ಮನಸ್ತ್ವರೂಪ ಪಕ್ಷತಾವಚ್ಛೇದಕಾವಚ್ಛೇದೇನ ಅಂದರೆ ಎಲ್ಲ ಮನಸುಗಳಲ್ಲಿ ಸಾಧ್ಯಸಾಧನೆ ಮಾಡಿದರೂ ದೋಷವಿಲ್ಲ ಎಂದು ತಿಳಿಸುವುದಕ್ಕಾಗಿ ಸರ್ವಪದ ನಿವೇಶ ಮಾಡಿದ್ದಾರೆ' ಎಂದು.

**पृथिव्यादिव्यतिरिक्तत्वमादाय सिद्धसाधनवारणाय स्पर्शानधिकरणेति । जातिगुणादिव्यतिरिक्तत्वेन सिद्धार्थतानिरासाय द्रव्यत्वव्याप्यजातिमदिति ।**

**मनस्त्वावान्तरचित्तत्वादिजातिमद्व्यतिरिक्तत्वमादाय तद्दोषभङ्गाय साक्षात्पदम् । एतत्सूचनार्थं सर्वाणि मनांसीत्युक्तम् । चित्तादिभेदेन नानाजातीयानीत्यर्थः । तेन 'मनस्त्वावान्तरजातेरप्रामाणिकत्वात् साक्षात्पदवैयर्थ्यमि'ति शङ्कानवकाशः ।**

'ಸ್ಪರ್ಶಾನಧಿಕರಣವಾದ ದ್ರವ್ಯತ್ವಸಾಕ್ಷಾದ್‌ವ್ಯಾಪ್ತಜಾತಿಮತ್ತಾದ ವಸ್ತುಗಳಿಗಿಂತ ವ್ಯತಿರಿಕ್ತವಾಗಿದೆ' ಎಂದು ಸಾಧ್ಯದಲ್ಲಿ ಸ್ಪರ್ಶಾನಧಿಕರಣತ್ವ ವಿಶೇಷಣವಿಲ್ಲದಿದ್ದರೆ ಪೃಥಿವ್ಯಾದಿ ವ್ಯತಿರಿಕ್ತತ್ವವನ್ನಿಟ್ಟುಕೊಂಡು ಸಿದ್ಧಸಾಧನತ್ವದೋಷ ಬಂದೀತು. ಪೃಥಿವ್ಯಾದಿಗಳನ್ನು ಸ್ಪರ್ಶಾನಧಿಕರಣ ಪದದಿಂದ ವ್ಯಾವೃತ್ತಿ ಮಾಡಬೇಕು. ಸ್ಪರ್ಶಾನಧಿಕರಣವಸ್ತು ಜಾತಿ ಗುಣಾದಿಗಳೂ ಆಗುವುದರಿಂದ ಅವುಗಳ ಭೇದವನ್ನು ಮನಸಿನಲ್ಲಿ ಇಟ್ಟುಕೊಂಡು ಸಿದ್ಧಸಾಧನದೋಷ ಹೇಳಬಾರದೆಂದು ದ್ರವ್ಯತ್ವ ವ್ಯಾಪ್ಯ ಜಾತಿಮತ್ ಎಂದು ವಿವಕ್ಷೆ ಮಾಡಿದ್ದಾರೆ. ಜಾತಿಗುಣಾದಿಗಳು ದ್ರವ್ಯತ್ವವ್ಯಾಪ್ಯ ಜಾತಿಮತ್ತಲ್ಲವಾದ್ದರಿಂದ ದ್ರವ್ಯತ್ವವ್ಯಾಪ್ಯವಾದ ಆತ್ಮತ್ವಜಾತಿಮದ್ಭೇದವನ್ನೇ ಮನಸ್ಸಿನಲ್ಲಿ ಹೇಳಬೇಕು.

ಮನಸ್ತ್ವಾವಾಂತರ ಚಿತ್ತತ್ವಾದಿ ಜಾತಿಮದ್ ವ್ಯತಿರಿಕ್ತತ್ವವನ್ನಿಟ್ಟುಕೊಂಡು ಬುದ್ಧಿಯಲ್ಲಿ ಚಿತ್ತಭೇದ, ಚಿತ್ತದಲ್ಲಿ ಬುದ್ಧಿಭೇದ ಎಂದು ಮುಂತಾಗಿ ಹೇಳಿ ಸಿದ್ಧಸಾಧನದೋಷವನ್ನಬಾರದೆಂದು ದ್ರವ್ಯತ್ವಸಾಕ್ಷಾದ್‌ವ್ಯಾಪ್ಯಜಾತಿ ಎಂದಿದ್ದಾರೆ, ಚಿತ್ತತ್ವಾದಿಗಳು ದ್ರವ್ಯತ್ವವ್ಯಾಪ್ಯ ಮನಸ್ತ್ವವ್ಯಾಪ್ಯ ವಾಗಿವೆ, ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯವಲ್ಲ. ಮನಸ್ತ್ವವು ಸಾಕ್ಷಾದ್ ವ್ಯಾಪ್ಯವಾದರೂ ಮನಸ್ತ್ವಾವಚ್ಛಿನ್ನ ಭೇದವು ಮನಸಿನಲ್ಲಿ ಬರುವುದಿಲ್ಲವಾದ್ದರಿಂದ ಸಿದ್ಧಸಾಧನತ್ವವಿಲ್ಲ. 'ಸರ್ವಾಣಿ ಮನಾಂಸಿ' ಎಂದು ಸರ್ವಪದವು ಇದನ್ನೂ ಸೂಚಿಸುತ್ತದೆ. ಏಕೆಂದರೆ 'ಸರ್ವಾಣಿ' ಎಂದರೆ ಚಿತ್ತ ಬುದ್ಧಿ ಅಹಂಕಾರ ಎಂದು ಮುಂತಾಗಿ ನಾನಾ ಜಾತಿಯ ಮನಸುಗಳನ್ನು ಎಲ್ಲವನ್ನೂ ಪಕ್ಷಮಾಡಿದ್ದೇವೆ ಎಂದು ಅಭಿಪ್ರಾಯ. ಇದರಿಂದ 'ಮನಸುಗಳಲ್ಲಿ ಚಿತ್ತತ್ವಾದಿ ಮನಸ್ತ್ವಾವಾಂತರ ಜಾತಿ ಅಪ್ರಾಮಾಣಿಕವಾದ್ದರಿಂದ, ಬುದ್ಧ್ಯಾದಿಗಳಲ್ಲಿ ಚಿತ್ತಾದಿಭೇದಗಳನ್ನು ದ್ರವ್ಯತ್ವವ್ಯಾಪ್ಯ ಜಾತ್ಯವಚ್ಛಿನ್ನಭೇದಗಳೆಂದು ಇಟ್ಟುಕೊಂಡು ಸಿದ್ಧಸಾಧನದೋಷವನ್ನಾಶಂಕಿಸಿ ಅದರ ಪರಿಹಾರಕ್ಕಾಗಿ ಸಾಕ್ಷಾತ್ ಪದವನ್ನೂ ಹಾಕುವುದು ವ್ಯರ್ಥ' ಎಂದು ಯಾರೂ ಆಕ್ಷೇಪ ಮಾಡುವಂತಿಲ್ಲ.

**यद्यप्यत्राऽत्मपृथिव्यादिसाधारणजात्यन्तरसिद्ध्याऽर्थान्तरसम्भवः । तथापि स्पर्शानधिकरणेत्यनेन स्पर्शासमानाधिकरणत्वस्य जातौ विवक्षितत्वान्न दोषः । पृथिवीत्वादिकं द्रव्यत्वसाक्षाद्व्याप्यं, द्रव्यविभाजकजातित्वात् मनस्त्ववदित्यनुमानविरोधेन तादृशजात्यन्तरासिद्धेश्च।**

**आत्माकाशादिमात्रसाधारणजात्यन्तरसिद्धिस्तु प्रागेव दूषितेति ।**

**नन्वेवमपि स्वाभाविकदिग्भेदवादिनां मते दिक्त्वजातिमद्व्यतिरिक्तत्वमादाय सिद्धसाधनमत आह —दिग्भेदवादिनामिति । अत्र द्रव्यपक्षकानुमाने ।**

**उपलक्षणमेतत् । द्रव्यत्वादिपक्षकोक्तानुमानेष्वपि दिक्त्वेतरत्वग्रहणं कार्यम् ।**

ಯದ್ಯಪಿ ಇಲ್ಲಿ ಆತ್ಮತ್ವಜಾತಿಯೇ ಸಿದ್ಧವಾಗಬೇಕಾಗಿಲ್ಲ. ಆತ್ಮಪೃಥಿವ್ಯಾದಿ ಸಾಧಾರಣವಾದ ಬೇರೆ ಜಾತಿಯೂ ಸಿದ್ಧವಾಗಬಹುದು, ಆದರಿಂದ ಅರ್ಥಾಂತರ ದೋಷ ಸಂಭವವಿದೆ. ಆದರೂ 'ಸ್ಪರ್ಶಾನಧಿಕರಣವಾದ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿಮತ್ತಾದ ವಸ್ತು' ಎಂದು ಸ್ಪರ್ಶಾನಧಿ ಕರಣತ್ವವು ಜಾತಿಮತ್ತಿನಲ್ಲಿ ಹೇಳಿದಂತಾಗಿದ್ದರೂ ಅದಕ್ಕೆ ಜಾತಿಯಲ್ಲಿಯೇ ಸ್ಪರ್ಶಾಸಮಾನಾಧಿಕರಣತ್ವ

ವಿಶೇಷಣವನ್ನು ಹೇಳುವ ಅಭಿಪ್ರಾಯವಿದೆ. ಆದರಿಂದ ಆತ್ಮಪೃಥಿವ್ಯಾದಿ ಸಾಧಾರಣವಾದ ಒಂದು ಜಾತಿ ಸಿದ್ಧವಾಗಲಾರದು. ಏಕೆಂದರೆ ಆ ಜಾತಿಯು ಪೃಥಿವ್ಯಾದಿಗಳಲ್ಲಿಯೂ ಇರುವುದರಿಂದ ಸ್ಪರ್ಶಸಮಾನಾಧಿಕರಣವಾಗಿರುತ್ತದೆ. ಅಸಮಾನಾಧಿಕಗಣವಾಗಿರುವುದಿಲ್ಲ. ಮತ್ತು ಪೃಥಿವೀತ್ವಾದಿಗಳು ದ್ರವ್ಯತ್ವಸಾಕ್ಷಾದ್ ವ್ಯಾಪ್ಯವಾಗಿವೆ, ದ್ರವ್ಯವಿಭಾಜಕ ಜಾತಿಗಳಾದ್ದರಿಂದ, ಮನಸ್ತ್ವದಂತೆ, ಎಂಬ ಅನುಮಾನ ವಿರೋಧವೂ ಬರುತ್ತದೆ. ಆತ್ಮಪೃಥಿವೀಸಾಧಾರಣ ಜಾತಿಯನ್ನು ದ್ರವ್ಯತ್ವ ಸಾಕ್ಷಾದ್‌ವ್ಯಾಪ್ಯವೆಂದು ಅಂಗೀಕರಿಸಿದರೆ ಆ ಜಾತಿಯೇ ದ್ರವ್ಯವಿಭಾಜಕವಾಗಬೇಕಾಗುವುದು.

ಆತ್ಮ ಆಕಾಶ ಕಾಲ ದಿಕ್ಕುಗಳಲ್ಲಿ ಮಾತ್ರ ಇರುವ ವಿಭುತ್ವಾದಿ ಜಾತಿಯು ಬೇರೆ ಸಿದ್ಧವಾಗಲಿ ಎನ್ನುವುದನ್ನು ನಾವು ಹಿಂದೆಯೇ ನಿರಾಕರಿಸಿದ್ದೇವೆ— 'ದ್ರವ್ಯತ್ವ ವ್ಯಾಪ್ಯಜಾತಿ ಯಾವುದೂ ಆಕಾಶ ಮುಂತಾದ ವಿಭುಪದಾರ್ಥಗಳಲ್ಲಿ ಇರಲಾರದು. ಏಕೆಂದರೆ ಸತ್ತಾಜಾತಿ ದ್ರವ್ಯತ್ವಜಾತಿಗಳಿಗಿಂತ ಹೊರತಾಗಿ ಬೇರಾವ ಜಾತಿಯೂ ವಿಭುಪದಾರ್ಥದಲ್ಲಿಲ್ಲ, ಉದಾಹರಣೆಗೆ ಪೃಥಿವೀತ್ವ. ಇದು ವಿಭು ಪದಾರ್ಥದಲ್ಲಿಲ್ಲ' ಎಂದು.

ಸ್ವಾಭಾವಿಕವಾಗಿ ದಿಕ್ಕುಗಳು ಅನೇಕ ಇವೆ. ಅವುಗಳಲ್ಲಿ ದಿಕ್ತ್ವಜಾತಿ ಇದೆ ಎನ್ನುವ ಮತದಲ್ಲಿ ದಿಕ್ತ್ವಜಾತಿಮದ್ವ್ಯತಿರಿಕ್ತತ್ವವನ್ನಿಟ್ಟುಕೊಂಡು ಸಿದ್ಧಸಾಧನದೋಷವನ್ನು ಹೇಳಬಹುದು. ಅದಕ್ಕೆ ಸ್ಪರ್ಶಾನಧಿಕರಣತ್ವದೊಂದಿಗೆ ದಿಕ್ತ್ವಾನಧಿಕರಣತ್ವ ವಿಶೇಷಣವನ್ನು ನಿವೇಶ ಮಾಡಬೇಕು, 'ಸರ್ವಾಣಿ ಮನಾಂಸಿ' 'ಸರ್ವಾಪೃಥಿವೀ' ಎಂದು ಮುಂತಾದ ದ್ರವ್ಯಪಕ್ಷಕ ಅನುಮಾನಗಳಲ್ಲಿ.

ಇದು ಉಪಲಕ್ಷಣ. ದ್ರವ್ಯತ್ವಾದಿ ಜಾತಿ ಪಕ್ಷಕ ಅನುಮಾನಗಳಲ್ಲಿಯೂ 'ದ್ರವ್ಯತ್ವಂ ಪೃಥಿವೀತ್ವ ಜಲತ್ವ ತೇಜಸ್ತ್ವ ವಾಯುತ್ವ ಮನಸ್ತ್ವೇತರ ಜಾತಿಂ ಪ್ರತಿ ಸಾಕ್ಷಾದ್ ವ್ಯಾಪಕಂ' ಎಂದು ಮುಂತಾದ ಕಡೆ 'ದಿಕ್ತ್ವೇತರಜಾತಿಂ ಪ್ರತಿ' ಎಂದು ವಿಶೇಷಣ ನೀಡಬೇಕು, ಎಂದು ಉಪಲಕ್ಷಣವಾಗಿಟ್ಟು ಕೊಳ್ಳಬೇಕು.

ಇಲ್ಲಿ ಮೂಲದಲ್ಲಿ 'ದಿಗ್ಭೇದವಾದಿನಾಂ ತು ಸರ್ವತ್ರ' ಎಂದು ಕಾಶಿಕಾಕಾರರ ಪಾಠವಲ್ಲ. 'ದಿಗ್ಭೇದವಾದಿನಾಂ ತ್ವತ್ರ' ಎಂದು ಪಾಠ. 'ಅತ್ರ=ದ್ರವ್ಯಪಕ್ಷಕಾನುಮಾನೇ । ಉಪಲಕ್ಷಣಮೇತತ್ ।' ಎಂದು ವ್ಯಾಖ್ಯಾನ ಮಾಡುತ್ತಾರೆ. 'ಸರ್ವಾ ಪೃಥಿವೀ' ಎಂಬಲ್ಲಿಯೂ ಕಾಶಿಕಾಕಾರರ ಪಾಠದಲ್ಲಿ 'ಜಲತೇಜೋವಾಯು ಮನಸ್ತ್ವಾನಧಿಕರಣ' ಎಂದು ಮೂಲ. 'ಜಲತೇಜೋವಾಯುಮನಾಂಸಿ' ಎಂದು ದ್ವಂದ್ವ ಮಾಡಿ ತ್ವಪ್ರತ್ಯಯ ಸೇರಿಸಿದ್ದಾರೆ. ದ್ವಂದ್ವಾಂತೇ ಶ್ರೂಯಮಾಣವಾದ ಈ ತ್ವಪ್ರತ್ಯಯವನ್ನು ಪ್ರತ್ಯೇಕಪದಗಳಿಗೆ ಸೇರಿಸಿಕೊಳ್ಳಬೇಕು. 'ಜಲತೇಜೋವಾಯುಮನಸಾಂ ತ್ವಪ್ರತ್ಯಯೇನಾನ್ವಯಃ' ಎಂದು ವ್ಯಾಖ್ಯಾನ ಮಾಡಿದ್ದಾರೆ.

**ಪೃಥಿವ್ಯಾದಿಪಕ್ಷಕಾನುಮಾನಗಳು**

**सर्वा पृथिवी जलतेजोवायुमनस्त्वानधिकरणद्रव्यत्वसाक्षा-**

**द्व्याप्यजातिमद्व्यतिरिक्ता द्रव्यत्वात्, सत्ताधिकरणत्वाद्वा जलवत् । सत्ता द्रव्यत्वान्यात्मनिष्ठजात्यन्या जातित्वात्, प्रमेयत्वाद्वा घटत्ववत् । द्रव्यत्वं वा सत्तान्यात्मनिष्ठ-जात्यन्यत् जातित्वात् प्रमेयत्वात् घटत्ववत् । आत्माणुत्ववादिनां तु आत्मा द्रव्यत्वव्याप्यजात्यधिकरणम् अविभुद्रव्यत्वात् पृथिवीवदित्याद्यनुमानान्यात्मभेदं साधयन्ति ।**

ಎಲ್ಲ ಪೃಥಿವಿಯು ಜಲತ್ವ ತೇಜಸ್ತ್ವ ವಾಯುತ್ವ ಮನಸ್ತ್ವಾನಧಿಕರಣ ದ್ರವ್ಯತ್ವ ಸಾಕ್ಷಾದ್ ವ್ಯಾಪ್ಯ ಜಾತಿ ಮತ್ತಿಗಿಂತ ವ್ಯತಿರಿಕ್ತವಾಗಿದೆ. ದ್ರವ್ಯತ್ವವಿರುವುದರಿಂದ, ಅಥವಾ ಸತ್ತಾಧಿಕರಣತ್ವವಿರುವುದರಿಂದ, ಜಲದಂತೆ.

ಸತ್ತಾ ಜಾತಿಯು ದ್ರವ್ಯತ್ವಾನ್ಯ ಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ, ಅಥವಾ ಪ್ರಮೇಯವಾದ್ದರಿಂದ, ಘಟತ್ವದಂತೆ.

ದ್ರವ್ಯತ್ವವು ಸತ್ತಾನ್ಯ ಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ, ಪ್ರಮೇಯ ವಾದ್ದರಿಂದ ಘಟತ್ವದಂತೆ.

ಆತ್ಮ ಅಣು ಎನ್ನುವವರ ಮತದಲ್ಲಿ ಆತ್ಮನು ದ್ರವ್ಯತ್ವವ್ಯಾಪ್ಯ ಜಾತ್ಯಧಿಕರಣನಾಗಿದ್ದಾನೆ. ಅವಿಭು ದ್ರವ್ಯನಾದ್ದರಿಂದ, ಪೃಥಿವಿಯಂತೆ, ಇತ್ಯಾದಿ ಅನುಮಾನಗಳು ಆತ್ಮಭೇದ ಸಾಧಕಗಳಾಗಿವೆ.

**सर्वा पृथिवीति** । जलतेजोवायुमनसां त्वप्रत्ययेनान्वयः । अन्यत्पूर्ववत् । अनयैव रीत्या प्रत्येकं जलादिपक्षकानुमानान्यूह्यानि । एवं पृथिव्यादिद्रव्याणि आत्मवृत्तिजातिमद्व्यतिरिक्तानि अनात्मत्वात् गुणादि-वदित्यनुमानं बोध्यम् ।

**सत्तेति** । अत्र दृष्टान्ते सत्तान्यत्वमादाय पक्षे चात्मत्वान्यत्वमादाय साध्यसत्त्वं द्रष्टव्यम् । द्रव्यत्वपृथिवीत्वादिभेदमादाय

**सिद्धसाधनवारणाय द्रव्यत्वान्यत्वात्मनिष्ठत्वयोः जातौ, जातेश्च गुणभेद-मादाय तद्दोषनिरासाय निवेशः ।**

**यद्यप्यात्मत्वसिद्धेः प्रागात्मनिष्ठत्वस्य निवेशासम्भवः । जातिं विना व्यक्तिभानायोगात् । तथापि तद्व्यक्तित्वेनाष्टद्रव्यान्यद्रव्यत्वेन वा तन्निवेशान्न दोषः ।**

'ಸರ್ವಾಪೃಥಿವೀ' ಎಂದು ಪೃಥಿವೀಪಕ್ಷಕ ಅನುಮಾನವನ್ನು ಹೇಳುವಂತೆಯೇ ಸರ್ವಾಣಿ ಜಲಾನಿ ಎಂದು ಮುಂತಾಗಿಯೂ ಪ್ರತ್ಯೇಕವಾಗಿ ಜಲಾದಿಪಕ್ಷಕ ಅನುಮಾನಗಳನ್ನು ಊಹಿಸಿ ಕೊಳ್ಳಬೇಕು. ಹೀಗೆಯೇ 'ಪೃಥಿವಿ ಮುಂತಾದ ದ್ರವ್ಯಗಳು ಆತ್ಮವೃತ್ತಿಜಾತಿಮತ್ತುಗಳಿಗಿಂತ ವ್ಯತಿರಿಕ್ತ ಗಳಾಗಿವೆ. ಅನಾತ್ಮಗಳಾದ್ದರಿಂದ, ಗುಣಾದಿಗಳಂತೆ' ಎಂದೂ ಅನುಮಾನಗಳನ್ನಿಟ್ಟುಕೊಳ್ಳಬೇಕು.

ಸತ್ತಾಜಾತಿಪಕ್ಷಕ ಅನುಮಾನದಲ್ಲಿ ಘಟತ್ವರೂಪ ದೃಷ್ಟಾಂತದಲ್ಲಿ 'ದ್ರವ್ಯತ್ವಾನ್ಯ ಆತ್ಮನಿಷ್ಠಜಾತಿ' ಯೆಂದು ಸತ್ತಾಜಾತಿಯನ್ನಿಟ್ಟುಕೊಂಡು ಅದಕ್ಕಿಂತ ಅನ್ಯವಾಗಿದೆ ಎಂದು ಸಾಧ್ಯವನ್ನು ಕೂಡಿಸಬೇಕು. ಪಕ್ಷವಾದ ಸತ್ತಾಜಾತಿಯಲ್ಲಿ ದ್ರವ್ಯತ್ವಾನ್ಯ ಆತ್ಮನಿಷ್ಠ ಜಾತಿಯು ಆತ್ಮತ್ವವೆ. ತದನ್ಯತ್ವವಿದೆ ಎಂದು ಸಾಧ್ಯವನ್ನು ಕೂಡಿಸಬೇಕು. ಸಾಧ್ಯದಲ್ಲಿ ಜಾತಿಗೆ ದ್ರವ್ಯತ್ವಾನ್ಯತ್ವ ವಿಶೇಷಣ ಕೊಡದಿದ್ದರೆ ದ್ರವ್ಯತ್ವ ಜಾತ್ಯನ್ಯತ್ವವು ಸತ್ತಾಜಾತಿಯಲ್ಲಿ ಇದೆ ಎಂದು ಸಿದ್ಧಸಾಧನ. ಆತ್ಮನಿಷ್ಠತ್ವವಿಶೇಷಣ ಜಾತಿಗೆ ಇಲ್ಲವಾದರೆ ಪೃಥಿವೀತ್ವಾದಿ ಜಾತ್ಯನ್ಯತ್ವವು ಸತ್ತಾಜಾತಿಯಲ್ಲಿ ಇದೆ ಎಂದು ಸಿದ್ಧಸಾಧನ. 'ಜಾತ್ಯನ್ಯ' ಎನ್ನದಿದ್ದರೆ ಗುಣಾನ್ಯತ್ವವು ಸತ್ತಾಜಾತಿಯಲ್ಲಿದೆ ಎಂದು ಸಿದ್ಧಸಾಧನ.

'ಆತ್ಮನಿಷ್ಠ' ಎಂದು ಆತ್ಮನನ್ನು ಆತ್ಮಶಬ್ದದಿಂದ ವಾದಿಯು ಹೇಳುವಾಗ ಪ್ರತಿವಾದಿಗೆ ಆತ್ಮತ್ವಜಾತಿ ಸಿದ್ಧವಾಗಿಲ್ಲದಿರುವುದರಿಂದ ಆತ್ಮತ್ವಜಾತಿರೂಪೇಣ ಆತ್ಮನನ್ನು ಆ ಶಬ್ದದಿಂದ ಆತ ಗ್ರಹಿಸಲಾರ. ಜಾತಿಭಾನವಿಲ್ಲದೆ ವ್ಯಕ್ತಿಭಾನ ಶಬ್ದದಿಂದ ಉಂಟಾಗದಿರುವುದರಿಂದ ಅವನು ವ್ಯಕ್ತಿಯನ್ನು ಹೇಗೆ ತಿಳಿಯುತ್ತಾನೆ? ಅದರಿಂದ ಅವನಿಗೆ ಸಾಧ್ಯಾಪ್ರಸಿದ್ಧಿ. ಅದಕ್ಕೆ ವಾದಿಯು ಸಾಧ್ಯಕೋಟಿಯಲ್ಲಿ ಆತ್ಮನನ್ನು ಆತ್ಮತ್ವಜಾತಿರೂಪೇಣ ನಿವೇಶ ಮಾಡಬಾರದು. ತದ್‌ವ್ಯಕ್ತಿತ್ವೇನ ಅಥವಾ ಅಷ್ಟದ್ರವ್ಯಾತಿರಿಕ್ತದ್ರವ್ಯತ್ವೇನ ನಿವೇಶ ಮಾಡಬೇಕು.

**न चैवमप्यात्मपृथिव्युभयानुगतजात्यन्तरसिद्ध्याऽर्थान्तरमिति वाच्यम् । तस्य विनिगमनाविरहेण यावद्द्रव्यवृत्तित्वे तुल्यव्यक्तिकतया द्रव्यत्वानतिरेकात् । एतेन द्रव्यत्वं वेत्यादिकं व्याख्यातप्रायम् ।**

ಅನುಮಾನದಿಂದ ಆತ್ಮಪೃಥಿವಿ ಉಭಯಗತವಾದ ಬೇರೆ ಒಂದು ಜಾತಿ ಏಕೆ

ಸಿದ್ಧವಾಗಬಾರದು? ಆತ್ಮತ್ವವೇ ಏಕೆ ಸಿದ್ಧಿಸಬೇಕು? ಎಂದರೆ, ಬೇರೆ ಜಾತಿ ದ್ರವ್ಯತ್ವವೇ ಆಗಬೇಕು. ದ್ರವ್ಯತ್ವಾನ್ಯವೆಂದು ವಿಶೇಷಣ ಕೊಟ್ಟಿರುವುದರಿಂದ ಅದನ್ನು ಇಟ್ಟುಕೊಂಡು ಸಾಧ್ಯಪರ್ಯವಸಾನ ಮಾಡಲಾಗದು. ಬೇರೆ ಜಾತಿ ದ್ರವ್ಯತ್ವವೇ. ಏಕೆಂದರೆ ಆತ್ಮದೊಂದಿಗೆ ಪೃಥಿವಿ ಇಟ್ಟುಕೊಂಡರೆ, ಪೃಥಿವಿಯೆ ಏಕೆ, ಜಲವೇಕಾಗಬಾರದು? ತೇಜಸ್ಸು ಏಕಾಗಬಾರದು? ವಿನಿಗಮನಾವಿಲ್ಲದೆ ಇದ್ದಾಗ ಎಲ್ಲ ದ್ರವ್ಯಗಳೂ ಸೇರಬೇಕು, ಅಥವಾ ಯಾವ ದ್ರವ್ಯವೂ ಸೇರಬಾರದೆಂದಾಗುತ್ತದೆ. ಎಲ್ಲ ದ್ರವ್ಯಗಳೂ ಸೇರಿದರೆ ಅಲ್ಲಿರುವ ಈ ಬೇರೆ ಜಾತಿ ದ್ರವ್ಯತ್ವವೇ ಆಗುವುದು. ಏಕೆಂದರೆ ಈ ಎರಡೂ ಜಾತಿಗಳು ಎಲ್ಲ ದ್ರವ್ಯಗಳಲ್ಲಿ ಇರುವುದರಿಂದ ತುಲ್ಯವ್ಯಕ್ತಿಕವಾಗುವುವು. ತುಲ್ಯವ್ಯಕ್ತಿತ್ವವು ಪೃಥಕ್ ಜಾತಿತ್ವಕ್ಕೆ ಬಾಧಕ. ಅದರಿಂದ ಅವು ಒಂದೇ ಆಗುವುವು. ಸತ್ತಾಪಕ್ಷಕವಾದ ಈ ಅನುಮಾನದಂತೆಯೇ ದ್ರವ್ಯತ್ವಪಕ್ಷಕವಾದ ಮುಂದೆ ಹೇಳುವ ಅನುಮಾನವನ್ನೂ ತಿಳಿಯಬೇಕು.

**आत्मेति ।** जीवात्मेत्यर्थः । तेन नेश्वरे भागासिद्धिः । अत्र द्रव्यत्वादिजात्या सिद्धार्थतावारणाय द्रव्यत्वव्याप्येत्युक्तार्थकम् । एकत्वादिना तद्दोषवारणाय जातीति । गगनादौ व्यभिचारवारणायाविभ्विति । विभुत्वं च सर्वमूर्तसंयोगित्वं परममहत्त्ववत्त्वं वा । तच्छून्यत्वरूपाविभुत्वस्य गुणादावनैकान्त्यात् द्रव्येति । एतादृशहेतोरसिद्धिपरिहारायैवात्माणुत्ववादिनामित्युक्तम् । नत्वात्मविभुत्वपक्षे हेत्वन्तरासम्भवात् । प्रत्यक्षद्रव्यत्वादेर्हेतुत्वसम्भवात् ।

'ಆತ್ಮಾ ದ್ರವ್ಯತವ್ಯಾಪ್ಯಜಾತ್ಯಧಿಕರಣಂ' ಎಂಬ ಅನುಮಾನದಲ್ಲಿ ಆತ್ಮ ಎಂದರೆ ಜೀವಾತ್ಮ ವಿವಕ್ಷಿತನಾಗಿದ್ದಾನೆ. ಅದರಿಂದ ಅವಿಭುದ್ರವ್ಯತ್ವವೆಂಬ ಹೇತುವಿಗೆ ಭಾಗಾಸಿದ್ಧಿ ಇಲ್ಲ. ಹೀಗೆ ಹೇಳದಿದ್ದರೆ ಪರಮಾತ್ಮ ವಿಭುದ್ರವ್ಯವಾಗಿರುವುದರಿಂದ ಅವನಲ್ಲಿ ಅವಿಭುದ್ರವ್ಯತ್ವ ಹೇತುವಿಗೆ ಭಾಗಾಸಿದ್ಧಿ ಉಂಟಾಗುವುದು. ದ್ರವ್ಯತ್ವಾದಿ ಜಾತ್ಯಧಿಕರಣತ್ವವು ಆತ್ಮನಲ್ಲಿ ಸಿದ್ಧವೇ ಇರುವುದರಿಂದ ಸಿದ್ಧಸಾಧನವೆಂದು ದ್ರವ್ಯತ್ವವ್ಯಾಪ್ಯವೆಂದು ವಿಶೇಷಣ ನೀಡಿದ್ದಾರೆ. 'ದ್ರವ್ಯತ್ವವ್ಯಾಪ್ಯ ಧರ್ಮಾಧಿ ಕರಣ' ಎಂದರೆ ಏಕತ್ವಾದ್ಯಧಿಕರಣನಾಗಿದ್ದಾನೆ ಎಂದು ಸಿದ್ಧಸಾಧನ. ಅದಕ್ಕೆ ಜಾತ್ಯಧಿಕರಣತ್ವನಿವೇಶ, ಗಗನಾದಿಗಳಲ್ಲಿ ದ್ರವ್ಯತ್ವವ್ಯಾಪ್ಯ ಜಾತಿ ಇಲ್ಲ. ಅದರಿಂದ ಕೇವಲ ದ್ರವ್ಯತ್ವವನ್ನು ಹೇತುಮಾಡಿದರೆ ಅಲ್ಲಿ ವ್ಯಭಿಚಾರ. ಅದಕ್ಕೆ ಅವಿಭುದ್ರವ್ಯತ್ವವನ್ನು ಹೇತು ಮಾಡಿದ್ದಾರೆ. ವಿಭುತ್ವವೆಂದರೆ ಸರ್ವಮೂರ್ತ ಸಂಯೋಗಿತ್ವ ಅಥವಾ ಪರಮಮಹತ್ವವತ್ತ್ವ. ಅವಿಭುತ್ವವನ್ನು ಮಾತ್ರ ಹೇತು ಮಾಡಿದರೆ ವಿಭುತ್ವಶೂನ್ಯತ್ವವು ಗುಣಾದಿಗಳಲ್ಲಿ ಬರುತ್ತದೆ, ಅಲ್ಲಿ ದ್ರವ್ಯತ್ವವ್ಯಾಪ್ಯಜಾತ್ಯಧಿ ಕರಣತ್ವವಿಲ್ಲವೆಂದು ವ್ಯಭಿಚಾರ. ಅದಕ್ಕೆ ಅವಿಭುದ್ರವ್ಯತ್ವವನ್ನು ಹೇತುಮಾಡಿದ್ದಾರೆ. ಅದರಿಂದ

ಗುಣಾದಿಗಳಲ್ಲಿ ವ್ಯಭಿಚಾರವಿಲ್ಲ. ಆದರೆ ಆತ್ಮನನ್ನು ವಿಭು ಎನ್ನುವವರಿಗೆ ಈ ಹೇತು ಅಸಿದ್ಧ. ಆದಕ್ಕೆ ಆತ್ಮಾಣುತ್ವವಾದಿ ಮತದಲ್ಲಿ ಹೇತುವಿಗೆ ಅಸಿದ್ಧಿ ಇಲ್ಲ ಎಂದಿದ್ದಾರೆ. ಹೊರತು ಆತ್ಮವಿಭುತ್ವವಾದಿ ಮತದಲ್ಲಿ ಬೇರೆ ಹೇತುವಿಲ್ಲ ಎಂದು ಅಭಿಪ್ರಾಯವಲ್ಲ. ಅವರ ಮತದಲ್ಲಿ ಪ್ರತ್ಯಕ್ಷದ್ರವ್ಯತ್ವಾದಿ ಹೇತುಗಳನ್ನು ಹೇಳಲು ಬರುತ್ತದೆ.

**एवं पटः पटात्मान्यतरवृत्तिजातिशून्यो मेयत्वाद्घटवत् । सत्ताद्रव्यत्वाभ्यामनेन ज्ञायमानमिदमिदानीमात्मवृत्तिजात्या न ज्ञायते, वस्तुत्वाद्वस्त्वन्तरवदित्यादिकमात्मत्वजातिसाधकमनुमानं द्रष्टव्यम् ॥**

ಪಟವು ಪಟ–ಆತ್ಮ ಅನ್ಯತರ ವೃತ್ತಿ ಜಾತಿ ಶೂನ್ಯವಾಗಿದೆ; ಪ್ರಮೇಯವಾದ್ದರಿಂದ ಘಟದಂತೆ. ಎಂದು ಅನುಮಾನ. ಸತ್ತಾ ದ್ರವ್ಯತ್ವಗಳುಳ್ಳದ್ದೆಂದು ಈತನಿಗೆ ಗೋಚರವಾಗುವ ಈ ವಸ್ತು ಈಗ ಆತ್ಮವೃತ್ತಿ ಜಾತಿಉಳ್ಳದ್ದೆಂದು ಗೋಚರವಾಗುತ್ತಿಲ್ಲ, ವಸ್ತುವಾದ್ದರಿಂದ, ಬೇರೆ ವಸ್ತುವಿನಂತೆ ಎಂದು ಇನ್ನೊಂದು ಅನುಮಾನ. ಹೀಗೇ ಬೇರೆ ಆತ್ಮತ್ವ ಜಾತಿಸಾಧಕ ಅನುಮಾನಗಳನ್ನೂ ತಿಳಿಯಬಹುದು. ದೃಷ್ಟಾಂತವಾದ ಘಟವು ಪಟ–ಆತ್ಮ ಅನ್ಯತರದಲ್ಲಿರುವ ಜಾತಿಯಿಂದ, ಅಂದರೆ ಪಟತ್ವ ಜಾತಿಯಿಂದ ಶೂನ್ಯವಾಗಿದೆ ಮತ್ತು ಪ್ರಮೇಯವೂ ಆಗಿದೆ. ಹಾಗೇ ಪಕ್ಷವಾದ ಪಟವೂ ಪ್ರಮೇಯವಾದ್ದರಿಂದ ಪಟ–ಆತ್ಮ ಅನ್ಯತರ ವೃತ್ತಿಯಾದ ಆತ್ಮತ್ವಜಾತಿಯಿಂದ ಶೂನ್ಯವಾಗಿದೆ ಎಂದು ಸಾಧ್ಯವನ್ನು ಕೂಡಿಸಬೇಕು. ಸತ್ತಾ ಮತ್ತು ದ್ರವ್ಯತ್ವಗಳುಳ್ಳದ್ದೆಂದು ಗೋಚರವಾಗುವ ವಸ್ತುವು ಈಗ ಆತ್ಮವೃತ್ತಿಯಾದ ಜಾತಿ ಅಂದರೆ ಆತ್ಮತ್ವ ಉಳ್ಳದ್ದೆಂದು ಗೋಚರವಾಗುತ್ತಿಲ್ಲ ಎನ್ನಬೇಕು. ಆತ್ಮನಲ್ಲಿ ಉಭಯವಾದಿ ಸಿದ್ಧವಾದ ಜಾತಿಗಳು ಸತ್ತಾದ್ರವ್ಯತ್ವಗಳೇ. ಅವು ಗೋಚರವಾಗುತ್ತಿರುವಾಗ ಗೋಚರವಾಗದಿರುವ ಆತ್ಮವೃತ್ತಿ ಜಾತಿ ಎಂದರೆ ಆತ್ಮತ್ವವೇ ಆಗಿರಬೇಕು. ಹೀಗೆ ಆತ್ಮತ್ವ ಜಾತಿ ಸಿದ್ಧಿ.

### ಆತ್ಮನಲ್ಲಿ ದ್ರವ್ಯತ್ವ ಜಾತಿ ಇದೆ

**न चात्र द्रव्यत्वव्याप्यजातिमत्पदार्थान्तरसिद्ध्याऽर्थान्तरत्वम् । क्लृप्ते धर्मिणि धर्मविशेषसाधनमात्रेणानुमानपर्यवसानसम्भवे तद्विशिष्टे धर्मिण्यनुमानपर्यवसाने गौरवात् । न चात्मनो द्रव्यत्वासिद्ध्याऽसिद्ध्यादिः । आत्मनि निर्गुणे रूपादिगुणाभावेऽप्ययावद्द्रव्यभाविनां द्वित्वादिगुणानां व्यावहारिकाणामङ्गीकारे बाधकाभावात् गुणाद्यन्तर्भावप्रसङ्गाच्च द्रव्यत्वसिद्धेः ।**

**ಈ ಅನುಮಾನಗಳಲ್ಲಿ ದ್ರವ್ಯತ್ವಾದಿ ವ್ಯಾಪ್ಯ ಜಾತಿ ಉಳ್ಳ ಬೇರೆ ಪದಾರ್ಥ ಸಿದ್ಧಿಯಿಂದ ಅರ್ಥಾಂತರತ್ವವೆಂದು ಹೇಳಕೂಡದು. ಕೢಪ್ತವಾದ ಆತ್ಮ ಎಂಬ ಧರ್ಮಿಯಲ್ಲಿ ಧರ್ಮವಿಶೇಷ ಸಾಧನ ಮಾತ್ರದಿಂದ ಅನುಮಾನ ಕೂಡುವಾಗ ಧರ್ಮವಿಶೇಷಉಳ್ಳ ಧರ್ಮಿಯನ್ನು ಇಟ್ಟುಕೊಂಡು ಅನುಮಾನಪರ್ಯವಸಾನ ಮಾಡುವುದು ಗೌರವ ಗ್ರಸ್ತವಾಗುತ್ತದೆ. ಆತ್ಮನಲ್ಲಿ ದ್ರವ್ಯತ್ವ ಅಭೇದವಾದಿಗೆ ಸಿದ್ಧವಿಲ್ಲದಿರುವುದರಿಂದ ಅಸಿದ್ಧಿ ಮುಂತಾದ ದೋಷಗಳಿವೆ ಎನ್ನಕೂಡದು. ನಿರ್ಗುಣನಾದ ಆತ್ಮನಲ್ಲಿ ರೂಪಾದಿ ಗುಣವಿಲ್ಲದಿದ್ದರೂ ಆಗಂತುಕವಾದ ದ್ವಿತ್ವಾದಿ ವ್ಯಾವಹಾರಿಕ ಗುಣಗಳನ್ನು ಅಂಗೀಕರಿಸುವುದಕ್ಕೆ ಅಭೇದ ಮತದಲ್ಲಿ ಬಾಧಕವಿಲ್ಲ. ಮತ್ತು ಗುಣಾದಿಗಳಲ್ಲಿ ಅಂತರ್ಭೂತವಾಗದ ಆತ್ಮನನ್ನು ಪರಿಶೇಷದಿಂದ ದ್ರವ್ಯದಲ್ಲೇ ಅಂತರ್ಭಾವ ಮಾಡಬೇಕಾಗಿರುವುದರಿಂದ ದ್ರವ್ಯತ್ವ ಸಿದ್ಧವಾಗುವುದು.**

**द्रव्यत्वव्याप्यजातीति ।** तादृशजात्यन्तरविशिष्टदशमद्रव्यसिद्ध्या पृथिवीत्वादिपक्षकानुमानेष्वर्थान्तरमित्यर्थः । **गौरवादिति ।** धर्मधर्म्युभय कल्पनातो धर्ममात्र कल्पनाया लघुत्वादिति भावः । न चैकव्यक्तौ जातिकल्पनायोगाद् व्यक्त्यन्तरकल्पनमावश्यकमेवेति वाच्यम् । अक्लृप्तानेकव्यक्तिकल्पनापेक्षया क्लृप्तव्यक्त्यन्तर्भावेन जातिकल्पने लाघवानपायात् ।

मायिनामाशङ्कां मायिरीत्यैव निरस्यति — **न चेति ।** निर्गुणश्रुति-विरोधेनात्मनि गुणवत्त्वासिद्ध्या तद्व्याप्यद्रव्यत्वजातिरप्यसिद्धेत्यर्थः । **असिद्ध्यादिरिति ।** अव्यवहितपूर्वानुमाने स्वरूपासिद्धिर्बाधश्च । तत्पूर्वानुमाने साध्याप्रसिद्धिः । तत्पूर्वानुमाने द्रव्यत्वान्येति विशेषणवैयर्थ्यम् । तत्पूर्वानुमानेष्वात्मनि द्रव्यत्वव्याप्यजातिसिद्धिमादाय साध्यपर्यवसानायोगादुद्देश्यासिद्धिरित्यर्थः ।

ಪೃಥಿವೀತ್ವಾದಿ ಪಕ್ಷಕವಾದ ಈ ಅನುಮಾನಗಳಿಂದ ದ್ರವ್ಯತ್ವಾದಿ ವ್ಯಾಪ್ಯ ಜಾತಿ ವಿಶಿಷ್ಟವಾದ ದಶಮ ದ್ರವ್ಯ ಒಂದು ಸಿದ್ಧವಾಗಲಿ ಎಂದು ಅರ್ಥಾಂತರತ್ವದೋಷವೆಂದು ಶಂಕೆ. ಜಾತಿವಿಶಿಷ್ಟ ದ್ರವ್ಯವನ್ನು ಅನುಮಾನದಿಂದ ಕಲ್ಪಿಸುವುದೆಂದರೆ ಅದು ಧರ್ಮ ಧರ್ಮಿ ಉಭಯಕಲ್ಪನೆ

ಯಾಯಿತು. ಅದಕ್ಕಿಂತ ಧರ್ಮಮಾತ್ರ ಕಲ್ಪನೆ ಮಾಡಿದರೆ ಲಾಘವ. 'ಒಂದು ವ್ಯಕ್ತಿಯಲ್ಲಿ ಜಾತಿಕಲ್ಪನೆ ಕೂಡದಿರುವುದರಿಂದ ಅನೇಕ ವ್ಯಕ್ತಿಕಲ್ಪನೆ ಆವಶ್ಯಕವೆ. ಹೀಗಾಗಿ ಗೌರವವಿಲ್ಲ' ಎಂದರೆ, ಅನೇಕ ಆತ್ಮವ್ಯಕ್ತಿಗಳು ವ್ಯವಹಾರದಲ್ಲಿ ಕ್ಲಪ್ತರೇ ಆಗಿದ್ದಾರೆ. ಅವರಲ್ಲಿಯೇ ಒಂದು ಜಾತಿಕಲ್ಪನೆ ಮಾಡುವುದರಲ್ಲಿ ಲಾಘವವಿದೆ. ಅಕ್ಲಪ್ತವಾದ ಅನೇಕ ಹೊಸ ವ್ಯಕ್ತಿಗಳನ್ನು ಕಲ್ಪನೆ ಮಾಡಿದರೆ ಗೌರವ.

ಆತ್ಮನಲ್ಲಿ ದ್ರವ್ಯತ್ವವು ಅಸಿದ್ಧವೆಂದು ಅಭೇದವಾದಾನುಸಾರ ಶಂಕಿಸಿಕೊಂಡು ಅಭೇದವಾದಾನುಸಾರವೇ ಅದಕ್ಕೆ ಉತ್ತರ ನೀಡುತ್ತಾರೆ. ನಿರ್ಗುಣತ್ವ ಶ್ರುತಿ ಇರುವುದರಿಂದ ಆತ್ಮನಲ್ಲಿ ಗುಣವತ್ವ ಸಿದ್ಧವಾಗುವುದಿಲ್ಲ. ಅದರಿಂದ ತದ್‌ವ್ಯಾಪ್ಯವಾದ ದ್ರವ್ಯತ್ವ ಜಾತಿಯೂ ಸಿದ್ಧವಲ್ಲ ಎಂದು ಶಂಕೆ. ದ್ರವ್ಯತ್ವಾಸಿದ್ಧಿಯಿಂದ 'ಆತ್ಮನು ದ್ರವ್ಯತ್ವವ್ಯಾಪ್ಯ ಜಾತ್ಯಧಿಕರಣನಾಗಿದ್ದಾನೆ, ಅವಿಭುದ್ರವ್ಯನಾದ್ದರಿಂದ, ಎಂದು ಹಿಂದೆ ಹೇಳಿದ ಅನುಮಾನದಲ್ಲಿ ಸ್ವರೂಪಾಸಿಧ್ಯಾದಿಗಳಿವೆ. ಅದಕ್ಕಿಂತ ಹಿಂದಿನ ಅನುಮಾನ 'ದ್ರವ್ಯತ್ವವು ಸತ್ತಾನ್ಯಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ' ಎಂದು. ಇಲ್ಲಿ ಆತ್ಮನಲ್ಲಿ ದ್ರವ್ಯತ್ವ ಅಸಿದ್ಧವಾದ್ದರಿಂದ ಸತ್ತಾನ್ಯ ಆತ್ಮನಿಷ್ಠ ಜಾತಿ ಅಪ್ರಸಿದ್ಧ, ಅದರಿಂದ ಸಾಧ್ಯಾಪ್ರಸಿದ್ಧಿ. ಇದಕ್ಕಿಂತ ಹಿಂದಿನ ಅನುಮಾನ, 'ಸತ್ತಾಜಾತಿಯು ದ್ರವ್ಯತ್ವಾನ್ಯತ್ವ ಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ' ಎಂದು, ಇಲ್ಲಿ ಆತ್ಮನಿಷ್ಠ ಜಾತಿಗೆ ದ್ರವ್ಯತ್ವಾನ್ಯ ವಿಶೇಷಣ ವ್ಯರ್ಥ. ದ್ರವ್ಯತ್ವ ಜಾತಿ ಅಸಿದ್ಧವೇ ಇರುವಾಗ ಅದರ ವ್ಯಾವೃತ್ತಿಗಾಗಿ ದ್ರವ್ಯತ್ವಾನ್ಯತ್ವ ವಿಶೇಷಣ ಕೊಟ್ಟರೆ ವ್ಯಾವರ್ತ್ಯವೇ ಇಲ್ಲ. ಇದಕ್ಕಿಂತ ಹಿಂದಿನ ಅನುಮಾನ 'ಎಲ್ಲ ಪೃಥಿವಿಯು ಜಲತ್ವ ತೇಜಸ್ತ್ವವಾಯುತ್ವ ಮನಸ್ತ್ವಾನಧಿಕರಣವಾದ ದ್ರವ್ಯತ್ವಸಾಕ್ಷಾದ್‌ವ್ಯಾಪ್ಯಜಾತಿಮತ್ತಾದ ವಸ್ತುವಿಗಿಂತ ವ್ಯತಿರಿಕ್ತವಾಗಿದೆ, ದ್ರವ್ಯತ್ವವಿರುವುದರಿಂದ' ಇಲ್ಲಿಯೂ ಇದಕ್ಕಿಂತ ಹಿಂದಿನ ಅನುಮಾನಗಳಲ್ಲಿಯೂ ಆತ್ಮನಲ್ಲಿ ದ್ರವ್ಯತ್ವ ವ್ಯಾಪ್ಯಜಾತಿ ಸಿದ್ಧಿಯನ್ನಿಟ್ಟುಕೊಂಡು ಪಕ್ಷದಲ್ಲಿ ಸಾಧ್ಯ ಪರ್ಯವಸಾನ ಮಾಡಲಾಗದಿರುವುದರಿಂದ ಉದ್ದೇಶ್ಯ ಸಿದ್ಧಿಯಾಗದಿರುವುದು ಎಂದು ಮುಂತಾದ ದೋಷಗಳಿವೆ. 'ನ ಚಾತ್ಮನೋ ದ್ರವ್ಯತ್ವಾಸಿದ್ಧ್ಯಾಽಸಿದ್ಧ್ಯಾದಿಃ' ಎಂದು 'ಆದಿ' ಪದದಿಂದ ಈ ಎಲ್ಲ ದೋಷಗಳನ್ನು ಮೂಲದಲ್ಲಿ ಸೂಚಿಸಿದ್ದಾರೆ.

**आत्मनीति ।** अयं भावः । निर्गुणश्रुत्या पारमार्थिकगुणनिषेधेऽपि व्यावहारिकगुणाङ्गीकारे बाधकाभावः। न च गुणानां यावद्द्रव्यभावित्वेन पारमार्थिकत्वापत्तिः । यावद्द्रव्यभाविरूपादिगुणाङ्गीकारायोगेऽप्यपेक्षाबुद्धि-जन्यद्वित्वाद्यङ्गीकारे बाधकविरहादिति । नन्वत्र साधकाभाव एव बाधक इत्यत आह **— गुणाद्यन्तर्भावेति ।** अवृत्तित्वेन गुणाद्यनन्तर्भूतस्य परिशेषाद् द्रव्यत्वसिद्धेरित्यर्थः ।

**ಈ ಅನುಮಾನಗಳಲ್ಲಿ ದ್ರವ್ಯತ್ವಾದಿ ವ್ಯಾಪ್ಯ ಜಾತಿ ಉಳ್ಳ ಬೇರೆ ಪದಾರ್ಥ ಸಿದ್ಧಿಯಿಂದ ಅರ್ಥಾಂತರತ್ವವೆಂದು ಹೇಳಕೂಡದು. ಕ್ಲೃಪ್ತವಾದ ಆತ್ಮ ಎಂಬ ಧರ್ಮಿಯಲ್ಲಿ ಧರ್ಮವಿಶೇಷ ಸಾಧನ ಮಾತ್ರದಿಂದ ಅನುಮಾನ ಕೂಡುವಾಗ ಧರ್ಮವಿಶೇಷಉಳ್ಳ ಧರ್ಮಿಯನ್ನು ಇಟ್ಟುಕೊಂಡು ಅನುಮಾನಪರ್ಯವಸಾನ ಮಾಡುವುದು ಗೌರವ ಗ್ರಸ್ತವಾಗುತ್ತದೆ. ಆತ್ಮನಲ್ಲಿ ದ್ರವ್ಯತ್ವ ಅಭೇದವಾದಿಗೆ ಸಿದ್ಧವಿಲ್ಲದಿರುವುದರಿಂದ ಅಸಿದ್ಧಿ ಮುಂತಾದ ದೋಷಗಳಿವೆ ಎನ್ನಕೂಡದು. ನಿರ್ಗುಣನಾದ ಆತ್ಮನಲ್ಲಿ ರೂಪಾದಿ ಗುಣವಿಲ್ಲದಿದ್ದರೂ ಆಗಂತುಕವಾದ ದ್ವಿತ್ವಾದಿ ವ್ಯಾವಹಾರಿಕ ಗುಣಗಳನ್ನು ಅಂಗೀಕರಿಸುವುದಕ್ಕೆ ಅಭೇದ ಮತದಲ್ಲಿ ಬಾಧಕವಿಲ್ಲ. ಮತ್ತು ಗುಣಾದಿಗಳಲ್ಲಿ ಅಂತರ್ಭೂತವಾಗದ ಆತ್ಮನನ್ನು ಪರಿಶೇಷದಿಂದ ದ್ರವ್ಯದಲ್ಲೇ ಅಂತರ್ಭಾವ ಮಾಡಬೇಕಾಗಿರುವುದರಿಂದ ದ್ರವ್ಯತ್ವ ಸಿದ್ಧವಾಗುವುದು.**

**द्रव्यत्वव्याप्यजातीति ।** तादृशजात्यन्तरविशिष्टदशमद्रव्यसिद्ध्या पृथिवीत्वादिपक्षकानुमानेष्वर्थान्तरमित्यर्थः **। गौरवादिति ।** धर्मधर्म्युभय कल्पनातो धर्ममात्र कल्पनाया लघुत्वादिति भावः । न चैकव्यक्तौ जातिकल्पनायोगाद् व्यक्त्यन्तरकल्पनमावश्यकमेवेति वाच्यम् । अक्लृप्तानेकव्यक्तिकल्पनापेक्षया क्लृप्तव्यक्त्यन्तर्भावेन जातिकल्पने लाघवानपायात् ।

मायिनामाशङ्कां मायिरीत्यैव निरस्यति **— न चेति ।** निर्गुणश्रुति-विरोधेनात्मनि गुणवत्त्वासिद्ध्या तद्व्याप्यद्रव्यत्वजातिरप्यसिद्धेत्यर्थः **। असिद्ध्यादिरिति ।** अव्यवहितपूर्वानुमाने स्वरूपासिद्धिर्बाधश्च । तत्पूर्वानुमाने साध्याप्रसिद्धिः । तत्पूर्वानुमाने द्रव्यत्वान्येति विशेषणवैयर्थ्यम् । तत्पूर्वानुमानेष्वात्मनि द्रव्यत्वव्याप्यजातिसिद्धिमादाय साध्यपर्यवसानायोगादुद्देश्यासिद्धिरित्यर्थः ।

ಪೃಥಿವೀತ್ವಾದಿ ಪಕ್ಷಕವಾದ ಈ ಅನುಮಾನಗಳಿಂದ ದ್ರವ್ಯತ್ವಾದಿ ವ್ಯಾಪ್ಯ ಜಾತಿ ವಿಶಿಷ್ಟವಾದ ದಶಮ ದ್ರವ್ಯ ಒಂದು ಸಿದ್ಧವಾಗಲಿ ಎಂದು ಅರ್ಥಾಂತರತ್ವದೋಷವೆಂದು ಶಂಕೆ. ಜಾತಿವಿಶಿಷ್ಟ ದ್ರವ್ಯವನ್ನು ಅನುಮಾನದಿಂದ ಕಲ್ಪಿಸುವುದೆಂದರೆ ಅದು ಧರ್ಮ ಧರ್ಮಿ ಉಭಯಕಲ್ಪನೆ

ಯಾಯಿತು. ಆದಕ್ಕಿಂತ ಧರ್ಮಮಾತ್ರ ಕಲ್ಪನೆ ಮಾಡಿದರೆ ಲಾಘವ. 'ಒಂದು ವ್ಯಕ್ತಿಯಲ್ಲಿ ಜಾತಿಕಲ್ಪನೆ ಕೂಡದಿರುವುದರಿಂದ ಅನೇಕ ವ್ಯಕ್ತಿಕಲ್ಪನೆ ಆವಶ್ಯಕವೆ. ಹೀಗಾಗಿ ಗೌರವವಿಲ್ಲ' ಎಂದರೆ, ಅನೇಕ ಆತ್ಮವ್ಯಕ್ತಿಗಳು ವ್ಯವಹಾರದಲ್ಲಿ ಕ್ಲಪ್ತರೇ ಆಗಿದ್ದಾರೆ. ಅವರಲ್ಲಿಯೇ ಒಂದು ಜಾತಿಕಲ್ಪನೆ ಮಾಡುವುದರಲ್ಲಿ ಲಾಘವವಿದೆ. ಅಕ್ಲಪ್ತವಾದ ಅನೇಕ ಹೊಸ ವ್ಯಕ್ತಿಗಳನ್ನು ಕಲ್ಪನೆ ಮಾಡಿದರೆ ಗೌರವ.

ಆತ್ಮನಲ್ಲಿ ದ್ರವ್ಯತ್ವವು ಅಸಿದ್ಧವೆಂದು ಅಭೇದವಾದಾನುಸಾರ ಶಂಕಿಸಿಕೊಂಡು ಅಭೇದವಾದಾನುಸಾರವೇ ಅದಕ್ಕೆ ಉತ್ತರ ನೀಡುತ್ತಾರೆ. ನಿರ್ಗುಣತ್ವ ಶ್ರುತಿ ಇರುವುದರಿಂದ ಆತ್ಮನಲ್ಲಿ ಗುಣವತ್ವ ಸಿದ್ಧವಾಗುವುದಿಲ್ಲ. ಅದರಿಂದ ತದ್ವ್ಯಾಪ್ಯವಾದ ದ್ರವ್ಯತ್ವ ಜಾತಿಯೂ ಸಿದ್ಧವಲ್ಲ ಎಂದು ಶಂಕೆ. ದ್ರವ್ಯತ್ವಾಸಿದ್ಧಿಯಿಂದ 'ಆತ್ಮನು ದ್ರವ್ಯತ್ವವ್ಯಾಪ್ಯ ಜಾತ್ಯಧಿಕರಣನಾಗಿದ್ದಾನೆ, ಅವಿಭುದ್ರವ್ಯ ನಾದ್ದರಿಂದ, ಎಂದು ಹಿಂದೆ ಹೇಳಿದ ಅನುಮಾನದಲ್ಲಿ ಸ್ವರೂಪಾಸಿಧ್ಯಾದಿಗಳಿವೆ. ಆದಕ್ಕಿಂತ ಹಿಂದಿನ ಅನುಮಾನ 'ದ್ರವ್ಯತ್ವವು ಸತ್ತಾನ್ಯಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ' ಎಂದು. ಇಲ್ಲಿ ಆತ್ಮನಲ್ಲಿ ದ್ರವ್ಯತ್ವ ಅಸಿದ್ಧವಾದ್ದರಿಂದ ಸತ್ತಾನ್ಯ ಆತ್ಮನಿಷ್ಠ ಜಾತಿ ಅಪ್ರಸಿದ್ಧ, ಅದರಿಂದ ಸಾಧ್ಯಾಪ್ರಸಿದ್ಧಿ. ಇದಕ್ಕಿಂತ ಹಿಂದಿನ ಅನುಮಾನ, 'ಸತ್ತಾಜಾತಿಯು ದ್ರವ್ಯತ್ವಾನ್ಯತ್ವ ಆತ್ಮನಿಷ್ಠ ಜಾತಿಗಿಂತ ಅನ್ಯ, ಜಾತಿಯಾದ್ದರಿಂದ' ಎಂದು, ಇಲ್ಲಿ ಆತ್ಮನಿಷ್ಠ ಜಾತಿಗೆ ದ್ರವ್ಯತ್ವಾನ್ಯ ವಿಶೇಷಣ ವ್ಯರ್ಥ. ದ್ರವ್ಯತ್ವ ಜಾತಿ ಅಸಿದ್ಧವೇ ಇರುವಾಗ ಅದರ ವ್ಯಾವೃತ್ತಿಗಾಗಿ ದ್ರವ್ಯತ್ವಾನ್ಯತ್ವ ವಿಶೇಷಣ ಕೊಟ್ಟರೆ ವ್ಯಾವರ್ತ್ಯವೇ ಇಲ್ಲ. ಇದಕ್ಕಿಂತ ಹಿಂದಿನ ಅನುಮಾನ 'ಎಲ್ಲ ಪೃಥಿವಿಯು ಜಲತ್ವ ತೇಜಸ್ತ್ವವಾಯುತ್ವ ಮನಸ್ತ್ವಾನಧಿ ಕರಣವಾದ ದ್ರವ್ಯತ್ವಸಾಕ್ಷಾದ್ವ್ಯಾಪ್ಯಜಾತಿಮತ್ತಾದ ವಸ್ತುವಿಗಿಂತ ವ್ಯತಿರಿಕ್ತವಾಗಿದೆ, ದ್ರವ್ಯತ್ವ ವಿರುವುದರಿಂದ' ಇಲ್ಲಿಯೂ ಇದಕ್ಕಿಂತ ಹಿಂದಿನ ಅನುಮಾನಗಳಲ್ಲಿಯೂ ಆತ್ಮನಲ್ಲಿ ದ್ರವ್ಯತ್ವ ವ್ಯಾಪ್ಯಜಾತಿ ಸಿದ್ಧಿಯನ್ನಿಟ್ಟುಕೊಂಡು ಪಕ್ಷದಲ್ಲಿ ಸಾಧ್ಯ ಪರ್ಯವಸಾನ ಮಾಡಲಾಗದಿರುವುದರಿಂದ ಉದ್ದೇಶ್ಯ ಸಿದ್ಧಿಯಾಗದಿರುವುದು ಎಂದು ಮುಂತಾದ ದೋಷಗಳಿವೆ. 'ನ ಚಾತ್ಮನೋ ದ್ರವ್ಯತ್ವಾಸಿದ್ಧ್ಯಾಽಸಿದ್ಧ್ಯಾದಿಃ' ಎಂದು 'ಆದಿ' ಪದದಿಂದ ಈ ಎಲ್ಲ ದೋಷಗಳನ್ನು ಮೂಲದಲ್ಲಿ ಸೂಚಿಸಿದ್ದಾರೆ.

**आत्मनीति** । अयं भावः । निर्गुणश्रुत्या पारमार्थिकगुणनिषेधेऽपि व्यावहारिकगुणाङ्गीकारे बाधकाभावः। न च गुणानां यावद्द्रव्यभावित्वेन पारमार्थिकत्वापत्तिः । यावद्द्रव्यभाविरूपादिगुणाङ्गीकारायोगेऽप्यपेक्षाबुद्धि-जन्यद्वित्वाद्यङ्गीकारे बाधकविरहादिति । नन्वत्र साधकाभाव एव बाधक इत्यत आह — **गुणाद्यन्तर्भावेति** । अवृत्तित्वेन गुणाद्यनन्तर्भूतस्य परिशेषाद् द्रव्यत्वसिद्धेरित्यर्थः ।

'ನಿರ್ಗುಣನಾದ ಆತ್ಮನಲ್ಲಿ ವ್ಯವಹಾರಿಕ ಗುಣಗಳನ್ನು ಅಂಗೀಕರಿಸುವಲ್ಲಿ ಬಾಧಕವಿಲ್ಲ' ಎನ್ನುವುದರ ಅಭಿಪ್ರಾಯವಿದು— ನಿರ್ಗುಣಶ್ರುತಿಯು ಪಾರಮಾರ್ಥಿಕ ಗುಣವನ್ನು ಮಾತ್ರ ನಿಷೇಧಿಸುತ್ತದೆ. ಆದರಿಂದ ವ್ಯಾವಹಾರಿಕ ಗುಣವನ್ನು ಒಪ್ಪಲು ಬಾಧಕವಿಲ್ಲ. ಗುಣವು ಯಾವದ್ದ್ರವ್ಯಭಾವಿ, ಧರ್ಮಿ ಇರುವಷ್ಟು ಕಾಲವೂ ಇರುವಂತದ್ದೆಂದರೆ ಅದು ಪಾರಮಾರ್ಥಿಕವೆ ಆಗಬೇಕಾಗುತ್ತದೆ, ಎಂದು ಭಯಪಡಬೇಕಾಗಿಲ್ಲ. ಯಾವದ್ದ್ರವ್ಯಭಾವಿ ಗುಣಗಳೆಂದರೆ ರೂಪಾದಿ ಗುಣಗಳು. ಅವುಗಳನ್ನು ಅಂಗೀಕರಿಸುವುದು ಬೇಡ. ಅಪೇಕ್ಷಾಬುದ್ಧಿ ಜನ್ಯವಾದ ದ್ವಿತ್ವಾದಿಗುಣ ಗಳನ್ನು ಅಂಗೀಕರಿಸುವುದರಲ್ಲಿ ಏನೂ ಬಾಧಕವಿಲ್ಲ. ಈ ವಿಷಯದಲ್ಲಿ ಸಾಧಕಪ್ರಮಾಣ ವಿಲ್ಲದಿರುವುದೇ ಬಾಧಕವೆನ್ನುವುದಾದರೆ ಸಾಧಕ ಪ್ರಮಾಣವನ್ನು ಹೇಳುತ್ತೇವೆ—'ಆತ್ಮ ಅವೃತ್ತಿಪದಾರ್ಥವಾಗಿದೆ, ವೃತ್ತಿಮತ್‌ಪದಾರ್ಥವಲ್ಲ ಎಂದಮೇಲೆ ಅದು ಗುಣಾದಿಗಳಲ್ಲಿ ಸೇರುವುದಿಲ್ಲ, ದ್ರವ್ಯವೇ ಆಗಿರಬೇಕು' ಎಂದು ದ್ರವ್ಯತ್ವ ಜಾತಿ ಸಿದ್ಧವಾಗುತ್ತದೆ.

**न चानुकूलतर्काभावादप्रयोजकत्वाभाससमानयोगक्षेमत्वे । आत्मपदप्रवृत्तिनिमित्तस्य आत्मत्वस्य जातित्वाङ्गीकारे लाघवम्, औपाधिकधर्मत्वाङ्गीकारे तस्योपाधिज्ञानसापेक्षत्वेन गौरवमित्यनुकूलतर्कसनाथत्वात् । तुल्यव्यक्तिकत्वादीनां च बाधकानामभावात् ।**

**ಅನುಕೂಲತರ್ಕವಿಲ್ಲದಿರುವುದರಿಂದ ಅಪ್ರಯೋಜಕತ್ವ ಮತ್ತು ಆಭಾಸ ಸಮಾನಯೋಗಕ್ಷೇಮತ್ವಗಳಿವೆ ಎನ್ನಬಾರದು. ಆತ್ಮಪದ ಪ್ರವೃತ್ತಿನಿಮಿತ್ತವಾದ ಆತ್ಮತ್ವವನ್ನು ಜಾತಿ ಎಂದು ಅಂಗೀಕರಿಸಿದರೆ ಲಾಘವವಿದೆ, ಔಪಾಧಿಕವೆಂದು ಅಂಗೀಕರಿಸಿದರೆ ಅದರ ಜ್ಞಾನ ಉಪಾಧಿಜ್ಞಾನಸಾಪೇಕ್ಷವಾಗುವುದರಿಂದ ಗೌರವವಿದೆ ಎಂದು ಅನುಕೂಲ ತರ್ಕಯುಕ್ತವಾಗಿದೆ. ಮತ್ತು ತುಲ್ಯವ್ಯಕ್ತಿತ್ವ ಮುಂತಾದ ಬಾಧಕಗಳೂ ಇಲ್ಲ.**

ननूक्तानुमानेषु हेतुरस्तु साध्यं माऽस्त्वित्यप्रयोजकशङ्कावारकतर्काभावादसाधकत्वम् ।

एवं पृथिवीत्वं जलत्वादिक्लृप्तजातिव्यतिरिक्तद्रव्यत्वसाक्षाद्व्याप्यजातिभिन्नं जातित्वात्, सत्ता द्रव्यत्वान्याकाशनिष्ठजात्यन्या जातित्वा-

द्घटत्ववदित्याद्याभाससाम्यं चेत्याशङ्कां निराह – **न चेति । आभास-समानेति ।** योगक्षेमयोः साधकबाधकभावाभावयोराभाससमानत्व-मित्यर्थः । तथाचोक्तानुमानस्याभासत्वादस्याप्याभासत्वमविशेषादिति भावः। आभाससाम्यं विघटयिष्यन्ननुकूलतर्कमुपपादयति – **आत्मपदेति।** आत्मपदशक्यतावच्छेदकस्येत्यर्थः । **लाघवमिति ।** जातेरखण्डत्वेन विशेषणज्ञानाद्यनपेक्षत्वादिति भावः । **औपाधिकत्वेति ।** विशिष्टधर्म-स्वरूपत्वेत्यर्थः । अनेकवस्तुघटितस्वप्रकाशत्वादेरात्मपदप्रवृत्तिनिमित्तत्व इति यावत् । **गौरवमिति ।**

'ಆತ್ಮತ್ವಜಾತಿ ಸಾಧನೆಗಾಗಿ ಹೇಳಿದ ನಿಮ್ಮ ಈ ಎಲ್ಲ ಅನುಮಾನಗಳು ಅಪ್ರಯೋಜಕ. ಪಕ್ಷದಲ್ಲಿ ನೀವು ಹೇಳುವ ಹೇತುಗಳಿರಲಿ ಆದರೆ ಸಾಧ್ಯವಿರಬೇಕಾಗಿಲ್ಲ' ಎಂಬ ಶಂಕಾ ಬಂದರೆ ಅದರ ವಾರಣೆಗೆ ನಿಮ್ಮಲ್ಲಿ ಅನುಕೂಲತರ್ಕವಿಲ್ಲದ್ದರಿಂದ ಅವು ಅಸಾಧಕವಾಗಿವೆ. ಮತ್ತು ಆಭಾಸ ಸಮಾನ ಯೋಗಕ್ಷೇಮವೆನಿಸುತ್ತವೆ. ಏಕೆಂದರೆ, ಪೃಥಿವೀತ್ವ ಜಾತಿಯು ಜಲತ್ವಾದಿ ಕ್ಲೃಪ್ತ ಜಾತಿ ವ್ಯತಿರಿಕ್ತ ದ್ರವ್ಯತ್ವ ಸಾಕ್ಷಾದ್ವ್ಯಾಪ್ಯ ಜಾತಿಗಿಂತ ಭಿನ್ನ. ಜಾತಿಯಾದ್ದರಿಂದ, ಸತ್ತಾಜಾತಿಯೂ ದ್ರವ್ಯತ್ವೇತರವಾದ ಆಕಾಶನಿಷ್ಠ ಜಾತಿಗಿಂತ ಭಿನ್ನ, ಜಾತಿಯಾದ್ದರಿಂದ, ಘಟತ್ವ ಜಾತಿಯಂತೆ ಎಂದು ಮುಂತಾದ ಅನುಮಾನ ಹೇಗೆ ಅಪ್ರಯೋಜಕವೋ ಹಾಗೇ ಆತ್ಮತ್ವ ಜಾತಿ ಸಾಧನೆಗೆ ನೀವು ಹೇಳುವ ಅನುಮಾನವೆಲ್ಲವೂ ಅಪ್ರಯೋಜಕ. ಅದಕ್ಕೆ ಸಾಧಕಸತ್ವವೂ ಇಲ್ಲ ಬಾಧಕಾಭಾವವೂ ಇಲ್ಲ. 'ಯೋಗಕ್ಷೇಮ'ಗಳು ಅಂದರೆ ಸಾಧಕಬಾಧಕ ಭಾವಾಭಾವಗಳು, ಪ್ರಕೃತಾನುಮಾನದಲ್ಲಿಯೂ ಆಭಾಸಾನುಮಾನದಲ್ಲಿಯೂ ಸಮಾನ, ಅಂದರೆ ಎರಡರಲ್ಲಿಯೂ ಇಲ್ಲ! ಹೀಗೆ ಆಭಾಸವಲ್ಲಿ ಸಮಾನವಾಗಿವೆ.

ಈ ಶಂಕೆಗೆ ಉತ್ತರ ಹೀಗೆ— ಇಲ್ಲಿ ಅನುಕೂಲತರ್ಕವಿದೆ. ಆತ್ಮಪದ ಪ್ರವೃತ್ತಿ ನಿಮಿತ್ತ, ಅಂದರೆ ಆತ್ಮಪದ ಶಕ್ಯತಾವಚ್ಛೇದಕವಾದ ಆತ್ಮತ್ವವು ಜಾತಿ ಎಂದು ಒಪ್ಪಿದರೆ ಲಾಘವವಿದೆ. ಏಕೆಂದರೆ ಜಾತಿ ಅಖಂಡವಾದ್ದರಿಂದ ವಿಶೇಷಣ ಜ್ಞಾನಾದಿಗಳ ಅಪೇಕ್ಷೆ ಇಲ್ಲದೆಯೆ ಅದು ಜ್ಞಾತವಾಗುತ್ತದೆ. ವಿಶಿಷ್ಟವಾದ ಔಪಾಧಿಕ ಧರ್ಮವೆಂದೊಪ್ಪಿದರೆ ಅದರ ಜ್ಞಾನ ಉಪಾಧಿರೂಪ ವಿಶೇಷಣಜ್ಞಾನ ಸಾಪೇಕ್ಷವಾಗುವುದರಿಂದ ಗೌರವ. ಔಪಾಧಿಕವೆಂದರೆ ವಿಶೇಷಣವಿಶಿಷ್ಟ ಧರ್ಮಸ್ವರೂಪ. ಅಭೇದವಾದಿಗಳು ಆತ್ಮಪದ ಶಕ್ಯತಾವಚ್ಛೇದಕವಾಗಿರುವ ಆತ್ಮತ್ವವು ಸ್ವಪ್ರಕಾಶತ್ವರೂಪ ಎನ್ನುತ್ತಾರೆ. ಸ್ವಪ್ರಕಾಶತ್ವವು 'ಸ್ವಾತ್ಮಕ–ಪ್ರಕಾಶ–ನಿರೂಪಿತ– ವಿಷಯತ್ವ' ಎಂದು ಅನೇಕ ವಿಶೇಷಣವಸ್ತು ಘಟಿತವಾಗಿದ್ದು ಅದರ ಜ್ಞಾನವು ಅನೇಕ ವಸ್ತು ಜ್ಞಾನಾಪೇಕ್ಷವಾಗಿರುವುದರಿಂದ ಗೌರವ.

यद्यपि स्वप्रकाशत्वादेरात्मपदप्रवृत्तिनिमित्तत्वाभावेऽपि स्वघटकोपाधिज्ञानसापेक्षज्ञानकत्वमस्त्येवेति न लाघवावकाशः । प्रत्युत जात्यन्तरकल्पनादेव गौरवम् । तथाप्यात्मपदशक्तिज्ञानादेरनेकोपाधिज्ञानाधीनत्वकल्पनादनेकोपाध्यन्तर्भावेन शक्यतावच्छेदकत्वकल्पनाच्च गौरवं बोध्यम् ।

ಯದ್ಯಪಿ ಸ್ವಪ್ರಕಾಶತ್ವಾದಿಗಳು ಆತ್ಮಪದ ಪ್ರವೃತ್ತಿನಿಮಿತ್ತವಾದರೆ ಅವುಗಳ ಜ್ಞಾನ ಅನೇಕ ವಸ್ತು ಜ್ಞಾನಾಧೀನವಾದ್ದರಿಂದ ಗೌರವ ಎನ್ನುತ್ತಿದ್ದಾರೆ. ಆದರೆ ಅವು ಆತ್ಮಪದ ಪ್ರವೃತ್ತಿನಿಮಿತ್ತವಾಗದಿದ್ದರೂ ಅವುಗಳ ಜ್ಞಾನ ಅವುಗಳಲ್ಲಿ ಘಟಕವಾದ ಉಪಾಧಿಗಳ ಜ್ಞಾನಕ್ಕೆ ಸಾಪೇಕ್ಷವೇ ಆಗಿರುವುದರಿಂದ ಲಾಘವಕ್ಕೆ ಅವಕಾಶವಿಲ್ಲ. ಮಾತ್ರವಲ್ಲ, ಅಖಂಡ ಶಕ್ಯತಾವಚ್ಛೇದಕ ಲಾಭಕ್ಕಾಗಿ ಇನ್ನೊಂದು ಜಾತಿಯನ್ನು ಕಲ್ಪನೆ ಮಾಡಬೇಕಾಗಿಬರುವುದರಿಂದ ಇನ್ನೂ ಹೆಚ್ಚಿನ ಗೌರವವೇ ಬರುತ್ತದೆ. ಆದರೂ ಆತ್ಮಪದ ಶಕ್ತಿಜ್ಞಾನಕ್ಕೆ ಶಕ್ಯತಾವಚ್ಛೇದಕದಲ್ಲಿ ಘಟಕವಾಗಿರುವ ಅನೇಕವಸ್ತು ಜ್ಞಾನಾಧೀನತ್ವ ಕಲ್ಪನೆಯಿಂದ ಗೌರವ. ಮತ್ತು ಘಟಕವಾಗಿರುವ ಅನೇಕ ವಸ್ತುಗಳು ಸೇರಿದಂತೆ ವಿಶಿಷ್ಟ ವಸ್ತುವಿನಲ್ಲಿ ಶಕ್ಯತಾವಚ್ಛೇದಕತ್ವವನ್ನು ಕಲ್ಪಿಸುವುದರಲ್ಲಿಯೂ ಗೌರವವಿದೆ ಎಂದು ಅಭಿಪ್ರಾಯ.

एवमात्मत्वजातौ साधकसत्त्वमुपपाद्य बाधकासत्त्वमप्युपपादयति – **तुल्यव्यक्तिकत्वादीनामिति ।** घटत्वकलशत्वयोर्भिन्नजातित्वे जातिसमनैयत्यरूपतुल्यव्यक्तिकत्वं बाधकम् । भूतत्वमूर्तत्वयोर्जातित्वे परस्पराभावसमानाधिकरणत्वे सति परस्परसमानाधिकरणत्वरूपसाङ्कर्यम् । जातेर्जातिमत्त्वे जातिपरम्परया अनवस्था । विशेषस्य जातिमत्त्वे जातेरेव व्यावर्तकतया स्वतोव्यावृत्तत्वरूपतत्स्वरूपस्य, जात्यन्यत्वे जातिशून्यत्वे च सति समवेतत्वरूपतल्लक्षणस्य वा हानिः । अभावस्य जातिमत्त्वे समवायवैधुर्यं बाधकम् । आत्मत्वजात्यङ्गीकारे चैतेषामभावादित्यर्थः ।

ಹೀಗೆ ಆತ್ಮತ್ವಜಾತಿಯ ವಿಷಯದಲ್ಲಿ ಸಾಧಕವಿದೆ ಎಂಬುದನ್ನು ಉಪಪಾದನ ಮಾಡಿ ಬಾಧಕವಿಲ್ಲ ಎಂಬುದನ್ನು ಉಪಪಾದಿಸುತ್ತಾರೆ, ತುಲ್ಯ ವ್ಯಕ್ತಿಕತ್ವಾದಿ ಬಾಧಕಗಳಿಲ್ಲ ಎಂದು. ಎರಡು ಜಾತಿಗಳು ಸಮನಿಯತವಾಗಿರುವುದು ಅವು ಎರಡು ಬೇರೆ ಬೇರೆ ಜಾತಿಗಳೆನ್ನುವುದಕ್ಕೆ ಬಾಧಕ.

ಉದಾ: ಘಟತ್ವ ಮತ್ತು ಕಲಶತ್ವಗಳು. ಇವು ತುಲ್ಯ ವ್ಯಕ್ತಿಕ, ಅಂದರೆ ಸಮನಿಯತವಾಗದ್ದು ಒಂದೇ ಜಾತಿಯಾಗಿರುತ್ತವೆ. ಭೂತತ್ವ ಮೂರ್ತತ್ವಗಳು ಜಾತಿ ಎನ್ನಲು ಸಾಂಕರ್ಯವು ಬಾಧಕ. ಸಾಂಕರ್ಯವೆಂದರೆ ಪರಸ್ಪರ ಅಭಾವಸಮಾನಾಧಿಕರಣವಾಗಿದ್ದು ಪರಸ್ಪರ ಸಮಾನಾಧಿ ಕರಣವಾಗಿರುವುದು. ಜಾತಿಯಲ್ಲಿ ಜಾತಿ ಇರುವುದಕ್ಕೆ ಜಾತಿಪರಂಪರಾಕಲ್ಪನಾರೂಪವಾದ ಅನವಸ್ಥೆ ಬಾಧಕ. ವಿಶೇಷದಲ್ಲಿ ಜಾತಿ ಇದೆ ಎಂದರೆ ಜಾತಿಯೇ ವ್ಯಾವರ್ತಕವೆನಿಸಬೇಕಾಗುವುದರಿಂದ ಸ್ವತೋವ್ಯಾವೃತ್ತತ್ವರೂಪವಾದ ಅದರ ಸ್ವರೂಪಕ್ಕೇ ಹಾನಿ ಬರುವುದು ಬಾಧಕ. ಅಥವಾ ವಿಶೇಷದ ಲಕ್ಷಣವು ಜಾತ್ಯನ್ಯ–ಜಾತಿಶೂನ್ಯ–ಸಮವೇತ–ತ್ವ. ವಿಶೇಷದಲ್ಲಿ ಜಾತಿಯನ್ನು ಒಪ್ಪಿದರೆ ಜಾತಿಶೂನ್ಯತ್ವರೂಪದ ಅದರ ಲಕ್ಷಣಕ್ಕೇ ಹಾನಿ. ಇದು ಬಾಧಕ. ಅಭಾವದಲ್ಲಿ ಜಾತಿಯನ್ನು ಒಪ್ಪಲು, ಅಭಾವದಲ್ಲಿ ಸಮವಾಯಸಂಬಂಧವಿಲ್ಲದಿರುವುದು ಬಾಧಕ. ಜಾತಿಯು ಸಮವಾಯದಿಂದಿರ ಬೇಕು. ಆತ್ಮತ್ವವನ್ನು ಜಾತಿ ಎಂದು ಒಪ್ಪಲು ಈ ಯಾವ ಬಾಧಕವೂ ಇಲ್ಲ.

**ಆತ್ಮತ್ವಜಾತಿಗೆ ವ್ಯಕ್ತ್ಯಭೇದಸಂದೇಹ ಬಾಧಕವಲ್ಲ**

**व्यक्त्यभेदोऽपि न बाधकः। तथा हि। आत्मत्वजातिसाधनद्वाराऽऽत्मभेदः साध्यः। स च सन्दिग्धः। न च साध्याभावसन्देहोऽनुमानं निरुणद्धि। अनुसानमात्रोच्छेदप्रसङ्गात्। एवं तर्हि गगनत्वादिकमपि जातिः स्यादिति चेन्न। तेषां धर्मिग्राहकमानेन लाघवानुगृहीतेनैकत्वसिद्धेः। न चैवं प्रकृते। धर्मिग्राहक-प्रत्यक्षस्य भेदग्राहकत्वेनोपपादनात्। न चापारमार्थिक-भेदेनाप्युपपत्त्याऽर्थान्तरत्वम्। जातेर्धर्मिसत्तासमानसत्ता-कभेदवद्व्यक्त्याश्रयत्वात्। अन्यथा गगनत्वस्यापि जातित्वापत्तेः।**

ವ್ಯಕ್ತ್ಯಭೇದವೂ ಬಾಧಕವಲ್ಲ. ಏಕೆಂದರೆ ಆತ್ಮತ್ವವನ್ನು ಜಾತಿ ಎಂದು ಸಾಧಿಸುವ ಮೂಲಕ ಆತ್ಮಭೇದವನ್ನು ಸಾಧಿಸಬೇಕಾಗಿದೆ. ಅದರಿಂದ ಅದು ಸಂದಿಗ್ಧ. ಸಾಧ್ಯದ ಅಭಾವ ಸಂದಿಗ್ಧವಾಗಿರುವುದರಿಂದ ಅನುಮಾನ ನಿರುದ್ಧವಾಗುವುದಿಲ್ಲ. ಸಾಧ್ಯಸಂದೇಹ ಅನುಮಾನಕ್ಕೆ ವಿರೋಧಿ ಎಂದು ಒಪ್ಪಿದರೆ ಯಾವ ಅನುಮಾನವನ್ನೂ ಮಾಡಲು ಶಕ್ಯವಾಗಲಾರದು. ಹಾಗಾದರೆ ಆತ್ಮತ್ವದಂತೆ ಆಕಾಶತ್ವಾದಿಗಳೂ ಜಾತಿಯೆನಿಸಲಿ

ಎನ್ನುವಂತಿಲ್ಲ. ಆಕಾಶಾದಿಗಳು ಲಾಘವತರ್ಕಸಹಕೃತವಾದ ಧರ್ಮಿಗ್ರಾಹಕ ಅನುಮಾನದಿಂದ ಏಕಮಾತ್ರವೆಂದೇ ಸಿದ್ಧವಾಗಿರುತ್ತವೆ. ಪ್ರಕೃತದಲ್ಲಿ ಹಾಗೆ ಹೇಳಲು ಬರುವುದಿಲ್ಲ. ಧರ್ಮಿಗ್ರಾಹಕವಾದ ಆತ್ಮಪ್ರತ್ಯಕ್ಷವು ಭೇದಗ್ರಾಹಕವೆಂದು ಉಪಪಾದನ ಮಾಡಿರುವೆವು. ಅಪಾರಮಾರ್ಥಿಕ ಭೇದವನ್ನು ಒಪ್ಪಿದರೂ ಆತ್ಮತ್ವಜಾತಿಯು ಕೂಡುವುದರಿಂದ ಅರ್ಥಾಂತರತ್ವವೆನ್ನಕೂಡದು. ಏಕೆಂದರೆ ಜಾತಿಯು ಧರ್ಮಿಸತ್ತಾ ಸಮಾನಸತ್ತಾಕ ಭೇದ ಉಳ್ಳ ವ್ಯಕ್ತಿಗಳಲ್ಲೆ ಆಶ್ರಯಿಸಿರುತ್ತವೆ. ಇಲ್ಲದಿದ್ದರೆ ಗಗನತ್ವವೂ ಜಾತಿಯೆನಿಸಬೇಕಾದೀತು.

ननु तथापि व्यक्त्यभेदो बाधकः । यथोक्तम्–

‘व्यक्तेरभेदस्तुल्यत्वं सङ्करोऽथानवस्थितिः ।
रूपहानिरसम्बन्धो जातिबाधकसङ्ग्रहः’

इत्यत आह —**व्यक्त्यभेद इति ।** आत्मत्वस्य जातित्वे व्यक्त्यभेदः स्वाश्रयप्रतियोगिकभेदवदवृत्तित्वं विरोधीति न वाच्यम् । तस्य साक्षाज्जातित्वानुमितिविरोधित्वे मानाभावात् । फलीभूतात्मभेदानुमितौ च तन्निश्चयस्यैव बाधविधया विरोधित्वात्, तस्य च प्रकृतेऽभावादित्याह —**आत्मत्वेति ।** आत्मभेदः आत्मत्वस्य स्वाश्रयप्रतियोगिकभेदवद्वृत्तित्वम् । **स च सन्दिग्ध इति ।** तत्सन्देहस्य च व्यक्त्यभेदसन्देहतया न विरोधित्वमिति भावः । ननु तत्सन्देह एवानुमितिप्रतिबन्धको भविष्यतीत्यत आह —**न चेति । अनुमानमात्रोच्छेदप्रसङ्ग इति ।** सर्वत्र साध्यसन्देहसत्त्वादिति भावः । एतच्च साध्यसन्देहः पक्षतेति मतेनोक्तम् । सिद्ध्यभावपक्षतापक्षे तु साध्यसन्देहस्यानुमित्यव्यवहितपूर्वमनावश्यकत्वात् सन्दिग्धसाध्यकानुमानोच्छेदप्रसङ्गो द्रष्टव्यः ।

ननु संशयसाधारणव्यक्त्यभेदज्ञानमात्रस्य जातित्वानुमितौ मणिमन्त्रादिवत् स्वातन्त्र्येणैव विरोधित्वम् । अन्यथोक्तक्रमेण गगनत्वादिजातिसिद्धिप्रसङ्गात् । तथाच नात्मत्वजातिसिद्धिरित्याशङ्कते —**एवमिति ।**

**व्यक्त्यभेदसन्देहस्य जातित्वानुमित्यविरोधित्व इत्यर्थः। स्यादेवं यदि प्रकृत इव गगनव्यक्त्यभेदः सन्दिग्धः स्यात्। न चैवम्। अपि तु प्रमित एव। तथाच तत एवातिप्रसङ्गवारणादुक्तविरोधित्वे मानाभाव इति भावेन समाधत्ते —धर्मिग्राहकेति। शब्दो द्रव्याश्रितो गुणत्वाद्रूपवदित्यनुमानेन शब्दस्यैकद्रव्याश्रितत्वे लाघवमिति लाघवग्रहसहकृतेन पृथिव्याद्यष्टद्रव्याश्रितत्वबाधे सत्यष्टद्रव्यातिरिक्तैकद्रव्याश्रितत्वस्यैव सिद्ध्या गगनत्वादेर्जातित्वाभावनिश्चयादित्यर्थः। धर्मिग्राहकेत्यनेनोपजीव्यतया प्राबल्यं सूचितम्। तेन वैपरीत्यशङ्कानवकाशः।**

ಆತ್ಮತ್ವವನ್ನು ಜಾತಿ ಎಂದೊಪ್ಪಲು ವ್ಯಕ್ತ್ಯಭೇದವು ಬಾಧಕ. ಅದು ಕಿರಣಾವಲಿಗ್ರಂಥದಲ್ಲಿ ಹೀಗೆ ಉಕ್ತವಾಗಿದೆ— 'ವ್ಯಕ್ತ್ಯಭೇದ, ತುಲ್ಯತ್ವವ್ಯಕ್ತಿತ್ವ, ಸಾಂಕರ್ಯ, ಅನವಸ್ಥಾ, ಸ್ವರೂಪಹಾನಿ ಮತ್ತು ಸಮವಾಯಸಂಬಂಧರಾಹಿತ್ಯ - ಇದು ಜಾತಿಬಾಧಕ ಸಂಗ್ರಹ' ಎಂದು. ಈ ಶಂಕೆಗೆ ಸಮಾಧಾನ ವನ್ನು ಹೇಳುತ್ತಾರೆ. ಆತ್ಮತ್ವವು ಜಾತಿ ಎಂದೆನ್ನಲು ವ್ಯಕ್ತ್ಯಭೇದ ಅಂದರೆ ಸ್ವಾಶ್ರಯಪ್ರತಿಯೋಗಿಕ ಭೇದವತ್ತಿನಲ್ಲಿಲ್ಲದಿರುವುದು ವಿರೋಧಿ ಎನ್ನಬಾರದು. ಅದು ಸಾಕ್ಷಾತ್ತಾಗಿ ಜಾತಿತ್ವಾನುಮಿತಿಗೆ ವಿರೋಧಿಯೆನ್ನಲು ಪ್ರಮಾಣವಿಲ್ಲ. ಜಾತಿತ್ವಾನುಮಿತಿ ಬಂದ ಬಳಿಕ ಅದರ ಫಲವಾಗಿ ಆತ್ಮಭೇದಾನುಮಿತಿ ಬರಲು, ಅಭೇದನಿಶ್ಚಯವನ್ನೇ ಬಾಧರೂಪವಾಗಿ ವಿರೋಧಿ ಎನ್ನಬೇಕು. ಅದು ಪ್ರಕೃತದಲ್ಲಿಲ್ಲ. ಏಕೆಂದರೆ ಆತ್ಮಭೇದ, ಅಂದರೆ ಆತ್ಮತ್ವವು ಸ್ವಾಶ್ರಯಪ್ರತಿಯೋಗಿಕ ಭೇದವತ್ತಿನಲ್ಲಿರುವುದು ಈಗ ಸಾಧ್ಯ. ಅದರ ಸಂದೇಹವು ವ್ಯಕ್ತ್ಯಭೇದ ಸಂದೇಹ ರೂಪವಾಗಿ ವಿರೋಧಿ ಎನ್ನಲಾಗದು. ಅದರ ಸಂದೇಹವೇ ಅನುಮಿತಿ ಪ್ರತಿಬಂಧಕ ಎನ್ನುತ್ತೇವೆ ಎಂದರೆ, ಎಲ್ಲ ಅನುಮಾನಗಳಲ್ಲಿಯೂ ಮೊದಲಿಗೆ ಸಾಧ್ಯಸಂದೇಹವಿರುವುದರಿಂದ ಎಲ್ಲಿಯೂ ಅನುಮಾನ ಪ್ರಮಾಣವಿಲ್ಲವಾಗುವ ಪ್ರಸಂಗವಿದೆ. ಇದು, 'ಪಕ್ಷತಾ ಎಂದರೆ ಸಾಧ್ಯಸಂದೇಹ' ಎನ್ನುವ ಮತಾನುಸಾರ ಹೇಳಿದ್ದು. ಸಿಷಾಧಯಿಷಾವಿರಹವಿಶಿಷ್ಟ ಸಿದ್ಧ್ಯಭಾವವನ್ನು ಪಕ್ಷತಾ ಎನ್ನುವ ಪಕ್ಷದಲ್ಲಿ ಸಾಧ್ಯಸಂದೇಹವು ಅನುಮಿತಿಗೆ ಅವ್ಯವಹಿತಪೂರ್ವದಲ್ಲಿ ಇರಬೇಕಾದ ಆವಶ್ಯಕತೆ ಇಲ್ಲದಿರುವುದರಿಂದ, 'ಸಂದಿಗ್ಧ ಸಾಧ್ಯಕ ಅನುಮಾನವೆಲ್ಲಿಯೂ ಇಲ್ಲವೆಂದಾದೀತೆಂ'ದು ಆಪಾದನೆಯನ್ನು ತಿಳಿಯಬೇಕು.

'ಸಂಶಯವಿರಲಿ ನಿಶ್ಚಯವಿರಲಿ ವ್ಯಕ್ತ್ಯಭೇದ ಜ್ಞಾನವೆಲ್ಲವೂ ಜಾತಿತ್ವಾನುಮಿತಿಗೆ ಮಣಿಮಂತ್ರಾದಿಗಳಂತೆ ಸ್ವತಂತ್ರವಾಗಿಯೇ ವಿರೋಧಿ ಎನ್ನಬೇಕು. ಇಲ್ಲದಿದ್ದರೆ ಹಿಂದೆ ಹೇಳಿದಂತೆ ಗಗನತ್ವಾದಿಗಳೂ ಜಾತಿ ಎಂದು ಸಿದ್ಧವಾಗುವ ಪ್ರಸಂಗವಿದೆ. ಅದರಿಂದ ಆತ್ಮತ್ವ ಜಾತಿ ಸಿದ್ಧಿಯಾಗುವುದಿಲ್ಲ' ಎಂದು ಆಶಂಕೆ. 'ವ್ಯಕ್ತ್ಯಭೇದ ಸಂದೇಹವು ಜಾತಿತ್ವಾನುಮಿತಿಗೆ ವಿರೋಧಿಯಲ್ಲ

ಎಂದರೆ, ಗಗನತ್ವಾದಿಗಳೂ ಜಾತಿ ಎನಿಸಲಿ' ಎಂದು. ಇದಕ್ಕೆ ಸಮಾಧಾನ ಹೀಗೆ— 'ಗಗನತ್ವಾದಿ ಜಾತಿಯಾಗಲಿ ಎಂದು ಹೇಳಬಾರದು. ಪ್ರಕೃತ ಆತ್ಮವ್ಯಕ್ತ್ಯಭೇದದಂತೆಯೇ ಗಗನ ವ್ಯಕ್ತ್ಯಭೇದವೂ ಸಂದಿಗ್ಧವಾಗಿದ್ದರೆ ಹಾಗೆ ಹೇಳಬಹುದಿತ್ತು. ಆದರೆ ಅದು ಸಂದಿಗ್ಧವಾಗಿಲ್ಲ. ಪ್ರಮಾಣದಿಂದ ನಿಶ್ಚಿತವೇ ಆಗಿದೆ. ಆದರಿಂದ ಅಭೇದವಾದಿಯು ಹೇಳುವ ಅತಿಪ್ರಸಂಗವಿಲ್ಲದಿರುವುದರಿಂದ ಆತ್ಮವ್ಯಕ್ತ್ಯಭೇದಸಂದೇಹವು ಭೇದಾನುಮಿತಿಗೆ ವಿರೋಧಿ ಎನ್ನಲು ಪ್ರಮಾಣವಿಲ್ಲ' ಎಂದು. ಶಬ್ದವು ದ್ರವ್ಯಾಶ್ರಿತವೆ ಇರಬೇಕು. ಅದೊಂದು ಗುಣವಾಗಿರುವುದರಿಂದ, ರೂಪದಂತೆ ಎಂಬ ಅನುಮಾನದಿಂದ ಶಬ್ದಾಶ್ರಯ ದ್ರವ್ಯ ಸಿದ್ಧವಾಗುವಾಗ ಶಬ್ದವು ಏಕದ್ರವ್ಯದಲ್ಲಿ ಆಶ್ರಿತವೆಂದರೆ ಲಾಘವವೆನ್ನುವ ಲಾಘವಜ್ಞಾನ ಸಹಕಾರದಿಂದ ಏಕದ್ರವ್ಯವು ಆಶ್ರಯವೆಂದು ಸಿದ್ಧವಾಗುವುದು. ಆ ಏಕದ್ರವ್ಯವು ಪೃಥಿವ್ಯಾದಿ ಅಷ್ಟದ್ರವ್ಯಗಳಲ್ಲಿ ಯಾವುದೂ ಅಲ್ಲ ಎಂಬ ಬಾಧ ಬುದ್ಧಿಯಿಂದ ಅಷ್ಟದ್ರವ್ಯಗಳಿಗಿಂತ ಅತಿರಿಕ್ತವಾದ ಏಕದ್ರವ್ಯವೇ ಸಿದ್ಧವಾಗುವುದು. ಹೀಗಾಗಿ ಗಗನತ್ವವೆಂಬ ಧರ್ಮಿಗೆ ಗ್ರಾಹಕವಾಗಿರುವ ಪ್ರಮಾಣವೇ ಅದನ್ನು ಗಗನವೆಂಬ ಏಕದ್ರವ್ಯಾಶ್ರಿತವೆಂದು ತಿಳಿಸುತ್ತಿರುವುದರಿಂದ ಅದು ಜಾತಿಯಲ್ಲವೆಂದೇ ನಿಶ್ಚಿತವಾಗಿದೆ. 'ಈ ಪ್ರಮಾಣವು ಧರ್ಮಿಗ್ರಾಹಕ' ವಾದುದರಿಂದ, ಅದು ಉಪಜೀವ್ಯ ಪ್ರಮಾಣವೆಂದೂ ಅದರ ವಿರೋಧವಿರುವಾಗ ಗಗನತ್ವವನ್ನು ಜಾತಿಯೆಂದು ಸಾಧಿಸಲಾಗದೆಂದೂ ತಿಳಿಸುತ್ತಿದ್ದಾರೆ. ಆದರಿಂದ, ಗಗನತ್ವಜಾತಿಸಾಧಕ ಪ್ರಮಾಣವೇ ಪ್ರಬಲವಾಗಿದ್ದು ಗಗನವ್ಯಕ್ತಿಭೇದವನ್ನು ಅದೇ ತಿಳಿಸಲಿ ಎಂದು ವಿಪರೀತವಾಗಿ ಶಂಕೆ ಮಾಡಲು ಅವಕಾಶವಿಲ್ಲ.

**प्रत्यक्षस्येति ।** साक्षिणो नाहं निर्दुःख इत्यादिरूपस्य भेदग्राहकत्वेनैव पूर्वमुक्तत्वादित्यर्थः । एवं च नोक्ताभाससाम्यमित्याशयः ।

आत्मत्वं नानाव्यक्तिनिष्ठं जातित्वादिति फलीभूतानुमाने साध्यशरीरे भेदसामान्यप्रवेशादारोपितभेदसिद्ध्याऽप्यनुमानपर्यवसानादर्थान्तरमित्याशङ्क्य निराचष्टे – **न चेति ।** आत्मत्वजात्युपपत्त्या आत्मत्वस्य जातित्वोपपत्त्या **। जातेरिति ।** तथाच धर्मिसत्तासमानसत्ताकभेदस्यैव साध्यघटकत्वादात्मनि पारमार्थिकभेदं विना साध्यापर्यवसानान्नार्थान्तरत्वमिति भावः । ननु जातेर्भेदवद्व्यक्त्याश्रितत्वमित्येव नियमो न तु धर्मिसत्तासमानसत्ताकत्वमपि तत्र निवेश्यत इत्यत आह

– **अन्यथेति । जातित्वापत्तेरिति ।** गगनेऽप्यौपाधिकभेदसत्त्वादिति भावः । एतच्च मायिमतेनोक्तम् । सिद्धान्तिभिरौपाधिकभेदानङ्गीकारात् ।

ಆತ್ಮಪ್ರತ್ಯಕ್ಷವು ಸಾಕ್ಷಿಪ್ರತ್ಯಕ್ಷ. ಅದು 'ನಾನು ನಿರ್ದುಃಖನಲ್ಲ' ಎಂದು ಜೀವೇಶ್ವರ ಭೇದವನ್ನೇ ಗ್ರಹಿಸುತ್ತದೆ ಎಂದು ಹಿಂದೆ ಹೇಳಿದ್ದರಿಂದ ಆತ್ಮತ್ವ ಜಾತ್ಯನುಮಾನಗಳಿಗೆ ಧರ್ಮಿಗ್ರಾಹಕ ಪ್ರಮಾಣವಿರೋಧವಿಲ್ಲ. ಹೀಗಾಗಿ ಸಾಧಕಬಾಧಕ ಭಾವಾಭಾವಗಳು ಪ್ರಕೃತಾನುಮಾನಗಳಿಗೆ ಇರುವುದರಿಂದ ಆಭಾಸ ಸಮಾನಯೋಗಕ್ಷೇಮತ್ವವಿಲ್ಲ.

ಆತ್ಮತ್ವವು ನಾನಾವ್ಯಕ್ತಿನಿಷ್ಠ, ಜಾತಿಯಾದ್ದರಿಂದ ಎಂದು ಫಲೀಭೂತವಾದ ಅನುಮಾನದಲ್ಲಿ ಸಾಧ್ಯಶರೀರದಲ್ಲಿ ಭೇದಸಾಮಾನ್ಯ ನಿವೇಶಿತವಾಗಿರುವುದರಿಂದ ಆರೋಪಿತಭೇದವಿಟ್ಟುಕೊಂಡು ಕೂಡ ಪಕ್ಷದಲ್ಲಿ ಸಾಧ್ಯಪರ್ಯವಸಾನ ಮಾಡಲು ಶಕ್ಯವಿರುವುದರಿಂದ ಅರ್ಥಾಂತರತ್ವ ದೋಷ ಬರುತ್ತದೆ ಎಂಬ ಶಂಕೆಗೆ ಸಮಾಧಾನ ಹೇಳುತ್ತಾರೆ. ಆತ್ಮತ್ವಜಾತ್ಯುಪಪತ್ತಿ ಎಂದರೆ ಆತ್ಮತ್ವಕ್ಕೆ ಜಾತಿತ್ವೋಪಪತ್ತಿ. ಆರೋಪಿತ ಭೇದವನ್ನಿಟ್ಟುಕೊಳ್ಳಲು ಬರುವುದಿಲ್ಲ. ಏಕೆಂದರೆ, ಸಾಧ್ಯಶರೀರದಲ್ಲಿ ಧರ್ಮಿಸತ್ತಾಸಮಾನಸತ್ತಾಕ ಭೇದವನ್ನೇ ನಿವೇಶ ಮಾಡಿರುವುದರಿಂದ ಆತ್ಮನಲ್ಲಿ ಪಾರಮಾರ್ಥಿಕ ಭೇದವಿಲ್ಲದೆ ಸಾಧ್ಯಪರ್ಯವಸಾನ ಅಶಕ್ಯವಾಗುವುದರಿಂದ ಅರ್ಥಾಂತರತ್ವವಿಲ್ಲ ಎಂದು ಅಭಿಪ್ರಾಯ. ಜಾತಿಯು ಭೇದವತ್ತಾದ ವ್ಯಕ್ತಿಗಳನ್ನು ಆಶ್ರಯಿಸುತ್ತದೆ ಎಂದೇ ನಿಯಮ, ಹೊರತು, ಧರ್ಮಿಸತ್ತಾ ಸಮಾನ ಸತ್ತಾಕತ್ವವನ್ನೂ ಕೂಡ ಅದರಲ್ಲಿ ಸೇರಿಸಬೇಕಾಗಿಲ್ಲ ಎಂದರೆ ಅತಿಪ್ರಸಕ್ತಿ. ಆಕಾಶದಲ್ಲಿಯೂ ಘಟಮಠಾದಿ ಉಪಾಧಿಗಳಿಂದ ಭೇದವಿರುವುದರಿಂದ ಆಕಾಶತ್ವವೂ ಜಾತಿಯೆನಿಸಲಿ ಎಂದು. ಇದು ಅಭೇದವಾದಿಮತಾನುಸಾರ ಹೇಳಿದ್ದು. ಸಿದ್ಧಾಂತದಲ್ಲಿ ಆಕಾಶದಲ್ಲಿ ಸ್ವಾಭಾವಿಕ ಭೇದವೆ ಇದೆ; ಔಪಾಧಿಕ ಭೇದವನ್ನು ಅಂಗೀಕರಿಸಿಲ್ಲ.

**ಆತ್ಮತ್ವಜಾತಿಗೆ ವ್ಯಕ್ತ್ಯಭೇದ ಬಾಧಕ**

**नन्वेतावताऽऽत्मत्वस्य जातित्वमात्रं सिध्यति नात्मभेदः । न च तथात्वे व्यक्त्यभेदो बाधकः स्यात् । स ह्यनुगतव्यवहाराभावेनानुगतव्यवहाररूपजातिविषयकप्रमाणविघटनेन दूषणम् । न चात्मत्वजातावनुगतव्यवहारः । येन तद्विघटनेन जातिरेव न सिध्येदिति व्यक्त्यभेदो दूषणं स्यात् । किन्तु त्वदुक्तानुमानान्येव । ततः कथं भेदसिद्धिरिति चेत् । सत्यम् । नात्र व्यक्त्यभेदो जातेः प्रमाणविघटनेन दूषणम् ।**

**येनैवमुपलभ्येमहि । किं तर्हि लक्षणविघटनद्वारा । नित्यमेकमनेकानुगतमिति हि तल्लक्षणम् ।**

'ಇಷ್ಟರಿಂದ ಆತ್ಮತ್ವವು ಜಾತಿ ಎಂದು ಮಾತ್ರ ಸಿದ್ಧವಾಗುವುದು, ಆತ್ಮಭೇದ ಸಿದ್ಧವಾಗುವುದಿಲ್ಲ. ಆತ್ಮಭೇದವಿಲ್ಲದಿದ್ದರೆ ವ್ಯಕ್ತ್ಯಭೇದವು ಆತ್ಮತ್ವ ಜಾತಿಗೆ ಬಾಧಕವೆನ್ನುವಂತಿಲ್ಲ. ಏಕೆಂದರೆ ವ್ಯಕ್ತ್ಯಭೇದವು ಅನುಗತವ್ಯವಹಾರವಿಲ್ಲದಿರಲು ಕಾರಣವಾಗಿ ಅನುಗತವ್ಯವಹಾರರೂಪವಾದದ ಜಾತಿವಿಷಯಕ ಪ್ರಮಾಣ ವಿಘಟನ ಮಾಡುವುದರಿಂದ ದೂಷಕವಾಗಿದೆ ಎನ್ನಬೇಕು. ಆದರೆ ಇಲ್ಲಿ ಪ್ರಕೃತ ಆತ್ಮತ್ವ ಜಾತಿ ವಿಷಯದಲ್ಲಿ ಅನುಗತವ್ಯವಹಾರವು ಪ್ರಮಾಣವಲ್ಲ. ಅದು ಪ್ರಮಾಣವಾಗಿರುತ್ತಿದ್ದರೆ, ಅದನ್ನು ವಿಘಟನ ಮಾಡುವುದರಿಂದ ಜಾತಿಯು ಸಿದ್ಧವಾಗಲಾರದೆಂದು, ವ್ಯಕ್ತ್ಯಭೇದವು ಬಾಧಕವೆನ್ನಬಹುದಿತ್ತು. ಪ್ರಮಾಣವು ನೀವು ಹೇಳುವ ಅನುಮಾನಗಳೆ. ಅದರಿಂದ ಹೇಗೆ ಭೇದಸಿದ್ಧಿ?' ನಿಜ, ಆದರೆ, ವ್ಯಕ್ತ್ಯಭೇದವು ಜಾತಿಗೆ ಪ್ರಮಾಣವಿಘಟನದಿಂದ ಬಾಧಕವೆಂದು ನಾವು ಹೇಳುವುದಿಲ್ಲ. ನಾವು ಹಾಗೆ ಹೇಳಿದ್ದರೆ ಹೀಗೆ ಆಕ್ಷೇಪಿಸಬಹುದಾಗಿತ್ತು. ನಾವು ಹೇಳುವುದು, ವ್ಯಕ್ತ್ಯಭೇದವು ಜಾತಿಗೆ ಲಕ್ಷಣ ವಿಘಟನದ್ವಾರಾ ಬಾಧಕ ಎಂದು. ನಿತ್ಯ, ಏಕ, ಅನೇಕಾನುಗತ ಎಂದು ತಾನೆ ಜಾತಿಯ ಲಕ್ಷಣ?

ननूक्तानुकूलतर्कसहकृतेनोक्तानुमानजातेनात्मत्वजातिसिद्धावपि नात्मभेदसिद्धिः । न च तत एव तदनुमानसम्भवः । अप्रयोजकत्वात् । उक्तनियमस्य निर्मूलत्वादित्याशङ्कां दर्शयति **—नन्विति ।** तथात्वे आत्मभेदाभावे **। बाधक इति ।** आत्मत्वजातिसिद्धिविरोधीत्यर्थः । तथा च विपक्षे बाधकतर्कसम्भवान्नाप्रयोजकत्वमित्यभिसन्धिः । व्यक्त्यभेदो हि न साक्षाज्जातिसिद्धिविरोधी । मानाभावात् । अपि तु कारणविघटनद्वारा । कारणं च कचिदनुगतव्यवहारः, कचिदनुमानम् । प्रकृते त्वनुमानमेव । न च तत्र तस्य व्यक्त्यभेदस्य विरोधित्वं मानाभावादित्याह **—स हीति ।**

अनुगतव्यवहारो नाम नानेकेष्वेकधर्मज्ञानम् । अनुगतधर्मसिद्धेः पूर्वं तदसिद्धेः । किन्त्वनेकेष्वेकाकारज्ञानम् । व्यक्तिभेदश्च व्यक्त्यभेदघटित-

तादृशप्रमाणविरहसम्पादकत्वेन जातिसिद्धिविरोधीत्यर्थः । **न चेति** । अन्यथाऽनुमानवैयर्थ्यमिति भावः ।

यदुक्तं न चात्मत्वजातावित्यादि तत्सत्यमेव । किन्तु व्यक्त्यभेदस्य जातिलक्षणविरोधितया तदभावधीसम्पादकत्वाज्जातिसिद्धिविरोधित्वमिति समाधत्ते – **सत्यमिति** । 'अत्र जातेः' प्रकृतसाधनविषयीभूतात्मत्व-जातेरित्यर्थः । यद्यपि व्यक्त्यभेदस्य जातित्वाभावव्याप्यतया साक्षादपि जातिसिद्धिविरोधित्वसम्भवः । तथाप्यनुकूलतर्कास्फूर्तौ तादृशव्याप्यत्वस्य दुर्ग्रहत्वाल्लक्षणविघटनद्वारेत्युक्तम् । लक्षणस्य च लक्ष्यतावच्छेदक-व्यापकत्वं, व्यापकाभावस्य व्याप्याभावसाधकत्वं च प्रसिद्धमेव । तथाच व्यक्त्यभेदे लक्षणाभावापत्त्या जातित्वानुपपत्तिरूपानुकूलतर्कसत्त्वादुक्त-जातित्वहेतुकानुमानेनात्मभेदसिद्धिरावश्यकीत्याशयः ।

ಹೀಗೆ ಹೇಳಿದ ಅನುಕೂಲತರ್ಕ ಸಹಿತವಾದ ಅನುಮಾನಗಳಿಂದ ಆತ್ಮತ್ವವು ಜಾತಿ ಎಂದು ಸಿದ್ಧವಾದರೂ ಆತ್ಮಭೇದ ಸಿದ್ಧಿಸುವುದಿಲ್ಲ. ಆತ್ಮತ್ವ ಜಾತಿಯಿಂದಲೆ ಆತ್ಮಭೇದವನ್ನು ಅನುಮಾನ ಮಾಡುವೆವೆಂದರೆ ಅದು ಅಸಂಭವ. ಏಕೆಂದರೆ ಅನುಮಾನ ಅಪ್ರಯೋಜಕ. ಆತ್ಮತ್ವವು ಜಾತಿಯಾಗಬೇಕಾದರೆ ಆತ್ಮಭೇದವಿರಲೇಬೇಕೆನ್ನುವ ನಿಯಮ ನಿರ್ಮೂಲ. 'ಆತ್ಮಭೇದವಿಲ್ಲದಿದ್ದರೆ ವ್ಯಕ್ತ್ಯಭೇದವು ಆತ್ಮತ್ವಜಾತಿಗೆ ಬಾಧಕ, ಆತ್ಮತ್ವಜಾತಿಸಿದ್ಧಿಗೆ ವಿರೋಧಿ. 'ಸಾಧ್ಯವಿಲ್ಲದಿದ್ದಲ್ಲಿ ಹೇತುವಿರಲಾರದೆಂಬ ಬಾಧಕ ತರ್ಕವಿರುವುದರಿಂದ ಅದು ಅಪ್ರಯೋಜಕವಲ್ಲ' ಎನ್ನುವಂತಿಲ್ಲ. ಏಕೆಂದರೆ ವ್ಯಕ್ತ್ಯಭೇದವು ಸಾಕ್ಷಾತ್ತಾಗಿ ಜಾತಿಸಿದ್ಧಿಗೆ ವಿರೋಧಿಯಲ್ಲ, ಹಾಗೆನ್ನಲು ಪ್ರಮಾಣವಿಲ್ಲ. ಕಾರಣವಿಘಟನ ದ್ವಾರಾ ವಿರೋಧಿ ಎನ್ನಬೇಕು. ಕಾರಣವು ಕೆಲವೆಡೆ ಅನುಗತವ್ಯವಹಾರ. ಕೆಲವೆಡೆ ಅನುಮಾನ. ಪ್ರಕೃತದಲ್ಲಿ ಅನುಮಾನವೆ. ಅನುಮಾನಕ್ಕೆ ವ್ಯಕ್ತ್ಯಭೇದ ವಿರೋಧಿಯಲ್ಲ, ಏಕೆಂದರೆ ಅದಕ್ಕೆ ಪ್ರಮಾಣವಿಲ್ಲ ಎಂದು ಶಂಕೆ.

ಅನುಗತ್ಯವ್ಯವಹಾರವೆಂದರೆ ಅನೇಕ ವ್ಯಕ್ತಿಗಳಲ್ಲಿ ಏಕಧರ್ಮಜ್ಞಾನವೆನ್ನಲು ಬರುವುದಿಲ್ಲ. ಅನುಗತ ವ್ಯವಹಾರದಿಂದ ಸಿದ್ಧವಾಗುವ ಮೊದಲು ಅನುಗತ ಧರ್ಮವು ಸಿದ್ಧವಾಗಿರುವುದಿಲ್ಲ. ಅದರಿಂದ 'ಅನೇಕ ವ್ಯಕ್ತಿಗಳ ವಿಷಯದಲ್ಲಿ ಏಕಾಕಾರವಾದ ಜ್ಞಾನವೆ ಅನುಗತವ್ಯವಹಾರವೆನ್ನಬೇಕು. ವ್ಯಕ್ತ್ಯಭೇದವು ವ್ಯಕ್ತಿಭೇದ ಘಟಿತವಾದ ಆ ಪ್ರಮಾಣವಿಲ್ಲದಂತೆ ಮಾಡುವುದರಿಂದ ಜಾತಿಸಿದ್ಧಿಗೆ ವಿರೋಧಿಯಾಗುವುದು. ಆದರೆ ಪ್ರಕೃತ ಆತ್ಮತ್ವ ಜಾತಿ ಸಿದ್ಧಿಗೆ ಅನುಗತ ವ್ಯವಹಾರವು ಪ್ರಮಾಣವಲ್ಲ.

ಪ್ರಮಾಣವಾಗಿದ್ದರೆ ಅದರಿಂದಲೆ ಜಾತಿಸಿದ್ಧಿಯಾಗುತ್ತಿರುವಾಗ ಅನುಮಾನಗಳನ್ನು ಹೇಳುವುದು ವ್ಯರ್ಥವಾಗುವುದು.

ಈ ಆಕ್ಷೇಪವು ಸರಿಯೆ. ವ್ಯಕ್ತ್ಯಭೇದವು ಜಾತಿಪ್ರಮಾಣಕ್ಕೆ ವಿರೋಧಿಯಲ್ಲ, ಆದರೆ ಜಾತಿಲಕ್ಷಣಕ್ಕೆ ವಿರೋಧಿಯಾಗಿದೆ. ಲಕ್ಷಣವಿರೋಧಿಯಾದ್ದರಿಂದ ಅದು ಜಾತಿತ್ವಾಭಾವ ನಿಶ್ಚಯವನ್ನುಂಟು ಮಾಡಿ ಜಾತಿಸಿದ್ಧಿಗೆ ವಿರೋಧಿಯಾಗುತ್ತದೆ. 'ಅತ್ರ ಜಾತೇಃ' ಎಂದರೆ ಪ್ರಕೃತ ನಾವು ಸಾಧಿಸುತ್ತಿರುವ ಆತ್ಮತ್ವಜಾತಿಯ ವಿಷಯದಲ್ಲಿ ಎಂದರ್ಥ.

ಯದ್ಯಪಿ ವ್ಯಕ್ತ್ಯಭೇದವು ಜಾತಿತ್ವಾಭಾವಕ್ಕೆ ವ್ಯಾಪ್ಯವಾಗುವುದರಿಂದ ಸಾಕ್ಷಾತ್ತಾಗಿಯೂ ಜಾತಿ ಸಿದ್ಧಿವಿರೋಧಿಯಾಗಬಹುದು. ಆದರೂ ಅನುಕೂಲ ತರ್ಕ ಹೊಳೆಯದಿರುವಾಗ ಅಂಥ ವ್ಯಾಪ್ಯತ್ವ ನಿಶ್ಚಯವಾಗದಿರುವುದರಿಂದ ಕೇವಲ ಲಕ್ಷಣವಿಘಟನದ್ವಾರಾ ಜಾತಿಸಿದ್ಧಿವಿರೋಧಿ ಎಂದಿದ್ದಾರೆ. ಲಕ್ಷಣವು ಲಕ್ಷ್ಯತಾವಚ್ಛೇದಕಕ್ಕೆ ವ್ಯಾಪಕವೆನ್ನುವುದೂ ವ್ಯಾಪಕಾಭಾವವು ವ್ಯಾಪ್ಯಾಭಾವಕ್ಕೆ ಸಾಧಕವೆನ್ನುವುದೂ ಪ್ರಸಿದ್ಧವೇ ಇದೆ. ಆದರಿಂದ ವ್ಯಕ್ತ್ಯಭೇದವಿದ್ದರೆ ಲಕ್ಷಣವಿಲ್ಲವೆಂದಾಗುವುದರಿಂದ ಜಾತಿತ್ವಾನುಪಪತ್ತಿ ಎಂದು ಅನುಕೂಲತರ್ಕವಿರುವುದರಿಂದ ನಾವು ಹೇಳಿದ ಜಾತಿತ್ವ ಹೇತುಕ ಅನುಮಾನದಿಂದ ಆತ್ಮಭೇದ ಅವಶ್ಯ ಸಿದ್ಧವಾಗುವುದೆಂದು ಅಭಿಪ್ರಾಯ.

**ननु कथं व्यक्त्यभेदस्य जातिलक्षणविघटकत्वमिति चेत्तस्य व्यक्तिभेदघटितत्वादित्याशयेन तार्किकोक्तं जातिलक्षणमाह — नित्य-मिति । संयोगादावतिव्याप्तिवारणाय नित्यमिति । गगनपरिमाणादावति-व्याप्तिवारणायानेकानुगतमिति । अनेकसमवेतमित्यर्थः । तेनात्यन्ताभावे नातिव्याप्तिः । अनेकसमवेतत्वं च न पदार्थविभाजकोपाधिरूपेण । तथा सत्यनेकवृत्तितावच्छेदकपदार्थविभाजकोपाधिमत्त्वरूपस्य तस्य विशेषेऽपि सत्त्वादतिव्याप्तेः । किन्तु प्रत्येकं स्वसमवायिप्रतियोगिकभेदवत्-समवेतत्वपर्यवसितमेव विवक्षितमिति ज्ञापनायैकमित्युक्तम् । एकमिति क्रियाविशेषणम् । तेनैकसम्बन्धेन समवायेनानेकवृत्तित्वलाभ इत्यप्याहुः ।**

ವ್ಯಕ್ತ್ಯಭೇದವು ಹೇಗೆ ಜಾತಿಲಕ್ಷಣ ವಿಘಟಕ ಎಂದರೆ ಜಾತಿಲಕ್ಷಣವು ವ್ಯಕ್ತಿಭೇದ ಘಟಿತವಾಗಿರುವುದರಿಂದ ಎಂದು ಉತ್ತರ. ಈ ಅಭಿಪ್ರಾಯದಿದಂದ ತಾರ್ಕಿಕೋಕ್ತವಾದ ಜಾತಿಲಕ್ಷಣವನ್ನು ಹೇಳುತ್ತಾರೆ. 'ನಿತ್ಯ, ಏಕ, ಅನೇಕಾನುಗತವು ಸಾಮಾನ್ಯ' ಎಂದು. ಏಕ, ಅನೇಕಾನುಗತವಾದ ಸಂಯೋಗವನ್ನು ವ್ಯಾವೃತ್ತಿಮಾಡಲು ನಿತ್ಯ ಎಂದಿದ್ದಾರೆ. ಸಂಯೋಗವು

ಅನಿತ್ಯವಾದ್ದರಿಂದ ವ್ಯಾವೃತ್ತವಾಗುವುದು. ಗಗನಪರಿಮಾಣ ನಿತ್ಯ ಏಕವಾದರೂ ಅನೇಕಾನುಗತವಲ್ಲವಾದ್ದರಿಂದ ಜಾತಿಯಲ್ಲ. ಅನೇಕಅನುಗತವೆಂದರೆ ಅನೇಕದಲ್ಲಿ ಸಮವೇತ. ಹೀಗೆ ಹೇಳಿದ್ದರಿಂದ ಅನೇಕದಲ್ಲಿ ಸ್ವರೂಪಸಂಬಂಧದಿಂದಿರುವ ಅತ್ಯಂತಾಭಾವದಲ್ಲಿ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ. 'ನಿತ್ಯ ಅನೇಕಸಮವೇತ' ಎಂದಿದ್ದರೆ ಸಾಕಾಗಿತ್ತು. 'ಏಕಂ' ಎಂದುದು ಏಕೆ ಎಂದರೆ, ಅನೇಕ ಸಮವೇತತ್ವವಿಲ್ಲಿ ಪದಾರ್ಥವಿಭಾಜಕೋಪಾಧಿ ರೂಪದಿಂದಲ್ಲ, ಅದು ವಿಶೇಷದಲ್ಲಿ ಬರುತ್ತದೆ, ಅನೇಕ ವೃತ್ತಿತಾವಚ್ಛೇದಕ ಪದಾರ್ಥವಿಭಾಜಕೋಪಾಧಿಯಾದ ವಿಶೇಷತ್ವವು ವಿಶೇಷದಲ್ಲಿ ಇದೆ. ಆದರಿಂದ ಅತಿವ್ಯಾಪ್ತಿ ಬರುತ್ತದೆ. ಪ್ರತ್ಯೇಕವಾಗಿ ಅನೇಕ ಸಮವೇತವಾಗಬೇಕು. ಅಂದರೆ ಪ್ರತ್ಯೇಕವಾಗಿ ಸ್ವಸಮವಾಯಿ ಪ್ರತಿಯೋಗಿಕ ಭೇದವತ್ತಿನಲ್ಲಿ ಸಮವೇತವಾಗಿರಬೇಕು. ಇದು ವಿಶೇಷದಲ್ಲಿ ಬರುವುದಿಲ್ಲ ಎಂಬುದನ್ನು ತಿಳಿಸಲು 'ಏಕಂ' ಎಂದಿದೆ. ಕೆಲವರು ಹೇಳುತ್ತಾರೆ— ಏಕಂ ಎಂದು ಕ್ರಿಯಾವಿಶೇಷಣ ಒಂದೇ ಸಮವಾಯಸಂಬಂಧದಿಂದ ಅನೇಕದಲ್ಲಿ ಸಮವೇತವಾಗಬೇಕು ಎಂದು ತಿಳಿಸಲು 'ಏಕಂ' ಎಂದಿದೆ ಎಂದು.

**एवं च आत्मा धर्मिसत्तासमानसत्ताकात्मप्रतियोगिक-भेदाधिकरणं द्रव्यत्वात् घटवदित्यादीन्यपि सुस्थानि । चैत्रशरीरं वस्तुतो मैत्रशरीरस्वामिभिन्नस्वामिकं तद्विरुद्ध-चेष्टाकशरीरत्वादित्यत्र मैत्रशरीरं व्यतिरेकदृष्टान्तः ।**

**जीवेशौ धर्मिसत्तासमानसत्ताकभेदवन्तौ विरुद्धधर्माधि-करणत्वात्सम्मतवत् । विरोधश्च न सहानवस्थाननि-यमलक्षणः । ऐक्यवादिनोऽसिद्धेः । किं तर्हि नित्यत्वानित्यत्वादाविव वध्यघातुकभावलक्षणः । तादृशश्च धर्मः सर्वज्ञत्वासर्वज्ञत्वादिः । न चोपाधिभेदमात्रेण तद्व्यवस्थोपपत्तिर्योगिनि तददर्शनात् ।**

ಇದರಿಂದ, 'ಆತ್ಮನು ಧರ್ಮಿಸತ್ತಾಸಮಾನಸತ್ತಾಕ ಆತ್ಮಪ್ರತಿಯೋಗಿಕ ಭೇದಕ್ಕೆ ಅಧಿಕರಣ, ದ್ರವ್ಯತ್ವವಿರುವುದರಿಂದ, ಘಟದಂತೆ' ಇತ್ಯಾದಿ ಅನುಮಾನಗಳೂ ಸುಸ್ಥವಾದುವು. 'ಚೈತ್ರಶರೀರವು ವಸ್ತುತಃ ಮೈತ್ರಶರೀರಸ್ವಾಮಿಗಿಂತ ಭಿನ್ನಸ್ವಾಮಿಕ, ತದ್ವಿರುದ್ಧಚೇಷ್ಟೆ ಉಳ್ಳ ಶರೀರವಾದ್ದರಿಂದ' ಎಂಬ ಅನುಮಾನದಲ್ಲಿ ಮೈತ್ರ, ಶರೀರವು ವ್ಯತಿರೇಕ ದೃಷ್ಟಾಂತ. ಜೀವೇಶರು ಧರ್ಮಿಸತ್ತಾಸಮಾನ ಸತ್ತಾಕ ಭೇದಉಳ್ಳವರು,

**ವಿರುದ್ಧಧರ್ಮಾಧಿಕರಣರಾದ್ದರಿಂದ, ಸಮ್ಮತದಂತೆ. ವಿರೋಧವು ಜೊತೆಗೆ ಇಲ್ಲದಿರುವ ನಿಯಮವಲ್ಲ. ಐಕ್ಯವಾದಿಗೆ ಅದು ಅಸಿದ್ಧ. ನಿತ್ಯತ್ವ ಅನಿತ್ಯತ್ವಾದಿಗಳಿಗೆ ವಧ್ಯಘಾತುಕ ಭಾವರೂಪವಾದ ವಿರೋಧವು ವಿವಕ್ಷಿತವಾಗಿದೆ. ಅಂಥ ವಿರುದ್ಧ ಧರ್ಮವು ಈಶ ಜೀವರಲ್ಲಿ ಸರ್ವಜ್ಞತ್ವ ಅಸರ್ವಜ್ಞತ್ವಾದಿ. ಉಪಾಧಿ ಭೇದದಿಂದಲೇ ವಿರುದ್ಧ ಧರ್ಮವತ್ತ್ವ ಎನ್ನಲಾಗದು, ಯೋಗಿಯಲ್ಲಿ ಅದು ಕಂಡಿಲ್ಲವಾದ್ದರಿಂದ.**

**एवं चेति ।** उक्तरीत्या प्रथमानुमाने व्यवस्थापिते चेत्यर्थः । अपारमार्थिकभेदेन सिद्धसाधनवारणाय धर्मिसत्तासमानसत्ताकेति । इत्यादीत्यादिना सुखं नानाव्यक्तिनिष्ठं गुणत्वादित्यादीनामुपसङ्ग्रहः । आदिपदेनात्मत्वं नानाव्यक्तिनिष्ठं जातित्वादित्यस्य ग्रहणमिति तु मन्दम् । एतावता प्रबन्धेन तस्यैव व्यवस्थापितत्वात् । प्राथमिकत्वेन. तस्यैव कण्ठत उपादातुमुचितत्वाच्च ।

**सुस्थानीति ।** उक्तविधया द्रव्यत्वस्यात्मनि सिद्धत्वेनोक्ता-सिद्ध्यनवकाशात् । भेदे धर्मिसत्तासमानसत्ताकत्वनिवेशेन सिद्धसाधनस्य चानवकाशादिति भावः ।

ಇದರಿಂದ ಎಂದರೆ, ಹಿಂದೆ ಪೂರ್ವಪಕ್ಷಿಯು ನಿರಾಕರಿಸಿದ್ದ ಆತ್ಮಭೇದಾನುಮಾನಗಳಲ್ಲಿ ಮೊದಲನೆಯದಾದ 'ಆತ್ಮತ್ವವು ನಾನಾ ವ್ಯಕ್ತಿನಿಷ್ಠ, ಜಾತಿಯಾದ್ದರಿಂದ, ಪೃಥಿವೀತ್ವದಂತೆ' ಎಂಬ ಅನುಮಾನವನ್ನು ನಿರ್ದುಷ್ಟವೆಂದು ಸ್ಥಾಪಿಸಿದ್ದರಿಂದ, ಆತ್ಮನು ಆತ್ಮ ಪ್ರತಿಯೋಗಿಕ ಭೇದಾಧಿ ಕರಣನು, ದ್ರವ್ಯತ್ವವಿರುವುದರಿಂದ ಘಟದಂತೆ ಇತ್ಯಾದಿ ಅನುಮಾನವೂ ಸುಸ್ಥವಾಯಿತು.'ಆದಿ' ಪದದಿಂದ ಸುಖವು ನಾನಾ ವ್ಯಕ್ತಿಗಳಲ್ಲಿ ಆಶ್ರಯಿಸಿದೆ, ಗುಣತ್ವವಿರುವುದರಿಂದ ರೂಪದಂತೆ ಎಂದು ಮುಂತಾದುದೂ ಸುಸ್ಥವಾಯಿತು ಎಂದಿದ್ದಾರೆ. ಅಪಾರಮಾರ್ಥಿಕ ಭೇದವಿಟ್ಟುಕೊಂಡು ಸಿದ್ಧಸಾಧನದೋಷವೆಂದು ಪ್ರತಿವಾದಿ ಹೇಳದಂತೆ, ಧರ್ಮಿಸತ್ತಾಸಮಾನ ಸತ್ತಾಕ ಎಂದು ಭೇದಕ್ಕೆ ವಿಶೇಷಣ ನಿವೇಶ ಮಾಡಬೇಕು ಎಂದಿದ್ದಾರೆ.

'ಇತ್ಯಾದಿ' ಎಂದು 'ಆದಿ'ಪದದಿಂದ 'ಆತ್ಮತ್ವವು ನಾನಾವ್ಯಕ್ತಿನಿಷ್ಠ, ಜಾತಿಯಾದ್ದರಿಂದ' ಎಂಬ ಅನುಮಾನ ವಿವಕ್ಷಿತವಾಗಿದೆ ಎಂದು ವ್ಯಾಖ್ಯಾನಿಸುವುದು ಸರಿಯಲ್ಲ. ಇಲ್ಲಿವರೆಗೆ ವಿಸ್ತಾರವಾಗಿ ಸಮರ್ಥಿಸಿದ್ದು ಈ ಅನುಮಾನದ ನಿರ್ದುಷ್ಟತ್ವವನ್ನೇ. ಮತ್ತು ಈ ಅನುಮಾನ ಪ್ರಥಮವಾದ್ದರಿಂದ

ಇದನ್ನೇ ಎತ್ತಿಕೊಳ್ಳುವುದು ಉಚಿತವೂ ಹೌದು. 'ಸುಸ್ಥವಾಯಿತು' ಎಂದರೆ ಹಿಂದೆ ಹೇಳಿದಂತೆ ದ್ರವ್ಯತ್ವಜಾತಿಯು ಆತ್ಮನಲ್ಲಿ ಸಿದ್ಧವಾಗಿರುವುದರಿಂದ ಅಸಿದ್ಧಿಗೆ ಅವಕಾಶವಿಲ್ಲ. ಭೇದದಲ್ಲಿ ಧರ್ಮಿಸತ್ತಾ ಸಮಾನಸತ್ತಾಕತ್ವ ನಿವೇಶ ಮಾಡುವುದಗಿಂದ ಸಿದ್ಧಸಾಧನಕ್ಕೂ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಸುಖಾದಿಗಳು ಆತ್ಮಗುಣವೆನ್ನಲು ಬಾಧಕವಿಲ್ಲ**

नन्वेतावता सुखादिपक्षकानुमाने कथं पूर्वोक्तदोषपरिहार इति चेदित्थम् । सुखादीनामप्ययावद्द्रव्यभावित्वेनात्मन्यङ्गीकारे बाधकाभावात् । तेषां प्रत्यक्षत्वेन तत्प्रयोजकमहत्त्वशून्यमनोगुणत्वासम्भवाच्च । सुखं मनोभिन्ननानाव्यक्तिनिष्ठं गुणत्वाद्रूपवदित्यनुमीयते । तथाच न सिद्धसाधनम् । न चैवमपसिद्धान्तः । तार्किकरीत्यैतत्प्रयोगात् । आश्रयत्वानुसन्धातृत्वान्यतरसम्बन्धस्य साध्यघटकत्वाद्वा दोषाभावात् । मनोवृत्तेर्मनोभिन्नाश्रितत्वानुपपत्त्या मनोभिन्नानुसन्धातृकेनैव साध्यपर्यवसानादुद्देश्यसिद्धेरिति । अस्यार्थस्य द्वित्वादीनामिति ग्रन्थेनैव लाभान्न पृथगुक्तिः ।

ಇಷ್ಟರಿಂದ ಸುಖಾದಿಪಕ್ಷಕ ಅನುಮಾನದಲ್ಲಿ ಪೂರ್ವೋಕ್ತದೋಷಗಳ ಪರಿಹಾರ ಹೇಗಾಯಿತು? ಎಂದರೆ, ಹೀಗೆ. ಸುಖಾದಿಗಳೂ ಕೂಡ ಅಯಾವದ್ ದ್ರವ್ಯಭಾವಿ, ತಾತ್ಕಾಲಿಕ ಗುಣವಾಗಿರುವುದರಿಂದ ಆತ್ಮನಲ್ಲಿ ಅಂಗೀಕರಿಸಲು ಬಾಧಕವಿಲ್ಲ, ಅವು ಪ್ರತ್ಯಕ್ಷವಾಗುವುದರಿಂದ ಪ್ರತ್ಯಕ್ಷತ್ವ ಪ್ರಯೋಜಕ ಮಹತ್ವಗುಣವಿಲ್ಲದ ಮನಸಿನ ಗುಣವೆನಿಸುವುದು ಅಸಂಭವವೂ ಆಗಿದೆ. ಸುಖವು ಮನೋಭಿನ್ನ ನಾನಾವ್ಯಕ್ತಿನಿಷ್ಠ ಗುಣವಾದ್ದರಿಂದ ರೂಪದಂತೆ ಎಂದು ಅನುಮಾನದಿಂದಲೂ ಇದನ್ನು ಸಾಧಿಸಬಹುದು. ಅದರಿಂದ ಸಿದ್ಧಸಾಧನವಿಲ್ಲ, ಹೀಗೆ ಹೇಳಿದರೆ ಸಿದ್ಧಾಂತವಿರೋಧ ಎನ್ನಬಾರದು, ತಾರ್ಕಿಕರೀತಿಯಿಂದ ಹೀಗೆ ಪ್ರಯೋಗ ಮಾಡಿದ್ದೆಂದು ತಿಳಿಯಬೇಕು. ಅಥವಾ ಆಶ್ರಯತ್ವ ಅನುಸಂಧಾತೃತ್ವ ಅನ್ಯತರ ಸಂಬಂಧವನ್ನು ಸಾಧ್ಯ ಘಟಕವಾಗಿ ವಿವಕ್ಷೆ ಮಾಡಿದರೂ ದೋಷವಿಲ್ಲ, ಏಕೆಂದರೆ ಮನೋವೃತ್ತಿರೂಪವಾದ ಸುಖಾದಿಗೆ ಮನೋಭಿನ್ನದಲ್ಲಿ ಆಶ್ರಿತತ್ವ ಕೂಡದಿರುವುದರಿಂದ ಮನೋಭಿನ್ನನಾದ ಆತ್ಮನ ಅನುಸಂಧಾನಕ್ಕೆ ಯೋಗ್ಯವೆಂದು ಆ ಸಂಬಂಧದಿಂದಲೇ ಸಾಧ್ಯ ಪರ್ಯವಸಾನ ಮಾಡಿದಾಗ ಉದ್ದೇಶ ಸಿದ್ಧಿಯಾಗುತ್ತದೆ. ಈ ವಿಷಯವು ಹಿಂದೆ 'ನಿರ್ಗುಣಾತ್ಮನಲ್ಲಿಯೂ ದ್ವಿತ್ವಾದಿ ಅಯಾವದ್ದ್ರವ್ಯಭಾವಿ ಗುಣಗಳನ್ನು ಅಂಗೀಕರಿಸುವುದಕ್ಕೆ ಏನೂ ಬಾಧಕವಿಲ್ಲ' ಎಂಬ ಮಾತಿನಿಂದಲೇ ಹೇಳಿದಂತಾಗಿರುವುದರಿಂದ ಇಲ್ಲಿ ಬೇರೆ ಹೇಳಿಲ್ಲ.

ननु चैत्रशरीरमित्याद्यनुमाने प्रागुक्तदोषापरिहारात् कथमस्य सुस्थत्वमत आह —**चैत्रशरीरमिति**। उक्तरीत्या सिद्धसाधनवारणाय वस्तुत इति भेदविशेषणम्। धर्मिसत्तासमानसत्ताकेत्यर्थः। अयं भावः। तद्विरुद्धचेष्टावत्त्वं तत्क्रियाजनकप्रयत्नानुसन्धात्रननुसंहितप्रयत्नजन्यक्रियावत्त्वम्। अतो नोक्तव्यभिचारः। घटादौ प्रयत्नजन्यक्रियाविरहात्। एतदर्थमेव चेष्टापदम्। न चैवं घटादेर्दृष्टान्तत्वासम्भव इति वाच्यम्। व्यतिरेकेण मैत्रशरीरस्यैव दृष्टान्तत्वसम्भवादिति। यत्तु तद्विरुद्धचेष्टावत्त्वं तत्क्रियाकार्यप्रतिबन्धकक्रियावत्त्वम्। शरीरत्वेन हेतुविशेषणान्न घटादौ व्यभिचार इति। तन्न। इन्द्रार्जुनयोः खाण्डवदाहादौ विरुद्धकार्यक्रियावतोर्व्यभिचारात्। न चोभयसम्प्रतिपन्नैकस्वामिकत्वाभावे सतीति विशेषणान्न दोष इति वाच्यम्। विशेषणवैयर्थ्यादप्रयोजकत्वाच्च।

'ಚೈತ್ರಶರೀರವು ಮೈತ್ರಶರೀರ ಸ್ವಾಮಿಭಿನ್ನಸ್ವಾಮಿಕ' ಎಂಬ ಅನುಮಾನದಲ್ಲಿ ಹಿಂದೆ ಪೂರ್ವಪಕ್ಷಿ ಹೇಳಿದ್ದ ದೋಷ ಪರಿಹಾರವಾಗಿಲ್ಲದಿರುವುದರಿಂದ ಇದು ಹೇಗೆ ಸುಸ್ಥವಾಯಿತು? ಎಂದರೆ ಹೇಳುತ್ತಾರೆ ಈ ಅನುಮಾನದಲ್ಲಿ ಮೈತ್ರಶರೀರವು ವ್ಯತಿರೇಕ ದೃಷ್ಟಾಂತ ಎಂದು. ಇಲ್ಲಿ 'ವಸ್ತುತಃ' ಎಂದು ಭೇದಕ್ಕೆ ವಿಶೇಷಣ ನೀಡಿದ್ದಾರೆ. ಧರ್ಮಿಸತ್ತಾ ಸಮಾನಸತ್ತಾಕ ಎಂದರ್ಥ. ಇದರ ಅಭಿಪ್ರಾಯ ಇಷ್ಟು— 'ತದ್ವಿರುದ್ಧ ಚೇಷ್ಟಾವತ್ತ್ವ'ವೆಂದರೆ 'ತತ್ಕ್ರಿಯಾಜನಕ ಪ್ರಯತ್ನಾನು ಸಂಧಾತೃವಿನಿಂದ ಅನನುಸಂಹಿತವಾದ ಪ್ರಯತ್ನದಿಂದಾಗುವ ಕ್ರಿಯೆಯನ್ನು ಮಾಡುವುದು' ಎಂದರ್ಥ. ಆದರಿಂದ ಹಿಂದೆ ಹೇಳಿದ ವ್ಯಭಿಚಾರವಿಲ್ಲ. ಘಟಾದಿಗಳಲ್ಲಿ ಸಾಕ್ಷಾತ್ ಪ್ರಯತ್ನಜನ್ಯ ಕ್ರಿಯೆ ಇಲ್ಲ. ಇದಕ್ಕಾಗಿಯೆ ಚೇಷ್ಟಾಪದವನ್ನು ಪ್ರಯೋಗಿಸಿದ್ದಾರೆ. ಚೇಷ್ಟಾ ಎಂದರೆ ಸಾಕ್ಷಾತ್ ಪ್ರಯತ್ನಜನ್ಯವಾದ ಶಾರೀರಕ ಕ್ರಿಯೆ. ಈಗ ಘಟಾದಿ ಯಾವುದನ್ನೂ ದೃಷ್ಟಾಂತವಾಗಿ ಹೇಳಲು ಬಾರದಿದ್ದರೂ ಮೈತ್ರ ಶರೀರವನ್ನೇ ವ್ಯತಿರೇಕ ದೃಷ್ಟಾಂತವಾಗಿ ಹೇಳಬಹುದು.

'ತದ್‌ವಿರುದ್ಧ ಚೇಷ್ಟಾವತ್ತ್ವವೆಂದರೆ ತತ್‌ಕ್ರಿಯಾಕಾರ್ಯಕ್ಕೆ ಪ್ರತಿಬಂಧಕವಾದ ಕ್ರಿಯೆಯನ್ನು ಮಾಡುವುದೆಂದು ಅರ್ಥ. ಶರೀರತ್ವೇನ ಹೇತುವಿಶೇಷಣ ಮಾಡುವುದರಿಂದ ಘಟಾದಿಗಳಲ್ಲಿ ವ್ಯಭಿಚಾರವಿಲ್ಲ' ಎಂದು ಹೇಳುವುದು ಸರಿಯಲ್ಲ. ಖಾಂಡವ ದಹನಾದಿಗಳಲ್ಲಿ ವಿರುದ್ಧ ಕಾರ್ಯಕ್ರಿಯೆಉಳ್ಳ ಇಂದ್ರ–ಅರ್ಜುನರಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕೆ 'ಉಭಯಸಂಪ್ರತಿಪನ್ನ ಏಕಸ್ವಾಮಿಕತ್ವಾಭಾವೇ ಸತಿಃ' ಎಂದು ವಿಶೇಷಣ ನೀಡುವುದರಿಂದ ದೋಷವಿಲ್ಲ ಎಂದರೆ, ಅದು

ಸರಿಯಲ್ಲ, ವಿರುದ್ಧ ಚೇಷ್ಟಾವತ್ವವನ್ನೇ ಮೇಲೆ ಹೇಳಿದಂತೆ ಪರಿಷ್ಕಾರ ಮಾಡಲು ಬರುವಾಗ ಈ ರೀತಿ ಹೇತುವಿಗೆ ವಿಶೇಷಣ ನೀಡುವುದು ವ್ಯರ್ಥ ಮತ್ತು ಅಪ್ರಯೋಜಕತ್ವವೂ ಬರುತ್ತದೆ.

**ವಿರುದ್ಧ ಧರ್ಮಗಳಿಂದ ಜೀವೇಶ್ವರ ಭೇದಸಿದ್ಧಿ**

विमतौ भिन्नौ विरुद्धधर्माधिकरणत्वाद्दहनतुहिनवदित्यस्योक्तदोषवारणाय विवक्षितार्थमाह **—जीवेशाविति** । ननु विरुद्धधर्माधिकरणत्वस्य परस्परधर्मवदवृत्तिधर्मवत्त्वरूपस्य हेतोरसिद्धिः । मायिमते जीवेश्वरधर्मयोरेकाधिकरणकत्वादित्याशङ्कावारणाय विरोधं विवृणोति– **विरोधश्चेति** । सहानवस्थाननियमः परस्पराधिकरणावृत्तित्वम् । वध्यघातुकभावश्च न नाश्यनाशकभावरूपः । सर्वज्ञत्वासर्वज्ञत्वादीनां तदभावात् । किन्तु भावाभावत्वरूप इति ज्ञापनाय नित्यत्वानित्यत्वादाविवेत्युक्तम् ।

ಜೀವೇಶರು ಭಿನ್ನರು, ವಿರುದ್ಧಧರ್ಮಾಧಿಕರಣರಾದ್ದರಿಂದ, ದಹನ ತುಹಿನಗಳಂತೆ ಎಂಬ ಅನುಮಾನದಲ್ಲಿ ಹಿಂದೆ ಹೇಳಿದ ದೋಷಪರಿಹಾರಕ್ಕೆ ಧರ್ಮಿಸತ್ತಾಸಮಾನಸತ್ತಾಕತ್ವವನ್ನು ಭೇದದಲ್ಲಿ ವಿಶೇಷಣವೆನ್ನುತ್ತಾರೆ. ವಿರುದ್ಧ ಧರ್ಮಾಧಿಕರಣತ್ವವೆಂದರೆ, ಅವನ ಧರ್ಮವಿರುವಲ್ಲಿ ಇಲ್ಲದ ಧರ್ಮ ಇವನಲ್ಲಿ, ಇವನ ಧರ್ಮವಿರುವಲ್ಲಿ ಇಲ್ಲದ ಧರ್ಮ ಅವನಲ್ಲಿ ಎಂದು ಪರಸ್ಪರ ವಿರುದ್ಧ ಧರ್ಮವಿರುವುದು ಎಂದು ಹೇಳಿದರೆ ಹೇತ್ವಸಿದ್ಧಿ. ಏಕೆಂದರೆ ಅಭೇದ ಮತದಲ್ಲಿ ಜೀವೇಶರ ಧರ್ಮಗಳಿಗೆ ಏಕಾಧಿಕರಣತ್ವವನ್ನೇ ಹೇಳುತ್ತಾರೆ. ಆದರಿಂದ, ವಿರೋಧವೆಂದರೆ ವಧ್ಯಘಾತುಕಭಾವವೇ ಹೊರತು ಜೊತೆಗೆ ಇಲ್ಲದಿರುವುದಲ್ಲ. ಆದರ ಅಧಿಕರಣದಲ್ಲಿ ಇದು ಇಲ್ಲದಿರುವುದು ಅಲ್ಲ ಎನ್ನುತ್ತಾರೆ. ವಧ್ಯಘಾತುಕಭಾವ ಎಂದರೆ ನಾಶ್ಯ ನಾಶಕಭಾವವಲ್ಲ. ಸರ್ವಜ್ಞತ್ವ ಅಸರ್ವಜ್ಞತ್ವಗಳಿಗೆ ಈ ರೀತಿಯ ವಿರೋಧವಿಲ್ಲ. ಭಾವಾಭಾವರೂಪವಾದ ವಿರೋಧ ಎನ್ನಬೇಕು. ಇದನ್ನು ತಿಳಿಸುವುದಕ್ಕಾಗಿಯೇ ನಿತ್ಯತ್ವ ಅನಿತ್ಯತ್ವಾದಿಗಳಂತೆ ಎಂದು ದೃಷ್ಟಾಂತವನ್ನು ಹೇಳಿದ್ದಾರೆ.

अथ सिद्धान्ते अत्यन्ताभावस्याप्रामाणिकप्रतियोगिकत्वनियमात् कथमीशवृत्तिसर्वज्ञत्वात्यन्ताभावरूपत्वमसर्वज्ञत्वस्य, कथं वा जीवगतासर्वज्ञत्वात्यन्ताभावरूपत्वं सर्वज्ञत्वस्येति चेत् इत्थम् । जीवे आरोपिसर्वज्ञत्वप्रतियोगिकात्यन्ताभाव एवासर्वज्ञत्वम् । स च मतान्तरे प्रतियोगिनेव सिद्धान्ते प्रधानेन विरुद्ध्यते । सर्वज्ञत्ववतीश्वरे सर्वज्ञत्वं

**नास्तीत्यप्रतीतेः । ईशगतसर्वज्ञत्वस्यासर्वज्ञत्वं प्रति प्रधानत्वादेव प्रतियोगित्वव्यवहारः । एवमसर्वज्ञत्वं सर्वज्ञतादात्म्यनिषेधः । सर्वज्ञतादात्म्यं च सर्वज्ञत्वमेवेति तत्प्रतियोगिकत्वमसर्वज्ञत्वस्य । अन्योन्याभावस्य प्रामाणिकप्रतियोगिकत्वोपपत्तेः । तदभावश्च सर्वज्ञत्वमेव। भावभिन्नात्यन्ताभावस्यैव प्रामाणिकप्रतियोगिकत्वनिषेधात्। 'निषेधस्य निषेधश्च भाव एव बलाद्भवेदि'ति वचनात् । अधिकमन्यत्रानुसन्धेयम् ।**

ಇಲ್ಲಿ ಪ್ರಶ್ನೆ— ಸಿದ್ಧಾಂತದಲ್ಲಿ ಅತ್ಯಂತಾಭಾವಕ್ಕೆ ಅಪ್ರಾಮಾಣಿಕವೇ ಪ್ರತಿಯೋಗಿ ಎನ್ನುವ ನಿಯಮವಿರುವುದರಿಂದ ಈಶನಲ್ಲಿರುವ ಸರ್ವಜ್ಞತ್ವದ ಅತ್ಯಂತಾಭಾವವು ಅಸರ್ವಜ್ಞತ್ವ ಜೀವನಲ್ಲಿರುವ ಅಸರ್ವಜ್ಞಾತ್ವಾಭಾವದ ಅತ್ಯಂತಾಭಾವವು ಸರ್ವಜ್ಞತ್ವ ಎನ್ನುವುದು ಹೇಗೆ? ಎಂದು. ಇದಕ್ಕೆ ಸಮಾಧಾನ— ಜೀವನಲ್ಲಿ ಆರೋಪಿತವಾದ ಸರ್ವಜ್ಞತ್ವದ ಅತ್ಯಂತಾಭಾವವೇ ಜೀವನಲ್ಲಿ ಅಸರ್ವಜ್ಞತ್ವ. ಮತಾಂತರದಲ್ಲಿ ಅಭಾವಕ್ಕೆ ಪ್ರತಿಯೋಗಿಯು ವಿರೋಧಿಯಾಗಿರುವಂತೆ ಸಿದ್ಧಾಂತದಲ್ಲಿ ಅಭಾವಕ್ಕೆ ಪ್ರಧಾನವು ವಿರೋಧಿ. ಏಕೆಂದರೆ ಸರ್ವಜ್ಞತ್ವ ರೂಪವಾದ ಪ್ರಧಾನ ಉಳ್ಳ ಈಶನಲ್ಲಿ ಸರ್ವಜ್ಞತ್ವವಿಲ್ಲ ಎಂದು ಪ್ರತೀತಿ ಇಲ್ಲ. ಈಶನಲ್ಲಿರುವ ಸರ್ವಜ್ಞತ್ವವು ಜೀವನಲ್ಲಿರುವ ಅಸರ್ವಜ್ಞತ್ವಕ್ಕೆ ಪ್ರಧಾನವಾದ್ದರಿಂದಲೆ ಪ್ರತಿಯೋಗಿ ಎಂದು ವ್ಯವಹಾರ.

ಅಸರ್ವಜ್ಞತ್ವವೆಂದರೆ ಸರ್ವಜ್ಞತಾದಾತ್ಮ್ಯ ನಿಷೇಧ. ಸರ್ವಜ್ಞತಾದಾತ್ಮ್ಯವು ಸರ್ವಜ್ಞತ್ವವೇ. ಹೀಗಾಗಿ ಅಸರ್ವಜ್ಞತ್ವಕ್ಕೆ ಸರ್ವಜ್ಞತ್ವ ಪ್ರತಿಯೋಗಿ ಎಂದೂ ಹೇಳಬಹುದು. ಏಕೆಂದರೆ ಅನ್ಯೋನ್ಯಾಭಾವಕ್ಕೆ ಪ್ರಾಮಾಣಿಕ ಪ್ರತಿಯೋಗಿಕತ್ವ ಯುಕ್ತವೆ. ಈ ಅಸರ್ವಜ್ಞತ್ವದ ಅಭಾವವು ಸರ್ವಜ್ಞತ್ವವೆ, ಭಾವಭಿನ್ನ ಅತ್ಯಂತಾಭಾವಕ್ಕೆ ಮಾತ್ರ ಪ್ರಾಮಾಣಿಕ ಪ್ರತಿಯೋಗಿಕತ್ವ ನಿಷೇಧ. 'ನಿಷೇಧಸ್ಯ ನಿಷೇಧಶ್ಚ ಭಾವ ಏವ ಬಲಾದ್ಭವೇತ್' (ಅನುವ್ಯಾಖ್ಯಾನ 3.3. ಸರ್ವವೇದಾಂತ ಪ್ರತ್ಯಯಾಧಿಕರಣ) ಅಭಾವದ ಅಭಾವವು ಭಾವವೇ ಆಗುವುದು ಎಂದು ವಚನವಿದೆ.

**ಸರ್ವಜ್ಞತ್ವವೆಂದರೇನು?**

**सर्वज्ञत्वेति ।** ननु किमिदं सर्वज्ञत्वम् । न तावत् सर्वविषयकज्ञानवत्त्वम् । मेयत्वादिना सामान्यतः सर्वविषयकज्ञानस्य जीवसाधारण्यात् । नापि यावन्तः पदार्थाः तत्तद्व्यक्तित्वेन तावद्विषयकज्ञानवत्त्वम् । असर्वज्ञादीनां विशिष्य तावद्विषयकज्ञानाभावेन दुर्ज्ञेयत्वापत्तेः । उच्यते । विषयितासम्बन्धावच्छिन्नप्रतियोगिताकाभावानधिकरण-

ज्ञानवत्त्वं सर्वज्ञत्वम् । मेयत्वेन सर्वविषयकेऽपि ज्ञाने घटत्वेन घटाभानाद्विषयितासम्बन्धावच्छिन्नघटत्वावच्छिन्नप्रतियोगिताकाभावस्यैव सत्त्वान्नातिव्याप्तिः । असर्वज्ञस्याप्येतादृशसर्वज्ञत्वज्ञानसम्भवान्न दुर्ज्ञेय-त्वम् । आदिपदेन स्वातन्त्र्यास्वातन्त्र्यादिपरिग्रहः ।

ಸರ್ವಜ್ಞತ್ವವೆಂದರೇನು? ಸರ್ವವಿಷಯಜ್ಞಾನವತ್ತ್ವವೆಂದರೆ ಮೇಯತ್ವಾದಿನಾ ಸಾಮಾನ್ಯತಃ ಸರ್ವವಿಷಯಕವಾದ ಜ್ಞಾನವು ಜೀವನಲ್ಲಿಯೂ ಇದೆ. ಲೋಕದಲ್ಲಿ ಎಷ್ಟು ಪದಾರ್ಥಗಳಿವೆಯೋ ಅವೆಲ್ಲವನ್ನು ತತ್ತದ್ವ್ಯಕ್ತಿತ್ವೇನ ತಿಳಿಯುವುದು ಸರ್ವಜ್ಞತ್ವವೆಂದರ ಅವೆಲ್ಲವನ್ನೂ ತತ್ತದ್ವ್ಯಕ್ತಿತ್ವೇನ ತಿಳಿಯಲಾರದ ಅಸರ್ವಜ್ಞರು ಈ ಸರ್ವಜ್ಞತ್ವವನ್ನೂ ತಿಳಿಯಲಾರರು.

ಇದಕ್ಕೆ ಹೀಗೆ ಸಮಾಧಾನ— ವಿಷಯಿತಾ ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕ ಅಭಾವಾನಧಿಕರಣ ಜ್ಞಾನವತ್ತ್ವವೇ ಸರ್ವಜ್ಞತ್ವ. ಮೇಯತ್ವೇನ ಸರ್ವವಿಷಯಕವಾದ ಜ್ಞಾನದಲ್ಲಿಯೂ ಕೂಡ ಘಟತ್ವೇನ ಘಟವು ಭಾನವಾಗದಿರುವುದರಿಂದ ವಿಷಯಿತಾ ಸಂಬಂಧಾವಚ್ಛಿನ್ನ ಘಟತ್ವಾವಚ್ಛಿನ್ನ ಪ್ರತಿಯೋಗಿತಾಕ ಅಭಾವವೇ ಇರುವುದರಿಂದ ಅತಿವ್ಯಾಪ್ತಿ ಇಲ್ಲ. ಅಸರ್ವಜ್ಞನಿಗೂ ಕೂಡ ಈ ರೀತಿಯ ಸರ್ವಜ್ಞತ್ವದ ಜ್ಞಾನ ಬರುವುದು ಶಕ್ಯವೇ ಇರುವುದರಿಂದ ಅಸರ್ವಜ್ಞರು ತಿಳಿಯಲಾರರೆನ್ನುವಂತಿಲ್ಲ.

'ಸರ್ವಜ್ಞತ್ವಾಸರ್ವಜ್ಞತ್ವಾದಿಃ' ಎಂಬಲ್ಲಿ 'ಆದಿ' ಪದದಿಂದ ಸ್ವಾತಂತ್ರ್ಯ ಅಸ್ವಾತಂತ್ರ್ಯಾದಿಗಳನ್ನಿಟ್ಟುಕೊಳ್ಳಬೇಕು.

नन्वप्रयोजको हेतुः । धर्मिसत्तासमानसत्ताकभेदाभावेऽपि तन्न्यून-सत्ताकभेदेनैव विरुद्धधर्मवत्त्वोपपत्तेरित्याशङ्कां निराचष्टे —न चेति । जीवेशयोरविद्याद्युपाधिकृतभेदेनैवोक्तविरुद्धधर्मवत्त्वोपपत्तिरित्यर्थः । योगिनि योगोपात्तनानादेहवति । तददर्शनात् उक्तविधविरुद्धधर्मवत्त्वा-दर्शनात् । तथाचौपाधिकभेदस्य विरुद्धधर्मवत्त्वनिर्वाहकत्वे योगिनोऽपि तत्प्रसङ्ग इति भावः । पूर्वमौपाधिकभेदस्य विशिष्य दुःखानुसन्धातृत्व-तदभावोभयनिर्वाहकत्वं निराकृतम् । इदानीं तु सामान्यतो विरुद्धधर्मद्वय-निर्वाहकत्वमिति न पुनरुक्तिः ।

ವಿರುದ್ಧ ಧರ್ಮವತ್ತ್ವ ಹೇತುವು ಅಪ್ರಯೋಜಕ. ಧರ್ಮಿಸತ್ತಾಸಮಾನಸತ್ತಾಕ

ಭೇವಪಿಲ್ಲದಿದ್ದರೂ ನ್ಯೂನ ಸತ್ತಾಕ ಭೇದದಿಂದಲೇ ವಿರುದ್ಧ ಧರ್ಮವತ್ವ ಕೂಡಬಹುದು ಎಂದು ಶಂಕಾವನ್ನು ನಿರಾಕರಿಸುತ್ತಾರೆ. ಜೀವೇಶರಲ್ಲಿ ಅವಿದ್ಯಾದಿ ಉಪಾಧಿಕೃತವಾದ ಭೇದದಿಂದಲೆ ಸರ್ವಜ್ಞತ್ವಾ ಸರ್ವಜ್ಞತ್ವಾದಿ ವಿರುದ್ಧ ಧರ್ಮವತ್ವ ಕೂಡುತ್ತದೆ ಎಂದು ಶಂಕಾ. ಇದಕ್ಕೆ ಯೋಗಿಯಲ್ಲಿ ಉಪಾಧಿ ಭೇದದಿಂದ ವಿರುದ್ಧ ಧರ್ಮವತ್ವ ಕಂಡಿಲ್ಲವೆಂದು ಸಮಾಧಾನ. ಯೋಗಿ ಎಂದರೆ ಯೋಗಬಲದಿಂದ ನಾನಾ ದೇಹಉಳ್ಳವನು 'ತದದರ್ಶನ'ವೆಂದರೆ ವಿರುದ್ಧ ಧರ್ಮವತ್ವದರ್ಶನವಿಲ್ಲ ಎಂದರ್ಥ. ಔಪಾಧಿಕ ಭೇದವೇ ವಿರುದ್ಧ ಧರ್ಮವತ್ವವನ್ನು ನಿರ್ವಾಹ ಮಾಡಲು ಶಕ್ತವೆನ್ನುವುದಾದರೆ ಯೋಗಿಯಲ್ಲಿಯೂ ವಿರುದ್ಧ ಧರ್ಮವತ್ವ ಕಂಡುಬಂದೀತು. ಹಿಂದೆ ಔಪಾಧಿಕ ಭೇದಕ್ಕೆ ಪ್ರತ್ಯೇಕವಾಗಿ ದುಃಖಾನುಭವ ಅನನುಭವರೂಪವಿರುದ್ಧ ಧರ್ಮನಿರ್ವಾಕತ್ವವು ನಿರಾಕೃತವಾಗಿತ್ತು. ಈಗ ಸಾಮಾನ್ಯವಾಗಿ ವಿರುದ್ಧಧರ್ಮದ್ವಯ ನಿರ್ವಾಹಕತ್ವವು ಔಪಾಧಿಕ ಭೇದಕ್ಕೆ ನಿರಾಕೃತವಾಗಿದೆ. ಅದರಿಂದ ಪುನರುಕ್ತಿ ಇಲ್ಲ.

**ಅಂತಃಕರಣ ಭೇದದಿಂದ ಸ್ವಾಭಾವಿಕಾತ್ಮಭೇದಸಿದ್ಧಿ**

**एवं देवदत्तान्तःकरणं यज्ञदत्तान्तःकरणावच्छिन्नचैतन्याद्वस्तुतो भिन्नचैतन्यावच्छेदकम् । तद्वृत्त्यनिवर्त्यनिवर्तकत्वात् । व्यतिरेकेण यज्ञदत्तान्तःकरणवत् । एवं देवदत्तस्मरणं न वस्तुतो यज्ञदत्तीयं यज्ञदत्तानुभवाजन्यत्वात् । व्यतिरेकेण यज्ञदत्तस्मरणवदित्यादीनि भेदसाधकान्यूहनीयानि । न चासिद्धिः । देवदत्तानुभूते यज्ञदत्त स्मरणानुदयात् । आत्मनां स्वाभाविकाभेदे सुखदुःखादिव्यवस्थाऽनुपपत्तिर्बाधिका मन्दारमञ्जर्यामस्माभिरुपपादिता द्रष्टव्या ।**

**ದೇವದತ್ತನ ಅಂತಃಕರಣವು ಯಜ್ಞದತ್ತಾಂತಃಕರಣದಿಂದ ಅವಚ್ಛಿನ್ನವಾದ ಚೈತನ್ಯಕ್ಕಿಂತ ವಸ್ತುತಃ ಭಿನ್ನವಾದ ಚೈತನ್ಯಕ್ಕೆ ಅವಚ್ಛೇದಕವಾಗಿದೆ. ಅದರ ವೃತ್ತಿಯಿಂದ ಅನಿವರ್ತ್ಯವಾದುದಕ್ಕೆ ನಿವರ್ತಕವಾದ್ದರಿಂದ. ಯಜ್ಞದತ್ತಾಂತಃಕರಣದಂತೆ ಎಂದು ವ್ಯತಿರೇಕದೃಷ್ಟಾಂತ. ದೇವದತ್ತನ ಸ್ಮರಣೆಯು ಯಜ್ಞದತ್ತನ ಸ್ಮರಣೆಗಿಂತ ವಸ್ತುತಃ ಭಿನ್ನವಾಗಿದೆ. ಯಜ್ಞದತ್ತಾನುಭವದಿಂದ ಜನ್ಯವಾಗದಿರುವುದರಿಂದ, ಯಜ್ಞದತ್ತನ ಸ್ಮರಣೆಯಂತೆ ಎಂದು ವ್ಯತಿರೇಕ ದೃಷ್ಟಾಂತ. ಎಂದು ಮುಂತಾಗಿ ಭೇದಸಾಧಕ**

**ಅನುಮಾನಗಳನ್ನು ಊಹಿಸಿಕೊಳ್ಳಬೇಕು. ದೇವದತ್ತನು ಅನುಭವಿಸುವ ವಿಷಯದಲ್ಲಿ ಯಜ್ಞದತ್ತನಿಗೆ ಸ್ಮರಣೆ ಬಾರದಿರುವುದರಿಂದ ಅಸಿದ್ಧಿ ಇಲ್ಲ. ಆತ್ಮರಿಗೆ ಸ್ವಾಭಾವಿಕ ಅಭೇದವನ್ನು ಒಪ್ಪಿದರೆ ಸುಖ ದುಃಖಾದಿ ವ್ಯವಸ್ಥೆ ಕೂಡದಿರುವುದು ಬಾಧಕವೆಂದು ಮಂದಾರಮಂಜರಿಯಲ್ಲಿ ನಾವು ಉಪಪಾದಿಸಿದ್ದೇವೆ, ಅದನ್ನು ಅಲ್ಲಿಯೆ ನೋಡಬೇಕು.**

मिथो जीवभेदकानुमानान्तरमाह – **एवमिति** । अत्र यज्ञदत्तान्तःकरणावच्छिन्नचैतन्यप्रतियोगिकधर्मिसत्तासमानसत्ताकभेदविशिष्टस्यैव साध्यत्वम् । चैतन्यावच्छेदकपदं तु चैतन्यनिरूपितस्य स्वभोग्यवृत्तिकत्वरूपावच्छेदकत्वस्य सम्बन्धत्वलाभार्थम् । नातः साध्याप्रसिद्धिः । तादृशभेदविशिष्टस्य घटादेः प्रसिद्धत्वात् । तस्य चोक्तसम्बन्धेन वृत्त्यसम्भवाच्चैतन्यावच्छेदकत्वमादायैव साध्यपर्यवसानादुद्धेश्यसिद्धिः ।

**तद्वृत्त्यनिवर्त्यनिवर्तकत्वादिति ।** यज्ञदत्तान्तःकरणवृत्तिरूपं यज्ज्ञानं तदनिवर्त्त्यं यदज्ञानादि तन्निवर्तकवृत्त्यारम्भकत्वादित्यर्थः । **देवदत्तस्मरणमिति ।** देवदत्तकर्तृकस्मरणं यज्ञदत्तप्रतियोगिकवास्तवतादात्म्यापन्नकर्तृकस्मरणान्यत् यज्ञदत्तकर्तृकानुभवाजन्यत्वादित्यर्थः । अत्र यद्यपि घटादेरन्वयदृष्टान्तत्वं सम्भवति । तथापि यज्ञदत्तीयस्मृतेस्तदीयानुभवजन्यत्वेन व्यतिरेकव्याप्तेः सुग्रहत्वात्तदनुसरणम् । अत्र च फलतो देवदत्तयज्ञदत्तयोर्भेदसिद्धिः ।

आदिपदेन देवदत्तानुभवो न वस्तुतो यज्ञदत्तीयो यज्ञदत्तस्मरणाजनकत्वात् । व्यतिरेकेण यज्ञदत्तानुभववदित्यादेः सङ्ग्रहः ।

ಪರಸ್ಪರ ಜೀವಭೇದ ಸಾಧಕವಾದ ಬೇರೆ ಅನುಮಾನವನ್ನು ಹೇಳುತ್ತಾರೆ. ಇಲ್ಲಿ ಯಜ್ಞದತ್ತಾಂತಃಕರಣಾವಚ್ಛಿನ್ನ ಚೈತನ್ಯ ಪ್ರತಿಯೋಗಿಕವಾದ ಧರ್ಮಿಸತ್ತಾ ಸಮಾನಸತ್ತಾಕ ಭೇದದಿಂದ ವಿಶಿಷ್ಟವೇ ಸಾಧ್ಯ. ಚೈತನ್ಯಕ್ಕೆ 'ಅವಚ್ಛೇದಕ'ವಾಗಿದೆ ಎಂದು ಅವಚ್ಛೇದಕಪದವು ಅಂತಃಕರಣದಲ್ಲಿ ಚೈತನ್ಯಸಂಬಂಧವು ಚೈತನ್ಯನಿರೂಪಿತವಾದ ಸ್ವಭೋಗ್ಯವೃತ್ತಿಕತ್ವ ರೂಪವಾದ ಅವಚ್ಛೇದಕತ್ವವೇ ಎಂದು ತಿಳಿಸುವುದಕ್ಕಾಗಿ ಇದೆ. ಆದರಿಂದ ಸಾಧ್ಯಾಪ್ರಸಿದ್ಧಿ ಇಲ್ಲ. ಏಕೆಂದರೆ

ಯಜ್ಞದತ್ತಾಂತಃಕರಣಾವಚ್ಛಿನ್ನ ಚೈತನ್ಯ ಪ್ರತಿಯೋಗಿಕ ಧರ್ಮಿಸತ್ತಾಸಮಾನಸತ್ತಾಕ ಭೇದವಿಶಿಷ್ಟವು ಘಟಾದಿಯೇ ಪ್ರಸಿದ್ಧವಾಗಿದೆ. ಅಂಥ ಭೇದವಿಶಿಷ್ಟವಾದ ಘಟಾದಿಯು ಸ್ವಭೋಗ್ಯವೃತ್ತಿಕತ್ವರೂಪ ಅವಚ್ಛೇದಕತ್ವ ಸಂಬಂಧದಿಂದ ಯಜ್ಞದತ್ತಾಂತಃಕರಣದಲ್ಲಿ ಬರುವುದು ಅಸಂಭವವಾದ್ದರಿಂದ ಭೇದವಿಶಿಷ್ಟವಾದ ಚೈತನ್ಯದ ಅವಚ್ಛೇದಕತ್ವವನ್ನಿಟ್ಟುಕೊಂಡೇ ಸಾಧ್ಯಪರ್ಯವಸಾನ ಮಾಡಬೇಕಾಗುತ್ತದೆ, ಆದರಿಂದ ಭೇದವಿಶಿಷ್ಟಚೈತನ್ಯ ಸಿದ್ಧಿರೂಪ ಉದ್ದೇಶ್ಯ ಸಿದ್ಧಿಯಾಗುತ್ತದೆ.

'ಅದರ ವೃತ್ತಿಯಿಂದ ಅನಿವರ್ತ್ಯವಾದುದಕ್ಕೆ ನಿವರ್ತಕ' ಎಂದರೆ ಅದರ ವೃತ್ತಿಯು ಯಜ್ಞದತ್ತಾಂತಃಕರಣ ವೃತ್ತಿರೂಪವಾದ ಜ್ಞಾನ, ಅದರಿಂದ ಅನಿವರ್ತ್ಯವಾದುದು ಯಾವ ಅಜ್ಞಾನಾದಿಯೋ ಅದಕ್ಕೆ ನಿವರ್ತಕವಾದ ವೃತ್ತಿಯನ್ನುಂಟುಮಾಡುವುದು ಎಂದರ್ಥ. ಈ ಹೇತು ಯಜ್ಞದತ್ತಾಂತಃಕರಣದಲ್ಲಿ ಬಾರದಿರುವುದರಿಂದ ಅದು ವ್ಯತಿರೇಕ ದೃಷ್ಟಾಂತ.

'ದೇವದತ್ತಕರ್ತೃಕ ಸ್ಮರಣವು ಯಜ್ಞದತ್ತ ಪ್ರತಿಯೋಗಿಕ ವಾಸ್ತವ ತಾದಾತ್ಮ್ಯವುಳ್ಳ ಚೈತನ್ಯಕರ್ತೃಕ ಸ್ಮರಣೆಗಿಂತ ಅನ್ಯ. ಯಜ್ಞದತ್ತಕರ್ತೃಕ ಅನುಭವದಿಂದ ಜನ್ಯವಲ್ಲದಿರುವುದರಿಂದ' ಎಂದು ಎರಡನೆ ಅನುಮಾನ. ಇಲ್ಲಿ ಯದ್ಯಪಿ ಘಟಾದಿ ಅನ್ವಯದೃಷ್ಟಾಂತವಾಗಬಲ್ಲುದು. ಆದರೂ ಯಜ್ಞದತ್ತನ ಸ್ಮರಣೆಯು ಅವನ ಅನುಭವದಿಂದ ಜನ್ಯವಾಗಿರುವುದರಿಂದ ವ್ಯತಿರೇಕವ್ಯಾಪ್ತಿಯು ಸುಲಭವಾಗಿ ಗೃಹೀತವಾಗುವುದರಿಂದ, ಯಜ್ಞದತ್ತಸ್ಮರಣೆಯಂತೆ ಎಂದು ವ್ಯತಿರೇಕ ದೃಷ್ಟಾಂತ ನೀಡಿದ್ದಾರೆ. ಈ ಅನುಮಾನದಿಂದ ಫಲತಃ ದೇವದತ್ತ ಯಜ್ಞದತ್ತರಿಗೆ ಭೇದವು ಸಿದ್ಧವಾಗುತ್ತದೆ'.

'ಎಂದು ಮುಂತಾಗಿ ಭೇದಸಾಧಕ ಅನುಮಾನ' ಎಂದರೆ ದೇವದತ್ತನ ಅನುಭವವು ವಸ್ತುತಃ ಯಜ್ಞದತ್ತನ ಅನುಭವಕ್ಕಿಂತ ಅನ್ಯ. ಯಜ್ಞದತ್ತಸ್ಮರಣಕ್ಕೆ ಅಜನಕವಾದ್ದರಿಂದ, ಯಜ್ಞದತ್ತಾನುಭವದಂತೆ ಎಂದು ವ್ಯತಿರೇಕ ದೃಷ್ಟಾಂತ' ಎಂದು ಮುಂತಾಗಿ ಅನುಮಾನವೆಂದರ್ಥ.

**ಸುಖಾದಿ ವ್ಯವಸ್ಥೆಯಿಂದ ಸ್ವಾಭಾವಿಕಾತ್ಮಭೇದಸಿದ್ಧಿ**

देवदत्तस्मरणस्य यज्ञदत्तानुभवजन्यत्वादसिद्धिरित्याशङ्कां वारयति – **न चेति ।** न च मायिमते देवदत्तानुभवस्यैव यज्ञदत्तीयत्वादसिद्धिर्दुर्वारैवेति वाच्यम् । चैतन्यमात्राभेदेऽपि विशिष्टभेदेन तव तदीयत्वासम्भवात् । अन्यथा देवदत्तानुभूते यज्ञदत्तस्मरणप्रसङ्गात् । उक्तानुमानेषु विपक्षे बाधकमाह –**आत्मनामिति ।** सुखदुःख-व्यवस्थानुपपत्तिः । तत्सुखं तेनैवानुभूयत इत्यादिनियमानुपपत्तिः । चैत्रादेर्मैत्रादिसुखाद्यनुभवस्यापत्तिरिति यावत् ।

ननु सुखादिव्यवस्थायाः पारमार्थिकत्वे भवेत्स्वाभाविकभेदापेक्षत्वम्। न चैवम् । तस्याः काल्पनिकत्वादित्याशङ्कापनोदाय मन्दारमञ्जर्यामुपपादितेत्युक्तम् । तथाहि । काल्पनिकी व्यवस्था किं व्यवस्थापकमेव नापेक्षते । किं वा पारमार्थिकम् । आद्ये काल्पनिकजीवत्वादिव्यवस्थानिर्वाहायाविद्यादिकल्पनानर्थक्यप्रसङ्गः । द्वितीये काल्पनिकस्यापि व्यवस्थापकस्य स्वाभाविकभेदं विनाऽनुपपत्तेरित्यादिकं तत्र द्रष्टव्यम् ।

'ದೇವದತ್ತನ ಸ್ಮರಣವು ಯಜ್ಞದತ್ತಾನುಭವದಿಂದ ಜನ್ಯವೆ, ಆದರಿಂದ ಅಸಿದ್ಧಿ' ಎಂಬ ಆಶಂಕೆಗೆ ಸಮಾಧಾನ— 'ದೇವದತ್ತನು ಅನುಭವಿಸಿದ್ದನ್ನು ಯಜ್ಞದತ್ತನು ಸ್ಮರಿಸುವುದಿಲ್ಲವಾದ್ದರಿಂದ ಅಸಿದ್ಧಿ ಇಲ್ಲ' ಎಂದು. ಮಾಯಿಮತದಲ್ಲಿ ದೇವದತ್ತಾನುಭವವು ಯಜ್ಞದತ್ತನ ಅನುಭವವೇ ಆಗಿರುವುದರಿಂದ ಅಸಿದ್ಧಿಪರಿಹಾರ ಅಶಕ್ಯ ಎಂದರೆ ಅದು ಸರಿಯಲ್ಲ. ವಿಶೇಷ್ಯವಾದ ಶುದ್ಧಚೈತನ್ಯದ ಅಂಶದಲ್ಲಿ ಅಭೇದವಿದ್ದರೂ ವಿಶಿಷ್ಟಗಳಿಗೆಭೇದವಿರುವುದರಿಂದ ದೇವದತ್ತನ ಅನುಭವವು ಯಜ್ಞದತ್ತನದೆಂದೆನಿಸಲಾರದು; ಯಜ್ಞದತ್ತನದೆಂದೆನಿಸಿದರೆ ಯಜ್ಞದತ್ತನು ದೇವದತ್ತ ಅನುಭವಿಸಿದ್ದನ್ನು ಎಲ್ಲವನ್ನೂ ಸ್ಮರಿಸುವ ಪ್ರಸಂಗವಿದೆ.

ಈ ಅನುಮಾನಗಳಲ್ಲಿ ಹೇತುವಿದ್ದರೂ ಸಾಧ್ಯವಿರಬೇಕಾಗಿಲ್ಲ ಎಂದರೆ ಬಾಧಕವನ್ನು ಹೇಳುತ್ತಾರೆ, ಆತ್ಮರಿಗೆ ಸ್ವಾಭಾವಿಕ ಅಭೇದವನ್ನು ಒಪ್ಪಿದರೆ ಸುಖ ದುಃಖ ವ್ಯವಸ್ಥಾನುಪಪತ್ತಿ. ಅಂದರೆ, 'ಅವನ ಸುಖ ಅವನಿಗೇ ಅನುಭವವೇದ್ಯವಾಗುತ್ತದೆ' ಇತ್ಯಾದಿ ನಿಯಮ ಕೂಡದೇ ಹೋದೀತು. ಚೈತ್ರ ಮುಂತಾದವರಿಗೂ ಮೈತ್ರ ಮುಂತಾದವರ ಸುಖಾದಿಗಳು ಅನುಭವಕ್ಕೆ ಬರಬೇಕಾದೀತು ಎಂದು.

'ಸುಖಾದಿ ವ್ಯವಸ್ಥೆ ಪಾರಮಾರ್ಥಿಕವಾಗಿದ್ದರೆ ತಾನೆ, ಅದಕ್ಕೆ ಸ್ವಾಭಾವಿಕ ಭೇದ ಆವಶ್ಯಕವೆನಿಸುತ್ತದೆ? ಆದರೆ, ಸುಖಾದಿ ವ್ಯವಸ್ಥೆ ಕಾಲ್ಪನಿಕ'– ಎಂಬ ಶಂಕೆಯನ್ನು ಪರಿಹರಿಸಲು 'ಮಂದಾರಮಂಜರಿಯಲ್ಲಿ ನಾವು ಉಪಪಾದಿಸಿದ್ದೇವೆ, ನೋಡಿರಿ' ಎನ್ನುತ್ತಾರೆ. ಸುಖಾದಿ ವ್ಯವಸ್ಥೆ ಕೇವಲ ಕಾಲ್ಪನಿಕ ಎನ್ನುವುದರ ಅಭಿಪ್ರಾಯವೇನು? ಅದಕ್ಕೆ ವ್ಯವಸ್ಥಾಪಕವೇ ಬೇಡವೆಂದೆ? ಪಾರಮಾರ್ಥಿಕ ವ್ಯವಸ್ಥೆ ಬೇಡವೆಂದೆ? ವ್ಯವಸ್ಥಾಪಕವೆ ಬೇಡವೆನ್ನುವುದಾದರೆ ಕಾಲ್ಪನಿಕವಾದ ಜೀವತ್ವ ಈಶ್ವರತ್ವ ಮುಂತಾದ ವ್ಯವಸ್ಥೆಯ ನಿರ್ವಾಹಕ್ಕಾಗಿ ಅವಿದ್ಯಾದಿ ಕಲ್ಪನೆ ಅನರ್ಥಕವೆಂದಾದೀತು. ಪಾರಮಾರ್ಥಿಕ ವ್ಯವಸ್ಥಾಪಕ ಬೇಡವೆನ್ನುವುದಾದರೆ ಕಾಲ್ಪನಿಕ ವ್ಯವಸ್ಥೆಗೂ ಕೂಡ ಸ್ವಾಭಾವಿಕ ಭೇದವಿಲ್ಲದೆ ಉಪಪತ್ತಿಯನ್ನು ಹೇಳಲಾಗುವುದಿಲ್ಲ ಎಂದು ಉಪಾಧಿಖಂಡನ ಮಂದಾರಮಂಜರಿ ಯಲ್ಲಿ ವ್ಯಾಸರಾಜರು ಉಪಪಾದನೆ ಮಾಡಿದ್ದಾರೆ.

'ಆತ್ಮನೊಬ್ಬನೇ ಆದರೂ ಚೈತ್ರಮೈತ್ರಾದಿಗಳ ಪುಣ್ಯಪಾಪಕರ್ಮಗಳು ಬೇರೆಬೇರೆಯಾದ್ದರಿಂದ ಅವರ ಶರೀರಗಳೂ ಬೇರೆಬೇರೆಯಾಗಿದ್ದು ಅವು ಸುಖಾದಿ ವ್ಯವಸ್ಥೆ ಮಾಡಿಕೊಡುತ್ತವೆ' ಎಂದರೆ ಅದು ಸಾಧ್ಯವಿಲ್ಲ. ಆತ್ಮನೊಬ್ಬನೆ ಎಂದಮೇಲೆ 'ಇದು ಚೈತ್ರನ ಪುಣ್ಯ, ಅದು ಮೈತ್ರನ ಪುಣ್ಯ' ಎಂಬ ವ್ಯವಸ್ಥೆಯೇ ಇಲ್ಲ. ಸ್ವಾಭಾವಿಕ ಭೇದವಿದ್ದರೆ ಮಾತ್ರ ಪುಣ್ಯವ್ಯವಸ್ಥೆ, ಮತ್ತು ಅದರಿಂದಾಗುವ ಶರೀರವ್ಯವಸ್ಥೆ, ಸುಖದುಃಖಾದಿ ಅನುಭವ ವ್ಯವಸ್ಥೆಗಳು ಸಾಧ್ಯ ಎಂದು.

### ಭೇದಶ್ರುತಿ ವ್ಯಾವಹಾರಿಕ ಭೇದಪರವಲ್ಲ

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 9 ನೋಡಿ)

**श्रुतयश्च द्वा सुपर्णेत्यादिकाः । व्यावहारिकभेदपरास्ता इति चेत् । स किं बाध्यः ? बाढमिति चेत् । तर्हि श्रुतेः प्रामाण्यं न स्यात्, बाध्यार्थग्राहित्वात् । शुक्तिरूप्याध्यक्षवत् । प्रामाण्यं व्यावहारिकमिति चेत् । किं तर्ह्यप्रामाण्यं पारमार्थिकम् ? कः सन्देहः ? अस्ति महान् सन्देहस्तथागतचरणशरणत्वमजानतः ।**

ಶ್ರುತಿಗಳು ಕೂಡ 'ದ್ವಾಸುಪರ್ಣಾ' ಮುಂತಾದುವು ಪಾರಮಾರ್ಥಿಕ ಭೇದ ಸಾಧಕವಾಗಿವೆ. 'ಅವು ವ್ಯವಹಾರಿಕ ಭೇದಪರ' ಎಂದರೆ ಆ ಭೇದವು ಬಾಧ್ಯವೆಂದು ನಿನ್ನ ಅಭಿಪ್ರಾಯವೆ? 'ಹೌದು'ಎಂದರೆ, ಶ್ರುತಿಯು ಪ್ರಮಾಣವಾಗಲಾರದು. ಬಾಧಿತವಾದ ಭೇದವನ್ನು ಗ್ರಹಿಸುವುದರಿಂದ ಬಾಧಿತವಾದ ರಜತವನ್ನು ಗ್ರಹಿಸುವ ಶುಕ್ತಿರಜತಭ್ರಮದಂತೆ ಅಪ್ರಮಾಣವೇ ಆದೀತು. 'ಭೇದಶ್ರುತಿಗೂ ಪ್ರಾಮಾಣ್ಯವಿದೆ, ಆದರೆ ಅದು ವ್ಯಾವಹಾರಿಕ'ಎಂದರೆ ಏನು ಈ ಮಾತಿನ ಅರ್ಥ! ಅಪ್ರಾಮಾಣ್ಯವೇ ಪಾರಮಾರ್ಥಿಕವೆಂದೆ? 'ಹೌದು, ಅದರಲ್ಲೇನು ಸಂದೇಹ?' ಎಂದರೆ, ಮಹಾ ಸಂದೇಹವೇ ಇದೆ. ಏಕೆಂದರೆ, ಹೀಗೆ ಹೇಳುವವನು ನೀನು ಬೌದ್ಧಮತ ಪ್ರವೇಶವನ್ನು ಒಲ್ಲದವನು.

**ननु श्रुत्युपस्थितार्थानङ्गीकारे हि श्रुत्यप्रामाण्यं स्यात् । न चास्माभिः श्रुतिप्रतिपादितो भेदो नाङ्गीक्रियते । नाप्यस्माभिरनङ्गीकृतं तत्सत्यत्वं श्रुतिप्रतिपाद्यम् । श्रुतौ सत्यपदाश्रवणादिति चेत् । नैष दोषः । स्वगोचरार्थाबाधो हि**

**प्रामाण्यम् । तद्बाधश्चाप्रामाण्यम् । तत्कथं श्रुतिवेद्यस्य भेदस्य बाधे श्रुतेः प्रामाण्यम् ? सत्यपदाश्रवणमात्रेण तदनङ्गीकारे एकमेवाद्वितीयमित्यदौ सत्यपदाभावात् अद्वैतमपि पारमार्थिकं न स्यात् ।**

'ಶ್ರುತಿಯು ಹೇಳಿದ್ದನ್ನು ಒಪ್ಪದಿದ್ದರೆ ಶ್ರುತಿಗೆ ಅಪ್ರಾಮಾಣ್ಯ ಬಂದೀತು. ಆದರೆ ಶ್ರುತಿಯು ಹೇಳಿದ ಭೇದವನ್ನು ನಾವು ಒಪ್ಪದೆ ಬಿಟ್ಟಿಲ್ಲ. ನಾವು ಒಪ್ಪದೆ ಬಿಟ್ಟದ್ದ ಭೇದ ಸತ್ಯತ್ವವನ್ನು ಶ್ರುತಿಯು ಹೇಳುತ್ತಿಲ್ಲ. ಶ್ರುತಿಯಲ್ಲಿ ಭೇದಸತ್ಯತ್ವವನ್ನು ಹೇಳುವ 'ಸತ್ಯ' ಪದವಿಲ್ಲ'. ಎಂದರೆ ಇದು ಸರಿಯಲ್ಲ. ಶ್ರುತಿಯು ಹೇಳುವ ವಿಷಯವು ಅಬಾಧಿತವಾದರೇ ಅದು ಶ್ರುತಿಗೆ ಪ್ರಾಮಾಣ್ಯ. ಬಾಧಿತವಾದರೆ ಅದು ಶ್ರುತಿಗೆ ಅಪ್ರಾಮಾಣ್ಯ. ಹೀಗಿರುವಾಗ ಶ್ರುತಿಯು ಹೇಳುವ ಭೇದವು ಬಾಧಿತವೆಂದಾದರೆ ಶ್ರುತಿಗೆ ಪ್ರಾಮಾಣ್ಯ ಹೇಗೆ? 'ಸತ್ಯ' ಪದವಿಲ್ಲ ಎಂಬ ಕಾರಣಕ್ಕಾಗಿ ಭೇದ ಸತ್ಯತ್ವವನ್ನು ಒಪ್ಪುವುದಿಲ್ಲವೆನ್ನುವುದಾದರೆ 'ಏಕಮೇವಾದ್ವಿತೀಯಂ ಬ್ರಹ್ಮ' ಎನ್ನುವ ಶ್ರುತಿಯಲ್ಲಿಯೂ ಸತ್ಯಪದವಿಲ್ಲದಿರುವುದರಿಂದ ಅದ್ವೈತವೂ ಪಾರಮಾರ್ಥಿಕವಲ್ಲವೆಂದಾದೀತು.

**अथ अद्वैतश्रुतेः षड्विधतात्पर्यलिङ्गयुक्तत्वात्तदर्थः पारमार्थिक इति चेत् न । उपक्रमादीनि हि स्वार्थे तात्पर्यं ज्ञापयन्ति । एवञ्चाद्वैतमात्रमस्तु तात्पर्यलिङ्गवशात् । न तत्सत्यत्वम् । तस्यातदर्थत्वात् । भेद एव षड्विधतात्पर्यलिङ्गयुक्तत्वमस्माभिरन्यत्रोपपादितम् ।**

**यदि पुनरबाध्यो भेदस्तर्ह्यविवादः ।**

'ಅದ್ವೈತಶ್ರುತಿಗೆ ಅದ್ವೈತಸತ್ಯತ್ವ ವಿಷಯದಲ್ಲಿ ಆರು ಬಗೆಯ ತಾತ್ಪರ್ಯ ಲಿಂಗಗಳಿರುವುದಿರಂದ ಅದು ಹೇಳುವ ವಿಷಯವು ಪಾರಮಾರ್ಥಿಕ' ಎಂದರೆ ಅದು ಸರಿಯಲ್ಲ. ಏಕೆಂದರೆ ಉಪಕ್ರಮಾದಿಗಳು ಶ್ರುತಿಯು ಹೇಳುವ ವಿಷಯದಲ್ಲಿ ಶ್ರುತಿಗೆ ತಾತ್ಪರ್ಯವಿದೆ ಎಂದು ಮಾತ್ರ ತಿಳಿಸುತ್ತವೆ. ಅದರಿಂದ ತಾತ್ಪರ್ಯಲಿಂಗದಿಂದ ಅದ್ವೈತ ಮಾತ್ರ ಸಿದ್ಧವಾದೀತು ಹೊರತು ಅದ್ವೈತ ಸತ್ಯತ್ವ ಸಿದ್ಧವಾಗಲಾರದು. ಅದ್ವೈತ ಸತ್ಯತ್ವವು ತಾತ್ಪರ್ಯಲಿಂಗಕ್ಕೆ ವಿಷಯವಲ್ಲ. ಮತ್ತು ಷಡ್ವಿಧತಾತ್ಪರ್ಯ

ಲಿಂಗವಿರುವುದು ಭೇದವಿಷಯದಲ್ಲಿಯೇ ಎನ್ನುವುದನ್ನು ನಾವು ಬೇರೆಡೆ ಉಪಪಾದಿಸಿರುವೆವು.

ಭೇದ ಅಬಾಧ್ಯವೆನ್ನುವುದಾದರೆ ನಮಗೆ ವಿವಾದವೆ ಇಲ್ಲ.

एवं जीवेशभेदे प्रत्यक्षानुमाने अभिधायागममप्याह — **श्रुतयस्त्विति** । न श्रुतयः पारमार्थिकभेदे प्रमाणमित्याशङ्कते — **व्यावहारिकेति** । श्रुत्युक्तो भेदो बाध्योऽबाध्यो वेति विकल्पेन दूषयितुं पृच्छति — **स किमिति** । प्रामाण्यम् अबाध्यार्थकत्वम् । नन्वारोपितमेव श्रुतेः प्रामाण्यम् । किं त्वब्रह्मज्ञानाबाध्यत्वात् व्यवहारार्हमित्याशङ्कते — **प्रामाण्यमिति** । अप्रामाण्यं प्रामाण्याभावः । **पारमार्थिकमिति** । भावाभावयोरेकस्य बाधेऽन्यस्याबाध्यत्वनियमादिति भावः । अत्रेष्टापत्तिमाशङ्कते — **कः सन्देह इति** । तर्हि बौद्धमतप्रवेशप्रसङ्ग इत्याह — **अस्तीति** । तथागतो बौद्धः स्वस्य तदनुयायित्वमनभ्युपगच्छत इत्यर्थः ।

शुक्तिरूप्याध्यक्षवदित्युक्तदृष्टान्ताभिप्रायमविज्ञाय शङ्कते — **नन्विति** । सत्यपदाश्रवणात् । भेदे सत्यत्वसमर्पकपदाश्रवणात् । अबोधकत्वमेव ह्यप्रामाण्यप्रयोजकम् । श्रुतीनां च भेदस्वरूपबोधकत्वान्न तदंशेऽप्रामाण्यम् । तस्य पारमार्थिकत्वं तु न श्रुतिबोधितम् । अतस्तदंशे तदप्रामाण्यमिष्यत एवेति भावः । **स्वगोचरेति** । अबाध्यार्थबोधकत्वमित्यर्थः । अयं भावः । अबोधकत्ववद्बाध्यार्थबोधकत्वमप्यप्रामाण्यप्रयोजकम् । अन्यथा शुक्तिरजतग्राहकदुष्टेन्द्रियादेरपि प्रामाण्यप्रसङ्गात् । तच्च श्रुतेरप्यविशिष्टमिति तदप्रामाण्यं दुर्वारमेव । न च ब्रह्मज्ञानेतराबाध्यबोधकत्वमेव प्रामाण्यम् । तच्च श्रुतिसाधारणमिति वाच्यम् । शुक्तिज्ञानेतराबाध्यबोधकत्वमेव प्रामाण्यं, तच्च दुष्टेन्द्रियसाधारण-

**मित्यस्यापि सुवचत्वात् । किञ्च यच्छ्रुतेः प्रामाण्यं तद्बाध्यमेवेति तदभावलक्षणाप्रामाण्यप्रसङ्गस्तदवस्थ एवेति ।**

ಹೀಗೆ ಜೀವೇಶ್ವರ ಭೇದವಿಷಯದಲ್ಲಿ ಪ್ರತ್ಯಕ್ಷ ಅನುಮಾನಗಳನ್ನು ಹೇಳಿ ಆಗಮವನ್ನೂ ಹೇಳುತ್ತಾರೆ, ಶ್ರುತಿಗಳು ದ್ವಾಸುಪರ್ಣಾದಿಗಳು ಭೇದಸಾಧಕಗಳು ಎಂದು. ಶ್ರುತಿಗಳು ಪಾರಮಾರ್ಥಿಕಭೇದ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಪೂರ್ವಪಕ್ಷಿ ಶಂಕಿಸುತ್ತಾನೆ. ಅದಕ್ಕೆ ಶ್ರುತ್ಯುಕ್ತವಾದ ಭೇದವು ಬಾಧ್ಯವೋ ಅಬಾಧ್ಯವೋ ಎಂದು ವಿಕಲ್ಪ ಮಾಡಿ ನಿರಾಸ ಮಾಡಲು ಕೇಳುತ್ತಾರೆ 'ಭೇದವು ಬಾಧ್ಯವೆ?' ಎಂದು.

ಪ್ರಾಮಾಣ್ಯವೆಂದರೆ, ಅಬಾಧಿತವಾದ ವಿಷಯವನ್ನು ವಾಕ್ಯವು ಹೇಳುವುದು. 'ಶ್ರುತಿಗೆ ಪ್ರಾಮಾಣ್ಯವಿದೆ, ಅದು ಆರೋಪಿತ. ಆದರೆ ಬ್ರಹ್ಮಜ್ಞಾನದಿಂದ ಹೊರತು ಬೇರೆ ಜ್ಞಾನದಿಂದ ಬಾಧಿತವಾಗದಿರುವುದರಿಂದ ವ್ಯವಹಾರ ಯೋಗ್ಯವಾಗಿರುತ್ತದೆ' ಎಂದು ಪೂರ್ವಪಕ್ಷಿಯ ಶಂಕೆ. 'ಅಪ್ರಾಮಾಣ್ಯವು ಪಾರಮಾರ್ಥಿಕವೆಂದು ಅಭಿಪ್ರಾಯವೆ?' ಎಂದರೆ, ಅಪ್ರಾಮಾಣ್ಯವು ಪ್ರಾಮಾಣ್ಯದ ಅಭಾವ. ಭಾವ ಅಭಾವಗಳಲ್ಲಿ ಒಂದು ಬಾಧಿತವೆಂದಾದರೆ ಇನ್ನೊಂದು ಅಬಾಧಿತವಾಗಿರಬೇಕೆಂದು ನಿಯಮವಿರುವುದರಿಂದ ಹೀಗೆ ಪ್ರಶ್ನೆ ಮಾಡುತ್ತಿದ್ದಾರೆ. ಈ ಪ್ರಶ್ನೆಗೆ ಪೂರ್ವಪಕ್ಷಿ ಇಷ್ಟಾಪತ್ತಿ ಎನ್ನುತ್ತಾನೆ, 'ಏನು ಸಂದೇಹ?' ಎಂದು. ಹಾಗಿದ್ದರೆ ಬೌದ್ಧಮತ ಪ್ರವೇಶ ಪ್ರಸಂಗ ಎನ್ನುತ್ತಾರೆ. ತಥಾಗತನೆಂದರೆ ಬೌದ್ಧ. ತಾನು ಬೌದ್ಧಮತಾನುಯಾಯಿಯಾಗುವುದನ್ನು ಒಲ್ಲದಿರುವುವವನು ಎಂದರ್ಥ.

ಶುಕ್ತಿರಜತ ಭ್ರಮದಂತೆ ಎಂದು ಹೇಳಿದ ದೃಷ್ಟಾಂತದ ಅಭಿಪ್ರಾಯವನ್ನು ಅರಿಯದೆ ಪೂರ್ವಪಕ್ಷಿ ಶಂಕಿಸುತ್ತಾನೆ. ಭೇದವನ್ನು ಸತ್ಯವೆಂದು ತಿಳಿಸುವ ಪದವು ಶ್ರುತಿಯಲ್ಲಿಲ್ಲ ಎನ್ನುತ್ತಾನೆ. ಅಬೋಧಕವೆನಿಸುವುದೇ ಶ್ರುತಿಗೆ ಅಪ್ರಾಮಾಣ್ಯಪ್ರಯೋಜಕ. ಶ್ರುತಿಗಳು ಭೇದಸ್ವರೂಪ ಬೋಧಕವಾಗಿರುವುದರಿಂದ ಆ ಅಂಶದಲ್ಲಿ ಅವುಗಳಿಗೆ ಪ್ರಾಮಾಣ್ಯವಿದ್ದೇ ಇದೆ. ಭೇದ ಪಾರಮಾರ್ಥಿಕತ್ವವು ಶ್ರುತಿ ಬೋಧಿತವಾಗಿಲ್ಲ. ಆದರಿಂದ ಆ ಅಂಶದಲ್ಲಿ ಅಪ್ರಾಮಾಣ್ಯವನ್ನು ಒಪ್ಪುತ್ತೇವೆ ಎಂದು ಅವನ ಅಭಿಪ್ರಾಯ.

ಅಬೋಧಕತ್ವದಂತೆ ಬಾಧ್ಯವಾದ ವಿಷಯ ಬೋಧಕತ್ವವೂ ಅಪ್ರಾಮಾಣ್ಯಕ್ಕೆ ಪ್ರಯೋಜಕವಾಗುತ್ತದೆ. ಹೀಗೆ ಹೇಳದಿದ್ದರೆ ಶುಕ್ತಿರಜತ ಭ್ರಮಜನಕವಾದ ದುಷ್ಟೇಂದ್ರಿಯವು ಕೂಡ ಪ್ರಮಾಣವೆನಿಸೀತು. ಬಾಧ್ಯವಿಷಯ ಬೋಧಕತ್ವವು ದುಷ್ಟೇಂದ್ರಿಯದಂತೆ ಶ್ರುತಿಗೂ ಇರುವುದರಿಂದ ಅದಕ್ಕೆ ಅಪ್ರಾಮಾಣ್ಯವನ್ನು ವಾರಣ ಮಾಡಲು ಶಕ್ಯವಾಗದು. 'ಬ್ರಹ್ಮಜ್ಞಾನೇತರಾಬಾಧ್ಯ ಬೋಧಕತ್ವವೇ ಪ್ರಾಮಾಣ್ಯ ಎನ್ನುತ್ತೇವೆ ಅದು ಶ್ರುತಿಯಲ್ಲಿದೆ' ಎಂದರೆ, 'ಶುಕ್ತಿಜ್ಞಾನೇತರಾಬಾಧ್ಯಬೋಧಕತ್ವವೇ ಪ್ರಾಮಾಣ್ಯ. ಅದು ದುಷ್ಟೇಂದ್ರಿಯದಲ್ಲಿಯೂ ಇದೆ, ಅದು

ಪ್ರಮಾಣವ' ಎಂದು ನಾವೇಕೆ ಹೇಳಬಾರದು? ಮತ್ತು ಶ್ರುತಿಗೆ ನೀವು ಹೇಳುವ ಪ್ರಾಮಾಣ್ಯವು ನೀವೇ ಹೇಳುವಂತೆ ಬಾಧ್ಯವೆಂದಮೇಲೆ ಅದರ ಅಭಾವ ರೂಪವಾದ ಅಪ್ರಾಮಾಣ್ಯಪ್ರಸಂಗ ಹಾಗೇ ಇದೆ, ಪರಿಹಾರವಾಗಲಿಲ್ಲ.

भेदसत्यत्वं न श्रुत्युक्तमित्येतद्दूषयति – **सत्यपदाश्रवणादिति** । द्वा सुपर्णेत्यादावित्यादिः । तदनङ्गीकारे भेदसत्यत्वानङ्गीकारे । **न स्यादिति** । अयमाशयः । सत्त्वासत्त्वोदासीनप्रतीत्यभावादुक्तश्रुत्याऽपि सत्त्वेनैव भेदप्रतीतेः सम्भवति श्रुतेस्तत्सत्यत्वे प्रामाण्यम् । अन्यथा श्रुतेरद्वैतस्वरूपमात्रग्राहकत्वापत्त्या सत्यत्वाग्राहकत्वादद्वैतमपि तव बाध्यं स्यादिति ।

ननु श्रुतेरद्वैतस्वरूपमात्रग्राहकत्वेऽपि तत्सत्यत्वमुपक्रमादितात्पर्य-लिङ्गैरवसीयते। न तु भेदसत्यत्वमित्याशङ्कते–**अथेति** । 'सदेव सोम्येदमग्र आसीदेकमेवाद्वितीय'मित्युपक्रमः । 'ऐतदात्म्यमिदं सर्व'मित्युपसंहारः । 'तत्त्वमसी'ति नवकृत्वोऽभ्यासः । ऐक्यस्य मानान्तराप्राप्तत्वादपूर्वता । 'अथ सम्पत्स्यत' इति फलम् । 'येनाश्रुतं श्रुतं भवती'त्यर्थवाद इति षड्विधतात्पर्यलिङ्गयुक्तत्वादित्यर्थः । यद्यप्युपपत्त्या सह तात्पर्यलिङ्गानि सप्तविधानि । अस्ति चाद्वैतेऽपि श्रौतोपपत्तिर्यथा सोम्यैकेन मृत्पिण्डेन सर्वं मृण्मयं विज्ञातं स्यादित्यादिः । तथाप्युपक्रमादेः सर्वस्यापि उपपत्तिरूपत्वेनार्थसिद्धत्वात् सा न पृथगुक्ता । स्यादेवम् । यद्युपक्रमादिप्रतिपाद्यमैक्यसत्यत्वं स्यात् । न चैवम् । अपि त्वैक्यमात्रम्। अतो न तत्सत्यत्वसिद्धिरित्याह – **उपक्रमादीनीति** ।

ಶ್ರುತಿಯು ಭೇದವನ್ನು 'ಸತ್ಯ'ವೆಂದು ಹೇಳುತ್ತಿಲ್ಲ ಎಂಬುದನ್ನು ನಿರಾಕರಿಸುತ್ತಾರೆ. ದ್ವಾಸುಪರ್ಣಾ ಇತ್ಯಾದಿ ಶ್ರುತಿಯಲ್ಲಿ ಸತ್ಯಪದವಿಲ್ಲವೆಂಬ ಕಾರಣಕ್ಕೆ ಅದನ್ನು, ಅಂದರೆ ಭೇದಸತ್ಯತ್ವವನ್ನು ಒಪ್ಪುವುದಿಲ್ಲವಾದರೆ ಅದ್ವೈತವೂ ಪಾರಮಾರ್ಥಿಕವೆಂದಾಗದು. ಇದರ ಅಭಿಪ್ರಾಯ ಹೀಗೆ— ಸತ್ಯತ್ವವನ್ನು ಅಥವಾ ಅಸತ್ಯತ್ವವನ್ನು ವಿಷಯೀಕರಿಸದೆ ಅದರ ಬಗ್ಗೆ

ಉದಾಸೀನವಾಗಿ ಕೇವಲ ವಸ್ತುಸ್ವರೂಪವನ್ನು ಮಾತ್ರ ವಿಷಯೀಕರಿಸುವ ಪ್ರತೀತಿ ಎಂಬುದಿಲ್ಲವಾದ ಕಾರಣ ಭೇದಶ್ರುತಿಯೂ ಕೂಡ ಭೇದವನ್ನು ಸತ್ಯವೆಂದೇ ಹೇಳುತ್ತಿರುವುದರಿಂದ ಶ್ರುತಿಯು ಭೇದಸತ್ಯತ್ವ ವಿಷಯದಲ್ಲಿ ಪ್ರಮಾಣವೇ ಆಗಿರುತ್ತದೆ. ಹೀಗೆ ಹೇಳದಿದ್ದರೆ ಅದ್ವೈತಶ್ರುತಿಯೂ ಕೂಡ ಅದ್ವೈತದ ಸ್ವರೂಪವನ್ನು ಮಾತ್ರ ಹೇಳುತ್ತದೆ ಹೊರತು ಅದರ ಸತ್ಯತ್ವವನ್ನು ಹೇಳುತ್ತಿಲ್ಲ ಎಂದಾಗುವುದರಿಂದ ಶ್ರುತಿಯಿಂದ ಅದ್ವೈತ ಸತ್ಯತ್ವ ಸಿದ್ಧವಾಗದೆ ಅದ್ವೈತವು ನಿನ್ನ ಮತದಲ್ಲಿ ಬಾಧ್ಯವೇ ಆದೀತು ಎಂದು.

ಶ್ರುತಿಯು ಅದ್ವೈತದ ಸ್ವರೂಪವನ್ನು ಮಾತ್ರವೇ ಹೇಳುತ್ತಿದ್ದರೂ ಅದ್ವೈತ ಸತ್ಯವೆಂಬುದು ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ನಿರ್ಣಯವಾಗುತ್ತದೆ. ಹಾಗೆ ಭೇದ ಸತ್ಯತ್ವವು ನಿರ್ಣಯವಾಗುವುದಿಲ್ಲ. ಎಂದು ಪೂರ್ವಪಕ್ಷಿ ಹೇಳುತ್ತಾನೆ. 'ಸದೇವ ಸೋಮ್ಯೇದಮಗ್ರ ಆಸೀತ್' 'ಮೊದಲಿಗೆ ಬ್ರಹ್ಮ ಒಂದೇ ಇತ್ತು' ಎಂದು ಉಪಕ್ರಮ. 'ಈ ಜಗವೆಲ್ಲ 'ಐತದಾತ್ಮ್ಯ' ಬ್ರಹ್ಮರೂಪ' ಎಂದು ಉಪಸಂಹಾರ. 'ತತ್ವಮಸಿ' ಅವನೇ ನೀನೆಂದು ಒಂಬತ್ತು ಬಾರಿ ಪುನಃಪುನಃ ಹೇಳುವುದು ಅಭ್ಯಾಸ. ಐಕ್ಯವು ಬೇರೆ ಪ್ರಮಾಣದಿಂದ ಸಿದ್ಧವಾಗದಿರುವುದರಿಂದ ಅಪೂರ್ವತ್ವ. ಅಪರೋಕ್ಷಿಯು ಬ್ರಹ್ಮನಾಗುತ್ತಾನೆ ಎಂದು, ಫಲ. ಬ್ರಹ್ಮ ಒಂದನ್ನು ತಿಳಿದರೆ ಎಲ್ಲ ತಿಳಿದಂತೆ ಎಂದು ಅರ್ಥವಾದ. ಹೀಗೆ ಷಡ್ವಿಧ ತಾತ್ಪರ್ಯಲಿಂಗವಿರುವುದರಿಂದ ಅದ್ವೈತ ಸತ್ಯವೆಂದು ಸಿದ್ಧವಾಗುತ್ತದೆ. ಯದ್ಯಪಿ ಉಪಪತ್ತಿ ಎಂದು ಒಂದು ತಾತ್ಪರ್ಯಲಿಂಗವಿದೆ. ಅದು ಸೇರಿ ತಾತ್ಪರ್ಯಲಿಂಗಗಳು ಏಳು ಬಗೆ. ಅದ್ವೈತವಿಷಯದಲ್ಲಿ 'ಒಂದು ಮಣ್ಣುಮುದ್ದೆಯನ್ನು ತಿಳಿದರೆ ಮಣ್ಣಿಂದಾಗುವ ಎಲ್ಲವೂ ತಿಳಿದು ಬರುತ್ತದೆ, ಹೇಗೋ ಹಾಗೆ ಬ್ರಹ್ಮವನ್ನು ತಿಳಿದರೆ ಜಗತ್ತೇ ತಿಳಿದು ಬರುತ್ತದೆ. ಎಂದು ಉಪಪತ್ತಿಯು ಶ್ರುತ್ಯುಕ್ತವೇ ಇದೆ. ಆದರೂ ಉಪಕ್ರಮ ಮುಂತಾದುವೆಲ್ಲವೂ ಕೂಡ ಉಪಪತ್ತಿ ರೂಪವೇ ಆಗಿರುವುದರಿಂದ ಉಪಪತ್ತಿ ಎಂಬ ತಾತ್ಪರ್ಯಲಿಂಗ ಯುಕ್ತತ್ವವು ಅರ್ಥಾತ್ ಸಿದ್ಧವೇ ಆಗಿದೆ ಎಂಬ ಅಭಿಪ್ರಾಯದಿಂದ ಬೇರೆ ಹೇಳಿಲ್ಲ.

**ಭೇದವಿಷಯದಲ್ಲಿಯೇ ಉಪಕ್ರಮಾದಿ ಲಿಂಗಗಳು**

ननूपक्रमादीनामैक्यसत्यत्वाप्रतिपादकत्वेऽपि तद्व्याप्यतया तत्साधकत्वमव्याहतमित्यत आह **— भेद इति ।** 'द्वा सुपर्णे'त्युपक्रमः । 'परमं साम्यमुपैती'त्युपसंहारः । 'तयोरन्यः' 'अनश्नन्नन्यः' 'अन्यमीश'-मित्यन्यशब्दाभ्यासः । शास्त्रैकसमधिगम्येश्वरभेदपरत्वादपूर्वता । 'पुण्यपापे विधूये'ति फलम् । 'अस्य महिमान'मित्यर्थवादः । 'अनश्नन्नि'त्युपपत्तिश्चेत्युपपत्तिसहितषड्विधतात्पर्यलिङ्गयुक्तत्वं भेदविषयश्रुतेरपि न्यायामृते

उपपादितम् । ततश्च भेदसत्यत्वसिद्धिरित्याशयः । यद्वा, भेदविषय एव श्रुतेः षड्विधतात्पर्यलिङ्गयुक्तत्वमित्यर्थः । तथाहि । एकमेवाद्वितीयमिति सजातीयद्वितीयराहित्येनैवोपक्रमः । कालादेः सत्त्वश्रवणेन द्वितीयमात्र-निषेधायोगात् । ऐतदात्म्यमित्येतत्स्वामिकत्वेनोपसंहारो न त्वेत-त्स्वरूपत्वेन । तद्धितवैयर्थ्यात् । तत्त्वमसीत्यनेनापि तत्सदृशत्वादिक-मेवाभ्यस्यते । तत्त्वंपदमुख्यार्थविशिष्टाभेदबाधेन पदद्वयस्य चिन्मात्र-लक्षणापेक्षया सामानाधिकरण्यमात्रस्य गौणत्वौचित्यात् । अतत्वमसीति च्छेदे तु स्फुटमेव भेदपरत्वम् । मानान्तरागम्येश्वरभेदपरत्वादपूर्वत्वम् । अथ सम्पत्स्यत इति ब्रह्मप्राप्तिः फलमुच्यते । येनाश्रुतं श्रुतं भवतीत्यर्थवादश्च सादृश्यादिनोपपद्यते । तथैव मृत्पिण्डादिदृष्टान्तैरुप-पादनात् । सर्वमृण्मयानामेकमृत्पिण्डविकारत्वाभावेन तदभेदे तात्पर्या-योगादित्यादि द्रष्टव्यम् ।

अस्तु तर्ह्यबाध्य एव श्रुत्युक्तो भेद इत्यत आह —**यदि पुनरि-ति । अविवाद इति ।** अबाध्यत्वस्यैव पारमार्थिकत्वरूपतयाऽ-स्मदभिमतसिद्धेरिति भावः ।

ಅದ್ವೈತ ವಿಷಯದಲ್ಲಿ ಉಪಕ್ರಮಾದಿಗಳಿದ್ದರೂ ಅವು ಐಕ್ಯವನ್ನು ಸತ್ಯವೆಂದು ಹೇಳುತ್ತಿದ್ದರೆ ಐಕ್ಯ ಸಿದ್ಧವಾಗುತ್ತಿತ್ತು. ಆದರೆ ಉಪಕ್ರಮಾದಿಗಳು ಹೇಳುವುದು ಐಕ್ಯಮಾತ್ರವನ್ನು, ಆದರಿಂದ ಅದರ ಸತ್ಯತ್ವವು ಸಿದ್ಧವಾಗದು ಎನ್ನುತ್ತಾರೆ. ಇದಕ್ಕೆ ಪೂರ್ವಪಕ್ಷಿ ಹೇಳಬಹುದು— 'ಉಪಕ್ರಮಾದಿ ವಾಕ್ಯವು ಅದ್ವೈತವನ್ನು ಸತ್ಯವೆಂದು ಹೇಳದಿದ್ದರೂ ಅದ್ವೈತ ಸತ್ಯತ್ವಕ್ಕೆ ಅದು ವ್ಯಾಪ್ಯವಾದ್ದರಿಂದ ಅದನ್ನು ಅನುಮಾನರೂಪದಿಂದ ಸಾಧಿಸಿಕೊಡಬಲ್ಲದು' ಎಂದು. ಅದಕ್ಕೆ ಭೇದ ವಿಷಯದಲ್ಲಿಯೂ ಉಪಕ್ರಮಾದಿಗಳಿವೆ ಎಂದು ತೋರಿಸುತ್ತಾರೆ.

'ದ್ವಾಸುಪರ್ಣಾ' 'ಜೀವೇಶರು ಎರಡು ಹಕ್ಕಿಗಳು' ಎಂದು ಉಪಕ್ರಮ. ಜ್ಞಾನಿಯು 'ಪರಮಸಾಮ್ಯರೂಪವಾದ ಮೋಕ್ಷವನ್ನು ಪಡೆಯುವನು' ಎಂದು ಉಪಸಂಹಾರ. 'ಎರಡು ಹಕ್ಕಿಗಳಲ್ಲಿ ಒಂದು ಉಣ್ಣುತ್ತದೆ. ಇನ್ನೊಂದು ಉಣ್ಣುವುದಿಲ್ಲ. ಈಶನು ಜೀವನಿಗಿಂತ ಬೇರೆಯೆ' ಎಂದು ಭೇದವನ್ನು ಹೇಳುವ ಶಬ್ದಗಳ ಅಭ್ಯಾಸ. ಶಾಸ್ತ್ರೈಕ ವೇದ್ಯನಾದ ಈಶ್ವರನ ಭೇದವನ್ನು

ಹೇಳುವುದರಿಂದ ಅಪೂರ್ವತ್ವ. 'ಪುಣ್ಯ ಪಾಪ ಬಂಧನದಿಂದ ಮುಕ್ತನಾಗಿ' ಎಂದು ಫಲ. 'ಈಶನ ಮಹಿಮೆ' ಎಂದು ಅರ್ಥವಾದ. ಈಶನು ಕರ್ಮಫಲ ಉಣದವನೆಂದು ಉಪಪತ್ತಿ ಎಂದು ಉಪಪತ್ತಿ ಸಹಿತವಾದ ಷಡ್ವಿಧ ತಾತ್ಪರ್ಯಲಿಂಗಗಳು ಭೇದಶ್ರುತಿಗೂ ಇದೆ ಎಂದು ನ್ಯಾಯಾಮೃತದಲ್ಲಿ ಉಪಪಾದಿಸಿದ್ದಾರೆ. ಅದರಿಂದ ಭೇದ ಸತ್ಯತ್ವವೂ ಸಿದ್ಧಿಸುವುದೆಂದು ಅಭಿಪ್ರಾಯ.

ಅಥವಾ ಭೇದವಿಷಯದಲ್ಲಿಯೇ ಶ್ರುತಿಗೆ ಷಡ್ವಿಧ ತಾತ್ಪರ್ಯಲಿಂಗ ಎಂದರ್ಥ. ಏಕೆಂದರೆ ಏಕಮೇವಾದ್ವಿತೀಯ ಎಂದು ಶ್ರುತಿಯು ಈಶನನ್ನು ಸಜಾತೀಯ ದ್ವಿತೀಯ ರಹಿತನೆಂದೇ ಉಪಕ್ರಮದಲ್ಲಿ ಹೇಳಿದೆ. 'ಇದಮಗ್ರೇ' 'ಆದಿಸೃಷ್ಟಿಕಾಲದಲ್ಲಿ' ಎಂದು ಕಾಲಾದಿಗಳು ಆಗಲೂ ಇದ್ದುವೆನ್ನುತ್ತಿರುವುದರಿಂದ 'ಬ್ರಹ್ಮ ಹೊರತು ಇನ್ನೊಂದಿಲ್ಲ' ಎಂದು ಎರಡನೆ ವಸ್ತುವೇ ಇಲ್ಲ ಎಂದು ನಿಷೇಧ ಮಾಡುವುದು ಶಕ್ಯವಿಲ್ಲ. 'ಐತದಾತ್ಮ್ಯ' ಈಶಸ್ವಾಮಿಕ ಎಂದೇ ಉಪಸಂಹಾರ. 'ಎಲ್ಲವೂ 'ಏತದಾತ್ಮ'ವೆ ಬ್ರಹ್ಮವೆ' ಎಂದೇ ಹೇಳಲು ಬರುತ್ತಿರುವಾಗ 'ಐತದಾತ್ಮ್ಯ'ವೆಂದು ತದ್ಧಿತಪ್ರತ್ಯಯ ಪ್ರಯೋಗ ಮಾಡಿರುವುದು ಅಭೇದ ಪಕ್ಷದಲ್ಲಿ ವ್ಯರ್ಥ. 'ಏತದಾತ್ಮ ಸ್ವರೂಪವಲ್ಲ, ಏತದಾತ್ಮಸ್ವಾಮಿಕ' ಎಂದು ತಿಳಿಸಲು ತದ್ಧಿತವೆಂದಿಟ್ಟುಕೊಂಡರೆ ಅದು ಸಾರ್ಥಕವಾಗುತ್ತದೆ. 'ತತ್ತ್ವಮಸಿ' ಎನ್ನುವುದು ಕೂಡ ತತ್‌ಸದೃಶತ್ವ ತತ್‌ಸ್ವಾಮಿಕತ್ವಾದಿಗಳನ್ನೇ ಅಭ್ಯಾಸ ಮಾಡುತ್ತಿದೆ. ಅಭೇದಪಕ್ಷದಲ್ಲಿ ತತ್‌ಪದ ಮುಖ್ಯಾರ್ಥವಾದ ಸರ್ವಜ್ಞತ್ವ ವಿಶಿಷ್ಟಕ್ಕೂ ತ್ವಂಪದ ಮುಖ್ಯಾರ್ಥ ಅಲ್ಪಜ್ಞತ್ವ ವಿಶಿಷ್ಟಕ್ಕೂ ಅಭೇದ ಬಾಧಿತವೆಂದೊಪ್ಪಿರುವುದರಿಂದ ಎರಡೂ ಪದಗಳಿಗೆ ಶುದ್ಧಚೈತನ್ಯದಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಅದಕ್ಕಿಂತ 'ತತ್'ಪದ ಒಂದಕ್ಕೇ ತತ್‌ಸದೃಶದಲ್ಲಿ ಲಕ್ಷಣಾ ಮಾಡುವುದರಿಂದ ಸಾಮಾನಾಧಿಕರಣ್ಯ ಮಾತ್ರವನ್ನು ಗೌಣವಾಗಿಸುವುದು ಉಚಿತವೆನಿಸುತ್ತದೆ. 'ಅತತ್ ತ್ವಮಸಿ' ಎಂದು ವಿಭಾಗ ಮಾಡಿದರಂತೂ ಇದು ಸ್ಪಷ್ಟವಾಗಿಯೆ ಭೇದವನ್ನು ಹೇಳುತ್ತದೆ. ಬೇರೆ ಪ್ರಮಾಣಗಳಿಂದ ತಿಳಿಯಲಾಗದ ಈಶ್ವರನ ಭೇದವನ್ನು ಹೇಳುವುದರಿಂದ ಅಪೂರ್ವತ್ವವಿದೆ. ಅಥ ಸಂಪತ್ಸ್ಯತೇ ಎಂದು ಬ್ರಹ್ಮನ ಪ್ರಾಪ್ತಿಯನ್ನು ಫಲವಾಗಿ ಹೇಳುತ್ತಿದೆ. 'ಯೇನಾಶ್ರುತಂ ಶ್ರುತಂ' ಈಶನನ್ನು ತಿಳಿದರೆ ಅವನಿಗೆ ಸದೃಶವೇ ಆಗಿರುವುದರಿಂದ ಬೇರೆಲ್ಲವನ್ನೂ ತಿಳಿದಂತೆಯೆ ಎಂದು ಸಾದೃಶ್ಯಾದಿಗಳಿಂದಲೇ ಅರ್ಥವಾದ ಕೂಡುತ್ತದೆ. ಮೃತ್ಪಿಂಡ ಮೃಣ್ಮಯಗಳು ಮುಂತಾಗಿ ಸದೃಶ ವಸ್ತುಗಳನ್ನೇ ದೃಷ್ಟಾಂತವಾಗಿ ಹೇಳಿ ಉಪಪಾದನೆ ಮಾಡಿರುವುದರಿಂದ ಹೀಗೇ ಹೇಳಬೇಕು. ಎಲ್ಲ ಮೃಣ್ಮಯ ಪದಾರ್ಥಗಳೂ ಒಂದು ಮೃತ್ಪಿಂಡದಿಂದಾಗದಿರುವುದರಿಂದ ಮೃಣ್ಮಯ ಮೃತ್ಪಿಂಡಗಳ ಅಭೇದವನ್ನು ಈ ಶ್ರುತಿ ಹೇಳುವುದು ಕೂಡುವುದಿಲ್ಲ ಎಂದು ಮುಂತಾಗಿ ತಿಳಿಯಬೇಕು.

ಶ್ರುತ್ಯುಕ್ತವಾದ ಭೇದವು ಬಾಧ್ಯ ಎನ್ನುವ ಪಕ್ಷದಲ್ಲಿ ಇಷ್ಟು ಅನುಪಪತ್ತಿ ಇರುವುದಾದರೆ ಅಬಾಧ್ಯ ಎಂದೇ ಹೇಳುತ್ತೇನೆ, ಎಂದರೆ, ಆಗ ನಮಗೆ ನಿಮ್ಮೊಡನೆ ವಿವಾದವಿಲ್ಲ, ಅಬಾಧ್ಯತ್ವವೇ ಪಾರಮಾರ್ಥಿಕತ್ವರೂಪವಾದ್ದರಿಂದ ನಮಗೆ ಬೇಕಾಗಿರುವುದು ಸಿದ್ಧವಾದಂತಾಯಿತು.

**ಶ್ರುತಿಯು ಅಭೇದಾನುವಾದಕ ಹೊರತು ಭೇದಾನುವಾದಕವಲ್ಲ**

**कुतश्च व्यावहारिकभेदपरत्वम् । अद्वैतश्रुतिविरोधादिति चेत् । तर्ह्यद्वैतश्रुतेः प्रातिभासिकाद्वैतपरत्वमस्तु । विरोधपरिहारस्य साम्यात् ।**

**ननु न श्रुतिप्रतिपादितस्य बाधादप्रामाण्यम् । किन्तु तदभिप्रेतस्य । अन्यथा मीमांसकमतेऽर्थवादभागस्याप्रामाण्यप्रसङ्गः। न चात्र भेदः श्रुतितात्पर्यगोचरः । श्रुतीनां नेह नानेति निषेधाय प्रत्यक्षप्राप्तभेदानुवादित्वादिति चेन्न । 'नेह नानाऽस्ती'त्यादि वेदवाक्यानि, 'विमता आत्मानः परमत्मनः परमार्थतो न भिद्यन्ते आत्मत्वात् परमात्मवदि' त्यनुमानप्राप्तमभेदं 'द्वा सुपर्णे'ति निषेधायानुवदन्तीति वैपरीत्यसम्भवात् । भेदस्य तादात्म्यनिषेधात्मकतया भेदप्रतिपादकानां तादात्म्यनिषेधरूपत्वात् ।**

ಶ್ರುತಿಯು ಏಕೆ ವ್ಯಾವಹಾರಿಕ ಭೇದಪರ? ಅದ್ವೈತಶ್ರುತಿಯ ವಿರೋಧವಿರುವುದರಿಂದ ಎನ್ನುವುದಾದರೆ ಅದ್ವೈತ ಶ್ರುತಿಯನ್ನೇ ಪ್ರಾತಿಭಾಸಿಕಾದ್ವೈತ ಪರವೆನ್ನೋಣ. ವಿರೋಧ ಪರಿಹಾರ ಸಮವೇ ಆಗುತ್ತದೆ.

'ಶ್ರುತಿಯು ಹೇಳಿದ್ದು ಬಾಧಿತವಾದ ಮಾತ್ರಕ್ಕೆ ಅಪ್ರಾಮಾಣ್ಯ ಬರುವುದಿಲ್ಲ. ಅದಕ್ಕೆ ಅಭಿಪ್ರೇತವಾದುದು ಬಾಧಿತವಾದರೆ ಮಾತ್ರ ಅಪ್ರಾಮಾಣ್ಯ. ಹೀಗೆ ಹೇಳದಿದ್ದರೆ ಮೀಮಾಂಸಕಮತದಲ್ಲಿ ಅರ್ಥವಾದ ಭಾಗ ಅಪ್ರಮಾಣವೆನಿಸೀತು. ಪ್ರಕೃತದಲ್ಲಿ ಭೇದವನ್ನು ಶ್ರುತಿಯು ಹೇಳುತ್ತಿದ್ದರೂ ಅದು ಅದಕ್ಕೆ ಅಭಿಪ್ರೇತವಾಗಿಲ್ಲ. 'ನೇಹ ನಾನಾ' ಎಂದು ಭೇದವನ್ನು ನಿಷೇಧಿಸುವ ಅಭಿಪ್ರಾಯದಿಂದಲೇ ಪ್ರತ್ಯಕ್ಷದಿಂದ ತಿಳಿದು ಬಂದಿರುವ ಭೇದವನ್ನು ಶ್ರುತಿಗಳು ಅನುವಾದಿಸುತ್ತಿವೆ'–ಹೀಗೆ ಹೇಳಬಾರದು.

'ಜೀವರು ಪರಮಾತ್ಮನಿಗಿಂತ ವಸ್ತುತಃ ಬೇರೆಯಲ್ಲ ಆತ್ಮರಾದ್ದರಿಂದ, ಪರಮಾತ್ಮನಂತೆ' ಎಂಬ ದುಷ್ಟ ಅನುಮಾನದಿಂದ ತಿಳಿದು ಬಂದಿರುವ ಅಭೇದವನ್ನು 'ಎರಡು ಪಕ್ಷಿಗಳು'ಎಂದು ನಿಷೇಧ ಮಾಡುವುದಕ್ಕಾಗಿಯೇ 'ನೇಹ ನಾನಾ'ಎಂದು ಮುಂತಾದ

ವೇದವಾಕ್ಯಗಳು ಅನುವಾದ ಮಾಡುತ್ತಿವೆ ಎಂದು ತಿರುಗಿಸಿ ಹೇಳಬಹುದು. ಏಕೆಂದರೆ ಭೇದವು ತಾದಾತ್ಮ್ಯ ನಿಷೇಧವಾದ್ದರಿಂದ ಭೇದಪ್ರತಿಪಾದಕ ಶ್ರುತಿಗಳು ತಾದಾತ್ಮ್ಯ ನಿಷೇಧರೂಪವಾಗಿವೆ.

**एतेन निषेधवाक्यत्वादद्वैतवाक्यं प्रबलमिति निरस्तम् । न हि प्रत्यक्षेण प्राप्तिरेवानुवादे प्रयोजिका । तथा सत्यग्निर्हिमस्य भेषजमित्यादावग्नेर्हिमनिवृत्तिं प्रति कारणत्वमन्वयव्यतिरेकरूपानुमानप्राप्तं प्रतिपादयत् सर्वसम्मतमनुवादकं न स्यात् ।**

ಭೇದವು ತಾದಾತ್ಮ್ಯ ನಿಷೇಧರೂಪವಾದ್ದರಿಂದಲೇ 'ಅದ್ವೈತವಾಕ್ಯವು ನಿಷೇಧ ವಾಕ್ಯವಾದ್ದರಿಂದ ಪ್ರಬಲ' ಎನ್ನುವ ವಾದವೂ ನಿರಸ್ತವಾಯಿತು.

ಶ್ರುತಿಯು ಅಭೇದವನ್ನು ಅನುವಾದ ಮಾಡುತ್ತಿದೆ ಎನ್ನಬೇಕಾದರೆ ಅದು ಪ್ರತ್ಯಕ್ಷ ದಿಂದಲೇ ಪ್ರಾಪ್ತವಾಗಿರಬೇಕೆಂದೇನಿಲ್ಲ. ಹೀಗೆ ಹೇಳದಿದ್ದರೆ 'ಅಗ್ನಿಯು ಹಿಮಕ್ಕೆ ನಿವರ್ತಕ' ಎನ್ನುವ ಶ್ರುತಿಯು ಅನ್ವಯವ್ಯತಿರೇಕರೂಪವಾದ ಅನುಮಾನದಿಂದ ಅಗ್ನಿಯಲ್ಲಿ ತಿಳಿದುಬಂದ ಹಿಮನಿವರ್ತಕತ್ವವನ್ನು ಹೇಳಿ ಸರ್ವಸಮ್ಮತ ಅನುವಾದಕ ವೆನಿಸಿದ್ದು ಕೂಡದೇ ಹೋದೀತು.

भेदश्रुतेर्व्यावहारिकभेदपरत्वे बाधकमभिधाय साधकाभावमाह **—कुतश्चेति** । अद्वैतस्य व्यावहारिकत्वासम्भवात् प्रातिभासिकेत्युक्तम् । नन्वेवमद्वैतश्रुतीनामप्रामाण्यप्रसङ्ग इति चेत् त्वन्मते द्वैतश्रुतीनामप्रामाण्यप्रसङ्गेन तुल्यत्वादिति भावः ।

स्यादेवम् । यद्यबाध्यार्थप्रतिपादकत्वं प्रामाण्यं स्यात् । न चैवम् । अपि त्वबाध्यार्थपरत्वम् । द्वा सुपर्णेत्यादीनां च भेदानुवादकानां तन्निषेधपरत्वादेव प्रामाण्योपपत्तिः । अत एव तत्प्रतिपाद्यभेदस्य बाध्यत्वमपीत्याशयेन शङ्कते **— नन्विति । अर्थवादभागस्येति** । तस्य प्रतिपाद्यार्थाबाधनियमाभावेऽप्यबाध्यविध्यर्थकार्यपरत्वेनैव प्रामाण्याङ्गी-

कारादिति भावः । मतान्तरे प्रतिपाद्यार्थेऽपि प्रामाण्यात् मीमांसकमत इत्युक्तम् ।

एवं सत्यद्वैतश्रुतीनां प्रातिभासिकाद्वैतपरत्वेऽपि नाप्रामाण्यप्रसङ्ग इत्याशयेनाह — **नेहेति** । वाक्यान्यनुवदन्तीत्यन्वयः । भेदवदभेदस्य प्रत्यक्षेण प्राप्त्यभावादाह — **विमता इति** । ननु द्वासुपर्णेत्यादीनां कथमभेदनिषेधपरत्वम् तदर्थकपदाभावादत आह — **भेदस्येति** । तादात्म्यनिषेधरूपत्वात् अभेदाभावरूपत्वात् । तथाच भेदार्थस्यैव तदर्थकत्वान्नोक्तदोष इति भावः ।

ಭೇದ ಶ್ರುತಿಯು ವ್ಯಾವಹಾರಿಕ ಭೇದಪರವೆನ್ನುವುದಕ್ಕೆ ಬಾಧಕವಿದೆ ಎಂದು ಹೇಳಿ ಈಗ ಸಾಧಕವಿಲ್ಲವೆಂದೂ ಹೇಳುತ್ತಾರೆ, 'ಶ್ರುತಿಯು ಏಕೆ ವ್ಯಾವಹಾರಿಕ ಭೇದಪರ?' ಎಂದು. ಅದ್ವೈತವು ವ್ಯಾವಹಾರಿಕವಾಗುವುದು ಅಸಂಭವವಾದರೆ ಪ್ರಾತಿಭಾಸಿಕವಾಗಲಿ ಎನ್ನುತ್ತಾರೆ. ಪ್ರಾತಿಭಾಸಿಕವಾದ ಅದ್ವೈತವನ್ನು ಶ್ರುತಿಯು ಹೇಳಿದರೆ ಅದು ಅಪ್ರಮಾಣವೆನಿಸುವ ಪ್ರಸಂಗ ಎಂದರೆ ನಿನ್ನ ಮತದಲ್ಲಿ ಅಪಾರಮಾರ್ಥಿಕ ದ್ವೈತವನ್ನು ಶ್ರುತಿಯು ಹೇಳಿದರೆ ಅದು ಅಪ್ರಮಾಣವೆನಿಸುವ ಪ್ರಸಂಗ ಸಮಾನವೆ ಎಂದು ಅಭಿಪ್ರಾಯ.

ಪ್ರಶ್ನೆ–'ಅಬಾಧಿತವಾದ ವಿಷಯವನ್ನು ಹೇಳುವುದೇ ಪ್ರಾಮಾಣ್ಯ ಎಂದಾಗಿದ್ದರೆ ನೀವು ಹೇಳುವುದು ಯುಕ್ತವಾಗುತ್ತಿತ್ತು. ಆದರೆ ಅಬಾಧಿತ ವಿಷಯವನ್ನು ಹೇಳಬೇಕಾಗಿಲ್ಲ. ಅದರಲ್ಲಿ ತಾತ್ಪರ್ಯವಿದ್ದರೂ ಸಾಕು, ಪ್ರಾಮಾಣ್ಯ ಬರುತ್ತದೆ. ದ್ವಾಸುಪರ್ಣಾಶ್ರುತಿ ಭೇದವನ್ನು ಹೇಳಿದರೂ ಅದನ್ನು ನಿಷೇಧ ಮಾಡುವುದರಲ್ಲಿಯೇ ಅದಕ್ಕೆ ತಾತ್ಪರ್ಯವಿರುವುದರಿಂದ ನನ್ನ ಮತದಲ್ಲಿ ಅದಕ್ಕೆ ಪ್ರಾಮಾಣ್ಯ ಕೂಡುತ್ತದೆ. ಆದರಿಂದಲೇ ಅದು ಮುಖತಃ ಹೇಳುವ ಭೇದವು ಬಾಧಿತವೆನ್ನುವುದೂ ಕೂಡುತ್ತದೆ. ಮೀಮಾಂಸಕ ಮತದಲ್ಲಿ ಅರ್ಥವಾದಭಾಗವು ಹೇಳುವ ವಿಷಯ ಅಬಾಧಿತವಾಗಿರುತ್ತದೆ ಎನ್ನುವ ನಿಯಮವಿಲ್ಲದಿದ್ದರೂ ಅಬಾಧ್ಯವಾದ ವಿಧ್ಯರ್ಥ ಕಾರ್ಯದಲ್ಲಿ ಅದಕ್ಕೆ ತಾತ್ಪರ್ಯವಿರುವುದರಿಂದ ಪ್ರಮಾಣವೆಂದು ಅಂಗೀಕೃತವಾಗಿದೆ'.

ನಮ್ಮ ಮತದಲ್ಲಿ ಅರ್ಥವಾದವು ಹೇಳುವ ವಿಷಯವೂ ಅಬಾಧಿತವೆ. ಆ ವಿಷಯದಲ್ಲಿ ಅದಕ್ಕೆ ಪ್ರಾಮಾಣ್ಯವಿದೆ. ಆದರಿಂದ ಮೀಮಾಂಸಕ ಮತದಲ್ಲಿ ಆ ನಿಯಮವಿಲ್ಲ ಎಂದಿದ್ದಾರೆ.

ಪೂರ್ವಪಕ್ಷಿ ಪ್ರಶ್ನೆಗೆ ಉತ್ತರ ಹೇಳುತ್ತಾರೆ— ನೀನು ಹೀಗೆ ಹೇಳುವುದಾರೆ ಅದ್ವೈತ ಶ್ರುತಿಗೆ ನಾವು ಹೇಳುವಂತೆ ಪ್ರಾತಿಭಾಸಿಕ ಅದ್ವೈತದಲ್ಲಿ ತಾತ್ಪರ್ಯವೆಂದೊಪ್ಪಿದರೂ ಅದಕ್ಕೆ ಅಪ್ರಾಮಾಣ್ಯ ಪ್ರಸಂಗವಿಲ್ಲ. ಏಕೆಂದರೆ ಅದು ಪ್ರಾತಿಭಾಸಿಕ ಅದ್ವೈತವನ್ನು ಅನುವಾದ ಮಾಡುತ್ತದೆಯಷ್ಟೆ.

ಭೇದವು ಪ್ರತ್ಯಕ್ಷ ಸಿದ್ಧವಾದ್ದರಿಂದ ಶ್ರುತಿಯು ಅನುವಾದ ಮಾಡಬಹುದು. ಅದ್ವೈತ ಪ್ರತ್ಯಕ್ಷಸಿದ್ಧವಲ್ಲ, ಎಂದರೆ 'ಜೀವಾತ್ಮರು ಪರಮಾತ್ಮನಿಗಿಂತ ಬೇರೆಯಲ್ಲ ಆತ್ಮರಾದ್ದರಿಂದ, ಪರಮಾತ್ಮನಂತೆ' ಎಂಬ ಅನುಮಾನಸಿದ್ಧವಾದ ಅದ್ವೈತವನ್ನೇ ಶ್ರುತಿಯು ಅನುವಾದ ಮಾಡಲಿ. ಅದು 'ದ್ವಾಸುಪರ್ಣಾ' ಎಂಬಲ್ಲಿ ನಿಷೇಧ ಮಾಡುವುದಕ್ಕಾಗಿ ಎನ್ನೋಣ.

'ದ್ವಾಸುಪರ್ಣಾ' ಎಂಬಲ್ಲಿ ಅಭೇದ ನಿಷೇಧ ಮಾಡುವ ಪದವಿಲ್ಲದಿರುವುದರಿಂದ ಅದು ಹೇಗೆ ಅದ್ವೈತವನ್ನು ನಿಷೇಧ ಮಾಡುತ್ತದೆ ಎಂದರೆ ಅದು 'ಅನ್ಯ'ಪದದಿಂದ ಭೇದವನ್ನು ಹೇಳುತ್ತದೆ, ಭೇದವು ಅಭೇದಾಭಾವ ರೂಪವಾಗಿದೆ. ಹೀಗಾಗಿ ಭೇದಶ್ರುತಿ ಅಭೇದವನ್ನು ನಿಷೇಧಿಸುತ್ತದೆ, ಅಭೇದಾಭಾವವನ್ನು ಹೇಳುತ್ತದೆ. ಆದರಿಂದ ಅದ್ವೈತನಿಷೇಧ ಶ್ರುತಿಯಲ್ಲಿಲ್ಲ ಎನ್ನಲಾಗದು.

**ಭೇದಶ್ರುತಿ ಅಭೇದ ನಿಷೇಧಕವಾದ್ದರಿಂದ ಪ್ರಬಲ**

एवं भेदश्रुतेरभेदनिषेधकत्वसमर्थनेन वाचस्पत्युक्तमपि प्रत्युक्तमित्याह — **एतेनेति** । **प्रबलमिति** । तथाच तेन भेदश्रुतेरेव बाधः । अन्यथा नेदं रजतमिति प्रत्यक्षस्यापि प्राबल्यासिद्धेरिदं रजतमिति प्रत्यक्षबाधकत्वानुपपत्तिरिति भावः । **प्रत्युक्तमिति** । भेदश्रुतेरपि निषेधकत्वसाम्ये दुर्बलत्वायोगादिति भावः । अथ भेदस्याभेदनिषेधरूपत्वेऽप्यभेदनिषेधत्वेन भेदाप्रतिपादकत्वात् द्वा सुपर्णेत्यादेर्दुर्बलत्वमेवेति चेदत्र वक्तव्यम् । किमभेदज्ञानं प्रति अभेदनिषेधत्वेनैव भेदज्ञानं विरोध्युत भेदत्वेनापि । आद्येऽनुभवविरोधः । घटः पटभिन्न इत्यादिज्ञानदशायां जात्वपि तदभेदज्ञानानुदयात् । द्वितीये तु कथं द्वा सुपर्णेत्यादेर्दुर्बलत्वम्? विरोधित्वाविशेषात् । न चैवमुक्तातिप्रसङ्गः । निश्चितप्रामाण्यकत्वेन प्राबल्यात् । परीक्षया च तन्निश्चयात् । निषेधकत्वमात्रस्याप्रयोजकत्वात् । अन्यथा 'न हिंस्या'दित्यादे'रग्नीषोमीय' मित्यादिश्रुतिबाधकत्वप्रसङ्गात् । न चैवं भेदाभेदवाक्ययोः प्राबल्यदौर्बल्यानिर्णयः । निरवकाशत्वादिना तन्निर्णयात् । निरवकाशत्वं च भेदवाक्यानामेवेत्यन्यत्र प्रपञ्चितम् ।

ಹೀಗೆ ಭೇದಶ್ರುತಿಯು ಅಭೇದ ನಿಷೇಧಕವೆಂದು ಸಮರ್ಥನೆ ಮಾಡಿದ್ದರಿಂದ, ಭಾಮತೀಕಾರನು 'ಅದ್ವೈತಶ್ರುತಿಯು ದ್ವೈತ ನಿಷೇಧಕವಾದ್ದರಿಂದ ಪ್ರಬಲ' ಎಂದು ಹೇಳಿದ್ದೂ ನಿರಸ್ತವಾಯಿತು. ಏಕೆಂದರೆ ದ್ವೈತವೂ ಅದ್ವೈತಾಭಾವರೂಪವಾದ್ದರಿಂದ ದ್ವೈತಶ್ರುತಿಯೂ ನಮ್ಮ ಪ್ರಕಾರ ಅದ್ವೈತನಿಷೇಧಕವಾಗಿ ಪ್ರಬಲವಾಗಿದೆ.

ಭಾಮತೀಕಾರನ ಪ್ರಕಾರ ಅದ್ವೈತ ಶ್ರುತಿಯೆ ನಿಷೇಧಕವಾಗಿ ಪ್ರಬಲವಾದ್ದರಿಂದ ಭೇದಶ್ರುತಿಯೇ ಬಾಧಿತವಾಗುತ್ತದೆ. ಹೀಗೆ ಹೇಳದಿದ್ದರೆ 'ಇದಂ ರಜತಂ' ಎಂಬ ಭ್ರಮಕ್ಕಿಂತ 'ನೇದಂ ರಜತಂ' ಎಂಬ ಪ್ರತ್ಯಕ್ಷ ಪ್ರಬಲವಾಗದೆ ಹೋದೀತು, 'ಇದಂ ರಜತಂ' ಎಂಬ ಪ್ರತ್ಯಕ್ಷಕ್ಕೆ ಅದು ಬಾಧಕವಾಗದೆ ಹೋದೀತು ಎನ್ನುತ್ತಾನೆ.

ವಸ್ತುತಃ ಇದು ಸರಿಯಲ್ಲ. ಭೇದಶ್ರುತಿಯೂ ಕೂಡ ಅಭೇದ ನಿಷೇಧಕ. ನಿಷೇಧಕತ್ವ ಸಾಮ್ಯವಿರುವಾಗ ಭೇದಶ್ರುತಿಯು ಅಭೇದಶ್ರುತಿಗಿಂತ ದುರ್ಬಲವೆನಿಸಲಾರದು.

'ಭೇದವು ಅಭೇದನಿಷೇಧ ರೂಪವೇ ಆಗಿದ್ದರೂ ದ್ವಾಸುಪರ್ಣಾಶ್ರುತಿಯು 'ಅಭೇದ ನಿಷೇಧ' ರೂಪವಾಗಿ ಭೇದವನ್ನು ಪ್ರತಿಪಾದಿಸದಿರುವುದರಿಂದ ಅದು ದುರ್ಬಲವೆ' ಎಂದು ಹೇಳಿದರೆ ಅದಕ್ಕೆ ಹೀಗೆ ಉತ್ತರ– ಅಭೇದಜ್ಞಾನಕ್ಕೆ ಭೇದಜ್ಞಾನವು ವಿರೋಧಿಯಾಗಬೇಕಾದರೆ ಅದು ಭೇದವನ್ನು 'ಭೇದಾಭಾವ'ವೆಂದೇ ವಿಷಯೀಕರಿಸಬೇಕೆ ಅಥವಾ 'ಭೇದ'ವೆಂದೇ ವಿಷಯೀಕರಿಸಿದರೂ ವಿರೋಧಿಯಾಗುವುದೆ? ಭೇದಾಭಾವವೆಂದೇ ವಿಷಯೀಕರಿಸಬೇಕೆನ್ನುವುದು ಅನುಭವದಲ್ಲಿ ಕಂಡಿಲ್ಲ. ಘಟವು 'ಪಟಭಿನ್ನ' ಎನ್ನುವ ಜ್ಞಾನವಿರುವಾಗಲೂ ಕೂಡ ಪಟಾಭೇದಜ್ಞಾನವೆಂದೂ ಬರುವುದಿಲ್ಲ. ಹೀಗೆ ಭೇದವನ್ನು 'ಭೇದ'ವೆಂದು ವಿಷಯೀಕರಿಸಿದರೂ ಅಭೇದಜ್ಞಾನಕ್ಕೆ ಅದು ವಿರೋಧಿಯಾಗುವುದೆಂದು ಒಪ್ಪುವುದಾದರೆ ಭೇದವೆಂದು ವಿಷಯೀಕರಿಸುವ ದ್ವಾಸುಪರ್ಣಾ ಶ್ರುತಿಯು ಹೇಗೆ ದುರ್ಬಲವೆನಿಸುವುದು? ವಿರೋಧಿತ್ವವು ಸಮಾನವಾಗಿರುವಾಗ ದುರ್ಬಲತ್ವ ಬರಲಾರದು. ಹಾಗಾದರೆ 'ನೇದಂ ರಜತಂ' ಎಂಬ ಜ್ಞಾನವು ಇದಂ ರಜತಂ ಎಂಬ ಭ್ರಮಕ್ಕಿಂತ ಪ್ರಬಲವಾಗದೇ ಹೋದೀತೆನ್ನುವಂತಿಲ್ಲ. 'ನೇದಂ ರಜತಂ' ಎಂಬ ಜ್ಞಾನದ ಪ್ರಾಮಾಣ್ಯ ನಿಶ್ಚಿತವಾಗಿದೆ. ಪರೀಕ್ಷೆಯಿಂದ ಅದರ ಪ್ರಾಮಾಣ್ಯನಿಶ್ಚಯವಾಗಿರುತ್ತದೆ. ಅದರಿಂದ ಅದು ಪ್ರಬಲ. ಪ್ರಾಮಾಣ್ಯನಿಶ್ಚವಾಗಿರದಿದ್ದರೆ ಅದು ಕೇವಲ 'ನ' ರಜತಂ ಎಂದು ನಿಷೇಧ ಮಾಡುವುದು ಮಾತ್ರವೇ ಅಪ್ರಯೋಜಕ. ಹೀಗೆ ಹೇಳದಿದ್ದರೆ 'ನ ಹಿಂಸ್ಯಾತ್' ಎಂದು ಶ್ರುತಿಯು 'ನ' ಎಂದು ನಿಷೇಧ ಮಾಡುತ್ತಿರುವುದರಿಂದಲೇ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ಯಾಗೀಯ ಹಿಂಸಾವಿಧಿಗಿಂತ ಪ್ರಬಲವೆನಿಸಿ ಅದಕ್ಕೆ ಬಾಧಕವೆಂದಾದೀತು. ವಸ್ತುತಃ ಅದು ಬಾಧಕವಾಗಿಲ್ಲ.

ಹಾಗಾದರೆ ಭೇದ ಅಭೇದ ವಾಕ್ಯಗಳು ಪರಸ್ಪರ ನಿಷೇಧಕಗಳಾಗಿರುವುದರಿಂದ ಪ್ರಾಬಲ್ಯ ದೌರ್ಬಲ್ಯ ನಿರ್ಣಯ ಅಶಕ್ಯ ಎನ್ನಬಾರದು. ನಿರವಕಾಶತ್ವಾದಿ ಯುಕ್ತಿಯಿಂದ ನಿರ್ಣಯ ಶಕ್ಯವಿದೆ.

ನಿರವಕಾಶತ್ವವು ಭೇದವಾಕ್ಯಗಳಿಗೇ ಎನ್ನುವುದು ನ್ಯಾಯಾಮೃತಾದಿಗಳಲ್ಲಿ ವಿಸ್ತಾರವಾಗಿ ಉಕ್ತವಾಗಿದೆ.

**नन्वभेदश्रुतीनां नानुवादकत्वसम्भवः । अभेदस्य प्रत्यक्षेणाप्राप्तत्वात् । न च प्राप्तिमात्रमनुवादप्रयोजकम् । सर्वस्याप्यनुमानतः प्राप्तिसम्भवेन श्रुतिमात्रस्याप्यनुवादकत्वप्रसङ्गादित्यत आह — न हीति । इति वाक्यमनुवादकं न स्यादित्यन्वयः । इष्टापत्तिनिरासार्थमनुवादकत्वेन सर्वसम्मतमिति । प्रत्यक्षप्राप्तप्रतिपादकत्वे दोषाभावादन्वयव्यतिरेकरूपानुमानप्राप्तं कारणत्वमर्थं प्रतिपादयदिति । कारणत्वस्य कालादिघटितत्वेन प्रत्यक्षासम्भवादिति भावः । यत्सत्त्वे यत्सत्त्वमित्यन्वयमात्रस्य प्रमेयत्वाभिधेयत्वयोः व्यभिचरितत्वात् व्यतिरेकनिवेशः । यदभावे यदभाव इति व्यतिरेकस्य नरशृङ्ग शशशृङ्गयोर्व्यभिचारित्वादन्वयनिवेशः । न चैवमप्यन्यथासिद्धान्वयव्यतिरेकवति व्यभिचारः । अनन्यथासिद्धत्वेनापि विशेषणीयत्वात् । वस्तुतस्तु अन्वयव्यतिरेकवत्त्वस्य नियतपूर्ववृत्तित्वव्याप्यतया तेन तस्मिन् साध्यमाने हिमनिवृत्तिं प्रत्यग्नेरन्यथासिद्धनियतपूर्ववृत्तित्वबाधात् अनन्यथासिद्धनियतपूर्ववृत्तित्वरूपकारणत्वसिद्धिरित्यवधेयम् ।**

'ಅಭೇದಶ್ರುತಿಯು ಅನುವಾದಕವೆನಿಸುವ ಸಂಭವವಿಲ್ಲ, ಏಕೆಂದರೆ ಅಭೇದವು ಪ್ರತ್ಯಕ್ಷದಿಂದ ಪ್ರಾಪ್ತವಾಗಿಲ್ಲ. 'ಪ್ರಾಪ್ತವಾದರೆ ಸಾಕು, ಪ್ರತ್ಯಕ್ಷದಿಂದಲೇ ಪ್ರಾಪ್ತವಾಗಬೇಕಿಲ್ಲ' ಎಂದರೆ, ಎಲ್ಲಕ್ಕೂ ಅನುಮಾನದಿಂದ ಪ್ರಾಪ್ತಿ ಸಂಭವಿರುವುದರಿಂದ ಶ್ರುತಿ ಎಲ್ಲವೂ ಅನುವಾದವೆನಿಸುವ ಪ್ರಸಂಗವಿದೆ'– ಹೀಗೆ ಹೇಳಬಾರದು ಎನ್ನುತ್ತಾರೆ.

ಏಕೆಂದರೆ, ಅಗ್ನಿಯು ಹಿಮನಿವರ್ತಕ ಎಂಬ ಶ್ರುತಿ ವಾಕ್ಯವು ಕೂಡ ಅನುಮಾನಪ್ರಾಪ್ತವಾದ ಹಿಮನಿವರ್ತಕತ್ವವನ್ನೇ ಹೇಳುವುದರಿಂದ ಅದು ಅನುವಾದಕವಾಗದೆ ಹೋದೀತು. ಇಷ್ಟಾಪತ್ತಿಯನ್ನು ಇಲ್ಲಿ ಹೇಳುವಂತಿಲ್ಲ, ಅದು ಅನುವಾದಕವೆಂದು ಸರ್ವಸಮ್ಮತವಾಗಿದೆ. ಪ್ರತ್ಯಕ್ಷಪ್ರಾಪ್ತ ಪ್ರತಿಪಾದಕವಾಗಿದ್ದರೆ ಈ ಆಪಾದನೆಗೆ ಅವಕಾಶವಿರಲಿಲ್ಲವೆಂದು ಬಗೆದು, 'ಅನ್ವಯವ್ಯತಿರೇಕರೂಪ ಅನುಮಾನ ಪ್ರಾಪ್ತವಾದ ಹಿಮನಿವೃತ್ತಿಕಾರಣತ್ವವನ್ನು ಶ್ರುತಿಯು ಹೇಳುತ್ತಿದೆ, ಅದರಿಂದ ಅನುವಾದಕವಾಗದೆ ಹೋದೀತೆಂದು ಆಪತ್ತಿ ಇದೆ' ಎನ್ನುತ್ತಾರೆ.

ಕಾರಣತ್ವವು ಕಾರ್ಯನಿಯತಪೂರ್ವವೃತ್ತಿತ್ವರೂಪವಾಗಿದ್ದು ಕಾಲಾದಿ ಘಟಿತವಾಗಿರುವುದರಿಂದ ಕಾಲವು ಪ್ರತ್ಯಕ್ಷವಲ್ಲವಾದ್ದರಿಂದ ಪ್ರತ್ಯಕ್ಷದಿಂದ ಪ್ರಾಪ್ತಿ ಸಂಭವವಿಲ್ಲ ಎನ್ನುತ್ತಾರೆ.

ಪ್ರಮೇಯತ್ವ ಮತ್ತು ಅಭಿಧೇಯತ್ವಗಳಿಗೂ 'ಯತ್‌ಸತ್ವೇ ಯತ್ಸತ್ವಂ' 'ಅದಿದ್ದರೆ ಇದು' ಎಂದು ಅನ್ವಯಸಹಕಾರವಿರುವುದರಿಂದ ಕೇವಲ ಅನ್ವಯಸಹಚಾರವು ಕಾರಣತ್ವಕ್ಕೆ ಹೇತುವಾಗದು, ವ್ಯಭಿಚಾರಿಯಾಗಿದೆ. ಅದಕ್ಕೆ ವ್ಯತಿರೇಕ ಸಹಚಾರವೂ ಜೊತೆಗೆ ಇರಬೇಕು ಎನ್ನುತ್ತಾರೆ. 'ಅದಿಲ್ಲದಿದ್ದರೆ ಇದೂ ಇಲ್ಲ' ಎಂದು ಕೇವಲ ವ್ಯತಿರೇಕಸಹಚಾರವೂ ನರಶೃಂಗ ಶಶಶೃಂಗಗಳಿಗೆ ಇರುವುದರಿಂದ ಅವುಗಳಿಗೆ ಕಾರ್ಯಕಾರಣಭಾವವಿಲ್ಲದಿರುವುದರಿಂದ ವ್ಯಭಿಚಾರ ಬರುತ್ತದೆ ಎಂದು ಅನ್ವಯ ಸಹಚಾರವೂ ಬೇಕೆನ್ನುತ್ತಾರೆ. ಇಷ್ಟು ಹೇಳಿದರೂ ಅನ್ಯಥಾಸಿದ್ಧವಾದ ಅನ್ವಯ ವ್ಯತಿರೇಕಗಳಿರುವಲ್ಲಿ ಅವು ಕಾರಣತ್ವಕ್ಕೆ ವ್ಯಭಿಚಾರಿಯಾಗುವುದರಿಂದ 'ಅನನ್ಯಥಾಸಿದ್ಧ' ಎಂದೂ ವಿಶೇಷಣ ನೀಡಬೇಕು. ವಸ್ತುತಃ ಅನ್ವಯವ್ಯತಿರೇಕವತ್ತ್ವವು ನಿಯತಪೂರ್ವವೃತ್ತಿತ್ವಕ್ಕೆ ವ್ಯಾಪ್ಯವಾಗಿರುವುದರಿಂದ, ಅದರಿಂದ ಅಗ್ನಿಗೆ ಹಿಮನಿವೃತ್ತಿನಿಯತಪೂರ್ವವೃತ್ತಿತ್ವವನ್ನು ಸಾಧಿಸುವಾಗಲೇ 'ಅನ್ಯಥಾಸಿದ್ಧನಿಯತ ಪೂರ್ವವೃತ್ತಿತ್ವವು ಬಾಧಿತ'ವೆಂದು ಬಾಧಜ್ಞಾನಸಹಕಾರದ ಬಲದಿಂದ ಅನನ್ಯಥಾಸಿದ್ಧನಿಯತ ಪೂರ್ವವೃತ್ತಿತ್ವವೇ ಅನ್ವಯವ್ಯತಿರೇಕವತ್ತ್ವಹೇತುವಿನಿಂದ ಸಿದ್ಧವಾಗುತ್ತದೆ. ಇದೇ ಕಾರಣತ್ವ. ಅದಕ್ಕೆ ಅನ್ವಯ ವ್ಯತಿರೇಕವತ್ವರೂಪಹೇತುವಿನಲ್ಲಿ ಅನನ್ಯಥಾಸಿದ್ಧತ್ವ ವಿಶೇಷಣ ಕೊಡುವುದು ಬೇಡ.

**ತತ್ವಮಸಿಶ್ರುತಿ ಅನಾದಿ ದುಃಶಾಸ್ತ್ರ ಪ್ರಾಪ್ತಾನುವಾದ**

**यद्वा, तत्त्वमसीति श्रुत्यर्थापरिज्ञानादद्वैतप्राप्तिरस्तु । अस्ति च श्रुत्यर्थापरिज्ञानप्राप्तस्य श्रुत्यन्तरेण निषेधः । यथेष्टापूर्तयोः परमपुरुषार्थत्वनिषेधः ।**

**ಅಥವಾ 'ತತ್ವಮಸಿ' ಶ್ರುತಿಯ ಸರಿಯಾದ ಅರ್ಥಜ್ಞಾನವಿಲ್ಲದ್ದರಿಂದ ಅದ್ವೈತಪ್ರಾಪ್ತಿ ಎನ್ನೋಣ. ಒಂದು ಶ್ರುತಿಯ ಸರಿಯಾದ ಅರ್ಥ ತಿಳಿಯದಿದ್ದಾಗ ಪ್ರಾಪ್ತವಾಗುವುದನ್ನು ಇನ್ನೊಂದು ಶ್ರುತಿಯು ನಿಷೇಧಿಸುವುದು ಕಂಡಿದೆ. ಇಷ್ಟಾಪೂರ್ತಗಳನ್ನು ಪರಮಪುರುಷಾರ್ಥವಲ್ಲ ಎಂದು ನಿಷೇಧಿಸುವುದು ಇದಕ್ಕೆ ಉದಾಹರಣೆ.**

**अथवा प्रवाहतोऽनादिरूपया दुःशास्त्रपरम्परयाऽद्वैत-प्राप्तिरस्तु । अस्ति च कुमतप्राप्तस्य निषेधः । 'तद्धैक आहुरसदेवेदमग्र आसीत् एकमेवाद्वितीयं तस्मादसतः**

**सदजायतेति कुतस्तु खलु सोम्यैवं स्यादिति होवाच कथमसतः सज्जायेते'त्यादौ । अत्र हि बौद्धमतप्राप्तमसतः कारणत्वं निषिध्यते ।**

ಅಥವಾ ಪ್ರವಾಹತೋऽನಾದಿರೂಪವಾದ ದುಃಶಾಸ್ತ್ರ ಪರಂಪರೆಯಿಂದಲೂ ಅದ್ವೈತ ಪ್ರಾಪ್ತಿ ಎನ್ನಬಹುದು. ದುರ್ಮತ ಪ್ರಾಪ್ತವಾದುದನ್ನು ನಿಷೇಧಿಸುವುದು ಇದಕ್ಕೆ ಉದಾಹರಣೆ— 'ಕೆಲವರು ಹೇಳುತ್ತಾರೆ, ಸೃಷ್ಟಿಗೆ ಪೂರ್ವದಲ್ಲಿ ಅಸತ್ತು ಇತ್ತು, ಅದು ಏಕಮೇವಾದ್ವಿತೀಯವಾಗಿತ್ತು. ಆ ಅಸತ್ತಿನಿಂದ ಸತ್ತು ಹುಟ್ಟಿತು ಎಂದು. ಆದರೆ ಇದು ಹೇಗೆ ಸಾಧ್ಯವಾದೀತು? ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು?' ಎಂದು ಶ್ರುತಿ ಇದೆ. ಇಲ್ಲಿ ಬೌದ್ಧಮತ ಪ್ರಾಪ್ತವಾದ ಅಸತ್ ಕಾರಣತ್ವವು ನಿಷಿದ್ಧವಾಗಿದೆ.

**तस्मात् द्वा सुपर्णेत्याद्याः श्रुतयो जीवेश्वरभेदे प्रमाणम् ।**

**'परमं साम्यमुपैति', 'सह ब्रह्मणा विपश्चिता' 'मम साधर्म्यमागता' इत्याद्यास्तु न व्यावहारिकभेदपरत्वेन शङ्कितुमपि शक्याः । मुक्त्यनन्तरं भेदप्रतिपादकत्वात् ।**

ಆದರಿಂದ 'ದ್ವಾಸುಪರ್ಣಾ' ಇತ್ಯಾದಿ ಶ್ರುತಿಯು ಜೀವೇಶ್ವರಭೇದದಲ್ಲಿ ಪ್ರಮಾಣ.

'ಪರಮಸಾಮ್ಯವನ್ನು ಹೊಂದುತ್ತಾನೆ' 'ಸರ್ವಜ್ಞನಾದ ಪರಮಾತ್ಮನ ಜೊತೆಗೆ ಮುಕ್ತನು ಎಲ್ಲ ಸುಖಗಳನ್ನು ಅನುಭವಿಸುತ್ತಾನೆ' 'ಮುಕ್ತಿಯಲ್ಲಿ ನನ್ನ ಭಕ್ತರು ನನ್ನ ಸಾಮ್ಯವನ್ನು ಹೊಂದುತ್ತಾರೆ' ಎಂದು ಮುಂತಾದ ಶ್ರುತಿಗಳನ್ನು ವ್ಯಾವಹಾರಿಕ ಭೇದಪರವೆಂದು ಶಂಕಿಸುವುದೂ ಶಕ್ಯವಿಲ್ಲ. ಏಕೆಂದರೆ ಇವು ಮುಕ್ತ್ಯನಂತರವಿರುವ ಭೇದವನ್ನು ಹೇಳುತ್ತಿವೆ.

एवमनुमानादद्वैतप्राप्तिमभिधायागमादपि तामाह **– यद्वेत्यादि ।** श्रुतिप्राप्ताद्वैतस्य श्रुत्यन्तरेण प्रतिषेधे श्रुतेरप्रामाण्यापत्तिरतः **– श्रुत्यर्थापरिज्ञानादिति ।** श्रुतितात्पर्यविषयार्थापरिज्ञानात् । तत्सादृश्यादिरूपार्थे श्रुतितात्पर्यापरिज्ञानादिति यावत् **। यथेष्टापूर्तयोरिति ।** स्वर्गकामो यजेतेत्यादिश्रुतितात्पर्यविषयस्वर्गपदार्थपरमात्मज्ञानसाधनत्वा-

परिज्ञानप्राप्तस्य अनित्यसुखस्वरूपस्वर्गसाधनत्वस्य 'इष्टापूर्तं मन्यमाना वरिष्ठं नान्यच्छ्रेयो वेदयन्ते प्रमूढा' इत्यादौ प्रतिषेध इत्यर्थः । इष्टं यजनं पूर्तम् अन्नदानादि ।

सयुक्तिकशब्दाभासादप्यद्वैतप्राप्तिमाह – **अथवेति** । दुःशास्त्रपरम्परया पूर्वपूर्वोपजीव्युत्तरोत्तरमायिशास्त्रेण । ननु आधुनिकशास्त्रप्राप्ताद्वैतं कथमनादिवेदेन निषिद्ध्यत इत्यत आह । **– प्रवाहतोऽनादिरूपयेति** ।

ಹೀಗೆ ಅನುಮಾನದಿಂದ ಅದ್ವೈತಪ್ರಾಪ್ತಿಯನ್ನು ಹೇಳಿ ಆಗಮದಿಂದಲೂ ಪ್ರಾಪ್ತಿ ಇದೆ ಎನ್ನುತ್ತಾರೆ. ಶ್ರುತಿಪ್ರಾಪ್ತವಾದ ಅದ್ವೈತವನ್ನು ಇನ್ನೊಂದು ಶ್ರುತಿಯು ನಿಷೇಧಿಸಿದರೆ ಶ್ರುತಿಗೆ ಅಪ್ರಾಮಾಣ್ಯಪ್ರಸಂಗ ಬರುವುದರಿಂದ, ಶ್ರುತಿ ತಾತ್ಪರ್ಯ ವಿಷಯವಾದ ಅರ್ಥದ ಅಜ್ಞಾನದಿಂದ ಪ್ರಾಪ್ತವಾಗುವುದನ್ನೇ ಇನ್ನೊಂದು ಶ್ರುತಿಯು ನಿಷೇಧಿಸುತ್ತದೆ ಎನ್ನುತ್ತಾರೆ. 'ತತ್ವಮಸಿ' ಇತ್ಯಾದಿ ಶ್ರುತಿಗೆ ತತ್‌ಸಾದೃಶ್ಯಾದಿರೂಪವಾದ ಅರ್ಥದಲ್ಲಿ ತಾತ್ಪರ್ಯ. ಅದರ ಅಜ್ಞಾನದಿಂದ ಅದ್ವೈತ ಪ್ರಾಪ್ತಿ. ಇದಕ್ಕೆ ಇಷ್ಟಾಪೂರ್ತದ ಸ್ವರ್ಗಸಾಧನತ್ವವನ್ನು ದೃಷ್ಟಾಂತವಾಗಿ ಹೇಳುತ್ತಾರೆ. ಇಷ್ಟ ಎಂದರೆ, ಯಜನ, ಯಾಗ, ಪೂರ್ತವೆಂದರೆ ಅನ್ನದಾನಾದಿ ಧರ್ಮಕಾರ್ಯ. ಇವೇ ಅನಿತ್ಯ ಸುಖರೂಪ ಸ್ವರ್ಗಸಾಧನವೆನ್ನುವುದು 'ಸ್ವರ್ಗಕಾಮೋ ಯಜೇತ' ಎಂದು ಮುಂತಾದ ಯಾಗವಿಧಿವಾಕ್ಯದ ತಾತ್ಪರ್ಯವೆಂದು ಯಾಜ್ಞಿಕರು ತಿಳಿಯುತ್ತಾರೆ. ಆದರೆ 'ಸ್ವರ್ಗ'ವೆಂದರೆ ಪರಮಾತ್ಮಜ್ಞಾನ. ಯಾಗಾದಿ ಕರ್ಮಗಳು ಪರಮಾತ್ಮಜ್ಞಾನಸಾಧನವಾಗಿವೆ ಎನ್ನುವುದೇ ಸ್ವರ್ಗಕಾಮೋ ಯಜೇತ ಎಂಬ ವಾಕ್ಯದ ತಾತ್ಪರ್ಯ. ಅದನ್ನು ತಿಳಿಯದೆ ಇರುವುದರಿಂದ 'ಅನಿತ್ಯಸುಖರೂಪ ಸ್ವರ್ಗಸಾಧನ ಯಾಗ' ಎಂದು ಪ್ರಾಪ್ತವಾಗುತ್ತದೆ. ಅದನ್ನು 'ಇಷ್ಟಾಪೂರ್ತವನ್ನೇ ಪರಮಪುರುಷಾರ್ಥವೆಂದು ತಿಳಿಯುತ್ತಾರೆ, ಪರಮಾತ್ಮಜ್ಞಾನರೂಪವಾದ ಪರಮಪುರುಷಾರ್ಥವನ್ನು ಮೂಢರು ತಿಳಿಯುವುದಿಲ್ಲ' ಎಂದು ಉಪನಿಷತ್ತು ನಿಷೇಧಿಸುತ್ತದೆ. ಅದರಂತೆ ತತ್ವಮಸಿ ವಾಕ್ಯದ ಸಾದೃಶ್ಯಾದಿ ರೂಪವಾದ ನಿಜವಾದ ತಾತ್ಪರ್ಯವಿಷಯವಾದ ಅರ್ಥವನ್ನು ತಿಳಿಯದೆ ಪ್ರಾಪ್ತವಾಗುವ ಜೀವಬ್ರಹ್ಮೈಕ್ಯವನ್ನು ದ್ವಾಸುಪರ್ಣಾದಿ ಶ್ರುತಿಗಳು ನಿಷೇಧಿಸುತ್ತಿವೆ.

ಸಯುಕ್ತಿಕವಾದ ದುಃಶಾಸ್ತ್ರಪರಂಪರಾದಿಂದಲೂ ಅದ್ವೈತಪ್ರಾಪ್ತಿಇದೆ ಎನ್ನುತ್ತಾರೆ. ದುಃಶಾಸ್ತ್ರಪರಂಪರೆ ಎಂದರೆ ಹಿಂದು ಹಿಂದಿನ ದುಃಶಾಸ್ತ್ರವನ್ನು ಅವಲಂಬಿಸಿ ಮುಂದುಮುಂದಿನ ದುಃಶಾಸ್ತ್ರಗಳು ಹೊರಡುತ್ತವೆ. ಇಂಥ ಅದ್ವೈತಶಾಸ್ತ್ರದಿಂದ ತಿಳಿದುಬರುವ ಅದ್ವೈತವನ್ನು ಶ್ರುತಿಯು

ನಿಷೇಧಿಸುತ್ತದೆ ಎನ್ನುತ್ತಾರೆ. ಆಧುನಿಕವಾದ ಈ ಶಾಸ್ತ್ರದಿಂದ ಪ್ರಾಪ್ತವಾಗುವ ಅದ್ವೈತವನ್ನು ಅನಾದಿಯಾದ ವೇದವು ಹೇಗೆ ನಿಷೇಧಿಸುತ್ತದೆ ಎಂದರೆ, ಹೇಳುತ್ತಾರೆ, ಒಂದೊಂದು ಶಾಸ್ತ್ರಗ್ರಂಥ ಆಧುನಿಕವೇ ಆದರೂ ಅನಾದಿಪ್ರವಾಹರೂಪವಿೀ.ಸ ಆ ಶಾಸ್ತ್ರಗಳು ಹೊರಡುವುದರಿಂದ ಅನಾದಿವೇದವು ಆ ಶಾಸ್ತ್ರದಲ್ಲಿ ಹೇಳಿದ್ದನ್ನು ನಿಷೇಧಿಸಬಹುದು.

**ಪ್ರವಾಹತೋಽನಾದಿ ಎಂದರೇನು?**

**प्रवाहतोऽनादित्वं चैकप्रवाहमध्यपतितानेकप्रवाहिप्रतियोगिक-प्रागभावावच्छिन्नकालावृत्तित्वानधिकरणध्वंसप्रतियोगिप्रवाहित्वमिति मन्दारमञ्जर्यामुक्तम् । तत्र च सादिप्रवाहघटकघटादिक्रियाया-मतिव्याप्तिवारणाय कालावृत्तित्वानधिकरणेति कालत्वव्यापकार्थकम् । सादिप्रवाहघटकवस्तुध्वंसस्य च न कालत्वव्यापकत्वम् । तस्य तत्प्रवाहोत्तरयावत्कालवृत्तित्वेऽपि तत्प्रवाहघटकानेकवस्तुप्रागभावाव-च्छिन्नयावत्कालवृत्तित्वाभावादित्येतल्लाभार्थमवच्छिन्नान्तोपादानम् । न त्वस्य लक्षणघटकत्वमनर्थकत्वात् ।**

**कालत्वव्यापकप्रवाहित्वमित्येवोक्तौ अनित्यानादिप्रवाहघटकमनो-वृत्तीनामसङ्ग्रहात् तादृशध्वंसप्रतियोगित्वपर्यन्तनिवेशः ।**

'ಪ್ರವಾಹತೋಽನಾದಿ' ಎಂದರೆ 'ಏಕಪ್ರವಾಹಮಧ್ಯದಲ್ಲಿ ಬರುವ ಅನೇಕ ಪ್ರವಾಹಿಗಳ ಯಾವುದೇ ಪ್ರಾಗಭಾವಕಾಲದಲ್ಲಿ 'ಪ್ರವಾಹಿಯ ಧ್ವಂಸವಿಲ್ಲ'ವೆನ್ನುವಂತಿಲ್ಲ. ಆ ಪ್ರವಾಹದಲ್ಲಿ ಸೇರಿರುವ ಯಾವುದಾರೊಂದು ಪ್ರವಾಹಿಯ ಧ್ವಂಸವಿದ್ದೇ ಇರುತ್ತದೆ'. ಇದೇ ಪ್ರವಾಹತೋ ಅನಾದಿತ್ವವೆಂದು ಮಂದಾರಮಂಜರಿ ಯಲ್ಲಿ ಹೇಳಿದ್ದಾರೆ:

ಘಟಾದಿಕ್ರಿಯಾಪ್ರವಾಹ ಸಾದಿ. ಘಟಾದಿ ಹುಟ್ಟಿದ ಬಳಿಕವಷ್ಟೇ ಅದರ ಕ್ರಿಯಾಪ್ರವಾಹ ಹುಟ್ಟುತ್ತದೆ. ಈ ಘಟಾದಿಕ್ರಿಯೆಯಲ್ಲಿ ಅತಿವ್ಯಾಪ್ತಿಪರಿಹಾರಕ್ಕೆ 'ಕಾಲಾವೃತ್ತಿತ್ವಾನಧಿಕರಣ' 'ಕಾಲದಲ್ಲಿ ಇಲ್ಲವೆನ್ನುವಂತಿಲ್ಲ' ಎಂದು ಪ್ರವಾಹಿಧ್ವಂಸಕ್ಕೆ ವಿಶೇಷಣ ನೀಡಿದ್ದಾರೆ. ಘಟಕ್ರಿಯಾಪ್ರವಾಹ ಮಧ್ಯದಲ್ಲಿ ಬರುವ ಘಟಕ್ರಿಯಾರೂಪವಾದ ಪ್ರವಾಹಿಯ ಧ್ವಂಸವು ಘಟಾದಿ ಹುಟ್ಟುವುದಕ್ಕಿಂತ ಹಿಂದಿನ ಕಾಲದಲ್ಲಿ ಇಲ್ಲ, ಕಾಲಾವೃತ್ತಿಯಾಗಿದೆ, ಕಾಲಾವೃತ್ತಿತ್ವಾನಧಿಕರಣವಲ್ಲ. ಆದರಿಂದ ಅತಿ ವ್ಯಾಪ್ತಿ ಇಲ್ಲ.

'ಕಾಲಾವೃತ್ತಿತ್ವಾನಧಿಕರಣ'ವೆಂದರೆ ಕಾಲತ್ವವ್ಯಾಪಕ ಎಂದರ್ಥ. ಘಟಕ್ರಿಯಾಧ್ವಂಸವು ಕಾಲತ್ವಕ್ಕೆ ವ್ಯಾಪಕವಲ್ಲ. ಕಾಲತ್ವವಿರುವಲ್ಲೆಲ್ಲ ಇರುವಂಥದ್ದಲ್ಲ. ಏಕೆಂದರೆ ಅದು ಆ ಪ್ರವಾಹದ ಮುಂದಿನ ಎಲ್ಲ ಕಾಲದಲ್ಲಿದ್ದರೂ ಹಿಂದಿನ ಕಾಲದಲ್ಲಿ, ಅಂದರೆ, ಆ ಪ್ರವಾಹದ ಮಧ್ಯದಲ್ಲಿ ಬರುವ ಪ್ರವಾಹಿಯ ಪ್ರಾಗಭಾವ ವಿಶಿಷ್ಟವಾದ ಎಲ್ಲ ಕಾಲದಲ್ಲಿ ಇರುವುದಿಲ್ಲ. ಅಲ್ಲಿ ಕಾಲತ್ವವಿರುತ್ತದೆ. ಕಾಲತ್ವ ವ್ಯಾಪಕತ್ವಕ್ಕೆ ಭಂಗ ಬಂದಿದೆ. ಹೀಗೆ ಕಾಲತ್ವ ವ್ಯಾಪಕತ್ವ ವಿಶೇಷಣ ಕೊಡಬೇಕೆಂದು ತಿಳಿಸುವುದಕ್ಕಾಗಿ 'ಏಕಪ್ರವಾಹ....ಅವಚ್ಛಿನ್ನಕಾಲ' ಎಂದು ಕಾಲಕ್ಕೆ ವಿಶೇಷಣ ನೀಡಿದ್ದಾರೆ ಹೊರತು ಪ್ರವಾಹತೋ ಅನಾದಿಯ ಲಕ್ಷಣದಲ್ಲಿ ಅದು ಸೇರುವುದಿಲ್ಲ. ಸೇರಿದರೆ ವ್ಯರ್ಥವಾಗುತ್ತದೆ.

'ಕಾಲತ್ವವ್ಯಾಪಕ ಧ್ವಂಸ ಪ್ರತಿಯೋಗಿ ಪ್ರವಾಹಿತ್ವಂ' ಎಂದು ಹೇಳದೆ 'ಕಾಲತ್ವವ್ಯಾಪಕ ಪ್ರವಾಹಿತ್ವಂ' ಎಂದಿಷ್ಟೇ ಹೇಳಿದರೆ ಅನಾದಿಯಾದರೂ ಅನಿತ್ಯವಾಗಿರುವ ಮನೋವೃತ್ತಿಪ್ರವಾಹದ ಪ್ರವಾಹಿಯಲ್ಲಿ ಅವ್ಯಾಪ್ತಿ ಬರುತ್ತದೆ. ಪ್ರವಾಹ ಮುಗಿದ ಬಳಿಕ ಮುಂದಿನ ಕಾಲದಲ್ಲಿ ಕಾಲತ್ವವಿದೆ, ಮನೋವೃತ್ತಿ ಯಾವುದೂ ಇರುವುದಿಲ್ಲ. ವ್ಯಾಪಕತ್ವ ಬರುವುದಿಲ್ಲ. ಪ್ರವಾಹಿಧ್ವಂಸದಲ್ಲಿ ಕಾಲತ್ವವ್ಯಾಪಕತ್ವವನ್ನು ಹಾಕಿದಾಗ ಪ್ರವಾಹದ ಉತ್ತರಕಾಲದಲ್ಲಿಯೂ ಪ್ರವಾಹಿಧ್ವಂಸವಿರುತ್ತದೆ. ಏಕೆಂದರೆ ಧ್ವಂಸಕ್ಕೆ ಧ್ವಂಸವೆಂಬುದಿಲ್ಲ.

**यद्यप्यनादिप्रवाहघटककामकर्मादिध्वंसानामपि न प्रत्येकं कालत्वव्यापकत्वसम्भवः । तथापि तत्प्रवाहघटकवस्तुध्वंसत्वेन व्यापकत्वं विवक्षणीयमिति ज्ञापनाय प्रवाहिपदम् । यद्यप्येवं न कामकर्मादिध्वंसप्रवाहसङ्ग्रहः । तद्घटकवस्तुध्वंसाप्रसिद्धेः । तथाप्यत्र भावानामेव लक्ष्यत्वान्न दोषः ।**

**अभावानामपि लक्ष्यत्वे तत्प्रवाहघटकप्रवाहिप्रागभावावच्छिन्नकालत्वव्यापकप्रवाहित्वं प्रवाहतोऽनादित्वं बोध्यम् ।**

ಯದ್ಯಪಿ ಅನಾದಿ ಪ್ರವಾಹದಲ್ಲಿ ಬರುವ ಕಾಮಕರ್ಮಾದಿಗಳ ಧ್ವಂಸಗಳು ಕೂಡ ಯಾವುದೂ ಪ್ರತ್ಯೇಕವಾಗಿ ಕಾಲತ್ವವ್ಯಾಪಕವಾಗುವುದಿಲ್ಲ. ಆದರೂ ಅದಕ್ಕೆ ತತ್‌ಪ್ರವಾಹ ಘಟಕ ವಸ್ತುಧ್ವಂಸತ್ವೇನ ಕಾಲತ್ವ ವ್ಯಾಪಕತ್ವ ಬರುತ್ತದೆ, ಅಂದರೆ ಎಲ್ಲ ಕಾಲದಲ್ಲಿಯೂ ಯಾವುದಾದರೊಂದು ತತ್‌ಪ್ರವಾಹ ಘಟಕವಸ್ತು ಧ್ವಂಸವಿದ್ದೇ ಇರುತ್ತದೆ ಎಂದರ್ಥ. ಇದನ್ನು ತಿಳಿಸುವುದಕ್ಕಾಗಿಯೆ ಧ್ವಂಸಪ್ರತಿಯೋಗಿತ್ವ ಎನ್ನದೆ ಧ್ವಂಸಪ್ರತಿಯೋಗಿಪ್ರವಾಹಿತ್ವ ಎಂದಿದ್ದಾರೆ.

ಯದ್ಯಪಿ ಕಾಮಕರ್ಮಾದಿ ಧ್ವಂಸಪ್ರವಾಹವೂ ಅನಾದಿ. ಅದರಲ್ಲಿ ಲಕ್ಷಣ ಬರುವು ದಿಲ್ಲ. ಈ

ಪ್ರವಾಹದಲ್ಲಿ ಪ್ರವಾಹಿಯು ಧ್ವಂಸ. ಈ ಪ್ರವಾಹಿಗೆ ಧ್ವಂಸವಿಲ್ಲ. ಅಪ್ರಸಿದ್ಧ. ಹೀಗಾಗಿ ಪ್ರವಾಹಿ ಧ್ವಂಸಕ್ಕೆ ಕಾಲತ್ವ ವ್ಯಾಪಕತ್ವವನ್ನು ಹೇಳಲಾಗುವುದಿಲ್ಲ. ಆದರೂ ಇಲ್ಲಿ ಭಾವಗಳಿಗೇ ಲಕ್ಷಣ ಹೇಳಿದ್ದರಿಂದ ಅಭಾವರೂವಾದ ಧ್ವಂಸಗಳಲ್ಲಿ ಅವ್ಯಾಪ್ತಿಯು ದೋಷವಾಗುವುದಿಲ್ಲ.

ಅಭಾವಗಳಿಗೂ ಲಕ್ಷಣ ಹೇಳುವುದಾದರೆ ಕಾಲತ್ವ ವ್ಯಾಪಕತ್ವವಿಶೇಷಣವನ್ನು ಪ್ರವಾಹಿಯಲ್ಲಿಯೇ ಹಾಕಬೇಕು. ಪ್ರವಾಹಿಯು ಭಾವವಿರಲಿ, ಅಭಾವವಿರಲಿ, ಅದು ಪ್ರವಾಹಿತ್ವೇನ ಕಾಲತ್ವ ವ್ಯಾಪಕವಾಗಿರುತ್ತದೆ. ಆದರೆ ಅನಿತ್ಯವಾದ ಅನಾದಿಪ್ರವಾಹದಲ್ಲಿ ಕೊನೆಯ ಪ್ರವಾಹಿ ನಾಶವಾದ ಬಳಿಕ ಯಾವ ಪ್ರವಾಹಿಯೂ ಇರುವುದಿಲ್ಲ. ಅದರಿಂದ ಕಾಲತ್ವವ್ಯಾಪಕತ್ವ ಬರುವುದಿಲ್ಲ. ಅದಕ್ಕೆ ತತ್‌ಪ್ರವಾಹ ಘಟಕ ಪ್ರವಾಹಿ ಪ್ರಾಗಭಾವವಿಶಿಷ್ಟಕಾಲತ್ವ ವ್ಯಾಪಕತ್ವವನ್ನು ಹೇಳಬೇಕು. ಕೊನೆಯ ಪ್ರವಾಹಿ ನಾಶವಾದ ಬಳಿಕ ಮುಂದಿನ ಕಾಲದಲ್ಲಿ ಯಾವುದೇ ಪ್ರವಾಹಿ ಇಲ್ಲದಿದ್ದರೂ ಹಿಂದಿನ ಕಾಲದಲ್ಲಿ ಅಂದರೆ ಪ್ರವಾಹಿ ಪ್ರಾಗಭಾವವಿರುವ ಕಾಲದಲ್ಲಿ ಪ್ರವಾಹಿ ಇದ್ದೇ ಇರುವುದರಿಂದ ಪ್ರವಾಹಿ ಪ್ರಾಗಭಾವಾವಚ್ಛಿನ್ನಕಾಲತ್ವ ವ್ಯಾಪಕತ್ವವು ಪ್ರವಾಹಿಗೆ ಬರುತ್ತದೆ.

**एतेन यथाश्रुतलक्षणस्यानादिप्रवाहघटकचरमव्यक्तावव्याप्तिः । तद्ध्वंसस्य तत्प्रवाहघटकवस्तुप्रागभावावच्छिन्नकालावृत्तित्वात् । एवं तादृशकालावृत्तित्वानधिकरणत्वस्य तादृशकालवृत्तित्वरूपतया तस्य च सादिप्रवाहघटकवस्तुसाधारणत्वादतिव्याप्तिः । तादृशयत्किञ्चित्कालावृत्तित्वानधिकरणत्वस्य तादृशयावत्कालवृत्तित्वपर्यवसितस्य विवक्षायामसम्भवः । कस्यापि ध्वंसस्य तादृशयावत्कालावृत्तित्वात् अवच्छिन्नान्तवैयर्थ्यं चेत्यादिकमपास्तम् ।**

ಹೀಗೆ ಲಕ್ಷಣ ಪರಿಷ್ಕಾರ ಮಾಡಿದ್ದರಿಂದ ಯಥಾಶ್ರುತಲಕ್ಷಣದ ಮೇಲೆ ಬರಬಹುದಾಗಿದ್ದ ಎಲ್ಲ ಆಕ್ಷೇಪಗಳೂ ಪರಿಹಾರವಾದುವು. ಆ ಆಕ್ಷೇಪಗಳು ಹೀಗೆ— ಅನಾದಿ ಅನಿತ್ಯ ಪ್ರವಾಹ ಘಟಕ ಚರಮವ್ಯಕ್ತಿಯಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ. ಏಕೆಂದರೆ ಅದರ ಧ್ವಂಸವು ತತ್‌ಪ್ರವಾಹ ಘಟಕ ವಸ್ತುವಿನ ಪ್ರಾಗಭಾವ ಕಾಲದಲ್ಲಿ ಇರುವುದಿಲ್ಲ. ಕಾಲಾವೃತ್ತಿತ್ವಾನಧಿಕರಣತ್ವವು ಕಾಲವೃತ್ತಿತ್ವರೂಪವಾದ್ದರಿಂದ ಸಾದಿಪ್ರವಾಹ ಘಟಕ ಪ್ರವಾಹಿಯೂ ಕೂಡ ಯಾವುದಾದರೊಂದು ಪ್ರವಾಹಿಪ್ರಾಗಭಾವಕಾಲದಲ್ಲಿ ಇರುತ್ತದೆಯಾದ್ದರಿಂದ ಅತಿವ್ಯಾಪ್ತಿ. ಯತ್ಕಿಂಚಿತ್ ಕಾಲಾವೃತ್ತಿತ್ವದ ಅನಧಿಕರಣತ್ವವೆಂದರೆ ಯಾವತ್ ಕಾಲವೃತ್ತಿತ್ವದಲ್ಲಿಯೇ ಪರ್ಯವಸಾನ ಹೊಂದುವುದರಿಂದ ಯಾವ ಪ್ರವಾಹಿ ಧ್ವಂಸವೂ ಎಲ್ಲ ಕಾಲದಲ್ಲಿಲ್ಲದಿರುವುದರಿಂದ ಅಸಂಭವ ದೋಷ. ಕಾಲಕ್ಕೆ ಪ್ರಾಗಭಾವಾವಚ್ಛಿನ್ನತ್ವ ವಿಶೇಷಣ ಕೊಟ್ಟಿದ್ದೂ ವ್ಯರ್ಥ ಎಂದು. ಈ ಯಾವ ಆಕ್ಷೇಪಕ್ಕೂ ಈಗಿನ ಪರಿಷ್ಕಾರದಲ್ಲಿ ಅವಕಾಶವಿಲ್ಲ.

केचित्तु एकप्रवाहेत्यादिनैकप्रवाहघटकाः यावन्तः प्रवाहिणस्तत्तत्प्रागभावावच्छिन्नकालवृत्तिध्वंसप्रतियोगित्वं विवक्षितम् । तत्र च सादिप्रवाहवारणायावच्छिन्नान्तोपादानम् । तद्घटकवस्तुध्वंसानां च न तद्घटकप्रथमव्यक्तिप्रागभावावच्छिन्नकालवृत्तित्वमित्यदोषः। यद्यपि सामान्यतो यावत्प्रागभावावच्छिन्नकालवृत्तित्वनिवेशेऽपि तद्दोषवारणसम्भवः । तथापि अव्यावर्तकानन्तप्रागभावनिवेशवैयर्थ्यात् तत्प्रवाहघटकप्रवाहिप्रागभावानामेव निवेशः । न चानादिप्रवाहघटकवस्तुध्वंसानामपि प्रत्येकं तादृशयावत्प्रागभावावच्छिन्नकालवृत्तित्वाभावादसम्भव इति वाच्यम् । तत्तत्प्रागभावावच्छिन्नकालवृत्तिवृत्तितत्प्रवाहघटकवस्तुध्वंसत्वाश्रयीभूतध्वंसप्रतियोगित्वस्य विवक्षितत्वात् । न चैवं तत्तत्प्रागभावावच्छिन्नकालवृत्तिवृत्तितत्प्रवाहघटकत्वस्यैव सम्यक्त्वात् ध्वंसप्रतियोगित्वपर्यन्तनिवेशो निष्फल इति वाच्यम् । यथा सन्निवेशेन वैयर्थ्यानवकाशादित्याहुः ।

एवं च दुःशास्त्राणामप्युक्तरूपानादित्वादनादित एवाद्वैतस्य प्राप्तिसम्भवाद्भेदनिषेध्यत्वोपपत्तिरिति भावः ।

ಕೆಲವರು ಹೀಗೆ ವ್ಯಾಖ್ಯಾನಿಸುತ್ತಾರೆ— ಏಕಪ್ರವಾಹಘಟಕವಾಗಿ ಎಷ್ಟು ಪ್ರವಾಹಿಗಳಿವೆಯೋ ಅವೆಲ್ಲವುಗಳ ಪ್ರಾಗಭಾವಗಳ ಕಾಲದಲ್ಲಿರುವ ಧ್ವಂಸಕ್ಕೆ ಪ್ರವಾಹಿಯು ಪ್ರತಿಯೋಗಿಯಾಗಿರಬೇಕು ಎಂಬುದು ಲಕ್ಷಣವಾಕ್ಯದಲ್ಲಿ ವಿವಕ್ಷಿತವಾಗಿದೆ. ಸಾದಿಪ್ರವಾಹವಾರಣವು ಎಲ್ಲ ಪ್ರವಾಹಿಗಳ ಪ್ರಾಗಭಾವಗಳ ಕಾಲವೆಂದು ಕಾಲಕ್ಕೆ ವಿಶೇಷಣ ಕೊಟ್ಟದ್ದರಿಂದಾಗುತ್ತದೆ. ಏಕೆಂದರೆ ಸಾದಿಪ್ರವಾಹದ ಪ್ರಥಮವಸ್ತುವಿನ ಪ್ರಾಗಭಾವಕಾಲದಲ್ಲಿ ಪ್ರವಾಹಘಟಕವಾದ ಮುಂದಿನ ವಸ್ತುವಿನಧ್ವಂಸ ಯಾವುದೂ ಇರುವುದಿಲ್ಲ. ಯದ್ಯಪಿ ಎಲ್ಲ ಪ್ರವಾಹಿಗಳ ಪ್ರಾಗಭಾವವೆಂದು ಪ್ರಾಗಭಾವಕ್ಕೆ ವಿಶೇಷಣ ಆವಶ್ಯಕವಲ್ಲ. ಎಲ್ಲ ಪ್ರಾಗಭಾವಗಳ ಕಾಲವೆಂದರೂ ಸಾದಿಪ್ರವಾಹ ವಾರಣವಾಗುತ್ತದೆ. ಆದರೆ ಅವ್ಯಾವರ್ತಕ ಅನಂತ ಪ್ರಾಗಭಾವಗಳನ್ನು ಲಕ್ಷಣದಲ್ಲಿ ನಿವೇಶ ಮಾಡುವುದು ವ್ಯರ್ಥ. ಅದಕ್ಕೆ ತತ್ಪ್ರವಾಹ ಘಟಕ ಪ್ರವಾಹಿಗಳ ಪ್ರಾಗಭಾವವೆಂದು ವಿಶೇಷಣ ನೀಡಲಾಗಿದೆ. ಯದ್ಯಪಿ ಅನಾದಿಪ್ರವಾಹ ಘಟಕ ವಸ್ತುಧ್ವಂಸಗಳು ಕೂಡ ಪ್ರತ್ಯೇಕವಾಗಿ ಎಲ್ಲ

ಪ್ರಾಗಭಾವಕಾಲದಲ್ಲಿರುವುದಿಲ್ಲವಾದ್ದರಿಂದ ಅಸಂಭವ ಬರಬಹುದು. ಆದರೆ ತತ್ತತ್ಪ್ರಾಗಭಾವ ಕಾಲ ವೃತ್ತಿಯಾದ ವಸ್ತುವಿನಲ್ಲಿ ತತ್ಪ್ರವಾಹಘಟಕ ವಸ್ತುಧ್ವಂಸತ್ವವೇನಿದೆಯೋ ಅದಕ್ಕೆ ಆಶ್ರಯವಾದ ಧ್ವಂಸಕ್ಕೆ ಪ್ರತಿಯೋಗಿಯು ಪ್ರವಾಹಿಯಾಗಿರಬೇಕೆಂದು ವಿವಕ್ಷಿತವಾಗಿದೆ. ಎಲ್ಲ ಪ್ರಾಗಭಾವಕಾಲದಲ್ಲಿ ಎಲ್ಲ ಪ್ರವಾಹಿಧ್ವಂಸಗಳಿರಬೇಕಿಲ್ಲ, ಯಾವುದಾದರೊಂದು ಪ್ರವಾಹಿ ಧ್ವಂಸವಿದ್ದರೆಸಾಕು. ಇದು ಅನಾದಿಪ್ರವಾಹದಲ್ಲಿ ಬರುವುದರಿಂದ ಅಸಂಭವವಿಲ್ಲ. ಯದ್ಯಪಿ ತತ್ತತ್ಪ್ರಾಗಭಾವಕಾಲವೃತ್ತಿಯಾದ ವಸ್ತುವಿನಲ್ಲಿ ತತ್ಪ್ರವಾಹ ಘಟಕತ್ವವೇನಿದೆಯೋ ಅದನ್ನೇ ಲಕ್ಷಣವೆನ್ನಲು ಬರುತ್ತದೆ. ತತ್ಪ್ರವಾಹಘಟಕ ವಸ್ತುಧ್ವಂಸತ್ವಕ್ಕೆ ಆಶ್ರಯವಾದ ಧ್ವಂಸಕ್ಕೆ ಪ್ರತಿಯೋಗಿಯಾಗುವುದನ್ನು ಲಕ್ಷಣವೆನ್ನಬೇಕಾಗಿಲ್ಲ. ಅದು ನಿಷ್ಫಲ. ಆದರೂ ಅದೊಂದು ಬೇರೇ ಲಕ್ಷಣವಾಗುವುದರಿಂದ ವೈಯರ್ಥ್ಯವಿಲ್ಲ' ಎಂದು ಹೇಳುತ್ತಾರೆ.

ಹೀಗೆ ದುಃಶಾಸ್ತ್ರಗಳೂ ಕೂಡ ಪ್ರವಾಹತಃ ಅನಾದಿಯಾದ್ದರಿಂದ ಅನಾದಿಕಾಲದಿಂದಲೂ ಅದ್ವೈತವು ಅವುಗಳಿಂದ ಪ್ರಾಪ್ತವಾಗುವ ಸಂಭವವಿರುವುದರಿಂದ ಅನಾದಿವೇದವು ಅದನ್ನು ನಿಷೇಧಿಸುವುದರಲ್ಲಿ ಅನುಪಪತ್ತಿ ಇಲ್ಲ.

**ಮುಕ್ತಿಯಲ್ಲಿ ಜೀವೇಶ್ವರ ಭೇದ ಬೋಧಕ ಆಗಮ**

**निषेध इति ।** 'असदेवे'त्यादिना परमतमनूद्य 'कुतस्त्वि' त्यादिना निषेध इत्यर्थः । कस्य मतेन प्राप्तं किमत्र निषिध्यत इत्याकाङ्क्षायामाह – **अत्र हीति ।** द्वा सुपर्णेत्यादिश्रुतेः पारमार्थिकभेदपरत्वमुपसंहरति – **तस्मादिति ।** अद्वैतश्रुतीनामुक्तरीत्या बाधोपपत्तेरित्यर्थः । व्यावहारिकभेदपरत्वशङ्कानिरासकौकर्यात् श्रुत्यन्तराण्यप्याह **–परममिति।** 'यदा पश्यः पश्यते रुग्मवर्णं कर्तारमीशं पुरुषं ब्रह्मयोनिम् । तदा विद्वान् पुण्यपापे विधूय निरञ्जनः परमं साम्यमुपैति।' 'यो वेद निहितं गुहायां परमे व्योमन् सोऽश्नुते सर्वान् कामान् सह ब्रह्मणा विपश्चिता'।; 'इदं ज्ञानमुपाश्रित्य मम साधर्म्यमागता' इत्याद्या इत्यर्थः । **मुक्त्यनन्तरमिति ।** तद्भिन्नत्वे सति तद्धर्मजातीयधर्मवत्त्वस्यैव साम्यादिशब्दार्थत्वात् तद्भिन्नतत्समानदेशत्वस्यैव तत्सहभावरूपत्वात् तस्य च ब्रह्मदर्शनफलत्वेनोक्तस्याविद्यानिवृत्त्युत्तरभावित्वेनाऽऽविद्यकत्वा-सम्भवादिति भावः ।

ದುರ್ಮತಪ್ರಾಪ್ತವಾದ್ವನ್ನು ಶ್ರುತಿಯು ನಿಷೇಧಿಸುವುದಕ್ಕೆ ಉದಾಹರಣೆ 'ತದ್ಧೈಕ ಆಹುಃ' ಎನ್ನುವ ಶ್ರುತಿ. ಇಲ್ಲಿ 'ಅಸತ್ತೇ ಹಿಂದೆ ಇತ್ತು' ಎಂದು ಮುಂತಾಗಿ ಪರಮತವನ್ನು ಅನುವಾದ ಮಾಡಿ 'ಇದು ಹೇಗೆ ಸಾಧ್ಯ' ಎಂದು ಮುಂತಾಗಿ ಶ್ರುತಿಯು ನಿಷೇಧಮಾಡಿದೆ. ಯಾರ ಮತದಿಂದ ಏನು ಪ್ರಾಪ್ತವಾಗಿದೆ ಎಂಬುದನ್ನು 'ಬೌದ್ಧಮತ ಪ್ರಾಪ್ತವಾದ ಅಸತ್‌ಕಾರಣತ್ವವಾದವನ್ನು ನಿಷೇಧಿಸುತ್ತಿದೆ' ಎಂದು ವಿವರಿಸಿದ್ದಾರೆ. ದ್ವಾಸುಪರ್ಣಾಶ್ರುತಿಯು ಪಾರಮಾರ್ಥಿಕ ಭೇದಪರ ಎಂದು ಉಪಪಾದನ ಮಾಡಿದ್ದನ್ನು 'ಅದ್ವೈತಶ್ರುತಿಗಳಿಗೆ ನಾವು ಹೇಳಿದಂತೆ ಬಾಧವು ಕೂಡುವುದರಿಂದ ದ್ವಾಸುಪರ್ಣಾ ಇತ್ಯಾದಿ ಶ್ರುತಿಯು ಜೀವೇಶ್ವರ ಭೇದವಿಷಯದಲ್ಲಿ ಪ್ರಮಾಣವೇ ಆಗುತ್ತದೆ' ಎಂದು ಉಪಸಂಹಾರ ಮಾಡಿದ್ದಾರೆ.

ಭೇದಶ್ರುತಿಗಳು ವ್ಯಾವಹಾರಿಕಭೇದಪರವೆನ್ನುವುದನ್ನು ನಿರಾಸ ಮಾಡಲು ಕಷ್ಟವಿಲ್ಲವೆಂದು ತೋರಿಸಲು ಬೇರೆ ಶ್ರುತಿಗಳನ್ನು ತೋರಿಸುತ್ತಾರೆ—

ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ
ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ॥
ನಿರಂಜನಃ ಪರಮಂ ಸಾಮ್ಯಮುಪೈತಿ ॥
ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್
ಸೋಽಶ್ನುತೇ ಸರ್ವಾನ್‌ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ॥
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।

ಈ ಎಲ್ಲ ಶ್ರುತಿಸ್ಮೃತಿವಾಕ್ಯಗಳು ಮುಕ್ತಿಯಲ್ಲಿ ಜೀವೇಶ ಭೇದವನ್ನು ಹೇಳುವುದರಿಂದ ಅದು ವ್ಯಾವಹಾರಿಕವಲ್ಲ. ವ್ಯಾವಹಾರಿಕತ್ವನಿರಾಸ ಮಾಡುವುದು ಸುಲಭ ಎನ್ನುತ್ತಾರೆ. ಸಾಮ್ಯವೆಂದರೆ ಭಿನ್ನವಾಗಿದ್ದು ಸಜಾತೀಯ ಗುಣಗಳನ್ನು ಹೊಂದಿರುವುದು. 'ಸಹ' ಎಂದರೆ ಭಿನ್ನರಾಗಿದ್ದು ಸಮಾನ ದೇಶದಲ್ಲಿರುವುದು. ಇವು ಬ್ರಹ್ಮದರ್ಶನಫಲವೆಂದು ಹೇಳಿದ್ದರಿಂದ ಅವಿದ್ಯಾನಿವೃತ್ತ್ಯುತ್ತರ ಭಾವಿಯಾದ್ದರಿಂದ ಆವಿದ್ಯಕ, ವ್ಯಾವಹಾರಿಕವೆನ್ನುವಂತಿಲ್ಲ ಎಂದು ಅಭಿಪ್ರಾಯ.

**ಘಟಾದಿಭೇದ ಪ್ರತ್ಯಕ್ಷಸಿದ್ಧ**

**घटपटादिभेदे तु प्रत्यक्षं सुलभमेव ।**

**ಘಟಪಟಾದಿ ಭೇದ ವಿಷಯದಲ್ಲಿ ಪ್ರತ್ಯಕ್ಷವು ಸುಲಭವೇ.**

एवमात्मभेदं प्रसाध्यानात्मभेदमपि व्यवस्थापयति —**घटपटादीति।** **सुलभमेवेति ।** धर्मिप्रतियोगिनोः प्रत्यक्षत्वेनोक्तशङ्कानवकाशादिति

**भावः । अतीन्द्रियभेदे तु पूर्ववदीश्वरप्रत्यक्षमुदाहर्तव्यम् । न च प्रत्यक्षस्य व्यावहारिकविषयकत्वम् । मानाभावात् । अस्यैवार्थस्य व्यावहारिकत्वाव्यावहारिकत्वयोर्व्याघाताच्च । न च भेदस्य प्रत्यक्षत्वेऽपि तस्य परमार्थसत्त्वे किं मानमिति वाच्यम् । सत्त्वेनैव भेदस्य प्रतीयमानत्वात् । तस्य च बाधाभावेन परमार्थत्वादित्यन्यत्र विस्तरः ।**

ಹೀಗೆ ಆತ್ಮಭೇದವನ್ನು ಚೆನ್ನಾಗಿ ಸಾಧಿಸಿ ಈಗ ಅನಾತ್ಮಭೇದವನ್ನೂ ಸಾಧಿಸುತ್ತಾರೆ. ಘಟಪಟಾದಿ ಭೇದ ವಿಷಯದಲ್ಲಿ ಪ್ರತ್ಯಕ್ಷವು ಸುಲಭವೆ. ಏಕೆಂದರೆ ಧರ್ಮಿ ಪ್ರತಿಯೋಗಿಗಳೆರಡೂ ಪ್ರತ್ಯಕ್ಷವಾಗಿರುವುದರಿಂದ ಆತ್ಮಭೇದ ಪ್ರತ್ಯಕ್ಷ ವಿಷಯದಲ್ಲಿ ಹಿಂದೆ ಎತ್ತಿದ ಆಕ್ಷೇಪಗಳಿಗೆ ಇಲ್ಲಿ ಅವಕಾಶವಿಲ್ಲ. ಅತೀಂದ್ರಿಯ ಭೇದವಿಷಯದಲ್ಲಿ ಹಿಂದಿನಂತೆಯೆ ಈಶ್ವರಪ್ರತ್ಯಕ್ಷವನ್ನು ಸಾಧಕವೆಂದು ಹೇಳಬೇಕು. ಈ ಪ್ರತ್ಯಕ್ಷಗಳೆಲ್ಲ ವ್ಯಾವಹಾರಿಕ ವಿಷಯಕ ಎನ್ನಬಾರದು. ಹಾಗೆ ಹೇಳಲು ಸಾಧಕ ಪ್ರಮಾಣವಿಲ್ಲ. ಮತ್ತು ಈ ವ್ಯಾವಹಾರಿಕತ್ವವು ವ್ಯಾವಹಾರಿಕವೊ ಅವ್ಯಾವಹಾರಿಕವೋ? ವ್ಯಾವಹಾರಿಕವೆನ್ನುವ ಪಕ್ಷದಲ್ಲಿ ಘಟದಲ್ಲಿ ಅವ್ಯಾವಹಾರಿಕತ್ವವೇ ವಾಸ್ತವ ವೆಂದಂತಾಗುವುದು. ಅವ್ಯಾವಹಾರಿಕವೆನ್ನುವ ಪಕ್ಷದಲ್ಲಿಯೂ ಘಟದಲ್ಲಿ ಅವ್ಯಾವಹಾರಿಕತ್ವವನ್ನೇ ಒಪ್ಪಿದಂತಾಗುವುದು. ಹೀಗೆ ವ್ಯಾಹತಿ ಬರುತ್ತದೆ.

ಭೇದವು ಪ್ರತ್ಯಕ್ಷವಾದರೂ ಅದು ಪಾರಮಾರ್ಥಿಕ ಸತ್ಯವೆನ್ನಲು ಏನು ಸಾಧಕವಿದೆ? ಎಂದರೆ ಆ ಪ್ರತ್ಯಕ್ಷದಲ್ಲಿ ಭೇದವು ಸತ್ಯವೆಂದೇ ಕಾಣುತ್ತದೆ. ಅದಕ್ಕೆ ಬಾಧಕವಿಲ್ಲದಿರುವುದರಿಂದ ಸತ್ಯತ್ವವು ಪಾರಮಾರ್ಥಿಕವೆಂದೇ ಸಿದ್ಧವಾಗುವುದು.

### ಘಟವು ಪಟತಾದಾತ್ಮ್ಯಾಧಿಕರಣವಲ್ಲ

**अनुमानं च घटः पटप्रतियोगिकतात्त्विकतादात्म्याधिकरणं न भवति। प्रतियोगिसामानाधिकरण्यावच्छेदकानवच्छिन्नपटनिष्ठात्यन्ताभावप्रतियोगिधर्माधिकरणत्वात् । व्यतिरेकेण पटवत् । अप्रसिद्धविशेषणत्वं चात्मभेदसाधकानुमान इव परिहर्तव्यम् । व्यावहारिकभेदमात्रेण पक्षदृष्टान्तभावश्च घटपटयोरुपपादनीयः ।**

**ಅನುಮಾನವೂ ಘಟಪಟ ಭೇದ ವಿಷಯದಲ್ಲಿ ಹೀಗೆ— ಘಟವು ಪಟಪ್ರತಿಯೋಗಿಕ**

**(ತಾತ್ವಿಕ) ತಾದಾತ್ಮ್ಯಾಧಿಕರಣವಲ್ಲ. ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕ ಅನವಚ್ಛಿನ್ನವಾದ ಪಟನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಧರ್ಮಉಳ್ಳದ್ದಾದರಿಂದ. ಪಟವು ವ್ಯತಿರೇಕ ದೃಷ್ಟಾಂತ. ಅಪ್ರಸಿದ್ಧ ವಿಶೇಷಣತ್ವ ದೋಷವನ್ನು ಆತ್ಮಭೇದಸಾಧಕಾನುಮಾನದಂತೆಯೇ ಪರಿಹರಿಸಿಕೊಳ್ಳಬೇಕು. ಘಟಪಟಗಳಿಗೆ ವ್ಯಾವಹಾರಿಕ ಭೇದವಿರುವುದರಿಂದ ಅದರಿಂದಲೇ ಒಂದು ಪಕ್ಷ, ಇನ್ನೊಂದು ದೃಷ್ಟಾಂತವಾಗಬಹುದು.**

अत्रैवानुमानान्याह —**अनुमानं चेति**। पटेत्यादेः पटप्रतियोगिक तादात्म्याधिकरणत्वावच्छिन्नप्रतियोगिताक भेदवानित्यर्थः। तात्त्विकतादात्म्येति पाठे पटत्वविशिष्टतादात्म्यावच्छिन्नभेदमादाय सिद्धसाधनवारणाय तात्त्विकपदं तदुपलक्षिततादात्म्यनिवेशलाभार्थम्। तदवच्छिन्नव्यावहारिकभेदसिद्ध्याऽर्थान्तरत्वं त्वात्मभेदसाधकानुमानरीत्या परिहरणीयम्। **प्रतियोगीति**। अव्याप्यवृत्तिसंयोगादिकं व्याप्यवृत्तिपटत्वादिकं चादाय पटे व्यभिचारवारणायानवच्छिन्नान्तनिष्ठान्तयोरभावविशेषणत्वेन निवेशः। न च प्रतियोग्यसमानाधिकरणत्वविशेषणेनैव संयोगाभावादिव्यावृत्तेऽनवच्छिन्नान्तव्यावृत्त्यभाव इति वाच्यम्। गुणादौ प्रतियोग्यसमानाधिकरणस्यैव संयोगाभावस्य पटनिष्ठत्वेन तदव्यावृत्तेः। अनवच्छिन्नान्तनिवेशे च प्रतियोगिसामानाधिकरण्यावच्छेदकं यत्संयोगाभावत्वं तदनवच्छिन्नत्वाभावेन तद्व्यावृत्तेः।

ಈ ಘಟಪಟ ಭೇದ ವಿಷಯದಲ್ಲಿಯೇ ಅನುಮಾನಗಳನ್ನು ಹೇಳುತ್ತಾರೆ— ಪಟಪ್ರತಿಯೋಗಿಕ ತಾದಾತ್ಮ್ಯಾಧಿಕರಣವಲ್ಲ ಎಂದರೆ ಪಟಪ್ರತಿಯೋಗಿಕ ತಾದಾತ್ಮ್ಯಾಧಿಕರಣತ್ವಾವಚ್ಛಿನ್ನ ಪ್ರತಿಯೋಗಿತಾಕಭೇದ ಉಳ್ಳದ್ದೆಂದರ್ಥ.

ತಾತ್ವಿಕ ತಾದಾತ್ಮ್ಯ ಎಂದು ಒಂದು ಪಾಠವಿದೆ. ಪಟತ್ವವಿಶಿಷ್ಟ ತಾದಾತ್ಮ್ಯಾವಚ್ಛಿನ್ನ ಭೇದವು ಘಟದಲ್ಲಿ ಸಿದ್ಧವೇ ಆಗಿರುವುದರಿಂದ ಸಿದ್ಧಸಾಧನತ್ವ ದೋಷ ಬಂದೀತು. ಪಟತ್ವೋಪಲಕ್ಷಿತ ತಾದಾತ್ಮ್ಯಾವಚ್ಛಿನ್ನ ಭೇದವನ್ನು ಘಟದಲ್ಲಿ ಪೂರ್ವಪಕ್ಷಿ ಒಪ್ಪಿಲ್ಲ. ಅದನ್ನು ಈ ಅನುಮಾನದಿಂದ ಸಾಧಿಸಬೇಕಾಗಿದೆ. ಅದರಿಂದ 'ಪಟತಾದಾತ್ಮ್ಯ' ಇಲ್ಲಿ ಪಟತ್ವೋಪಲಕ್ಷಿತ ತಾದಾತ್ಮ್ಯವಿವಕ್ಷಿತವೆಂದು ತಿಳಿಸುವುದಕ್ಕಾಗಿ 'ತಾತ್ವಿಕ'ಪದವೆಂದು ತಿಳಿಯಬೇಕು.

ತಾದಾತ್ಮ್ಯಾವಚ್ಛಿನ್ನ ಭೇದವು ವ್ಯಾವಹಾರಿಕವಾಗಿ ಈ ಅನುಮಾನದಿಂದ ಸಿದ್ಧಿಸಲಿ, ಪಾರಮಾರ್ಥಿಕಭೇದ ಸಿದ್ಧವಾಗಬೇಕಿಲ್ಲ ಎಂದು ಅರ್ಥಾಂತರತ್ವದೋಷ ಬಂದರೆ ಆತ್ಮಭೇದಸಾಧಕ ಅನುಮಾನದಂತೆಯೇ ಪರಿಹರಿಸಬೇಕು.

ಪಟದಲ್ಲಿ ಪಟಪ್ರತಿಯೋಗಿಕ ತಾದಾತ್ಮ್ಯಾವಚ್ಛಿನ್ನ ಭೇದವಿಲ್ಲದ್ದರಿಂದ ಸಾಧ್ಯವಿಲ್ಲ. ಪ್ರತಿಯೋಗಿವ್ಯಧಿಕರಣವಾದ ಪಟನಿಷ್ಠವಾದ ಘಟತ್ವಾಭಾವ ಪ್ರತಿಯೋಗಿಯಾದ ಘಟತ್ವರೂಪ ಧರ್ಮವೂ ಇಲ್ಲದ್ದರಿಂದ ಹೇತ್ವಭಾವವೂ ಇದೆ. ಅದರಿಂದ ಪಟವು ವ್ಯತಿರೇಕ ದೃಷ್ಟಾಂತವಾಗುತ್ತದೆ. ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನತ್ವ ವಿಶೇಷಣವನ್ನು ಪಟನಿಷ್ಠಾಭಾವದಲ್ಲಿ ಕೊಡದಿದ್ದರೆ ಪಟನಿಷ್ಠಾಭಾವವೆಂದು ಸಂಯೋಗಾಭಾವವನ್ನು ತೆಗೆದುಕೊಳ್ಳಬಹುದು. ತತ್ಪ್ರತಿಯೋಗಿಯಾದ ಸಂಯೋಗರೂಪ ಧರ್ಮವು ಪಟದಲ್ಲಿ ಬರುತ್ತದೆ. ಏಕೆಂದರೆ ಸಂಯೋಗವು ಅವ್ಯಾಪ್ಯವೃತ್ತಿ. ಸಂಯೋಗಾಭಾವದೊಂದಿಗೇ ಪಟದಲ್ಲಿರುತ್ತದೆ. ಹೀಗೆ ಹೇತು ಬರುತ್ತದೆ. ಅದರಿಂದ ವ್ಯಭಿಚಾರ.

ಈ ವ್ಯಭಿಚಾರ ಪರಿಹಾರಕ್ಕೆ ಪ್ರತಿಯೋಗ್ಯ ಸಮಾನಾಧಿಕರಣತ್ವ ವಿಶೇಷಣ ಮಾತ್ರವನ್ನೇ ಕೊಟ್ಟರೂ ಸಂಯೋಗಾಭಾವವು ಪ್ರತಿಯೋಗಿ ಸಮಾನಾಧಿಕರಣವಾದ್ದರಿಂದ ಪ್ರತಿಯೋಗ್ಯ ಸಮಾನಾಧಿಕರಣವಾದ ಘಟತ್ವಾಭಾವವನ್ನೇ ಇಟ್ಟುಕೊಂಡು ಅದಕ್ಕೆ ಪ್ರತಿಯೋಗಿಯಾದ ಘಟತ್ವ ರೂಪ ಧರ್ಮಾಧಿಕರಣತ್ವರೂಪವಾದ ಹೇತುವು ಪಟದಲ್ಲಿಲ್ಲವೆಂದು ವ್ಯಭಿಚಾರ ಪರಿಹಾರವಾದಂತೆ ಮೇಲುನೋಟಕ್ಕೆ ಕಾಣುತ್ತದೆ. ವಾಸ್ತವದಲ್ಲಿ ಸಂಯೋಗಾಭಾವವು ಪಟದಲ್ಲಿ ಪ್ರತಿಯೋಗಿ ಸಮಾನಾಧಿಕರಣವಾದರೂ ಗುಣದಲ್ಲಿ ಪ್ರತಿಯೋಗ್ಯಸಮಾನಾಧಿಕರಣವೇ ಆಗಿದೆ. ಗುಣದಲ್ಲಿ ಪ್ರತಿಯೋಗಿಯಾದ ಸಂಯೋಗವಿಲ್ಲ, ಸಂಯೋಗಾಭಾವ ಮಾತ್ರವಿದೆ. ಹೀಗಾಗಿ ಪ್ರತಿಯೋಗ್ಯ ಸಮಾನಾಧಿಕರಣವಾದ ಪಟನಿಷ್ಠವಾದ ಅಭಾವವೆಂದು ಸಂಯೋಗಾಭಾವವನ್ನು ತೆಗೆದುಕೊಳ್ಳಲು ಅಡ್ಡಿ ಇಲ್ಲ. ಆ ಅಭಾವ ಪ್ರತಿಯೋಗಿಯಾದ ಸಂಯೋಗರೂಪಧರ್ಮವು ಪಟದಲ್ಲಿ ಬರುವುದರಿಂದ ವ್ಯಭಿಚಾರ ಸುಸ್ಥವಾಗಿದೆ. ಅದಕ್ಕೆ ಪ್ರತಿಯೋಗ್ಯಸಮಾನಾಧಿಕರಣತ್ವ ಮಾತ್ರ ವಿಶೇಷಣ ನೀಡದೆ, ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನತ್ವ ವಿಶೇಷಣವನ್ನೇ ಪಟನಿಷ್ಠಾಭಾವದಲ್ಲಿ ಕೊಡಬೇಕು. ಸಂಯೋಗಾಭಾವವು ಗುಣದಲ್ಲಿ ಪ್ರತಿಯೋಗ್ಯಸಾಮಾನಾಧಿಕರಣವಾದರೂ ಪಟದಲ್ಲಿ ಪ್ರತಿಯೋಗಿ ಸಮಾನಾಧಿಕರಣವಾಗಿರುವುದರಿಂದ ಪ್ರತಿಯೋಗಿ ಸಾಮಾನಾಧಿಕರಣ್ಯಕ್ಕೆ ಸಂಯೋಗಾಭಾವತ್ವವು ಅವಚ್ಛೇದಕವಾಗುವುದರಿಂದ ಪಟನಿಷ್ಠ ಸಂಯೋಗಾಭಾವವು ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕ ಸಂಯೋಗಾಭಾವತ್ವಾವಚ್ಛಿನ್ನವೇ ಆಗಿದೆ, ಅನವಚ್ಛಿನ್ನವಾಗಿಲ್ಲ. ಅನವಚ್ಛಿನ್ನವಾದ ಅಭಾವವೆಂದು ಘಟತ್ವಾಭಾವವನ್ನೇ ತೆಗೆದುಕೊಂಡು ತತ್ಪ್ರತಿಯೋಗಿ ಘಟತ್ವರೂಪ ಧರ್ಮವು ಪಟದಲ್ಲಿಲ್ಲವೆಂದು ಹೇತ್ವಭಾವವನ್ನು ಕೂಡಿಸಲು ಬರುತ್ತದೆ.

**न चैवं घटत्वाभावादेरपि घटत्वादिरूपप्रतियोगिसामानाधिकरण्याव-च्छेदकप्रमेयत्वाद्यवच्छिन्नत्वादसिद्धिरिति वाच्यम् । स्वनिरूपक-**

**प्रतियोगिसामानाधिकरण्यावच्छेदकं यद्यत्तदनवच्छिन्नत्वस्य विवक्षितत्वात्, प्रमेयत्वादिनिरूपकप्रतियोग्यप्रसिद्ध्या स्वपदेन तदुपादानायोगात् । संयोगाभावत्वादेरेव च तथात्वात् ।**

**ननु सर्वस्यैव पटतादात्म्याधिकरणत्वात् तदवच्छिन्नभेदरूपसाध्याप्रसिद्धिरत आह —अप्रसिद्धेति । परिहर्तव्यमिति । प्रकृतानुमित्यविरोधित्वेन ज्ञेयमित्यर्थः । अभावसाध्यकव्यतिरेक्यनुमाने तददोषत्वस्योपपादितत्वादिति भावः**

ಆದರೂ ಘಟತ್ವಾಭಾವವನ್ನು ತೆಗೆದುಕೊಳ್ಳುವುದು ಕಷ್ಟವೆ. ಏಕೆಂದರೆ ಘಟತ್ವಾಭಾವದ ಪ್ರತಿಯೋಗಿಯು ಘಟತ್ವ. ಅದಕ್ಕೆ ಸಮಾನಾಧಿಕರಣವು ದ್ರವ್ಯತ್ವಾದಿ ಪ್ರಮೇಯ. ಸಾಮಾನಾಧಿ ಕರಣ್ಯಾವಚ್ಛೇದಕವು ಪ್ರಮೇಯತ್ವ. ಆದರಿಂದ ಅವಚ್ಛಿನ್ನವೇ ಆಗಿದೆ, ಘಟತ್ವಾಭಾವ, ಹೊರತು ಅನವಚ್ಛಿನ್ನವಾಗಲಿಲ್ಲ. ಅನವಚ್ಛಿನ್ನ ಪಟನಿಷ್ಠಾತ್ಯಂತಾಭಾವ ಪ್ರತಿಯೋಗಿ ಧರ್ಮಾಧಿಕರಣತ್ವ ರೂಪ ಹೇತುವು ಘಟರೂಪಪಕ್ಷದಲ್ಲಿ ಬಾರದಿರುವುದರಿಂದ ಅಸಿದ್ಧಿ.

ಅದಕ್ಕೆ ಸ್ವನಿರೂಪಕಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕವು ಯಾವುದೋ ಅದರಿಂದ ಅನವಚ್ಛಿನ್ನತ್ವವನ್ನು ಪಟನಿಷ್ಠಾತ್ಯಂತಾಭಾವದಲ್ಲಿ ವಿಶೇಷಣವಾಗಿ ವಿವಕ್ಷೆ ಮಾಡಬೇಕು. ಆಗ ಸ್ವಪದದಿಂದ ಸಂಯೋಗಾಭಾವತ್ವವನ್ನೇ ತೆಗೆದುಕೊಳ್ಳಬೇಕು. ಸ್ವನಿರೂಪಕ ಪ್ರತಿಯೋಗಿಯು ಸಂಯೋಗ. ತದನವಚ್ಛಿನ್ನ ಪಟನಿಷ್ಠಾತ್ಯಂತಾಭಾವವೆಂದರೆ ಘಟತ್ವಾತ್ಯಂತಾಭಾವ, ತತ್ಪ್ರತಿಯೋಗಿ ಘಟತ್ವರೂಪ ಧರ್ಮಾಧಿಕರಣತ್ವವು ಘಟದಲ್ಲಿ ಬರುವುದರಿಂದ ಅಸಿದ್ಧಿ ಇಲ್ಲ. ಸ್ವಪದದಿಂದ ಪ್ರಮೇಯತ್ವವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ ಅದಕ್ಕೆ ನಿರೂಪಕವಾದ ಪ್ರತಿಯೋಗಿ ಎಂಬುದಿಲ್ಲ, ಅಪ್ರಸಿದ್ಧ. ಅದರಿಂದ ಸಂಯೋಗಾಭಾವತ್ವವನ್ನೇ ಸ್ವಪದದಿಂದ ತೆಗೆದುಕೊಳ್ಳ ಬೇಕಾಗುತ್ತದೆ.

ಅತ್ಯಂತಾಭಾವದಲ್ಲಿ ಪಟನಿಷ್ಠತ್ವ ವಿಶೇಷಣವಿಲ್ಲದಿದ್ದರೆ ಪ್ರತಿಯೋಗಿ ಸಾಮಾನಾಧಿ ಕರಣ್ಯಾವಚ್ಛೇದಕಾನವಚ್ಛಿನ್ನ ಅತ್ಯಂತಾಭಾವವೆಂದು ಪಟತ್ವಾತ್ಯಂತಾಭಾವವನ್ನೂ ತೆಗೆದುಕೊಳ್ಳ ಬಹುದು. ಆಗ ಅದಕ್ಕೆ ಪ್ರತಿಯೋಗಿಯಾದ ಪಟತ್ವರೂಪ ಧರ್ಮಾಧಿಕರಣತ್ವವೇ ಪಟದಲ್ಲಿ ಬರುವುದರಿಂದ ವ್ಯಭಿಚಾರ. ಪಟನಿಷ್ಠತ್ವವಿಶೇಷಣದಿಂದ ಪಟತ್ವಾಭಾವ ವಾರಣೆಯಾಗುವುದರಿಂದ ಘಟತ್ವಾಭಾವಾದಿಗಳನ್ನೇ ತೆಗೆದುಕೊಳ್ಳಬೇಕು. ತತ್ಪ್ರಯೋಗಿಯಾದ ಘಟತ್ವಾದಿಗಳಾವುವೂ ಪಟದಲ್ಲಿ ಬಾರದಿರುವುದರಿಂದ ವ್ಯಭಿಚಾರವಿಲ್ಲ.

ಅಭೇದಮತದಲ್ಲಿ ಘಟಪಟಾದಿಗಳೆಲ್ಲ ಒಂದೇ ಆದ್ದರಿಂದ ಎಲ್ಲವೂ ಪಟತಾದಾತ್ಮ್ಯಾಧಿಕರಣವೇ ಆಗಿವೆ. ತಾದಾತ್ಮ್ಯಾಧಿಕರಣತ್ವಾವಚ್ಛಿನ್ನ ಭೇದವು ಅಪ್ರಸಿದ್ಧ. ಅದನ್ನು ಹೇಗೆ ಸಾಧ್ಯಮಾಡುತ್ತೀರಿ ಎಂದರೆ, ಅಭಾವಸಾಧ್ಯಕ ವ್ಯತಿರೇಕ್ಯನುಮಾನದಲ್ಲಿ ಅಪ್ರಸಿದ್ಧ ವಿಶೇಷಣತ್ವವು ಪ್ರಕೃತಾನುಮಿತಿಗೆ ವಿರೋಧಿಯೇ ಅಲ್ಲ, ದೋಷವೇ ಅಲ್ಲ, ಆತ್ಮಭೇದಸಾಧಕಾನುಮಾನದಂತೆಯೇ ಎಂದು ತಿಳಿಯಬೇಕು.

**ಪಟದಲ್ಲಿ ಘಟತ್ವಾಭಾವ ಅಭೇದ ಮತದಲ್ಲಿ ಆವಶ್ಯಕ**

**ननु तथाऽपि घटपटयोरपारमार्थिकभेदं वदता मया घटत्वादेरपि पटनिष्ठत्वाङ्गीकारेण पटनिष्ठात्यन्ताभावप्रतियोगिधर्माधिकरणत्वं घटस्य नातीत्यसिद्धिरिति चेन्न । पटे घटत्वं तथ्यमतथ्यं वा ? नाद्यः । अपसिद्धान्तात् । द्वितीये तु कथं पटे घटत्वात्यन्ताभावानङ्गीकरणम् ?**

**'सर्वेषामेव भावानां स्वाश्रयत्वेन सम्मते । प्रतियोगित्वमत्यन्ताभावं प्रति मृषात्मते'ति ।**

**वचनात् त्वया स्वसमानाधिकरणात्यन्ताभावप्रतियोगित्वं मिथ्यात्वमित्यङ्गीकारात् ।**

'ಘಟಪಟಗಳಿಗೆ ಅಪಾರಮಾರ್ಥಿಕ ಭೇದವನ್ನೇ ಹೇಳುವ ನನ್ನ ಮತದಲ್ಲಿ ಘಟತ್ವಾದಿ ಧರ್ಮವೂ ಕೂಡ ಪಟನಿಷ್ಠವೆಂದೇ ಸ್ವೀಕರಿಸಿರುವುದರಿಂದ ಪಟನಿಷ್ಠಾಂತ್ಯತಾಭಾವ ಪ್ರತಿಯೋಗಿ ಧರ್ಮಾಧಿಕರಣತ್ವವನ್ನು ಘಟದಲ್ಲಿ ಹೇಳಲು ಬರುವುದಿಲ್ಲ. ಆದರಿಂದ ಅಸಿದ್ಧಿ' ಎಂದು ಪೂರ್ವಪಕ್ಷಿಯು ಹೇಳಿದರೆ, ಕೇಳಬೇಕು— 'ಪಟದಲ್ಲಿ ಘಟತ್ವವು ಸತ್ಯವೆ ಅಥವಾ ಅಸತ್ಯವೆ? ಸತ್ಯವಂತೂ ಅಲ್ಲ, ಅಪಸಿದ್ಧಾಂತದೋಷ ಬರುವುದರಿಂದ. ಅಸತ್ಯವೆಂದರೆ ಪಟದಲ್ಲಿ ಘಟತ್ವ ಇಲ್ಲವೆಂದೇ ಹೇಳಿದಂತಾಯಿತು, ಘಟತ್ವಾತ್ಯಂತಾಭಾವವಿಲ್ಲ ಎನ್ನುವುದು ಹೇಗೆ? ಎಲ್ಲ ಪದಾರ್ಥಗಳೂ ತಮಗೆ ಆಶ್ರಯವೆಂದು ಅಂಗೀಕೃತವಾದ ವಸ್ತುವಿನಲ್ಲಿರುವುದಿಲ್ಲ. ಅವುಗಳ ಅತ್ಯಂತಾಭಾವವೇ ಇದೆ. ಹೀಗೆ ಅತ್ಯಂತಾಭಾವಕ್ಕೆ ಪ್ರತಿಯೋಗಿ ಎನಿಸುವುದೇ ಮಿಥ್ಯಾತ್ವವೆಂದು ಅದ್ವೈತ ಸಿದ್ಧಾಂತವಿರುವುದರಿಂದ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವವೇ ಮಿಥ್ಯಾತ್ವ. ಅತ್ಯಂತಾಭಾವವಿಲ್ಲ ಎನ್ನುವುದು ಹೇಗೆ ಕೂಡುತ್ತದೆ?

**पटस्य घटत्वं प्रत्याश्रयत्वमेव नास्तीति तत्र तदत्यन्ताभावाभावेऽपि तत्र तस्य मिथ्यात्वं न विरुध्यत इति चेत् तर्हि पटे घटत्वं प्रत्यनाश्रये घटत्वात्यन्ताभावाधिकरणत्वं सुप्रसिद्धमेवेति कथमसिद्धिः।**

'ಪಟವು ಘಟತ್ವಕ್ಕೆ ಆಶ್ರಯವೇ ಅಲ್ಲ. ಅದರಿಂದ ಪಟದಲ್ಲಿ ಘಟತ್ವಾತ್ಯಂತಾಭಾವವನ್ನು ಒಪ್ಪದಿದ್ದರೂ ಮಿಥ್ಯಾತ್ವವಿರೋಧ ಬರುವುದಿಲ್ಲ' ಎಂದು ಅಭೇದವಾದಿ ಹೇಳಬಹುದು. ಆದರೆ, ಪಟವು ಘಟತ್ವಕ್ಕೆ ಆಶ್ರಯವೇ ಅಲ್ಲ ಎಂದರೆ ಪಟದಲ್ಲಿ ಘಟತ್ವಾತ್ಯಂತಾಭಾವವಿದೆ ಎಂದೇ ಹೇಳಿದಂತಾಗಿದೆ. ಪ್ರತಿಯೋಗಿ ಇಲ್ಲದಿದ್ದಲ್ಲಿ ಅಭಾವವಿರುವುದು ಪ್ರಸಿದ್ಧವೆ. ಅದರಿಂದ ಅಸಿದ್ಧಿ ಹೇಗೆ?

**पटनिष्ठत्वाङ्गीकारेणेति।** घटपटयोः स्वरूपैक्यादिति भावः। यद्यप्येवं पटे घटव्यवहारापत्तिरिति वक्ष्यमाणदूषणमत्र शक्यते वक्तुम्। तथापि पटे घटत्वात्यन्ताभावस्यैव प्रकृतोपयुक्तत्वात्तमेव तावदङ्गीकारयति —**पट इति।** अङ्गीक्रियमाण इति शेषः। ननु पटे घटत्वस्य मिथ्यात्वेऽपि तत्र तदत्यन्ताभावाङ्गीकारः कुत इत्यत आह —**सर्वेषामिति।** घटादीनां तत्त्वतः स्वाधिकरणाप्रसिद्धेः स्वाधिकरणत्वेन सम्मत इत्युक्तम्। स्वप्रकारकधीविशेष्ये यावतीत्यर्थः। इति वदता त्वयेति सम्बन्धः। तथाच घटत्वादेरेतादृशमिथ्यात्वानुरोधादेव पटादौ तदत्यन्ताभावाङ्गीकार इति भावः।

ಘಟತ್ವಾದಿ ಧರ್ಮವು ಪಟನಿಷ್ಠವಾಗುವುದು ಹೇಗೆ ಎಂದರೆ ಘಟಪಟಗಳಿಗೆ ಸ್ವರೂಪೈಕ್ಯವಿರುವುದರಿಂದ. 'ಹಾಗಾದರೆ ಪಟವನ್ನು ಘಟವೆಂದೇ ವ್ಯವಾಹರದಲ್ಲಿ ಕರೆಯಬಹುದೆ'ಂಬ ಆಪತ್ತಿ ಮಾಡಲು ಶಕ್ಯವಿದೆ. ಇದನ್ನು ಮುಂದೆ ಹೇಳುತ್ತಾರೆ. ಆದರೂ ಪಟದಲ್ಲಿ ಘಟತ್ವಾತ್ಯಂತಾಭಾವವಿದೆ ಎನ್ನುವುದೇ ಪ್ರಕೃತೋಪಯೋಗಿಯಾದ್ದರಿಂದ ಅದನ್ನೇ ಮೊದಲಿಗೆ ಅಂಗೀಕಾರ ಮಾಡಿಸುತ್ತಾರೆ—

'ಪಟದಲ್ಲಿ ಘಟತ್ವ'ವಿಲ್ಲವೆಂದು ನೀನು ಅಂಗೀಕರಿಸಿದರೆ ಎಂದರ್ಥ. ಪಟದಲ್ಲಿ ಘಟತ್ವ ಮಿಥ್ಯಾ ಆದ ಮಾತ್ರಕ್ಕೆ ಅಲ್ಲಿ ಆದರ ಅತ್ಯಂತಾಭಾವವನ್ನೇಕೆ ಒಪ್ಪಬೇಕು? ಎಂದರೆ, ಹೇಳುತ್ತಾರೆ. 'ಎಲ್ಲ ಪದಾರ್ಥಗಳಿಗೂ ಮಿಥ್ಯಾತ್ವವೆಂದರೆ ತಾವಿರುವಲ್ಲಿ ಎಲ್ಲ ಕಡೆ, ಅಂದರೆ ತಾವು ಕಾಣುವಲ್ಲೆಲ್ಲ

ತಮ್ಮ ಅತ್ಯಂತಾಭಾವ ಇರುತ್ತದೆ' ಎಂದೇ ಅರ್ಥ. ಆದರಿಂದ ಘಟತ್ವ ಮಿಥ್ಯಾತ್ವವಾದಿಗಳು ನೀವು ಘಟದಲ್ಲಿ ಅದರ ಅತ್ಯಂತಾಭಾವವನ್ನು ಒಪ್ಪಲೇಬೇಕು ಎಂದು.

ಘಟಾದಿ ಪದಾರ್ಥಗಳಿಗೆ ವಾಸ್ತವ ಸ್ವಾಧಿಕರಣವೆಂಬುದು ಅಪ್ರಸಿದ್ಧವಾದ್ದರಿಂದ, ಸ್ವಾಧಿಕರಣವೆಂದು ಲೋಕದಲ್ಲಿ ಒಪ್ಪಿದ್ದೆಂದು, ಅಂದರೆ, ಸ್ವಪ್ರಕಾರಕ ಜ್ಞಾನ ವಿಶೇಷ್ಯವಾಗಿದ್ದೆಂದು 'ಸಂಮತ' ಪದದ ಅಭಿಪ್ರಾಯ.

**ननु स्वाश्रयनिष्ठाभावप्रतियोगित्वमेव मिथ्यात्वम् । स्वाश्रयत्वं च न वास्तवम् । नापि प्रातिभासिकसाधारणम् । येन विरोधः सिद्धार्थता वा स्यात् । अपि तु व्यावहारिकमेवेत्याशयेन शङ्कते — पटस्येति ।**

**सुप्रसिद्धमेवेति ।** परस्परविरुद्धयोरन्यतरनिषेधस्यान्यतरविधिव्याप्तत्वनियमादिति भावः ।

ಮಿಥ್ಯಾತ್ವವೆಂದರೆ ಸ್ವಾಶ್ರಯದಲ್ಲಿ ತನ್ನ ಅಭಾವವಿರುತ್ತದೆ ಎಂದರ್ಥ ನಿಜ. ಆದರೆ ಸ್ವಾಶ್ರಯವೆಂದರೆ 'ವಸ್ತುತಃ ತನಗೆ ಆಶ್ರಯ' ಎಂದಲ್ಲ. ಆದರಿಂದ ವಿರೋಧವಿಲ್ಲ. 'ಪ್ರಾತಿಭಾಸಿಕ ಸಾಧಾರಣವಾಗಿ 'ಆಶ್ರಯ'ವೆಂದು ಪ್ರತೀತವಾಗುವುದೂ'ಅಲ್ಲ. ಆದರಿಂದ ಸಿದ್ಧಸಾಧನತ್ವವೂ ಇಲ್ಲ. ವ್ಯವಹಾರದಲ್ಲಿ ಆಶ್ರಯವೆಂದು ಎಲ್ಲರೂ ಒಪ್ಪಿರುವುದೆಂದರ್ಥ. ಹೀಗಾಗಿ 'ಪಟಕ್ಕೆ ಘಟುತ್ವಾಶ್ರಯತ್ವವಿಲ್ಲ' ಎಂದ ಮಾತ್ರಕ್ಕೆ ಮಿಥ್ಯಾತ್ವದ ವಿರೋಧಬರುವುದಿಲ್ಲ ಎಂದು ಅಭೇದವಾದಿ ಹೇಳುತ್ತಾನೆ.

ಇದಕ್ಕೆ ನಾವು ಹೇಳಬೇಕು— 'ಪರಸ್ಪರ ವಿರುದ್ಧವಾದವುಗಳಲ್ಲಿ ಒಂದು ಇಲ್ಲವೆಂದರೆ ಇನ್ನೊಂದು ಇದೆ ಎಂದು ನಿಯಮ. ಆದರಿಂದ ಪ್ರತಿಯೋಗಿ ಇಲ್ಲದಿದ್ದಲ್ಲಿ ಅಭಾವವಿರುವುದು ಪ್ರಸಿದ್ಧ'.

**ಘಟದಲ್ಲಿ ಪಟತ್ವಾಭಾವವು ಪ್ರತಿಯೋಗಿಸಾಮಾನಾಧಿಕರಣ್ಯಾವಚ್ಛೇದಕಾವಚ್ಛಿನ್ನ**

**ननु तर्हि घटे घटत्वस्य मिथ्यात्वेन घटस्यापि घटत्वं प्रत्याश्रयत्वं नास्तीत्यसिद्धिरिति चेत् न । घटस्य घटत्वात्यन्ताभावं प्रत्याश्रयस्य घटत्वं प्रत्याश्रयत्वस्याप्यङ्गीकार्यत्वात् । अन्यथा घटत्वस्य निरधिकरणत्वेन स्वात्यन्ताभावसमानाधिकरणत्वरूपं मिथ्यात्वं घटत्वादेर्न स्यात् ।**

'ಹಾಗಾದರೆ ಘಟದಲ್ಲಿ ಘಟತ್ವವು ಮಿಥ್ಯೆಯಾದ್ದರಿಂದ ಘಟಕ್ಕೆ ಘಟತ್ವಾಶ್ರಯತ್ವವಿಲ್ಲ, ಅದರಿಂದ ಅಸಿದ್ಧಿ' ಎಂದು ಹೇಳಬಾರದು. ಘಟಕ್ಕೆ ಘಟತ್ವಾತ್ಯಂತಾಭಾವಾಶ್ರಯತ್ವ ಎದ್ದರೂ ಘಟತ್ವಾಶ್ರಯತ್ವವನ್ನೂ ಒಪ್ಪಲೇಬೇಕು. ಇಲ್ಲದಿದ್ದರೆ ಘಟತ್ವಕ್ಕೆ ಅಧಿಕರಣವೇ ಇಲ್ಲವೆಂದಾಗುವುದರಿಂದ, ಸ್ವಾತ್ಯಂತಾಭಾವಕ್ಕೆ ಸಮಾನವಾದ ಅಧಿಕರಣವಿರುವುದೇ ಮಿಥ್ಯಾತ್ವ, ಇಂಥ ಮಿಥ್ಯಾತ್ವವು ಘಟತ್ವಕ್ಕೆ ಇಲ್ಲವೆಂದಾದೀತು.

**ननु तथाऽपि पटे व्यभिचारः । पटे साध्याभावसद्भावेऽपि साधनाभावाभावात् । पटे पटत्वस्य मिथ्यात्वेन पटनिष्ठात्यन्ताभावप्रतियोगिपटत्वं प्रति पटस्याश्रयत्वादिति चेत् । अत एव हेतुर्विशेषितः प्रतियोगिसामानाधिकरण्यावच्छेदकानवच्छिन्नेति । पटे पटत्वात्यन्ताभावे सत्यपि तस्य पटत्वरूपप्रतियोगिसमानाधिकरणत्वेन प्रतियोगिसामानाधिकरण्यावच्छेदकावच्छिन्नतया साधनाभावसद्भावात् ।**

'ಹೀಗಿದ್ದರೂ ಪಟದಲ್ಲಿ ವ್ಯಭಿಚಾರ. ಪಟದಲ್ಲಿ ಸಾಧ್ಯಾಭಾವ ಬಂದರೂ ಸಾಧನಾಭಾವ ಬರಲಿಲ್ಲ. ಪಟತ್ವವು ಮಿಥ್ಯೆಯಾದ್ದರಿಂದ ಪಟದಲ್ಲಿ ಪಟತ್ವಾತ್ಯಂತಾಭಾವವಿದೆ, ಅದಕ್ಕೆ ಪ್ರತಿಯೋಗಿಯಾದ ಪಟತ್ವಕ್ಕೆ ಪಟವು ಆಶ್ರಯವೂ ಆಗಿದೆ. ಪ್ರತಿಯೋಗಿ ಧರ್ಮಾಧಿಕರಣತ್ವವೇ ಬಂದಿದೆ ಅದರ ಅಭಾವ ಬರಲಿಲ್ಲ!' ಎಂದು ಅಭೇದವಾದಿ ಆಕ್ಷೇಪಮಾಡುವ ಸಂಭವವಿರುವುದರಿಂದಲೆ ಹೇತುವಿನಲ್ಲಿ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನತ್ವ ವಿಶೇಷಣ ನೀಡಿದ್ದೇವೆ. ಪಟದಲ್ಲಿ ಪಟತ್ವಾತ್ಯಂತಾಭಾವವಿದ್ದರೂ ಅದು ಪಟತ್ವರೂಪ ಪ್ರತಿಯೋಗಿ ಸಮಾನಾಧಿಕರಣವಾಗಿದೆ. ಅದರಿಂದ ಅದು ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾವಚ್ಛಿನ್ನವಾಯಿತು. ಅದರಿಂದ ಹೇತು ಬಾರದಿರುವುದರಿಂದ ವ್ಯಭಿಚಾರವಿಲ್ಲ.

**ननु तर्ह्यसिद्धिः । घटपटयोरभेदं वदता पटे घटत्वस्याङ्गीकारेण पटेऽपि घटत्वात्यन्ताभावस्य प्रतियोगिसामानाधिकरण्यादिति चेत् न । त्वयाऽपि घटपटयोरपारमार्थिकभेदं वदता पटे घटव्यवहारप्रसङ्गविरोधपरिहाराय व्यावहारिकभेदमात्रेण बिम्बप्रतिबिम्बत्व**

**सत्त्वासत्त्व व्यवस्थावत् पटे घटत्वात्यन्ताभावस्याङ्गीकार्यत्वात् ।**

'ಹಾಗಿದ್ದರೆ ಅಸಿದ್ಧಿ, ಘಟಪಟಗಳಿಗೆ ಅಭೇದವನ್ನು ಹೇಳುವ ನನ್ನ ಪ್ರಕಾರ ಪಟದಲ್ಲಿ ಘಟತ್ವವನ್ನು ಅಂಗೀಕರಿಸಿರುವುದರಿಂದ ಪಟದಲ್ಲಿ ಘಟತ್ವಾತ್ಯಂತಾಭಾವವು ಪ್ರತಿಯೋಗಿ ಸಮಾನಾಧಿಕರಣವೇ ಆಗಿರುವುದರಿಂದ ಪಕ್ಷದಲ್ಲಿ ಹೇತು ಬರಲಿಲ್ಲ' ಎಂದರೆ ಹೇಳುತ್ತೇವೆ, ಘಟಪಟಗಳಿಗೆ ಅಪಾರಮಾರ್ಥಿಕ ಭೇದವನ್ನು ನೀನೂ ಅಂಗೀಕರಿಸಿರುವುದರಿಂದ ಪಟದಲ್ಲಿ 'ಘಟ' ಎಂದು ವ್ಯವಹಾರ ಪ್ರಸಂಗರೂಪ ವಿರೋಧ ಪರಿಹಾರಕ್ಕಾಗಿ ಪಟದಲ್ಲಿ ಘಟತ್ವವಿದೆ ಎನ್ನದೆ ಘಟತ್ವಾತ್ಯಂತಾಭಾವವನ್ನೇ ಒಪ್ಪಬೇಕು. ಬಿಂಬ ಪ್ರತಿಬಿಂಬಗಳಿಗೆ ಐಕ್ಯವಿದ್ದರೂ ಬಿಂಬವೇ ಬಿಂಬ, ಸತ್ಯ. ಪ್ರತಿಬಿಂಬವೇ ಪ್ರತಿಬಿಂಬ, ಅಸತ್ಯವೆಂದು ವ್ಯಾವಹಾರಿಕ ಭೇದದಿಂದ ಅಂಗೀಕರಿಸಿದಂತೆ ಪ್ರಕೃತದಲ್ಲಿಯೂ ಅಂಗೀಕರಿಸಬೇಕು.

**घटत्वस्य सार्वत्रिकत्वेऽप्यविद्यावशात् प्रतिनियतो व्यवहार इति चेत् । न ह्यविद्या आरोपितरजताभावेऽपि शुक्त्यादौ रजतमिति व्यवहारं जनयति । तथात्वे पटेऽपि तं जनयेत् ।**

**घटपटयोस्तादात्म्यस्य पारमार्थिकत्वाङ्गीकारे जीवब्रह्मणोरिव घटपटयोः स्वरूपं पारमार्थिकं स्यादिति प्रपञ्चमिथ्यात्ववाचोयुक्तिरयुक्ता स्यादित्यनुकूलतर्को द्रष्टव्यः ।**

'ಎಲ್ಲ ವಸ್ತುಗಳಲ್ಲಿಯೂ ಘಟತ್ವವಿದ್ದರೂ ಘಟದಲ್ಲಿಯೇ ಘಟತ್ವವೆಂದು ಮುಂತಾಗಿ ಪ್ರತಿನಿಯತ ವ್ಯವಹಾರವು ಅವಿದ್ಯಾವಶದಿಂದಾಗುತ್ತದೆ' ಎಂದರೆ ಅದು ಸರಿಯಲ್ಲ. ಅವಿದ್ಯೆಯು ಶುಕ್ತಿಯಲ್ಲಿ ಆರೋಪಿತ ರಜತವಿಲ್ಲದಿದ್ದಾಗಲೂ ರಜತವೆಂದು ವ್ಯವಹಾರವನ್ನು ಉಂಟುಮಾಡುವುದಿಲ್ಲ. ಹೀಗಾಗಿ ನೀನು ಹೇಳುವಂತೆ ಪಟದಲ್ಲಿಯೂ ಘಟತ್ವವಿದ್ದರೆ ಘಟವೆಂದು ಅವಿದ್ಯೆಯು ವ್ಯವಹಾರವನ್ನುಂಟುಮಾಡಲಿ.

ಘಟಪಟಗಳ ತಾದಾತ್ಮ್ಯವನ್ನು ಪಾರಮಾರ್ಥಿಕವೆಂದು ಅಂಗೀಕರಿಸಿದಾಗ ಜೀವಬ್ರಹ್ಮರಂತೆ ಘಟಪಟಗಳಿಗೂ ಸ್ವರೂಪವು ಪಾರಮಾರ್ಥಿಕವೆಂದು ಅಂಗೀಕರಿಸಬೇಕಾದೀತು. ಇಲ್ಲದಿದ್ದರೆ ಘಟಪಟಗಳು ನಾಶವಾದಾಗ ಅವುಗಳ ಅಭೇದನಾಶವಾಗುವುದರಿಂದ

**'ಅಭೇದ ಮಾತ್ರ ಸತ್ಯ, ಪ್ರಪಂಚ ಮಿಥ್ಯಾ' ಎನ್ನುವ 'ವಾಚೋಯುಕ್ತಿ' ವಾಕ್ಯ ಪ್ರಯೋಗ ಅಯುಕ್ತವಾದೀತು ಎಂದು ಅನುಕೂಲತರ್ಕವನ್ನು ಇಲ್ಲಿ ತಿಳಿಯಬೇಕು.**

हेतुघटक चरमाधिकरणत्वं वास्तवमेव निविष्ठमित्याशयेन शङ्कते – **नन्विति** । व्यावहारिकसाधारणमधिकरणत्वमेव हेतुघटकमित्याशयेन समाधत्ते – **घटस्येति** । प्रातिभासिकानैकान्त्यं तु न दूषणमिति भावः । अन्यथा । घटस्य घटत्वं प्रति व्यावहारिकाधिकरणत्वानङ्गीकारे । **निरधिकरणत्वेनेति** । घटातिरिक्ते तादृशाधिकरणत्वस्यासम्भावितत्वादिति भावः । स्वसमानाधिकरणात्यन्ताभावप्रतियोगित्व स्वात्यन्ताभावसमानाधिकरणत्वयोरविशेषादाह – **स्वात्यन्ताभावेति** ।

ಹೇತುವಿನಲ್ಲಿ ಘಟಕವಾದ ಪ್ರತಿಯೋಗಿ ಧರ್ಮಾಧಿಕರಣತ್ವವು ವಾಸ್ತವವೇ ನಿವೇಶಿತವಾಗಿದೆ ಎಂಬ ಅಭಿಪ್ರಾಯದಿಂದ ಅಭೇದವಾದಿಯು ಶಂಕಿಸುತ್ತಾನೆ. ವ್ಯಾವಹಾರಿಕಸಾಧಾರಣವಾದ ಅಧಿಕರಣತ್ವವೇ ಹೇತುಘಟಕವಾಗಿದೆ ಎಂದು ಸಮಾಧಾನ ಹೇಳುತ್ತಾರೆ. ವ್ಯತಿರೇಕದೃಷ್ಟಾಂತದಲ್ಲಿ ಪ್ರತಿಯೋಗಿಧರ್ಮಕ್ಕೆ ಪ್ರಾತಿಭಾಸಿಕಾಧಿಕರಣತ್ವ ಬಂದರೆ ದೋಷವಿಲ್ಲ. ಪ್ರಾತಿಭಾಸಿಕ ಅನೈಕಾಂತ್ಯವು ದೋಷವಲ್ಲ. ಆದರಿಂದ ವ್ಯವಹಾರಿಕ ಅಧಿಕರಣತ್ವವನ್ನೇ ಹೇತುಘಟಕ ಮಾಡುತ್ತಾರೆ. ಅದು ವ್ಯತಿರೇಕ ದೃಷ್ಟಾಂತದಲ್ಲಿ ಬಂದಿದ್ದರೆ ವ್ಯಭಿಚಾರದೋಷ ಪ್ರಸಕ್ತಿ ಇತ್ತು. ಅದು ಬರುವುದಿಲ್ಲವಾದ್ದರಿಂದ ವ್ಯಭಿಚಾರವಿಲ್ಲ ಎಂದು ಭಾವ.

ಘಟಕ್ಕೆ ಘಟತ್ವದ ವ್ಯಾವಹಾರಿಕಾಧಿಕರಣತ್ವವನ್ನು ಅಂಗೀಕರಿಸದಿದ್ದರೆ ಘಟತ್ವಕ್ಕೆ ಅಧಿಕರಣತ್ವ ಘಟಿತವಾದ ಮಿಥ್ಯಾತ್ವಬಾರದೆ ಹೋದೀತೆಂದು ಆಪತ್ತಿ. ಏಕೆಂದರೆ ಘಟಕ್ಕೆ ಅಧಿಕರಣತ್ವವನ್ನು ಒಪ್ಪದಿದ್ದರೆ, ಘಟಾತಿರಿಕ್ತ ಪದಾರ್ಥಕ್ಕೆ ಘಟತ್ವಾಧಿಕರಣತ್ವ ಅಸಂಭಾವಿತವಾದ್ದರಿಂದ ಘಟತ್ವವು ನಿರಧಿಕರಣವೆನಿಸುತ್ತದೆ, ಸ್ವಾತ್ಯಂತಾಭಾವ ಸಮಾನಾಧಿಕರಣತ್ವರೂಪ ಮಿಥ್ಯಾತ್ವವಿಲ್ಲವಾಗುತ್ತದೆ ಎಂದು ಅಭಿಪ್ರಾಯ. ಯದ್ಯಪಿ ಸ್ವಸಮಾನಾಧಿಕರಣಾತ್ಯಂತಾಭಾವಪ್ರತಿಯೋಗಿತ್ವವು ಮಿಥ್ಯಾತ್ವ. ಆದರೂ ಅದಕ್ಕೂ ಸ್ವಾತ್ಯಂತಾಭಾವಸಮಾನಾಧಿಕರಣತ್ವಕ್ಕೂ ವಿಶೇಷವೇನಿಲ್ಲವಾದ್ದರಿಂದ ಸ್ವಾತ್ಯಂತಾಭಾವ ಸಮಾನಾಧಿಕರಣತ್ವರೂಪ ಮಿಥ್ಯಾತ್ವವೆಂದಿದ್ದಾರೆ.

अनवच्छिन्नान्तविशेषणमव्याप्यवृत्त्यभावमात्रवारकमिति मन्वानो दर्शयति – **नन्विति** । न च पटे पटत्वाधिकरणत्वस्यापि मिथ्यात्वेन

तदभावसत्त्वान्न व्यतिरेकव्यभिचार इति वाच्यम्। व्यतिरेकिणि प्रतियोगिव्यधिकरणसाधनाभावनिरूपितव्याप्तेरेव प्रयोजकत्वात्। पटे पटत्वाधिकरणत्वाभावस्य च प्रतियोगिसमानाधिकरणत्वात्। अन्यथा पृथिवीत्वाभावव्यापकाभावप्रतियोगिसंयोगवत्त्वेन जलादौ पृथिवीत्व-सिद्धिप्रसङ्गात्। अनवच्छिन्नान्तदानादेव नायं दोष इति समाधत्ते —**अत एवेति**। एतादृशदोषप्रसङ्गादपीत्यर्थः। हेतुर्हेतुघटकाभावः।

ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನತ್ವವಿಶೇಷಣವು ಕೇವಲ ಅವ್ಯಾಪ್ಯವೃತ್ತಿ ಸಂಯೋಗಾಭಾವಾದಿವಾರಣೆಗಾಗಿಯೆ ನಿವೇಶಿತವಾಗಿದೆ ಎಂದು ಬಗೆದು ಪೂರ್ವಪಕ್ಷಿಯು ಪಟದಲ್ಲಿ, ವ್ಯಭಿಚಾರವನ್ನು ತೋರಿಸುತ್ತಾನೆ. ಇಲ್ಲಿ ಪ್ರಶ್ನೆ— 'ಪಟದಲ್ಲಿ ಪಟತ್ವಾಧಿಕರಣತ್ವರೂಪ ಹೇತು ಬಂದರೂ ಅದು ಮಿಥ್ಯೆಯಾದ್ದರಿಂದ ಅದರ ಅಭಾವವೂ ಬರುವುದರಿಂದ ಸಾಧ್ಯಾಭಾವವೂ ಇದೆ, ಹೇತ್ವಭಾವವೂ ಇದೆ, ಎಂದು ವ್ಯತಿರೇಕ ಸಹಚಾರವಿದೆ, ವ್ಯತಿರೇಕ ವ್ಯಾಪ್ತಿಯ ಬಲದಿಂದ ಅನುಮಾನ ಬರಬಹುದು' ಎಂದು. ಅದಕ್ಕೆ ಹೇಳುತ್ತಾರೆ— ಈ ಹೇತ್ವಭಾವವು ಪ್ರತಿಯೋಗಿ ಸಮಾನಾಧಿಕರಣವಾಗಿದೆ ಹೊರತು ಪ್ರತಿಯೋಗಿ ವ್ಯಧಿಕರಣವಲ್ಲ. ಪ್ರತಿಯೋಗಿ ವ್ಯಧಿಕರಣವಾದ ಹೇತ್ವಭಾವದಿಂದಲೇ ಸಾಧ್ಯಾಭಾವಕ್ಕೆ ವ್ಯಾಪ್ತಿ ಗೃಹೀತವಾಗಬೇಕು. ಆಗಲೇ ಅನುಮಿತಿ ಬಂದೀತು. ಪ್ರಕೃತ, ಪಟದಲ್ಲಿರುವ ಪಟತ್ವಾಧಿಕರಣತ್ವಾಭಾವವು ಪ್ರತಿಯೋಗಿ ಸಮಾನಾಧಿಕರಣವಾಗಿದೆ. ಹೀಗೆ ಹೇಳದಿದ್ದರೆ ಜಲಾದಿ ಪಕ್ಷದಲ್ಲಿ ಸಂಯೋಗಿತ್ವ ಹೇತುವಿನಿಂದ ಪೃಥಿವೀತ್ವ ಸಿದ್ಧಿಪ್ರಸಂಗವಿದೆ. ಏಕೆಂದರೆ ಪೃಥಿವೀತ್ವಾಭಾವವ್ಯಾಪಕವು ಸಂಯೋಗಾಭಾವ. ಅದರಿಂದ ಸಂಯೋಗಕ್ಕೆ ಪೃಥಿವೀತ್ವದಿಂದ ವ್ಯತಿರೇಕವ್ಯಾಪ್ತಿ ಇದೆ. ಈ ದೋಷ ಪರಿಹಾರದ ಉದ್ದೇಶದಿಂದಲೂ ಪ್ರತಿಯೋಗಿ ಸಾಮಾನಾಧಿ ಕರಣ್ಯಾವಚ್ಛೇದಕಾನವಚ್ಛಿನ್ನತ್ವ ವಿಶೇಷಣವನ್ನು ಅತ್ಯಂತಾಭಾವದಲ್ಲಿ ಸೇರಿಸಿದ್ದಾರೆ. 'ಅತ ಏವ' 'ಈ ಕಾರಣದಿಂದಲೇ' ಎಂದು ಹೇಳಿದರೂ 'ಈ ಕಾರಣದಿಂದಲೂ ಕೂಡ' ಎಂದು ಅಭಿಪ್ರಾಯ. ಅವ್ಯಾಪ್ಯವೃತ್ತಿ ಸಂಯೋಗಾದ್ಯಭಾವ ವಾರಣೆಯೂ ಈ ವಿಶೇಷಣದಿಂದಲೇ ಆಗುತ್ತದೆ. 'ಹೇತುವು ವಿಶೇಷಿತವಾಗಿದೆ' ಎಂದರೆ ಹೇತುಘಟಕವಾದ ಅಭಾವವು ವಿಶೇಷಿತವಾಗಿದೆ ಎಂದರ್ಥ.

**प्रतियोगीति**। अथैवं पटत्वाद्यभावस्यापि घटादौ प्रतियोगिसमानाधिकरणत्वेन प्रतियोगिसामानाधिरण्यावच्छेदकानव-च्छिन्नाभावाप्रसिद्धिरिति चेदत्राहुः। प्रतियोगिसामानाधिकरण्यस्य निरूपकतया यदवच्छेदकं तदनवच्छिन्नपटवृत्तिकात्यन्ताभाव-

**प्रतियोगिधर्मवत्त्वं विवक्षितम् । घटत्वाद्यभावश्च पटादौ तादृश इति नाप्रसिद्धिरिति । तदसत् । प्रतियोग्यधिकरणस्य प्रतियोगिसामानाधिकरण्यावच्छेदकत्वेन निवेशने बीजाभावात् ।**

ಇಲ್ಲಿ ಘಟತ್ವಾಭಾವವೂ ಕೂಡ ಘಟದಲ್ಲಿ ಪ್ರತಿಯೋಗಿ ಸಮಾನಾಧಿಕರಣವೇ ಆಗಿರುವುದರಿಂದ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನ ಅಭಾವವೇ ಅಪ್ರಸಿದ್ಧ ಎಂಬ ಸಮಸ್ಯೆ ಬರುತ್ತದೆ. ಇದಕ್ಕೆ ಕೆಲವರ ಸಮಾಧಾನ ಹೀಗೆ— 'ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕ' ಎಂದರೆ ಹೀಗೆ ಅರ್ಥ- ಪ್ರತಿಯೋಗಿ ಸಾಮಾನಾಧಿಕರಣ್ಯವೆಂದರೆ ಪ್ರತಿಯೋಗ್ಯಧಿಕರಣ ನಿರೂಪಿತ ಆಧೇಯತ್ವ. ಅದಕ್ಕೆ ನಿರೂಪಕವು ಅಧಿಕರಣ. ಹೀಗೆ ನಿರೂಪಕವಾಗಿ ಅವಚ್ಛೇದಕವಾಗುವುದು ಪ್ರತಿಯೋಗ್ಯಧಿಕರಣ. 'ತದನವಚ್ಛಿನ್ನ' ಎಂದರೆ 'ತದವೃತ್ತಿಕ'ವಾಗಿರಬೇಕು. ಪಟನಿಷ್ಠಾತ್ಯಂತಾಭಾವ ಎಂದರ್ಥ. ಘಟತ್ವಾಭಾವವು ಘಟದಲ್ಲಿ ಪ್ರತಿಯೋಗಿಸಮಾನಾಧಿಕರಣವಾದರೂ ಪಟದಲ್ಲಿ ಅದು ಪ್ರತಿಯೋಗಿಸಮಾನಾಧಿಕರಣವಲ್ಲ. ಪ್ರತಿಯೋಗ್ಯಧಿಕರಣ ಘಟಾವೃತ್ತಿಕವಾಗಿದೆ. ಹೀಗಾಗಿ ಪ್ರತಿಯೋಗಿಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನ–ಪಟನಿಷ್ಠ–ಘಟತ್ವಾತ್ಯಂತಾಭಾವ ಪ್ರತಿಯೋಗಿ ಘಟತ್ವರೂಪ ಧರ್ಮಾಧಿಕರಣತ್ವವು ಘಟದಲ್ಲಿ ಬರುತ್ತದೆ. ಅಪ್ರಸಿದ್ಧಿ ದೋಷ ಬರುವುದಿಲ್ಲ' ಎನ್ನುತ್ತಾರೆ.

ಇದು ಸರಿಯಲ್ಲ. ಪ್ರತಿಯೋಗಿಸಾಮಾನಾಧಿಕರಣ್ಯಾವಚ್ಛೇದಕವೆಂದರೆ ಪ್ರತಿಯೋಗ್ಯಧಿಕರಣವೇ ಎಂದಿದ್ದಾರೆ. ಪ್ರತಿಯೋಗ್ಯಧಿಕರಣವನ್ನು ಪ್ರತಿಯೋಗ್ಯಧಿಕರಣವೆಂದೇ ನಿವೇಶ ಮಾಡದೆ, ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕವೆಂದು ನಿವೇಶ ಮಾಡಲು ಕಾರಣವೇನಿಲ್ಲ.

**यत्तु प्रतियोगिसामानाधिकरण्यावच्छेदकानवच्छिन्नेत्यस्य प्रतियोग्यनधिरणत्वेन पटविशेषणे तात्पर्यान्नाप्रसिद्धिरिति । तच्चिन्त्यम् । तथासति प्रतियोग्यनधिकरणेत्यनुक्त्वा प्रतियोगिसामानाधिकरण्यावच्छेदकानवच्छिन्नेत्युक्तौ बीजाभावप्रसङ्गात् । अव्याप्यवृत्त्यधिकरणत्वस्याव्याप्यवृत्तित्वे संयोगमादायानैकान्त्याच्च ।**

ಕೆಲವರು 'ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನ' ಎಂದು ಪಟನಿಷ್ಠಾತ್ಯಂತಾಭಾವಕ್ಕೆ ವಿಶೇಷಣ ನೀಡಿದ್ದರೂ ಅದರ ಅಭಿಪ್ರಾಯ ಪಟದಲ್ಲಿಯೇ ಪ್ರತಿಯೋಗ್ಯನಧಿಕರಣತ್ವ ವಿಶೇಷಣ ಕೊಡಬೇಕು ಎಂದು. ಅದರಿಂದ ಅಪ್ರಸಿದ್ಧಿ ಇಲ್ಲ ಎನ್ನುತ್ತಾರೆ. ಆದರೆ 'ಪ್ರತಿಯೋಗ್ಯನಧಿಕರಣ ಪಟ'ವೆಂದು ಸ್ಪಷ್ಟ ಹೇಳುವುದನ್ನು ಬಿಟ್ಟು 'ಪ್ರತಿಯೋಗಿ ಸಾಮಾನಾಧಿಕರಣ್ಯಾ

ವಚ್ಛೇದಕಾನವಚ್ಛಿನ್ನ ಪಟನಿಷ್ಠಾತ್ಯಂತಾಭಾವ' ಎಂದು ಹೇಳುವುದಕ್ಕೆ ಕಾರಣವಿಲ್ಲ. ಅವ್ಯಾಪ್ಯವೃತ್ತ್ಯಧಿಕರಣತ್ವವೂ ಅವ್ಯಾಪ್ಯವೃತ್ತಿಯೆ ಎನ್ನುವ ಪಕ್ಷದಲ್ಲಿ ಸಂಯೋಗವನ್ನಿಟ್ಟುಕೊಂಡು ವ್ಯಭಿಚಾರ ಹೇಳುವ ಪ್ರಸಂಗವೂ ಉಂಟು. ಪಟದಲ್ಲಿ ಸಂಯೋಗರೂಪ ಪ್ರತಿಯೋಗ್ಯಧಿಕರಣತ್ವವಿದ್ದರೂ ಅದು ಸಂಯೋಗದಂತೆಯೇ ಅವ್ಯಾಪ್ಯವೃತ್ತಿಯಾದ್ದರಿಂದ ಪ್ರತಿಯೋಗ್ಯನಧಿಕರಣತ್ವವೂ ಪಟದಲ್ಲಿ ಇದೆ ಎಂದಿಟ್ಟುಕೊಂಡು ಪ್ರತಿಯೋಗ್ಯನಧಿಕರಣವಾದ ಪಟದಲ್ಲಿರುವ ಸಂಯೋಗಾಭಾವ ಪ್ರತಿಯೋಗಿ ಸಂಯೋಗವು ಪಟದಲ್ಲಿದೆ ಎಂದು ವ್ಯಭಿಚಾರವನ್ನೂ ಹೇಳಬಹುದು.

ಆದರಿಂದ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನತ್ವ ವಿಶೇಷಣಕ್ಕೆ ಹಿಂದೆ ನಾವು ಹೇಳಿದ ವಿವರಣೆಯನ್ನೇ ಕೊಡಬೇಕು.

**वस्तुतस्तु परमते अभावानामधिकरणात्मकत्वात् घटनिष्ठघटत्वाभावस्य प्रतियोगिसामानाधिकरण्यावच्छेदकावच्छिन्नत्वेऽपि पटनिष्ठाभावस्य तदनवच्छिन्नत्वमव्याहतमेव । न च प्रतियोगिसामानाधिकरण्यावच्छेदकीभूतघटत्वाभावत्वस्यैक्यान्न पटनिष्ठाभावस्य तदनवच्छिन्नत्वसम्भव इति वाच्यम् । अनुयोगिताविशेषरूपाभावत्वस्याभावभेदेन भिन्नत्वात् ।**

ಘಟತ್ವಾಭಾವವು ಘಟದಲ್ಲಿ ಪ್ರತಿಯೋಗಿ ಸಮಾನಾಧಿಕರಣವೇ ಆಗುವುದರಿಂದ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನವಾದ ಅಭಾವ ಅಪ್ರಸಿದ್ಧ ಎನ್ನುವ ದೋಷಕ್ಕೆ ಪರಿಹಾರವನ್ನು ಹೀಗೆ ಹೇಳಬೇಕು— ಅಭೇದ ಮತದಲ್ಲಿ ಅಭಾವಗಳು ಅಧಿಕರಣಾತ್ಮಕವಾದ್ದರಿಂದ, ಅಧಿಕರಣಭೇದೇನ ಅಭಾವಭೇದವನ್ನು ಅಂಗೀಕರಿಸಿರುವುದರಿಂದ, ಘಟನಿಷ್ಠ ಘಟತ್ವಾತ್ಯಂತಾಭಾವವು ಪ್ರತಿಯೋಗಿ ಸಮಾನಾಧಿಕರಣವಾದರೂ ಪಟನಿಷ್ಠ ಘಟತ್ವಾತ್ಯಂತಾಭಾವವು ಪ್ರತಿಯೋಗಿ ಸಮಾನಾಧಿಕರಣವಲ್ಲ, ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾವಚ್ಛಿನ್ನವಲ್ಲ. ಅನವಚ್ಛಿನ್ನವೇ ಆಗಿದೆ. ಆದರಿಂದ ಅಪ್ರಸಿದ್ಧಿಗೆ ಅವಕಾಶವಿಲ್ಲ.

ಆದರೂ 'ಘಟದಲ್ಲಿ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕವಾದ ಘಟತ್ವಾಭಾವತ್ವವೇ ಪಟನಿಷ್ಠ ಘಟತ್ವಾಭಾವದಲ್ಲಿರುವುದರಿಂದ ಪಟನಿಷ್ಠ ಘಟತ್ವಾಭಾವವು ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾವಚ್ಛಿನ್ನವೇ ಆಯಿತು. ಅನವಚ್ಛಿನ್ನವಾಗಲಿಲ್ಲ, ಅಪ್ರಸಿದ್ಧಿ ಪರಿಹಾರವಾಗಿಲ್ಲ' ಎನ್ನುವ ಶಂಕೆ ಬರಬಹುದು. ಅದಕ್ಕೆ ಹೀಗೆ ಹೇಳಬೇಕು—'ಪಟನಿಷ್ಠ ಘಟತ್ವಾತ್ಯಂತಾಭಾವದಲ್ಲಿರುವ ಘಟತ್ವಾಭಾವತ್ವವೇ ಬೇರೆ, ಘಟನಿಷ್ಠ ಘಟತ್ವಾತ್ಯಂತಾಭಾವದಲ್ಲಿರುವ ಘಟತ್ವಾಭಾವತ್ವವೇ ಬೇರೆ. ಅನುಯೋಗಿತಾ ವಿಶೇಷ ರೂಪವಾದ ಅಭಾವತ್ವವು ಅಭಾವಭೇದೇನ ಭಿನ್ನವಾಗಿರುತ್ತದೆ. ಆದರಿಂದ ಪಟನಿಷ್ಠಾಭಾವವು ಘಟನಿಷ್ಠಾಭಾವದಲ್ಲಿರುವ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕವಾದ ಅಭಾವತ್ವದಿಂದ ಅವಚ್ಛಿನ್ನವಾಗುವುದಿಲ್ಲ. ಅನವಚ್ಛಿನ್ನವೇ ಆಗುತ್ತದೆ' ಎಂದು.

ಇನ್ನು ಅಭೇದವಾದಿಯು ಹೇಳಬಹುದು. ಭೇದ ಮತದಲ್ಲಿ ಅಭಾವಭೇದೇನ ಅಭಾವತ್ವವು ಭಿನ್ನ ಎನ್ನಲಿ, ನಾವು ಅಭೇದಮತದವರು ಘಟಪಟಗಳಿಗೆ ಅಭೇದವನ್ನು ಅಂಗೀಕರಿಸಿರುವುದರಿಂದ ಅಧಿಕರಣಸ್ವರೂಪವಾದ ಅಭಾವಗಳಿಗೂ ಅಭೇದವೆ, ಅಭಾವತ್ವಗಳಿಗೂ ಅಭೇದವೆ, ಆದರಿಂದ ಅಪ್ರಸಿದ್ಧಿ ಪರಿಹಾರವಾಗಿಲ್ಲ' ಎಂದು. ಅದಕ್ಕೆ ಇಲ್ಲಿಯೇ ಮುಂದೆ ಹೇಳುವಂತೆ 'ಪಾರಮಾರ್ಥಿಕವಾಗಿ ಅಭೇದವಿದ್ದರೂ ವ್ಯಾವಹಾರಿಕ ಭೇದವಿರುವುದರಿಂದ ಘಟಪಟಗಳಿಗೂ ತತ್ಸ್ವರೂಪವಾದ ಅಭಾವಗಳಿಗೂ ಅಭಾವತ್ವಗಳಿಗೂ ಭೇದವಿಟ್ಟುಕೊಂಡೇ ಅನುಮಾನ ಪ್ರಯೋಗ ಮಾಡುತ್ತೇವೆ, ಆದರಿಂದ ಅಪ್ರಸಿದ್ಧಿ ದೋಷಕ್ಕೆ ಅವಕಾಶವಿಲ್ಲ' ಎಂದು ನಾವು ಹೇಳಬೇಕು.

**अथवा प्रतियोगिसामानाधिकरण्यरूपं यदवच्छेदकम्, विशेषणं तदनवच्छिन्नत्वं तद्विशिष्टभिन्नत्वमिति यावत्। तदुपलक्षितभिन्नत्वस्य परमते पटवृत्तित्वविशिष्टघटत्वाभावादावभावेऽपि तद्विशिष्टभिन्नत्वमक्षतमेव। पटवृत्तित्वविशिष्टसंयोगाद्यभावे च न प्रतियोगिसामानाधिकरण्यविशिष्ट-भिन्नत्वमिति न कश्चिद्दोषः।**

ಅಭಾವಗಳಿಗೆ ಅಧಿಕರಣಾತ್ಮಕತ್ವೇನ ಭೇದವಿಟ್ಟುಕೊಳ್ಳದೆಯೆ ಇನ್ನೊಂದು ಬಗೆಯೂ ಸುಲಭವಾದ ವಿವರಣೆ ನೀಡಲು ಶಕ್ಯವಿದೆ— 'ಪ್ರತಿಯೋಗಿಸಾಮಾನಾಧಿಕರಣ್ಯರೂಪವಾದ ಅವಚ್ಛೇದಕ, ಅಂದರೆ ವಿಶೇಷಣವೇನಿದೆಯೋ ಅದರಿಂದ ಅನವಚ್ಛಿನ್ನ, ಅಂದರೆ ವಿಶಿಷ್ಟ ಭಿನ್ನ ಎಂದು ವಿವರಣೆ. ಈಗ, ಪಟವೃತ್ತಿತ್ವ ವಿಶಿಷ್ಟ ಘಟತ್ವಾಭಾವದಲ್ಲಿ ಪ್ರತಿಯೋಗಿಸಾಮಾನಾಧಿಕರಣ್ಯವಿಲ್ಲದಿದ್ದರೆ ಪ್ರತಿಯೋಗಿಸಾಮಾನಾಧಿಕರಣ್ಯರೂಪವಿಶೇಷಣದಿಂದ 'ಉಪಲಕ್ಷಿತ ಭಿನ್ನತ್ವ' ಬಾರದಿದ್ದರೂ 'ವಿಶಿಷ್ಟ ಭಿನ್ನತ್ವ' ಬಂದೇ ಬರುತ್ತದೆ. ಉಪಲಕ್ಷಿತ ಭಿನ್ನತ್ವ ಬಾರದಿರುವುದರಿಂದ 'ಅವಚ್ಛೇದಕಾನವಚ್ಛಿನ್ನ' 'ವಿಶೇಷಣವಿಶಿಷ್ಟಭಿನ್ನ' ಎಂದು ವಿಶೇಷಣ ಕೊಟ್ಟಿದ್ದು ಸಾರ್ಥಕ. 'ಪ್ರತಿಯೋಗ್ಯಸಮಾನಾಧಿಕರಣ' ಎಂದಿಷ್ಟೇ ಹೇಳಿದ್ದರೆ ಈ ಅರ್ಥ ಸಿಗುತ್ತಿರಲಿಲ್ಲ. ವಿಶಿಷ್ಟಭಿನ್ನತ್ವವಿಶೇಷಣ ಹಾಕಿದ್ದರಿಂದ, ಅವ್ಯಾಪ್ಯವೃತ್ತಿ ಸಂಯೋಗಾದ್ಯಭಾವವಿಟ್ಟುಕೊಂಡು ಪಟದಲ್ಲಿ ವ್ಯಭಿಚಾರ ಹೇಳಲೂ ಬರುವುದಿಲ್ಲ. ಏಕೆಂದರೆ ಪಟವೃತ್ತಿತ್ವವಿಶಿಷ್ಟಸಂಯೋಗಾಭಾವದಲ್ಲಿ ಪ್ರತಿಯೋಗಿ ಸಾಮಾನಾಧಿಕರಣ್ಯವಿಶಿಷ್ಟಭಿನ್ನತ್ವ ವಿಲ್ಲ'

**परमते प्रतियोगिसामानाधिकरण्यावच्छेदकानवच्छिन्नाभावाप्रसिद्धि-रित्याशङ्कते — ननु तर्हीति।** घटपटयोरभेदं वदताऽपि त्वया, पटे घटत्वात्यन्ताभावस्य प्रतियोग्यसमानाधिकरणघटत्वाभावत्वस्याङ्गीकार्यत्वा-दिति सम्बन्धः। ननु घटपटयोरभेदे घटत्वाभावस्य पटे प्रतियोग्य-

सामानाधिकरण्यमेव कथमुपपद्यत इत्याशङ्क्योक्तम् – **घटपटयोर्व्यावहारिकभेदमात्रेणेति** । अत्र दृष्टान्तः – **बिम्बेति** । यथा बिम्बप्रतिबिम्बयोः स्वरूपैक्येऽपि, व्यावहारिकभेदबलाद् बिम्बस्यैव बिम्बत्वं सत्त्वं च, प्रतिबिम्बस्यैव प्रतिबिम्बत्वमसत्त्वं चेति व्यवस्था, तथा घटस्यैव घटत्वम्, न तु पटस्येत्यङ्गीकार्यमिति भावः ।

'ಅಭೇದಮತದಲ್ಲಿ ಪ್ರತಿಯೋಗಿ ಸಾಮಾನಾಧಿಕರಣ್ಯಾವಚ್ಛೇದಕಾನವಚ್ಛಿನ್ನಾಭಾವವು ಅಪ್ರಸಿದ್ಧ' ಎಂಬ ಶಂಕೆಯನ್ನು ತೋರಿಸುತ್ತಾರೆ.

ಘಟಪಟಗಳಿಗೆ ಅಭೇದವನ್ನು ಹೇಳುವ ನೀನೂ ಕೂಡ ಪಟದಲ್ಲಿ ಘಟತ್ವಾತ್ಯಂತಾಭಾವವನ್ನು, ಅಂದರೆ ಪ್ರತಿಯೋಗ್ಯಸಮಾನಾಧಿಕರಣವಾದ ಘಟತ್ವಾಭಾವವನ್ನು ಒಪ್ಪಲೇಬೇಕು ಎಂದು ಅನ್ವಯ.

ಘಟಪಟಗಳಿಗೆ ಅಭೇದವಿದ್ದರೆ ಪಟದಲ್ಲಿ ಘಟತ್ವಾಭಾವಕ್ಕೆ ಪ್ರತಿಯೋಗ್ಯಸಾಮಾನಾಧಿಕರಣ್ಯವೇ ಹೇಗೆ ಕೂಡುತ್ತದೆ ಎಂದು ಪ್ರಶ್ನೆ ಮಾಡಿಕೊಂಡು ಘಟಪಟಗಳಿಗೆ ವ್ಯಾವಹಾರಿಕ ಭೇದ ಮಾತ್ರದಿಂದ ಕೂಡುತ್ತದೆ ಎನ್ನುತ್ತಾರೆ. ಈ ವಿಷಯದಲ್ಲಿ ದೃಷ್ಟಾಂತಗಳನ್ನು ಕೊಡುತ್ತಾರೆ. ಬಿಂಬ ಪ್ರತಿಬಿಂಬಗಳಿಗೆ ಸ್ವರೂಪೈಕ್ಯ ಒಪ್ಪಿದ್ದರೂ ವ್ಯಾವಹಾರಿಕ ಭೇದಬಲದಿಂದ ಬಿಂಬಕ್ಕೇ ಬಿಂಬತ್ವ ಸತ್ಯತ್ವಗಳು, ಪ್ರತಿಬಿಂಬಕ್ಕೇ ಪ್ರತಿಬಿಂಬತ್ವ ಅಸತ್ಯತ್ವಗಳು ಎಂಬ ವ್ಯವಸ್ಥೆಗಳನ್ನು ಒಪ್ಪಿರುವುದರಿಂದ ಅದರಂತೇ ಘಟದಲ್ಲಿಯೇ ಘಟತ್ವ, ಪಟದಲ್ಲಿ ಅದು ಇಲ್ಲ ಎನ್ನುವ ವ್ಯವಸ್ಥೆ ಒಪ್ಪಬೇಕಾಗುತ್ತದೆ ಎಂದು ಅಭಿಪ್ರಾಯ.

**ಪಟದಲ್ಲಿ ಘಟವ್ಯವಹಾರವನ್ನು ಅವಿದ್ಯೆ ತಡೆಯಲಾರದು**

ननु घटवत् पटेऽपि घरत्वमङ्गीक्रियत एव । न चैवं 'घट एव घटव्यवहारो न पट' इति व्यवस्थानुपपत्तिरिति वाच्यम् । अविद्यासामर्थ्येन तदुपपत्तेरित्याशङ्कते – **घटत्वस्येति** । तथा चोक्तहेत्वप्रसिद्धितादवस्थ्यमिति भावः । विषयनिरपेक्षाविद्यायाः साक्षात्तादृशव्यवहारनियामकत्वमसिद्धमित्याह – **न हीति** । अन्यथाऽऽविद्यकविषयवैयर्थ्यप्रसङ्गात् विषयसम्पादनद्वारैव तस्यास्तादृशव्यवहारनियामकत्वमङ्गीकार्यमिति भावः । ततः प्रकृते किमित्यत आह –

**तथात्व इति । विषयसम्पादनद्वारा व्यवहारनिर्वाहकत्वे चेत्यर्थः । पटेऽपि तं जनयेदिति । पटे घटत्वरूपविषयसत्त्वादविद्या तद्व्यवहारं जनयेदित्यर्थः ।**

'ಘಟದಲ್ಲಿ ಹೇಗೋ ಹಾಗೆ ಪಟದಲ್ಲಿಯೂ ಘಟತ್ವವನ್ನು ನಾವು ಒಪ್ಪುತ್ತೇವೆ. ಹಾಗಾದರೆ 'ಘಟವನ್ನೇ ಘಟ ಎನ್ನಬೇಕು ಪಟವನ್ನಲ್ಲ' ಎಂಬ ವ್ಯವಸ್ಥೆ ಹೇಗೆ? ಎಂದರೆ ಅವಿದ್ಯಾ ಸಾಮರ್ಥ್ಯದಿಂದ ಅದು ಕೂಡುತ್ತದೆ ಎನ್ನುತ್ತೇವೆ' ಎಂದು ಆಶಂಕಾ ಮಾಡಿಕೊಂಡು, ಹೀಗಾಗಿ ಹಿಂದೆ ಹೇಳಿದ ಹೇತ್ವಪ್ರಸಿದ್ಧಿ ದೋಷ ಪರಿಹೃತವಾಗಿಲ್ಲ ಎಂದು ಆಕ್ಷೇಪವನ್ನು ತೋರಿಸುತ್ತಾರೆ.

ಅದಕ್ಕೆ ಸಮಾಧಾನವಾಗಿ ಹೀಗೆ ಹೇಳುತ್ತಾರೆ— ಅವಿದ್ಯೆಯು ವ್ಯವಹಾರಕ್ಕೆ ವಿಷಯವನ್ನು ಸಿದ್ಧಮಾಡಿಕೊಂಡು ಆ ಮೂಲಕ ವ್ಯವಹಾರವನ್ನು ಉಂಟುಮಾಡುವುದು ಹೊರತು ವಿಷಯ ನಿರಪೇಕ್ಷವಾಗಿ ಸಾಕ್ಷಾತ್ತಾಗಿ ವ್ಯವಹಾರವನ್ನು ನಿಯಂತ್ರಣ ಮಾಡುವುದಿಲ್ಲ. ಹೀಗೆ ಹೇಳದಿದ್ದರೆ ಆವಿದ್ಯಕವಾದ ವ್ಯವಹಾರವಿಷಯವನ್ನು ಒಪ್ಪಿದ್ದು ವ್ಯರ್ಥವಾದೀತು. ಮೊದಲಿಗೆ ವ್ಯವಹಾರ ವಿಷಯವನ್ನು ಕಲ್ಪನೆಯಿಂದ ಸಿದ್ಧ ಮಾಡಿಯೇ ಅದರ ಮೂಲಕ ಅವಿದ್ಯೆಯು ವ್ಯವಹಾರ ನಿಯಾಮಕವಾಗುತ್ತದೆ ಎಂದು ಅಭೇದವಾದಿಯು ಒಪ್ಪಬೇಕು ಎಂದು ಅಭಿಪ್ರಾಯ. ಅದರಿಂದ ಪ್ರಕೃತ ಏನಾಯಿತೆಂದು ಹೇಳುತ್ತಾರೆ— 'ತಥಾತ್ವೇ' ವಿಷಯಸಂಪಾದನ ದ್ವಾರಕವಾಗಿಯೇ ಅವಿದ್ಯೆಯು ವ್ಯವಹಾರ ನಿರ್ವಾಹಮಾಡುತ್ತದೆ ಎಂದು ಅಭೇದವಾದಿಯು ಒಪ್ಪಿರುವಾಗ ಪಟದಲ್ಲಿಯೂ ಘಟತ್ವವಿದೆ ಎನ್ನುವ ಪಕ್ಷದಲ್ಲಿ ಘಟವ್ಯವಹಾರವಿಷಯವಿರುವುದರಿಂದ ಪಟದಲ್ಲಿ ಘಟವ್ಯವಹಾರ ಉಂಟು ಮಾಡಬೇಕಾದೀತು' ಎಂದು.

**यत्तु तथात्वे आरोपितरजताभावेऽप्यविद्यायाः रजतव्यवहारजनकत्वे, पटेऽपि रजतव्यवहारं जनयेदिति व्याख्यानं तदसत् । अविद्यासामर्थ्यात् पटे घटव्यवहारं परिहरन्तं प्रति पटे रजतव्यवहारापादनायोगात् । घटरजतयोरविशेषात् ।**

ಇಲ್ಲಿ ಕೆಲವರ ವ್ಯಾಖ್ಯಾನ ಹೀಗಿದೆ— 'ಆರೋಪಿತ ರಜತವಿಲ್ಲದೆಯೂ ಅವಿದ್ಯೆಯು ಶುಕ್ತಿಯಲ್ಲಿ ರಜತವ್ಯವಹಾರವನ್ನುಂಟುಮಾಡುವುದಾದರೆ ಪಟದಲ್ಲಿಯೂ ರಜತವ್ಯವಹಾರ ಉಂಟು ಮಾಡಲಿ' ಎಂದು. ಈ ವ್ಯಾಖ್ಯಾನ ಸರಿಯಲ್ಲ. ಅವಿದ್ಯಾಸಾಮರ್ಥ್ಯದಿಂದ ಪಟದಲ್ಲಿ ಘಟವ್ಯವಹಾರವಿಲ್ಲವಾಗಿದೆ ಎನ್ನುವ ಅಭೇದವಾದಿಗೆ 'ಪಟದಲ್ಲಿ ಕೂಡ ರಜತವ್ಯವಹಾರವನ್ನು ಅವಿದ್ಯೆ ಉಂಟುಮಾಡಲಿ' ಎಂದು ಆಪಾದನೆ ಮಾಡುವುದು ಕೂಡಲಾರದು. ಘಟರಜತಗಳಿಗೆ ಏನೂ ವ್ಯತ್ಯಾಸವಿಲ್ಲ.

**अथ शुक्तौ रजतारोपदशायां शुक्तित्वरूपविषयसत्त्वेऽपि तदव्यवहारवत्, पटे घटत्वसत्त्वेऽपि तदव्यवहार उपपद्यतामिति चेन्न । शुक्तौ विरोध्यारोपेण शुक्तित्वव्यवहारप्रतिबन्धसम्भवात् । पटे च विरोध्यारोपाभावदशायां घटत्वव्यवहारस्यापादनीयत्वात् ।**

ಶುಕ್ತಿಯಲ್ಲಿ ರಜತಾರೋಪಮಾಡಿದಾಗಲೂ ಶುಕ್ತಿತ್ವರೂಪ ವ್ಯವಹಾರವಿಷಯವು ಶುಕ್ತಿಯಲ್ಲಿ ಇದ್ದೇ ಇದೆ. ಆದರೂ ಅದರ ವ್ಯವಹಾರವಿಲ್ಲ, ಹಾಗೇ ಪಟದಲ್ಲಿ ಘಟತ್ವವಿದ್ದರೂ ಅದರ ವ್ಯವಹಾರವಿಲ್ಲದಿರುವುದು ಕೂಡುತ್ತದೆ ಎಂದೇಕೆ ಹೇಳಬಾರದು? ಎಂದರೆ ಇದು ಸರಿಯಲ್ಲ. ಶುಕ್ತಿಯಲ್ಲಿ ಶುಕ್ತಿತ್ವ ವ್ಯವಹಾರಕ್ಕೆ ವಿರೋಧಿಯಾದ ರಜತಾರೋಪವಿರುವುದರಿಂದ, ಅದರಿಂದ ಶುಕ್ತಿತ್ವ ವ್ಯವಹಾರವು ಪ್ರತಿಬದ್ಧವಾಗಿದೆ ಎನ್ನಲು ಶಕ್ಯವಿದೆ. ಪಟದಲ್ಲಿ ಘಟತ್ವವ್ಯವಹಾರಕ್ಕೆ ವಿರೋಧಿಯಾದ ಆರೋಪವಿಲ್ಲದಾಗಲೆ ಘಟತ್ವ ವ್ಯವಹಾರ ಬರಲೆಂದು ಆಪಾದನೆ ಮಾಡುತ್ತಿದ್ದೇವೆ.

**न च अविद्यासामर्थ्यादेव तत्र तत्प्रतिबन्धोऽस्त्विति वाच्यम् । पटे घटत्वकल्पकाविद्यायास्तद्व्यवहारविरोधित्वायोगात् । पटे घटत्वं परिकल्प्याविद्यायास्तद्व्यवहारविरोधित्वकल्पनस्य प्रक्षालनाद्धीति न्यायेनानुचितत्वाच्च ।**

ಅವಿದ್ಯಾಸಾಮರ್ಥ್ಯದಿಂದಲೇ ಘಟತ್ವವ್ಯವಹಾರ ಪ್ರತಿಬದ್ಧವಾಯಿತೆನ್ನೋಣ ಎಂದರೆ, ಪಟದಲ್ಲಿ ಘಟತ್ವವ್ಯವಹಾರಕ್ಕಾಗಿ ಘಟತ್ವಕಲ್ಪನೆ ಮಾಡಿರುವ ಅವಿದ್ಯೆ ತಾನೇ ಘಟತ್ವವ್ಯವಹಾರವನ್ನು ಪ್ರತಿಬಂಧಿಸುವುದು ಕೂಡಲಾರದು. ಅವಿದ್ಯೆಯು ಪಟದಲ್ಲಿ ಘಟತ್ವವನ್ನು ಕಲ್ಪಿಸಿ ಅದರ ವ್ಯವಹಾರವನ್ನು ತಾನೇ ತಡೆಯುವುದೆಂದರೆ 'ಪ್ರಕ್ಷಾಲನಾದ್ಧಿ' ನ್ಯಾಯದಂತೆ ಅನುಚಿತವಾಗುವುದು. ಕೆಸರನ್ನು ಸ್ಪರ್ಶಿಸುವುದೇಕೆ, ಸ್ಪರ್ಶಿಸಿ ಪ್ರಕ್ಷಾಳನ ಮಾಡುವುದೇಕೆ? ಮೊದಲೇ ಸ್ಪರ್ಶಿಸದಿದ್ದರಾಗದೆ? ಹಾಗೇ ಅವಿದ್ಯೆಯು ಪಟದಲ್ಲಿ ಘಟವ್ಯವಹಾರ ವಿಷಯವನ್ನು ಕಲ್ಪಿಸುವುದೇಕೆ? ಕಲ್ಪಿಸಿ ವ್ಯವಹಾರವನ್ನು ತಡೆಯುವುದೇಕೆ? ಮೊದಲೇ ವ್ಯವಹಾರ ವಿಷಯವನ್ನು ಕಲ್ಪಿಸದೇ ಇರಬಾರದೆ? ಎಂದು.

**स्यादेतत् । उक्तानुमानेऽसिद्ध्यादिवारणेऽपि विपक्षे बाधकाभावाद-प्रयोजकत्वं दुर्वारमत आह –घटपटयोरिति । यदि घटपटयोर्भेदः पारमार्थिको न स्यात्तदा तदभेदः पारमार्थिकः स्यात् । ततश्च तयोरपि**

पारमार्थिकत्वप्रसङ्गः । अन्यथा घटपटनिवृत्तौ तदभेदस्यापि निवृत्त्यापत्तिरिति भावः ।

ಮೇಲೆ ಹೇಳಿದ ಜಡಭೇದಾನುಮಾನದಲ್ಲಿ ಅಸಿದ್ಧ್ಯಾದಿ ದೋಷ ವಾರಣ ಮಾಡಿದರೂ ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಅನುಮಾನ ಅಪ್ರಯೋಜಕ, ಜಡಭೇದವನ್ನು ಸಾಧಿಸಲಾರದು, ಎಂದರೆ ಹೇಳುತ್ತಾರೆ— 'ಘಟಪಟಗಳಿಗೆ ಭೇದವು ಪಾರಮಾರ್ಥಿಕವಲ್ಲವೆಂದಾದರೆ ಅವುಗಳಿಗೆ ಅಭೇದ ಪಾರಮಾರ್ಥಿಕವೆಂದಾದೀತು. ಆಗ ಅವುಗಳೂ ಪಾರಮಾರ್ಥಿಕವಾಗಬೇಕು. ಇಲ್ಲದಿದ್ದರೆ ಘಟಪಟಗಳು ನಾಶವಾದಾಗ ಅವುಗಳ ಅಭೇದವೂ ನಾಶವಾಗುವ ಪ್ರಸಂಗವಿದೆ' ಎಂದು.

**ಪಟಭೇದ ಸಾಧಕಾನುಮಾನಗಳು**

**किञ्च घटः घटसंसर्गानवच्छिन्नप्रतियोगिताकपटादिधर्मिकत्रैकालिकाभावप्रतियोगी द्रव्यत्वात् पटवत् ।**

**घटात्यन्ताभावो वा घटप्रतियोगिक पटादिधर्मिक त्रैकालिकाभावान्यः अभावत्वात् पटाभाववत् ।**

**घटसंसर्गो वा पटादिधर्मिकत्रैकालिकाभावप्रतियोगितावच्छेदकघटनिष्ठधर्मान्यः संसर्गत्वात् पटनिष्ठसंसर्गवत् ।**

ಘಟವು ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ ಪಟಾದಿಧರ್ಮಿಕ ತ್ರೈಕಾಲಿಕ ಅಭಾವಕ್ಕೆ ಪ್ರತಿಯೋಗಿ. ದ್ರವ್ಯತ್ವವಿರುವುದರಿಂದ ಪಟದಂತೆ.

ಅಥವಾ ಘಟಾತ್ಯಂತಾಭಾವವು ಘಟಪ್ರತಿಯೋಗಿಕ ಪಟಾದಿ ಧರ್ಮಿಕ ತ್ರೈಕಾಲಿಕ ಅಭಾವಕ್ಕಿಂತ ಅನ್ಯ. ಅಭಾವತ್ವವಿರುವುದರಿಂದ. ಪಟಾಭಾವದಂತೆ.

ಅಥವಾ ಘಟಸಂಸರ್ಗವು ಪಟಾದಿಧರ್ಮಿಕ ತ್ರೈಕಾಲಿಕಾಭಾವ ಪ್ರತಿಯೋಗಿತಾವಚ್ಛೇದಕ ಘಟನಿಷ್ಠ ಧರ್ಮಾನ್ಯವಾಗಿದೆ. ಸಂಸರ್ಗತ್ವವಿರುವುದರಿಂದ ಪಟನಿಷ್ಠ ಸಂಸರ್ಗದಂತೆ.

**किञ्चेत्यादि** । घटसंसर्गेणानवच्छिन्ना प्रतियोगिता यस्य तादृशो यः

**पटादिधर्मिकः त्रैकालिकोऽभावस्तत्प्रतियोगीत्यर्थः। दृष्टान्ते पटात्यन्ताभावमादाय साध्यसत्त्वं, पक्षे च तत्प्रतियोगित्वबाधाद्घटपटभेदमादायैव साध्यपर्यवसानादुद्देश्यसिद्धिः। घटात्यन्ताभावप्रतियोगितामादाय सिद्धसाधनवारणाय घटसंसर्गानवच्छिन्नेति। तत्र घटपदं दृष्टान्ते साध्यवैकल्यवारणाय।**

ಘಟಸಂಸರ್ಗದಿಂದ ಅನವಚ್ಛಿನ್ನವಾದ ಪ್ರತಿಯೋಗಿತಾಉಳ್ಳ, ಪಟಾದಿ ಧರ್ಮಿಕವಾದ ತ್ರೈಕಾಲಿಕವಾದ ಯಾವ ಅಭಾವವಿರುವುದೋ ಅದಕ್ಕೆ ಪ್ರತಿಯೋಗಿಯು ಘಟ ಎಂದರ್ಥ. ದೃಷ್ಟಾಂತವಾದ ಪಟದಲ್ಲಿ ಅಂಥ ಅಭಾವವಾದ ಪಟಾತ್ಯಂತಾಭಾವವನ್ನಿಟ್ಟುಕೊಂಡು ಅದಕ್ಕೆ ಪ್ರತಿಯೋಗಿಯು ಪಟ ಎಂದು ಸಾಧ್ಯವನ್ನು ಕೂಡಿಸಬೇಕು. ಪಕ್ಷವಾದ ಘಟದಲ್ಲಿ ಪಟಾತ್ಯಂತಾಭಾವವಿಟ್ಟುಕೊಂಡು ಸಾಧ್ಯವನ್ನು ಕೂಡಿಸಲಾಗುವುದಿಲ್ಲ. ಪಟಾತ್ಯಂತಾಭಾವಪ್ರತಿಯೋಗಿತ್ವವು ಘಟದಲ್ಲಿ ಬಾಧಿತವಾಗಿದೆ. ಘಟಭೇದವನ್ನೇ ಇಟ್ಟುಕೊಳ್ಳಬೇಕು. ಘಟಭೇದಕ್ಕೆ ಪ್ರತಿಯೋಗಿಯು ಘಟವೆ ಆಗುತ್ತದೆ ಎಂದು.

ಪಕ್ಷವಾದ ಘಟದಲ್ಲಿ ಪಟನಿಷ್ಠವಾದ ಘಟಾತ್ಯಂತಾಭಾವವನ್ನೇ ಇಟ್ಟುಕೊಂಡು ಅದಕ್ಕೆ ಘಟವು ಪ್ರತಿಯೋಗಿ ಎಂದು ಸಾಧ್ಯವನ್ನು ಕೂಡಿಸಿದರೆ ಸಿದ್ಧಸಾಧನತ್ವ ಬರುತ್ತದೆ. ಅದಕ್ಕೆ ಘಟಸಂಸರ್ಗಾನವಚ್ಛಿನ್ನ ಎಂದು ಪಟಧರ್ಮಿಕ ತ್ರೈಕಾಲಿಕ ಅಭಾವಕ್ಕೆ ವಿಶೇಷಣ ನೀಡಿದ್ದಾರೆ. ಘಟಾತ್ಯಂತಾಭಾವವು ಘಟಸಂಸರ್ಗಾವಚ್ಛಿನ್ನವೇ ಆದ್ದರಿಂದ ಅನವಚ್ಛಿನ್ನತ್ರೈಕಾಲಿಕ ಅಭಾವವೆಂದು ಘಟಭೇದವನ್ನೇ ಇಟ್ಟುಕೊಂಡು ಸಾಧ್ಯವನ್ನು ಘಟದಲ್ಲಿ ಕೂಡಿಸಬೇಕಾಗುತ್ತದೆ. ಆಗ ಘಟಭೇದ ಸಿದ್ಧವಾಗುತ್ತದೆ, ಸಿದ್ಧಸಾಧನತ್ವವಿಲ್ಲ.

ಆದರೆ ಘಟಾತ್ಯಂತಾಭಾವವಾರಣೆಗೆ ಕೇವಲ ಸಂಸರ್ಗಾನವಚ್ಛಿನ್ನತ್ವವಿಶೇಷಣ ಸಾಕು. ಅತ್ಯಂತಾಭಾವವು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವೇ ಆಗಿರುತ್ತದೆ. ಆದರೆ ಪಟದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬಂದೀತು. ಅಲ್ಲಿ ಪಟಾತ್ಯಂತಾಭಾವ ಪ್ರತಿಯೋಗಿತ್ವವಿದೆ ಎಂದು ಸಾಧ್ಯವನ್ನು ಕೂಡಿಸಬೇಕಾಗುತ್ತದೆ. ಸಂಸರ್ಗಾನವಚ್ಛಿನ್ನತ್ವ ವಿಶೇಷಣದಿಂದ ಪಟಾತ್ಯಂತಾಭಾವಪ್ರತಿಯೋಗಿತಾ ವ್ಯಾವೃತ್ತವಾದರೆ ಅದನ್ನಿಟ್ಟುಕೊಂಡು ಸಾಧ್ಯವನ್ನು ಕೂಡಿಸಲಾಗುವುದಿಲ್ಲ. ಅದಕ್ಕೆ ಘಟಸಂಸರ್ಗಾನವಚ್ಛಿನ್ನ ಎಂದು ಘಟಪದ ಸೇರಿಸಿ ವಿಶೇಷಣ ನೀಡಬೇಕು. ಆಗ ಪಟಾತ್ಯಂತಾಭಾವವು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವಾದರೂ ಘಟಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕ ಆಗುವುದಿಲ್ಲ. ಪಟಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವಾಗಿರುತ್ತದೆ. ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕವೆಂದು ಪಟಾತ್ಯಾಂತಾಭಾವ ಪ್ರತಿಯೋಗಿತಾ ಇಟ್ಟುಕೊಂಡು ಸಾಧ್ಯವನ್ನು ಕೂಡಿಸಲು ಬರುವುದರಿಂದ ಸಾಧ್ಯ ವೈಕಲ್ಯವಿಲ್ಲ.

पारमार्थिकत्वप्रसङ्गः । अन्यथा घटपटनिवृत्तौ तदभेदस्यापि निवृत्त्यापत्तिरिति भावः ।

ಮೇಲೆ ಹೇಳಿದ ಜಡಭೇದಾನುಮಾನದಲ್ಲಿ ಅಸಿದ್ಧ್ಯಾದಿ ದೋಷ ವಾರಣ ಮಾಡಿದರೂ ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಅನುಮಾನ ಅಪ್ರಯೋಜಕ, ಜಡಭೇದವನ್ನು ಸಾಧಿಸಲಾರದು, ಎಂದರೆ ಹೇಳುತ್ತಾರೆ— 'ಘಟಪಟಗಳಿಗೆ ಭೇದವು ಪಾರಮಾರ್ಥಿಕವಲ್ಲವೆಂದಾದರೆ ಅವುಗಳಿಗೆ ಅಭೇದ ಪಾರಮಾರ್ಥಿಕವೆಂದಾದೀತು. ಆಗ ಅವುಗಳೂ ಪಾರಮಾರ್ಥಿಕವಾಗಬೇಕು. ಇಲ್ಲದಿದ್ದರೆ ಘಟಪಟಗಳು ನಾಶವಾದಾಗ ಅವುಗಳ ಅಭೇದವೂ ನಾಶವಾಗುವ ಪ್ರಸಂಗವಿದೆ' ಎಂದು.

**ಪಟಭೇದ ಸಾಧಕಾನುಮಾನಗಳು**

**किञ्च घटः घटसंसर्गानवच्छिन्नप्रतियोगिताकपटादिधर्मिकत्रैकालिकाभावप्रतियोगी द्रव्यत्वात् पटवत् ।**

**घटात्यन्ताभावो वा घटप्रतियोगिक पटादिधर्मिक त्रैकालिकाभावान्यः अभावत्वात् पटाभाववत् ।**

**घटसंसर्गो वा पटादिधर्मिकत्रैकालिकाभावप्रतियोगितावच्छेदकघटनिष्ठधर्मान्यः संसर्गत्वात् पटनिष्ठसंसर्गवत् ।**

ಘಟವು ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ ಪಟಾದಿಧರ್ಮಿಕ ತ್ರೈಕಾಲಿಕ ಅಭಾವಕ್ಕೆ ಪ್ರತಿಯೋಗಿ. ದ್ರವ್ಯತ್ವವಿರುವುದರಿಂದ ಪಟದಂತೆ.

ಅಥವಾ ಘಟಾತ್ಯಂತಾಭಾವವು ಘಟಪ್ರತಿಯೋಗಿಕ ಪಟಾದಿ ಧರ್ಮಿಕ ತ್ರೈಕಾಲಿಕ ಅಭಾವಕ್ಕಿಂತ ಅನ್ಯ. ಅಭಾವತ್ವವಿರುವುದರಿಂದ. ಪಟಾಭಾವದಂತೆ.

ಅಥವಾ ಘಟಸಂಸರ್ಗವು ಪಟಾದಿಧರ್ಮಿಕ ತ್ರೈಕಾಲಿಕಾಭಾವ ಪ್ರತಿಯೋಗಿತಾವಚ್ಛೇದಕ ಘಟನಿಷ್ಠ ಧರ್ಮಾನ್ಯವಾಗಿದೆ. ಸಂಸರ್ಗತ್ವವಿರುವುದರಿಂದ ಪಟನಿಷ್ಠ ಸಂಸರ್ಗದಂತೆ.

**किञ्चेत्यादि** । घटसंसर्गेणानवच्छिन्ना प्रतियोगिता यस्य तादृशो यः

**पटादिधर्मिकः त्रैकालिकोऽभावस्तत्प्रतियोगीत्यर्थः। दृष्टान्ते पटात्यन्ताभावमादाय साध्यसत्त्वं, पक्षे च तत्प्रतियोगित्वबाधाद्घटपटभेदमादायैव साध्यपर्यवसानादुद्देश्यसिद्धिः। घटात्यन्ताभावप्रतियोगितामादाय सिद्धसाधनवारणाय घटसंसर्गानवच्छिन्नेति। तत्र घटपदं दृष्टान्ते साध्यवैकल्यवारणाय।**

ಘಟಸಂಸರ್ಗದಿಂದ ಅನವಚ್ಛಿನ್ನವಾದ ಪ್ರತಿಯೋಗಿತಾಉಳ್ಳ, ಪಟಾದಿ ಧರ್ಮಿಕವಾದ ತ್ರೈಕಾಲಿಕವಾದ ಯಾವ ಅಭಾವವಿರುವುದೋ ಅದಕ್ಕೆ ಪ್ರತಿಯೋಗಿಯು ಘಟ ಎಂದರ್ಥ. ದೃಷ್ಟಾಂತವಾದ ಪಟದಲ್ಲಿ ಅಂಥ ಅಭಾವವಾದ ಪಟಾತ್ಯಂತಾಭಾವವನ್ನಿಟ್ಟುಕೊಂಡು ಅದಕ್ಕೆ ಪ್ರತಿಯೋಗಿಯು ಪಟ ಎಂದು ಸಾಧ್ಯವನ್ನು ಕೂಡಿಸಬೇಕು. ಪಕ್ಷವಾದ ಘಟದಲ್ಲಿ ಪಟಾತ್ಯಂತಾಭಾವವಿಟ್ಟುಕೊಂಡು ಸಾಧ್ಯವನ್ನು ಕೂಡಿಸಲಾಗುವುದಿಲ್ಲ. ಪಟಾತ್ಯಂತಾಭಾವಪ್ರತಿಯೋಗಿತ್ವವು ಘಟದಲ್ಲಿ ಬಾಧಿತವಾಗಿದೆ. ಘಟಭೇದವನ್ನೇ ಇಟ್ಟುಕೊಳ್ಳಬೇಕು. ಘಟಭೇದಕ್ಕೆ ಪ್ರತಿಯೋಗಿಯು ಘಟವೆ ಆಗುತ್ತದೆ ಎಂದು.

ಪಕ್ಷವಾದ ಘಟದಲ್ಲಿ ಪಟನಿಷ್ಠವಾದ ಘಟಾತ್ಯಂತಾಭಾವವನ್ನೇ ಇಟ್ಟುಕೊಂಡು ಅದಕ್ಕೆ ಘಟವು ಪ್ರತಿಯೋಗಿ ಎಂದು ಸಾಧ್ಯವನ್ನು ಕೂಡಿಸಿದರೆ ಸಿದ್ಧಸಾಧನತ್ವ ಬರುತ್ತದೆ. ಅದಕ್ಕೆ ಘಟಸಂಸರ್ಗಾನವಚ್ಛಿನ್ನ ಎಂದು ಪಟಧರ್ಮಿಕ ತ್ರೈಕಾಲಿಕ ಅಭಾವಕ್ಕೆ ವಿಶೇಷಣ ನೀಡಿದ್ದಾರೆ. ಘಟಾತ್ಯಂತಾಭಾವವು ಘಟಸಂಸರ್ಗಾವಚ್ಛಿನ್ನವೇ ಆದ್ದರಿಂದ ಅನವಚ್ಛಿನ್ನತ್ರೈಕಾಲಿಕ ಅಭಾವವೆಂದು ಘಟಭೇದವನ್ನೇ ಇಟ್ಟುಕೊಂಡು ಸಾಧ್ಯವನ್ನು ಘಟದಲ್ಲಿ ಕೂಡಿಸಬೇಕಾಗುತ್ತದೆ. ಆಗ ಘಟಭೇದ ಸಿದ್ಧವಾಗುತ್ತದೆ, ಸಿದ್ಧಸಾಧನತ್ವವಿಲ್ಲ.

ಆದರೆ ಘಟಾತ್ಯಂತಾಭಾವವಾರಣೆಗೆ ಕೇವಲ ಸಂಸರ್ಗಾನವಚ್ಛಿನ್ನತ್ವವಿಶೇಷಣ ಸಾಕು. ಅತ್ಯಂತಾಭಾವವು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವೇ ಆಗಿರುತ್ತದೆ. ಆದರೆ ಪಟದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬಂದೀತು. ಅಲ್ಲಿ ಪಟಾತ್ಯಂತಾಭಾವ ಪ್ರತಿಯೋಗಿತ್ವವಿದೆ ಎಂದು ಸಾಧ್ಯವನ್ನು ಕೂಡಿಸಬೇಕಾಗುತ್ತದೆ. ಸಂಸರ್ಗಾನವಚ್ಛಿನ್ನತ್ವ ವಿಶೇಷಣದಿಂದ ಪಟಾತ್ಯಂತಾಭಾವಪ್ರತಿಯೋಗಿತಾ ವ್ಯಾವೃತ್ತವಾದರೆ ಅದನ್ನಿಟ್ಟುಕೊಂಡು ಸಾಧ್ಯವನ್ನು ಕೂಡಿಸಲಾಗುವುದಿಲ್ಲ. ಅದಕ್ಕೆ ಘಟಸಂಸರ್ಗಾನವಚ್ಛಿನ್ನ ಎಂದು ಘಟಪದ ಸೇರಿಸಿ ವಿಶೇಷಣ ನೀಡಬೇಕು. ಆಗ ಪಟಾತ್ಯಂತಾಭಾವವು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವಾದರೂ ಘಟಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕ ಆಗುವುದಿಲ್ಲ. ಪಟಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವಾಗಿರುತ್ತದೆ. ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕವೆಂದು ಪಟಾತ್ಯಾಂತಾಭಾವ ಪ್ರತಿಯೋಗಿತಾ ಇಟ್ಟುಕೊಂಡು ಸಾಧ್ಯವನ್ನು ಕೂಡಿಸಲು ಬರುವುದರಿಂದ ಸಾಧ್ಯ ವೈಕಲ್ಯವಿಲ್ಲ.

**न च संयोगेन पटो नास्तीति प्रतीत्या संयोगसामान्यस्यैव प्रतियोगितावच्छेदकत्वावगाहनात् कथं पटाभावस्य घटसंसर्गानवच्छिन्न-प्रतियोगिताकत्वमिति वाच्यम् । लाघवेन प्रतियोगिसंसर्गस्यैव प्रतियोगितावच्छेदकत्वात् । घटत्वसहितसंसर्गानवच्छिन्नत्वविवक्षणाद्वा दोषाभावात् ।**

'ಸಂಯೋಗೇನ ಪಟೋ ನಾಸ್ತಿ' ಎಂದು ಪ್ರತೀತಿ ಬರುವುದರಿಂದ ಅದರಲ್ಲಿ ಸಂಯೋಗ ಸಾಮಾನ್ಯವು ಪ್ರತಿಯೋಗಿತಾವಚ್ಛೇದಕವಾಗಿ ಭಾನವಾಗುತ್ತಿದೆ. ಘಟಾಭಾವದಲ್ಲಿಯೂ 'ಸಂಯೋಗೇನ ಘಟೋ ನಾಸ್ತಿ' ಎಂದು ಸಂಯೋಗಸಾಮಾನ್ಯವೇ ಪ್ರತಿಯೋಗಿತಾವಚ್ಛೇದಕ ಎಂದಮೇಲೆ ಸಂಯೋಗರೂಪವಾದ ಘಟಸಂಸರ್ಗದಿಂದಲೇ ಪಟಾಭಾವ ಪ್ರತಿಯೋಗಿತೆಯು ಅವಚ್ಛಿನ್ನವಾಗಿದೆ. ಹೀಗಾಗಿ ಪಟಾಭಾವವು ಘಟಸಂಸರ್ಗಾನವಚ್ಛಿನ್ನವಲ್ಲ. ಪಟಾಭಾವವಿಟ್ಟು ಕೊಂಡು ಪಟದಲ್ಲಿ ಸಾಧ್ಯವನ್ನು ಕೂಡಿಸುವುದು ಹೇಗೆ ಎಂಬ ಪ್ರಶ್ನೆ ಬರುತ್ತದೆ.

ಅದಕ್ಕೆ ಸಮಾಧಾನ ಹೀಗೆ— ಸಂಯೋಗ ಸಾಮಾನ್ಯವನ್ನು ಪಟಾಭಾವ ಪ್ರತಿಯೋಗಿತಾವಚ್ಛೇದಕವೆಂದು ಸ್ವೀಕರಿಸಿದರೆ ಗೌರವ. ಅನಂತ ಸಂಯೋಗಗಳಲ್ಲಿ ಪ್ರತಿಯೋಗಿತಾವಚ್ಛೇದಕತ್ವವನ್ನು ಕಲ್ಪಿಸಬೇಕಾಗುತ್ತದೆ. ಅದಕ್ಕಿಂತ ಪ್ರತಿಯೋಗಿ ಸಂಸರ್ಗವನ್ನೇ ಪ್ರತಿಯೋಗಿತಾವಚ್ಛೇದಕ ಎಂದರೆ ಲಾಘವ. ಹೀಗಾಗಿ ಘಟಸಂಯೋಗವು ಪ್ರತಿಯೋಗಿಯಾದ ಪಟದ ಸಂಸರ್ಗವಾಗದಿರುವುದರಿಂದ ಅದು ಪಟಾಭಾವ ಪ್ರತಿಯೋಗಿತಾವಚ್ಛೇದಕವಲ್ಲ. ಪಟಾಭಾವವು ಘಟಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕವೇ ಆಯಿತು, ಎಂದು.

ಅಥವಾ ಹೀಗೂ ಸಮಾಧಾನ ಹೇಳಬಹುದು— 'ಘಟ ಸಂಸರ್ಗಾನವಚ್ಛಿನ್ನ' ಪದದಿಂದ ಘಟತ್ವಸಹಿತ ಸಂಸಾರ್ಗಾನವಚ್ಛಿನ್ನತ್ವವು ವಿವಕ್ಷಿತವಾಗಿದೆ. ಪಟಾಭಾವಪ್ರತಿಯೋಗಿತೆಯು ಸಂಯೋಗಸಾಮಾನ್ಯರೂಪ ಸಂಸರ್ಗದಿಂದ ಅವಚ್ಛಿನ್ನವೇ ಆದರೂ, ಘಟತ್ವವು ಪ್ರತಿಯೋಗಿತೆಯಲ್ಲಿ ಅವಚ್ಛೇದಕವಾಗಿಲ್ಲದಿರುವುದರಿಂದ ಘಟತ್ವ ಸಹಿತ ಸಂಸರ್ಗಾನವಚ್ಛಿನ್ನವೇ ಆಯಿತು ಪಟಾಭಾವಪ್ರತಿಯೋಗಿತಾ. ಅದನ್ನಿಟ್ಟುಕೊಂಡು ಪಟದಲ್ಲಿ ಸಾಧ್ಯವನ್ನು ಕೂಡಿಸಲು ಏನೂ ಅನುಪಪತ್ತಿ ಇಲ್ಲ.

**आत्मानात्मभेदसिद्ध्याऽर्थान्तरवारणाय पटादिधर्मिकेति । पटे घटभेदसिद्धेरुद्देश्यत्वे पटधर्मिकत्वमभावविशेषणम् । दण्डादौ तत्सिद्धे-रुद्देश्यत्वे च तद्धर्मिकत्वमेव तथेत्यावेदयितुमादिपदम् ।**

ಸಾಧ್ಯದಲ್ಲಿ ಪಟಾದಿಧರ್ಮಿಕತ್ವ ವಿಶೇಷಣವಿಲ್ಲದಿದ್ದರೆ 'ಆತ್ಮಾ ಅನಾತ್ಮಾ ನ' ಎಂದು ಆತ್ಮಧರ್ಮಿಕ ಭೇದವನ್ನಿಟ್ಟುಕೊಂಡು ತತ್ಪ್ರತಿಯೋಗಿತ್ವವನ್ನು ಘಟಪಟರೂಪವಾದ ಪಕ್ಷದೃಷ್ಟಾಂತ ಗಳೆರಡರಲ್ಲಿಯೂ ಸಾಧ್ಯವನ್ನು ಕೂಡಿಸಿ ಅರ್ಥಾಂತರತ್ವವನ್ನು ಹೇಳಬಹುದು. ಅದಕ್ಕೆ ಪಟಾದಿ ಧರ್ಮಿಕತ್ವ ವಿಶೇಷಣ. ಈಗ 'ಆತ್ಮಾ ಅನಾತ್ಮಾ ನ' ಎಂಬುದು ಆತ್ಮಧರ್ಮಿಕಭೇದ. ಪಟಾದಿ ಧರ್ಮಿಕವಲ್ಲ. ಆದರಿಂದ ಅದನ್ನಿಟ್ಟುಕೊಂಡು ಅರ್ಥಾಂತರ ಹೇಳಲಾಗುವುದಿಲ್ಲ.

ಆತ್ಮಧರ್ಮಿಕಭೇದವಾರಣೆಗೆ ಯದ್ಯಪಿ ಪಟಧರ್ಮಿಕತ್ವವಿಶೇಷಣ ಸಾಕಾಗಿತ್ತು. ಆದರೆ, ಪಟದಲ್ಲಿ ಘಟಭೇದಸಿದ್ಧಿಯ ಉದ್ದೇಶವಿದ್ದಾಗ ಸಾಧ್ಯದಲ್ಲಿ ಪಟಧರ್ಮಿಕತ್ವವು ಅಭಾವಕ್ಕೆ ವಿಶೇಷಣವಾಗಿರಬೇಕು. ದಂಡಾದಿಗಳಲ್ಲಿ ಘಟಭೇದ ಸಿದ್ಧಿಯ ಉದ್ದೇಶವಿದ್ದರೆ ದಂಡಾದಿಧರ್ಮಿಕತ್ವ ವಿಶೇಷಣವೆ ಬೇಕು. ಹೀಗಾಗಿ ಪಟದಂಡಾದಿಧರ್ಮಿಕತ್ವ ವಿಶೇಷಣ ಕೊಡುವ ಅಭಿಪ್ರಾಯದಿಂದ ಪಟಾದಿಧರ್ಮಿಕ ಎಂದಿದ್ದಾರೆ.

**घटध्वंसप्रागभावप्रतियोगितामादाय सिद्धसाधनवारणाय त्रैकालिकेति । न च तयोः प्रतियोगिसमवायिमात्रवृत्तित्वनियमेन पटादिधर्मिकत्वाभावादेव वारणसम्भव इति वाच्यम् । तादृशनियमे मानाभावात् । ध्वंसप्रागभावयोः प्रतीतिबलेन प्रतियोगिसम्बन्धिमात्रवृत्तित्वौचित्यात् । पटादेरपि संयोगादिना प्रतियोगिसम्बन्धित्वात् ।**

ಘಟಧ್ವಂಸ ಘಟಪ್ರಾಗಭಾವ ಪ್ರತಿಯೋಗಿತಾಗಳನ್ನಿಟ್ಟುಕೊಂಡು ಸಿದ್ಧಸಾಧನವಾರಣೆಗಾಗಿ ತ್ರೈಕಾಲಿಕವೆಂದು ಅಭಾವಕ್ಕೆ ವಿಶೇಷಣ.

ಯದ್ಯಪಿ ಧ್ವಂಸಪ್ರಾಗಭಾವಗಳು ಪ್ರತಿಯೋಗಿ ಸಮವಾಯಿ ಮಾತ್ರ ವೃತ್ತಿ ಎಂದು ನಿಯಮವಿದೆ. ಆದರಿಂದ ಘಟಧ್ವಂಸ ಕಪಾಲಧರ್ಮಿಕವೇ ಹೊರತು ಪಟಧರ್ಮಿಕವಲ್ಲ. ಹೀಗಾಗಿ ಪಟಾದಿಧರ್ಮಿಕತ್ವ ವಿಶೇಷಣದಿಂದಲೆ ಧ್ವಂಸಪ್ರಾಗಭಾವವ್ಯಾವೃತ್ತಿಯಾಗುವುದರಿಂದ ತ್ರೈಕಾಲಿಕತ್ವ ವಿಶೇಷಣ ಬೇಡ. ಆದರೆ, ಧ್ವಂಸಪ್ರಾಗಭಾವಗಳಿಗೆ ಪ್ರತಿಯೋಗಿ ಸಮವಾಯಿವೃತ್ತಿತ್ವ ನಿಯಮ ವಿಷಯದಲ್ಲಿ ಪ್ರಮಾಣವಿಲ್ಲ. ಕಪಾಲದಲ್ಲಿ ಘಟನಾಶ, ಕಪಾಲದಲ್ಲಿ ಘಟೋತ್ಪತ್ತಿ ಎಂದೇ ಅನುಭವವೆಂದು ನಿಯಮವಿಲ್ಲ. ಭೂತಲದಲ್ಲಿ ಘಟನಾಶ–ಉತ್ಪತ್ತಿಗಳೂ ಪ್ರತೀತಿಯಲ್ಲಿ ಕಾಣಬಹುದು. ಆದರಿಂದ, ಧ್ವಂಸಪ್ರಾಗಭಾವಗಳು ಪ್ರತಿಯೋಗಿ ಸಂಬಂಧಿ ಮಾತ್ರ ವೃತ್ತಿ ಎಂದು ನಿಯಮ ಉಚಿತ. ಪ್ರಕೃತ ಘಟಧ್ವಂಸದ ಪ್ರತಿಯೋಗಿಯಾದ ಘಟಕ್ಕೆ ಪಟವೂ ಸಂಯೋಗದಿಂದ ಸಂಬಂಧಿಯಾಗಬಹು ದಾದ್ದರಿಂದ ಘಟಧ್ವಂಸವು ಪಟಾದಿಧರ್ಮಿಕವಾಗಬಹುದು. ಆದರಿಂದ ಪಟಾದಿ ಧರ್ಮಿಕತ್ವ ವಿಶೇಷಣದಿಂದ ಧ್ವಂಸ ಪ್ರಾಗಭಾವವಾರಣೆ ಅಶಕ್ಯ. ಅದಕ್ಕೆ ತ್ರೈಕಾಲಿಕತ್ವವಿಶೇಷಣವೇ ಬೇಕು.

**यत्तु घटध्वंसप्रागभावयोः संसर्गाभावत्वेन घटसंसर्गानवच्छिन्न-प्रतियोगिताकत्वाभावादेव वारणं सम्भवतीति । तच्चिन्त्यम् । ध्वंसप्रागभावयोः संसर्गावच्छिन्नप्रतियोगिताकत्वानङ्गीकर्तृतार्किकैकदेशि-मतेनैतत्प्रयोगात् । अत एव सिद्धान्ते पटादिधर्मिकभेदस्य धर्मिस्वरूपत्वेन त्रैकालिकत्वानुपपत्तावपि न बाधप्रसङ्गः ।**

'ಘಟಧ್ವಂಸಪ್ರಾಗಭಾವಗಳು ಸಂಸರ್ಗಾಭಾವವಾಗಿರುವುದರಿಂದ ಘಟಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕವಾಗಲಾರವು. ಅದರಿಂದಲೆ ಅವುಗಳ ವಾರಣೆಯಾಗಿದೆ' ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ತಾರ್ಕಿಕರಲ್ಲಿ ಕೆಲವರು ಧ್ವಂಸಪ್ರಾಗಭಾವಗಳನ್ನು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕಗಳೆಂದು ಒಪ್ಪುವುದಿಲ್ಲ. ಅವರ ಮತದಲ್ಲಿ ಅವುಗಳು ಘಟಸಂಸಾರ್ಗನವಚ್ಛಿನ್ನ ಪ್ರತಿಯೋಗಿತಾಕ ಆಗಬಹುದು. ತತ್ಪ್ರತಿಯೋಗಿತಾವನ್ನಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳ ಬಹುದು. ಈ ತಾರ್ಕಿಕೈಕದೇಶಿ ಮತಾನುಸಾರವಾಗಿ ಅನುಮಾನಪ್ರಯೋಗ ಮಾಡಿರುವುದರಿಂದ ತ್ರೈಕಾಲಿಕತ್ವವಿಶೇಷಣ ನೀಡಿದ್ದಾರೆ. ಹೀಗೆ ಹೇಳದಿದ್ದರೆ ಸಿದ್ಧಾಂತದಲ್ಲಿ ಪಟಾದಿಧರ್ಮಿಕ ಭೇದವು ಧರ್ಮಿಸ್ವರೂಪವಾದ್ದರಿಂದ, ಪಟಾದಿಗಳಂತೆ ಅನಿತ್ಯವಾದ ಈ ಭೇದವು ತ್ರೈಕಾಲಿಕವಾಗದು. ಅದನ್ನಿಟ್ಟುಕೊಂಡು ಪಕ್ಷದಲ್ಲಿ ಸಾಧ್ಯವನ್ನು ಕೂಡಿಸಲಾಗದು.

**यत्त्वतद्गुणसंविज्ञानबहुव्रीहिणा पटादिपदस्य नित्यमात्रपरत्वान्न दोष इति। तदसङ्गतम्। तथा सति प्रक्रान्तघटपटभेदासिद्धिप्रसङ्गात् । पटादिधर्मिकसमवायादिप्रतियोगित्वसिद्ध्याऽर्थान्तरवारणायाभावपदम् । एवमग्रेऽपि ।**

ಅತದ್ಗುಣ ಸಂವಿಜ್ಞಾನ ಬಹುವ್ರೀಹಿಯಿಂದ 'ಪಟಾದಿ' ಶಬ್ದವು ನಿತ್ಯಮಾತ್ರಪರ, ಆಗ ನಿತ್ಯ ಪದಾರ್ಥಧರ್ಮಿಕಭೇದ ತ್ರೈಕಾಲಿಕವಾಗಬಹುದೆಂದು ಸಮಾಧಾನ ಹೇಳಬಾರದು. ಅದು ಅಸಂಗತವಾಗುತ್ತದೆ. ಏಕೆಂದರೆ ಈ ಪ್ರಕರಣವು ಅನಿತ್ಯವಾದ ಘಟಪಟಾದಿಗಳ ಭೇದವನ್ನು ಸಾಧಿಸಲಿಕ್ಕೆ ಹೊರಟಿದೆ. ನಿತ್ಯಪದಾರ್ಥಭೇದ ಮಾತ್ರವನ್ನಲ್ಲ.

'ತ್ರೈಕಾಲಿಕಾಭಾವ ಪ್ರತಿಯೋಗಿ' ಎಂದು ಅಭಾವ ಪದವಿಲ್ಲದಿದ್ದರೆ ತ್ರೈಕಾಲಿಕವಾದ ಸಮವಾಯಾದಿ ಪ್ರತಿಯೋಗಿತ್ವಸಿದ್ಧಿಯಿಂದ ಅರ್ಥಾಂತರತ್ವ ದೋಷಕ್ಕೆ ಅವಕಾಶವಿದೆ. ಹೀಗೇ ಮುಂದಿನ ಅನುಮಾನಗಳಲ್ಲಿಯೂ ಪದಕೃತ್ಯವನ್ನು ಊಹಿಸಿಕೊಳ್ಳಬೇಕು.

**घटात्यन्ताभावो वेति । अत्र घटात्यन्ताभावान्यत्वमादाय दृष्टान्ते साध्यसत्त्वम् । पक्षे तद्बाधादन्योन्याभावान्यत्वमादायैव साध्यपर्यवसानादुद्धेश्यसिद्धिः । पटात्यन्ताभावादन्यत्वमादाय सिद्धसाधन-वारणाय घटप्रतियोगिकेति विशेषणं पूर्ववत् । यद्यपि घटात्यन्ताभावस्यापि घटप्रतियोगिकपटादिधर्मिकत्रैकालिकाभावत्वेन तदन्यत्वासम्भवाद्बाधः । तथाप्यभावादन्य इत्येकवचनान्तेन समासात्, तादृशयत्किञ्चिदभावा-न्यत्वस्यैव साध्यत्वलाभान्न दोषः । न चैवं तादृशघट-पटोभयाभावान्यत्वमादाय सिद्धसाधनम् । घटात्यन್ताभावत्वावच्छेदेन तदन्यत्वसाधनात् ।**

ಘಟಾತ್ಯಂತಾಭಾವ ಪಕ್ಷಕ ಅನುಮಾನದಲ್ಲಿ ದೃಷ್ಟಾಂತವಾದ ಪಟಾತ್ಯಂತಾಭಾವದಲ್ಲಿ ಘಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ಸಾಧ್ಯವನ್ನು ಕೂಡಿಸಬೇಕು. ಪಕ್ಷವಾದ ಘಟಾತ್ಯಂತಾ ಭಾವದಲ್ಲಿ ಘಟಾತ್ಯಂತಾಭಾವಾನ್ಯತ್ವವು ಬಾಧಿತವಾದ್ದರಿಂದ ಘಟಾನ್ಯೋನ್ಯಾಭಾವಾನ್ಯತ್ವವಿಟ್ಟು ಕೊಂಡೇ ಸಾಧ್ಯವನ್ನು ಕೂಡಿಸಬೇಕಾಗುವುದರಿಂದ ಅನ್ಯೋನ್ಯಾಭಾವಸಿದ್ಧವಾಗುತ್ತದೆ. ಉದ್ದೇಶ್ಯ ಸಿದ್ಧಿಯಾಗುತ್ತದೆ.

ಘಟಾತ್ಯಂತಾಭಾವದಲ್ಲಿ ಪಟಾತ್ಯಂತಾಭಾವಾನ್ಯತ್ವವಿರುವುದರಿಂದ ಅದನ್ನಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಬಾರದೆಂದು ಘಟಪ್ರತಿಯೋಗಿಕತ್ವವಿಶೇಷಣವನ್ನು ಅಭಾವದಲ್ಲಿ ಕೊಟ್ಟಿದ್ದಾರೆ.

ಯದ್ಯಪಿ ಘಟಾತ್ಯಂತಾಭಾವವೂ ಕೂಡ ಘಟಪ್ರತಿಯೋಗಿಕ ಪಟಾದಿಧರ್ಮಿಕ ತ್ರೈಕಾಲಿಕಾಭಾವವೇ ಆಗಿರುವುದರಿಂದ ತದನ್ಯತ್ವರೂಪವಾದ ಸಾಧ್ಯವು ಪಕ್ಷದಲ್ಲಿ ಬಾಧಿತ. ಆದರೆ ಸಾಧ್ಯಶರೀರದಲ್ಲಿ 'ತ್ರೈಕಾಲಿಕಾಭಾವಾನ್ಯ' ಎಂದರೆ 'ತ್ರೈಕಾಲಿಕ ಅಭಾವವೇ ಅಲ್ಲ' ಎಂದರ್ಥವಲ್ಲ. ಆ ಅರ್ಥದಲ್ಲಿ ಸಾಧ್ಯವು ಬಾಧಿತವೆ. ತ್ರೈಕಾಲಿಕವಾದ 'ಅಭಾವಕ್ಕಿಂತ ಬೇರೆ' ಎಂದಿಷ್ಟೇ ಅರ್ಥ ವಿವಕ್ಷಿತ. 'ಅಭಾವಾದನ್ಯಃ' ಎಂದು ಸಮಾಸದಲ್ಲಿ ಅಭಾವಪದವನ್ನು ಏಕವಚನದಲ್ಲಿಟ್ಟುಕೊಂಡು ಏಕತ್ವವಿವಕ್ಷೆ ಮಾಡಬೇಕು. 'ಯಾವುದಾದರೊಂದು ಅಭಾವಕ್ಕಿಂತ ಅನ್ಯ' ಎಂದಂತಾಗುತ್ತದೆ. ಆಗ ಘಟಾನ್ಯೋನ್ಯಾಭಾವಕ್ಕಿಂತ ಅನ್ಯ ಎಂದು ಸಾಧ್ಯವನ್ನು ಕೂಡಿಸಲು ಬರುತ್ತದೆ.

'ಯಾವುದಾರೊಂದು ಅಭಾವಕ್ಕಿಂತ ಅನ್ಯ' ಎಂದರೆ, ಘಟಪಟಉಭಯಾಭಾವಕ್ಕಿಂತ ಘಟಾಭಾವವು ಅನ್ಯವೇ ಎಂದು ಸಿದ್ಧಸಾಧನತ್ವ ದೋಷವನ್ನು ಹೇಳುತ್ತೇನೆ ಎಂದರೆ ಪಕ್ಷತಾವಚ್ಛೇದಕ

ಘಟಾತ್ಯಂತಾಭಾವತ್ವಾವಚ್ಛೇದೇನ ಸಾಧ್ಯಸಾಧನ ಮಾಡುತ್ತಿದ್ದೇವೆ. ಘಟಪಟಉಭಯಾಭಾವವೂ ಕೂಡ ಒಂದು ಬಗೆಯ ಘಟಾತ್ಯಂತಾಭಾವವೇ ಆಗಿರುವುದರಿಂದ, ತದನ್ಯತ್ವವು ಅದರಲ್ಲಿ ಬಾಧಿತವಾಗುವುದರಿಂದ, ಯಾವುದಾದರೊಂದು ಘಟಾತ್ಯಂತಾಭಾವವೆಂದು ಉಭಯಾಭಾವವನ್ನು ತೆಗೆದುಕೊಳ್ಳಲಾಗುವುದಿಲ್ಲ.

**घटसंसर्गो वेति । अत्र घटात्यन्ताभावप्रतियोगितावच्छेदको यो घटसंसर्गस्तदन्यत्वमादाय दृष्टान्ते साध्यं बोध्यम् । पक्षे च तदयोगात् पटधर्मिकभेदप्रतियोगितावच्छेदकीभूततादात्म्यान्यत्वमादाय साध्यपर्यवसानादुद्देश्यसिद्धिः । न च घटात्यन्ताभावप्रतियोगितावच्छेदकघटत्वान्यत्वमादाय सिद्धसाधनमिति वाच्यम् । पटधर्मिकत्रैकालिकयत्किञ्चिदभावप्रतियोगितावच्छेदकत्वावच्छिन्नभेदस्य साध्यत्वात्। यत्किञ्चिदभावपदेन घटात्यन्ताभावपरिग्रहे तत्प्रतियोगिताच्छेदकत्वावच्छिन्नभेदस्य पक्षे बाधितत्वेन भेदसिद्धेरावश्यकत्वात् ।**

ಘಟಸಂಸರ್ಗಪಕ್ಷಕಾನುಮಾನಲ್ಲಿ ಘಟಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕವಾದ ಘಟಸಂಸರ್ಗಕ್ಕಿಂತ ಅನ್ಯವು ಪಟಸಂಸರ್ಗ ಎಂದು ದೃಷ್ಟಾಂತದಲ್ಲಿ ಸಾಧ್ಯ ಕೂಡುತ್ತದೆ. ಪಕ್ಷದಲ್ಲಿ ಘಟಸಂಸರ್ಗಕ್ಕಿಂತ ಅನ್ಯತ್ವವು ಬಾಧಿತವಾಗಿರುವುದರಿಂದ ಪಟಧರ್ಮಿಕ ಭೇದಪ್ರತಿಯೋಗಿತಾಚ್ಛೇದಕವಾದ ತಾದಾತ್ಮ್ಯಕ್ಕಿಂತ ಅನ್ಯತ್ವವಿಟ್ಟುಕೊಂಡೇ ಸಾಧ್ಯವನ್ನು ಕೂಡಿಸಬೇಕಾಗುವುದರಿಂದ ಘಟಪಟಭೇದ ಸಿದ್ಧಿಯಾಗುವುದು.

ಘಟಾತ್ಯಂತಾಭಾವ ಪ್ರತಿಯೋಗಿತಾವಚ್ಛೇಕವೆಂದರೆ ಘಟತ್ವವೂ ಆಗುವುದರಿಂದ ತದನ್ಯತ್ವವು ಪಕ್ಷವಾದ ಘಟಸಂಸರ್ಗದಲ್ಲಿ ಸಿದ್ಧವೇ ಇದೆ ಎಂದು ಸಿದ್ಧಸಾಧನತ್ವವನ್ನು ಹೇಳುತ್ತೇನೆ ಎಂದರೆ, ಪ್ರತಿಯೋಗಿತಾವಚ್ಛೇದಕಾನ್ಯತ್ವವು ಇಲ್ಲಿ ಪ್ರತಿಯೋಗಿತಾವಚ್ಛೇದಕತ್ವಾವಚ್ಛಿನ್ನ ಪ್ರತಿಯೋಗಿತಾಕ ಭೇದವು ವಿವಕ್ಷಿತವಾಗಿದೆ ಎನ್ನಬೇಕು. ಘಟಸಂಸರ್ಗವೂ ಕೂಡ ಘಟಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕವಾಗಿರುವುದರಿಂದ, ತದನ್ಯತ್ವ ಬಾರದಿರುವುದರಿಂದ, ಪ್ರತಿಯೋಗಿತಾವಚ್ಛೇದಕತ್ವಾವಚ್ಛಿನ್ನಭೇದವು ಪಕ್ಷದಲ್ಲಿ ಬರುವುದಿಲ್ಲ.

ಪಟಧರ್ಮಿಕತ್ರೈಕಾಲಿಕ ಯತ್ಕಿಂಚಿದಭಾವ ಪ್ರತಿಯೋಗಿತಾವಚ್ಛೇದಕತ್ವಾವಚ್ಛಿನ್ನ ಭೇದವೇ ಇಲ್ಲಿ ಸಾಧ್ಯ. 'ಯತ್ಕಿಂಚಿದಭಾವ' ಪದದಿಂದ ಘಟಾತ್ಯಂತಾಭಾವವನ್ನು ತೆಗೆದುಕೊಂಡರೆ ತತ್ ಪ್ರತಿಯೋಗಿತಾವಚ್ಛೇದಕ ಘಟತ್ವಾನ್ಯತ್ವ ಬಂದರೂ, ಪ್ರತಿಯೋಗಿತಾವಚ್ಛೇದಕ ಘಟಸಂಸರ್ಗಾನ್ಯತ್ವ

ಬಾರದಿರುವುದರಿಂದ ಪ್ರತಿಯೋಗಿತಾವಚ್ಛೇದಕತ್ವಾವಚ್ಛಿನ್ನಭೇದವಿಟ್ಟುಕೊಂಡು ಸಾಧ್ಯವನ್ನು ಕೂಡಿಸಲಾಗದು. ಆದರಿಂದ ಘಟಾತ್ಯಂತಾಭಾವವನ್ನು ತೆಗೆದುಕೊಳ್ಳಬಾರದು. ಘಟಭೇದವನ್ನು ತೆಗೆದುಕೊಂಡು ತತ್‌ಪ್ರತಿಯೋಗಿತಾವಚ್ಛೇದಕ ತಾದಾತ್ಮ್ಯಾನ್ಯತ್ವವನ್ನು ಪಕ್ಷದಲ್ಲಿ ಹೇಳಬೇಕಾಗುತ್ತದೆ. ಆದರಿಂದ ಪಟಧರ್ಮಿಕ ಘಟಭೇದಸಿದ್ಧಿ.

**न च घटस्यैकसंसर्गे अपरसंसर्गावच्छिन्नात्यन्ताभावप्रतियोगितावच्छेदकत्वावच्छिन्नभेदस्य सिद्धत्वात् सिद्धसाधनमिति वाच्यम् । घटसंसर्गत्वावच्छेदेन साध्यसिद्धेरुद्देश्यत्वेन दोषाभावात् । पटसंसर्गावच्छिन्नपटात्यन्ताभावप्रतियोगितावच्छेदकभेदमादाय सिद्धसाधनभङ्गाय घटनिष्ठेति । अन्यत् पूर्ववत् । संसर्गत्वं च मिथो भिन्नप्रतियोग्यनुयोगिकसम्बन्धत्वं, तादात्म्यातिरिक्तसम्बन्धत्वं वेति ध्येयम् ।**

ಘಟದ ಒಂದು ಸಂಸರ್ಗದಲ್ಲಿ ಇನ್ನೊಂದು ಸಂಸರ್ಗದಿಂದ ಅವಚ್ಛಿನ್ನವಾದ ಅತ್ಯಂತಾಭಾವದ ಪ್ರತಿಯೋಗಿತಾವಚ್ಛೇದಕತ್ವಾವಚ್ಛಿನ್ನ ಭೇದ ಬರುವುದರಿಂದ ಸಿದ್ಧಸಾಧನವನ್ನು ಹೇಳಬಹುದು. ಆದರೆ ಘಟಸಂಸರ್ಗತ್ವಾವಚ್ಛೇದೇನ ಸಾಧ್ಯಸಾಧನಮಾಡುತ್ತಿರುವುದರಿಂದ ದೋಷವಿಲ್ಲ. ಏಕೆಂದರೆ ಇನ್ನೊಂದು ಘಟಸಂಸರ್ಗದಲ್ಲಿ ಆ ಸಂಸರ್ಗದಿಂದ ಅವಚ್ಛಿನ್ನವಾದ ಅಭಾವದ ಪ್ರತಿಯೋಗಿತಾವಚ್ಛೇದಕಭೇದ ಬಾರದಿರುವುದರಿಂದ, ಘಟಸಂಸರ್ಗತ್ವಾವಚ್ಛೇದೇನ ಸಾಧ್ಯಬಾರದಿರುವುದರಿಂದ ಸಿದ್ಧಸಾಧನವಾಗುವುದಿಲ್ಲ.

ಪ್ರತಿಯೋಗಿತಾವಚ್ಛೇದಕ ಘಟನಿಷ್ಠಧರ್ಮಾನ್ಯತ್ವವನ್ನು ಸಾಧ್ಯಮಾಡಿರುವುದರಿಂದ ಪಟಸಂಸರ್ಗಾವಚ್ಛಿನ್ನ ಪಟಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕಭೇದವನ್ನಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಲಾಗುವುದಿಲ್ಲ. ಪಟಾತ್ಯಂತಾಭಾವಪ್ರತಿಯೋಗಿತಾವಚ್ಛೇದಕವು ಪಟನಿಷ್ಠವಾಗಿರುತ್ತದೆ ಹೊರತು ಘಟನಿಷ್ಠವಾಗಿರುವುದಿಲ್ಲ. ಆದಕ್ಕೆ ಪಟಧರ್ಮಿಕಭೇದ ಪ್ರತಿಯೋಗಿತಾವಚ್ಛೇದಕ ತಾದಾತ್ಮ್ಯವನ್ನೇ ತೆಗೆದುಕೊಳ್ಳಬೇಕು. ಅದು ಘಟನಿಷ್ಠವಾಗುತ್ತದೆ. ಆದರಿಂದ ಸಿದ್ಧಸಾಧನತ್ವ ಪರಿಹಾರವಾಗುವುದು. ಇನ್ನು ಹೆಚ್ಚಿನ ಪದಕೃತ್ಯಗಳು ಹಿಂದಿನ ಅನುಮಾನಗಳಂತೆಯೆ ಎಂದು ತಿಳಿಯಬೇಕು.

ಇಲ್ಲಿ 'ಸಂಸರ್ಗ' ಎಂದರೆ ಭಿನ್ನವಾದ ಪ್ರತಿಯೋಗಿ ಅನುಯೋಗಿಗಳುಳ್ಳ ಸಂಬಂಧ. ತಾದಾತ್ಮ್ಯ ಸಂಬಂಧದಲ್ಲಿ ಪ್ರತಿಯೋಗಿ ಅನುಯೋಗಿಗಳು ಭಿನ್ನವಲ್ಲ. ತನ್ನ ತಾದಾತ್ಮ್ಯ ತನ್ನಲ್ಲೇ ಇರುತ್ತದೆ. ಆದರಿಂದ ತಾದಾತ್ಮ್ಯಾತಿರಿಕ್ತಸಂಬಂಧವು ಸಂಸರ್ಗ ಎಂದೂ ವಿವರಣೆ ಕೊಡಬಹುದು.

**घटप्रागभावो वा घटसंसर्गानवच्छिन्नप्रतियोगिताक पटादिधर्मिकानाद्यभावान्यः अभावत्वात् पटप्रध्वंसवत् । घटप्रध्वंसो वा घटसंसर्गानवच्छिन्नप्रतियोगिताक पटादिधर्मिक नित्याभावान्यः अभावत्वात् पटप्रागभाववत् ।**

**ಅಥವಾ ಘಟಪ್ರಾಗಭಾವವು ಘಟ ಪ್ರತಿಯೋಗಿಕವಾದ, ಸಂಸರ್ಗದಿಂದ ಅನವಚ್ಛಿನ್ನ ಪ್ರತಿಯೋಗಿತಾಕವಾದ, ಪಟಾದಿ ಧರ್ಮಿಕವಾದ, ಅನಾದಿಯಾದ ಅಭಾವಕ್ಕಿಂತ ಅನ್ಯ. ಅಭಾವತ್ವವಿರುವುದರಿಂದ, ಪಟಧ್ವಂಸದಂತೆ. ಅಥವಾ ಘಟಧ್ವಂಸವು ಘಟಪ್ರತಿ ಯೋಗಿಕವಾದ, ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕವಾದ, ಪಟಾದಿ ಧರ್ಮಿಕವಾದ, ನಿತ್ಯವಾದ ಅಭಾವಕ್ಕಿಂತ ಅನ್ಯ. ಅಭಾವತ್ವವಿರುವುದರಿಂದ, ಘಟಪ್ರಾಗಭಾವದಂತೆ.**

**घटप्रागभावो वेति ।** घटस्य यः संसर्गानवच्छिन्नप्रतियोगिताकपटादिधर्मिकानाद्यभावस्तदन्य इत्यर्थः । दृष्टान्ते घटप्रागभावान्यत्वमादाय साध्यसत्त्वम् । पक्षे च तदनुपपत्त्या पटधर्मिकभेदभिन्नत्वमादायैव साध्यपर्यवसानादुद्देश्यसिद्धिः । घटध्वंसान्यत्वेन सिद्धसाधनवारणायानादीति । अन्यधर्मिकभेदसिद्ध्याऽर्थान्तरवारणाय पटादिधर्मिकेति । घटात्यन्ताभावान्यत्वेन सिद्धार्थताभङ्गाय संसर्गानवच्छिन्नप्रतियोगिताकेति। पटादिधर्मिकरूपादिप्रागभावान्यत्वमादाय तद्दोषवारणाय घटेति । तस्य च घटप्रतियोगिकत्वाभावान्न दोषः । अत्राभावान्तरस्य दृष्टान्तत्वसम्भवेऽपि पटधर्मिकानाद्यभावान्यत्वस्य पटध्वंसे स्फुटत्वात्तस्यैव दृष्टान्तीकरणमिति ज्ञातव्यम् ।

"ಘಟದ ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ ಪಟಾದಿಧರ್ಮಿಕ ಅನಾದಿ ಅಭಾವ ಯಾವುದಿದೆಯೋ ಅದಕ್ಕಿಂತ ಅನ್ಯ" ಎಂದು ಸಾಧ್ಯ. ದೃಷ್ಟಾಂತದಲ್ಲಿ ಘಟಪ್ರಾಗಭಾವವಿಟ್ಟು ಕೊಳ್ಳಬೇಕು. ಅದು ಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕವಾಗಿದೆ. ಪಟಾದಿಧರ್ಮಿಕವಾದ ಅನಾದಿ ಅಭಾವವಾಗಿದೆ. ಅದಕ್ಕಿಂತ ಅನ್ಯವು ದೃಷ್ಟಾಂತವಾದ ಪಟಧ್ವಂಸವಾಗಿದೆ. ಪಕ್ಷವಾದ ಘಟಪ್ರಾಗ ಭಾವದಲ್ಲಿ ಘಟಪ್ರಾಗಭಾವಾನ್ಯತ್ವ ಬಾರದಿರುವುದರಿಂದ ಪಟಧರ್ಮಿಕ ಘಟಭೇದಾನ್ಯತ್ವ ವಿಟ್ಟುಕೊಂಡೇ ಸಾಧ್ಯವನ್ನು ಹೇಳಬೇಕಾಗುವುದರಿಂದ ಪಟದಲ್ಲಿ ಘಟಭೇದವು ಸಿದ್ಧವಾಗುವುದು.

ಘಟಧ್ವಂಸಾನ್ಯತ್ವವು ಘಟಪ್ರಾಗಭಾವದಲ್ಲಿ ಸಿದ್ಧವಾಗಿರುವುದರಿಂದ ಸಿದ್ಧಸಾಧನತ್ವದೋಷ ಬರುತ್ತದೆ. ಅದಕ್ಕೆ ಅನಾದಿ ಅಭಾವಾನ್ಯ ಎಂದಿದ್ದಾರೆ. ಘಟಧ್ವಂಸವು ಅನಾದಿಯಲ್ಲ. ಅದರಿಂದ ದೋಷವಿಲ್ಲ.

'ಪಟಾದಿಧರ್ಮಿಕಾಭಾವಾನ್ಯತ್ವ'ವನ್ನು ಹೇಳಿದ್ದರಿಂದ ಆತ್ಮಧರ್ಮಿಕ ಭೇದಕ್ಕಿಂತ ಅನ್ಯತ್ವನ್ನಿಟ್ಟು ಕೊಂಡು ಅರ್ಥಾಂತರತ್ವವನ್ನು ಹೇಳಲಾಗುವುದಿಲ್ಲ.

ಘಟಾತ್ಯಂತಾಭಾವವು ಪಟಾದಿಧರ್ಮಿಕ ಅನಾದಿ ಅಭಾವ. ತದನ್ಯತ್ವವನ್ನು ಘಟಪ್ರಾಗ ಭಾವದಲ್ಲಿ ಹೇಳಿ ಸಿದ್ಧಸಾಧನತ್ವದೋಷವನ್ನು ಹೇಳಬಾರದೆಂದು 'ಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕ' ಎಂದು ವಿಶೇಷಣ ನೀಡಿದ್ದಾರೆ. ಘಟಾತ್ಯಂತಾಭಾವವು ಸಂಸರ್ಗಾವಚ್ಛಿನ್ನವೇ ಆಗಿರುವುದರಿಂದ ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕವಲ್ಲವಾದ್ದರಿಂದ ಅದರ ವಾರಣೆಯಾಗಿದೆ. ಹಾಗಾದರೆ 'ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ' ಎಂಬಲ್ಲಿ ಘಟಪದ ವ್ಯರ್ಥವಲ್ಲವೆ? ಎಂದರೆ, ಘಟಪದವು ಸಂಸರ್ಗದಲ್ಲಿಯೆ ಅನ್ವಿತವಾಗಿದ್ದರೆ ವ್ಯರ್ಥವಾಗುತ್ತಿತ್ತು. ಆದರೆ ಅದು ಇಲ್ಲಿ ಸಮಾಸದಲ್ಲಿ ಅಭಾವದಲ್ಲಿ ಅನ್ವಿತವೆಂದು ವಿವಕ್ಷಿತವಾಗಿದೆ, 'ಘಟಸ್ಯ ಅಭಾವಃ' ಘಟಪ್ರತಿಯೋಗಿಕ ವಾದ ಅಭಾವ ಎಂದರ್ಥ. ಪಟಾದಿಧರ್ಮಿಕ ರೂಪಾದಿ ಪ್ರಾಗಭಾವಾನ್ಯತ್ವವಿಟ್ಟುಕೊಂಡರೆ ಸಿದ್ಧಸಾಧನತ್ವದೋಷ ಬರುತ್ತಿತ್ತು. ಈ ರೂಪಾದಿ ಪ್ರಾಗಭಾವ ವಾರಣೆಗೆ ಘಟಪ್ರತಿಯೋಗಿತ್ವ ವಿಶೇಷಣ. ರೂಪಾದಿ ಪ್ರಾಗಭಾವಕ್ಕೆ ಘಟಪ್ರತಿಯೋಗಿಕತ್ವವಿಲ್ಲವಾದ್ದರಿಂದ ಅದರ ವಾರಣೆಯಾಗಿದೆ.

ಇಲ್ಲಿ ಪಟಧರ್ಮಿಕ ಘಟಪ್ರಾಗಭಾವಾನ್ಯತ್ವವಿಟ್ಟುಕೊಂಡು ದೃಷ್ಟಾಂತದಲ್ಲಿ ಸಾಧ್ಯಸತ್ವವನ್ನು ಹೇಳುವುದರಿಂದ ಪ್ರಾಗಭಾವಾನ್ಯವು ಅತ್ಯಂತಾಭಾವ ಅನೋನ್ಯಾಭಾವ ಧ್ವಂಸ ಯಾವುದೂ ಆಗಬಹುದು. ಆದರೂ ಘಟಪ್ರಾಗಭಾವ ಅನಾದಿ, ತದನ್ಯತ್ವಕ್ಕೆ ಸಾದಿಯಾದ ಘಟಧ್ವಂಸವೇ ಸ್ಫುಟವಾದ ದೃಷ್ಟಾಂತವಾಗುವುದು ಎಂಬ ಅಭಿಪ್ರಾಯದಿಂದ 'ಪಟಧ್ವಂಸವತ್' ಎಂದು ದೃಷ್ಟಾಂತವಾಗಿ ತೋರಿಸಿದ್ದಾರೆ ಎಂದು ತಿಳಿಯಬೇಕು.

**केचित्तु—घटसंसर्गेणानवच्छिन्नप्रतियोगिताको यः पटधर्मिकानाद्य-भावस्तदन्यत्वं साध्यार्थः। घटात्यन्ताभावान्यत्वमादाय सिद्धसाधन-वारणाय घटसंसर्गेत्यादि। तत्र घटपदं तु दृष्टान्ते पटात्यन्ताभावान्यत्व-मादाय साध्यसत्त्वनिर्वाहार्थम्। घटपटभेदरूपोद्देश्यसिद्ध्यर्थं पटादि-धर्मिकेति। पटीयरूपादिध्वंसान्यत्वमादाय सिद्धार्थत्वनिरासायानादीति। प्रथमदलस्य घटसंसर्गावच्छिन्नप्रतियोगिताकान्यपरतया तथाविधपटत्वा-द्यन्यत्वमादाय तद्दोषवारणायाभावपदम्।**

नन्वेवं दृष्टान्तवत् पक्षेऽपि पटात्यन्ताभावान्यत्वमादाय सिद्धसाधनम्। न च घटप्रतियोगिकत्वेनाभावो विशेषणीयः । दृष्टान्ते साध्यवैकल्यापत्तेः । न च घटप्रागभावान्यत्वमादाय दृष्टान्ते साध्यसत्त्वनिर्वाह इति वाच्यम्। तस्य घटसंसर्गानवच्छिन्नप्रतियोगिताकत्वपटादिधर्मिकत्वशून्यत्वात्। घटपटयोरित्यग्रिमग्रन्थविरोधाच्च । तस्य पटात्यन्ताभावान्यत्वमादाय दृष्टान्ते साध्यसत्त्वोपपादनपरत्वादिति चेन्न । स्वप्रतियोगिप्रतियोगिकत्वेनाभावविशेषणात् । स्वपदस्य प्रतिज्ञायां पक्षपरत्वादुदाहरणे च दृष्टान्तपरत्वात् न कोऽपि दोष– इत्याहुः ।

ಇಲ್ಲಿ ಕೆಲವರ ವ್ಯಾಖ್ಯಾನ ಹೀಗಿದೆ– 'ಘಟಸಂಸರ್ಗದಿಂದ ಅನವಚ್ಛಿನ್ನಪ್ರತಿಯೋಗಿತಾಕವಾದ ಯಾವ ಪಟಧರ್ಮಿಕ ಅನಾದಿ ಅಭಾವವಿದೆಯೋ ತದನ್ಯತ್ವವೇ ಸಾಧ್ಯ. ಘಟಾತ್ಯಂತಾಭಾವಾನ್ಯತ್ವವು ಘಟಪ್ರಾಗಭಾವದಲ್ಲಿ ಇದೆಯಾದ್ದರಿಂದ ಅದನ್ನಿಟ್ಟುಕೊಂಡು ಸಿದ್ಧಸಾಧನವನ್ನು ಹೇಳಬಾರದೆಂದು ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕವೆಂದು ವಿಶೇಷಣ ಕೊಟ್ಟಿದ್ದಾರೆ. ಅದರಲ್ಲಿ ಘಟಪದಕ್ಕೆ ಬೇರೆ ಕೃತ್ಯವಿದೆ. ದೃಷ್ಟಾಂತದಲ್ಲಿ ಪಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ಸಾಧ್ಯಸತ್ವನಿರ್ವಾಹ ಮಾಡಬೇಕಾಗಿದೆ. ಘಟಪದವಿಲ್ಲದಿದ್ದರೆ ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕತ್ವವು ಪಟಾತ್ಯಂತಾಭಾವದಲ್ಲಿ ಬರಲಾರದು. ಘಟಪದವಿದ್ದರೆ ಮಾತ್ರ ಘಟಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕತ್ವವು ಪಟಾತ್ಯಂತಾಭಾವದಲ್ಲಿ ಬರುತ್ತದೆ ಎಂದು ಅದನ್ನಿಟ್ಟುಕೊಂಡು ದೃಷ್ಟಾಂತದಲ್ಲಿ ಸಾಧ್ಯಸತ್ವನಿರ್ವಾಹ ಶಕ್ಯವಾಗುವುದು.

'ಪಟಾದಿ ಧರ್ಮಿಕ' ಎಂದು ವಿಶೇಷಣ ನೀಡಿರುವುದು ಘಟಪಟಭೇದರೂಪವಾದ ಉದ್ದೇಶ್ಯ ಸಿದ್ಧಿಗಾಗಿ. 'ಅನಾದಿ' ಎಂದು ಹೇಳಿದ್ದು, ಪಟಧರ್ಮಿಕರೂಪಧ್ವಂಸಾನ್ಯತ್ವವು ಪಕ್ಷವಾದ ಘಟಪ್ರಾಗಭಾವದಲ್ಲಿ ಬರುವುದರಿಂದ ಸಿದ್ಧಸಾಧನ ಪ್ರಸಂಗವಿದೆ. ಅದರ ಪರಿಹಾರಕ್ಕಾಗಿ.

'ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ' ಎಂದರೆ 'ಘಟಸಂಸರ್ಗಾವಚ್ಛಿನ್ನಪ್ರತಿ ಯೋಗಿತಾಕಾನ್ಯ' ಎಂದು ಅಭಿಪ್ರಾಯವಿರುವುದರಿಂದ ಪಟಧರ್ಮಿಕವೂ ಅನಾದಿಯೂ ಆದ ಪಟತ್ವಾದಿಗಳೂ ಕೂಡ ಅವಚ್ಛಿನ್ನಪ್ರತಿಯೋಗಿತಾಕಾನ್ಯವೇ ಆಗಿರುವುದರಿಂದ ತದನ್ಯತ್ವವಿಟ್ಟುಕೊಂಡು ಸಿದ್ಧಸಾಧನದೋಷವನ್ನು ಹೇಳಬಹುದು ಅದಕ್ಕೆ 'ಅಭಾವ'ಪದವಿದೆ. ಪಟತ್ವಾದಿಗಳು ಭಾವಪದಾರ್ಥವಾಗಿರುವುದರಿಂದ ವಾರಣೆಯಾಯಿತು.

ಇಲ್ಲಿ ಸಮಸ್ಯೆ ಬರುತ್ತದೆ—ದೃಷ್ಟಾಂತದಂತೆ ಪಕ್ಷವೂ ಕೂಡ ಪಟಾತ್ಯಂತಾಭಾವಾನ್ಯವಾಗಿದೆ

ಎಂದು ಸಿದ್ಧಸಾಧನದೋಷ ಬರುತ್ತದೆ. ಅದಕ್ಕೆ ಅಭಾವದಲ್ಲಿ ಘಟಪ್ರತಿಯೋಗಿಕ ಎಂದು ವಿಶೇಷಣ ನೀಡಿದರೆ ದೃಷ್ಟಾಂತದಲ್ಲಿ ಪಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ಸಾಧ್ಯನಿರ್ವಾಹ ಮಾಡಲಾಗುವುದಿಲ್ಲ. ಪಟಾತ್ಯಂತಾ ಭಾವವು ಘಟಪ್ರತಿಯೋಗಿಕವಾಗುವುದಿಲ್ಲ. ಘಟಪ್ರಾಗಭಾವಾನ್ಯತ್ವವು ಘಟಧ್ವಂಸದಲ್ಲಿ ಇದೆ ಎಂದು ಸಾಧ್ಯನಿರ್ವಾಹ ಮಾಡೋಣವೆಂದರೆ, ಘಟಪ್ರಾಗಭಾವಕ್ಕೆ ಘಟಸಂಸರ್ಗಾನವಚ್ಛಿನ್ನತ್ವವು ಬರುವುದಿಲ್ಲ, ಪಟಾದಿಧರ್ಮಿಕತ್ವವೂ ಬರುವುದಿಲ್ಲ. ಹೀಗಾಗಿ ಘಟಪ್ರಾಗಭಾವಾನ್ಯತ್ವವಿಟ್ಟುಕೊಂಡು ದೃಷ್ಟಾಂತದಲ್ಲಿ ಸಾಧ್ಯಸತ್ವನಿರ್ವಾಹ ಮಾಡಲು ಸಾಧ್ಯವಿಲ್ಲ. ಮತ್ತು 'ಘಟಪಟಯೋಃ' ಎಂದು ಮುಂದೆ ಮೂಲದಲ್ಲಿ ಪಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ದೃಷ್ಟಾಂತದಲ್ಲಿ ಸಾಧ್ಯನಿರ್ವಾಹ ವನ್ನು ಉಪಪಾದನ ಮಾಡಿದ್ದಾರೆ, ಅದರ ವಿರೋಧವೂ ಬರುತ್ತದೆ.

ಈ ಸಮಸ್ಯೆಗೆ ಪರಿಹಾರವಾಗಿ 'ಸ್ವಪ್ರತಿಯೋಗಿ ಪ್ರತಿಯೋಗಿಕ' ಎಂದು ಅಭಾವದಲ್ಲಿ ವಿಶೇಷಣ ಕೊಡಬೇಕು. ಈ ಸ್ವಪದವು ಪ್ರತಿಜ್ಞೆಯಲ್ಲಿ ಪಕ್ಷಪರ. ಉದಾಹರಣದಲ್ಲಿ ದೃಷ್ಟಾಂತಪರವಾಗುತ್ತದೆ. ಈಗ ಪಟಧ್ವಂಸರೂಪ ದೃಷ್ಟಾಂತದಲ್ಲಿ ಸ್ವಪದವು ಪಟಪರ. ಘಟಪ್ರಾಗಭಾವ ರೂಪವಾದ ಪಕ್ಷದಲ್ಲಿ ಘಟಪರವೆಂದಿಟ್ಟು ಕೊಂಡರೆ ದೃಷ್ಟಾಂತದಲ್ಲಿ ಪಟಾತ್ಯಂತಾಭಾವಾನ್ಯತ್ವವನ್ನು ಇಟ್ಟುಕೊಂಡು ಸಾಧ್ಯಸತ್ವ ನಿರ್ವಾಹ ಮಾಡುವುದರಿಂದ ಸಾಧ್ಯವೈಕಲ್ಯವಿಲ್ಲ, ಪಕ್ಷದಲ್ಲಿ ಪಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಲು ಬರುವುದಿಲ್ಲ' ಎಂದು ಹೇಳುತ್ತಾರೆ.

**तच्चिन्त्यम् । अनादिपदवैयर्थ्यापत्तेः । अनुमानपञ्चकेऽप्यत्यन्ताभावमादायैव दृष्टान्ते साध्यसत्त्वोपपादने त्रैकालिकत्वानादित्वनित्यत्वरूपविभिन्नविशेषणोपादानस्य निर्बीजत्वप्रसङ्गाच्च । एतेन व्यावहारिकभेदसिद्ध्याऽर्थान्तरवारणमनादिप्रदप्रयोजनमित्यपास्तम् । तावन्मात्रस्य तत्प्रयोजनत्वे पूर्वानुमानेऽप्यनादित्वस्यैव लाघवेन निवेशनौचित्यात् । अग्रिमग्रन्थस्त्वनुकूलतयैव व्याख्यास्यते । तस्माद्घटध्वंसप्रागभावयोः संसर्गानवच्छिन्नप्रतियोगिताकत्वपटादिधर्मिकत्वाभ्युपगमाभिप्रायक एवायं ग्रन्थ इति युक्तमुत्पश्यामः ।**

ಇದು ಸರಿಯಲ್ಲ. ಅನಾದಿಪದ ವ್ಯರ್ಥವಾಗುತ್ತದೆ. ಪಟಧರ್ಮಿಕರೂಪಧ್ವಂಸಾನ್ಯತ್ವವಿಟ್ಟು ಕೊಂಡು ಸಿದ್ಧಸಾಧನತ್ವವಾರಣೆಗಾಗಿ ಅನಾದಿಪದವೆನ್ನುವುದಾದರೆ ಅನಾದಿಯಾದ ಪಟಧರ್ಮಿಕ ರೂಪಪ್ರಾಗಭಾವಾನ್ಯತ್ವವಿಟ್ಟುಕೊಂಡು ಸಿದ್ಧ ಸಾಧನದೋಷವಿದ್ದೇ ಇರುತ್ತದೆ.

ಐದೂ ಅನುಮಾನಗಳಲ್ಲಿ ಅತ್ಯಂತಾಭಾವಾನ್ಯತ್ವವಿಟ್ಟುಕೊಂಡೇ ದೃಷ್ಟಾಂತದಲ್ಲಿ ಸಾಧ್ಯಸತ್ವ ಉಪಪಾದನ ಮಾಡುವು ದಾದರೆ ತ್ರೈಕಾಲಿಕತ್ವ ಅನಾದಿತ್ವ ನಿತ್ಯತ್ವವೆಂದು ಬೇರೆಬೇರೆ ವಿಶೇಷಣಗಳನ್ನು ಏಕೆ ನೀಡಿದ್ದಾರೆ? ಎಂಬ ಪ್ರಶ್ನೆಯೂ ಬರುತ್ತದೆ. 'ಅನಾದಿ' ಪದದಿಂದ ವ್ಯಾವಹಾರಿಕಭೇದ ವ್ಯಾವೃತ್ತಿಯಾಗುವುದರಿಂದ ಅರ್ಥಾಂತರತ್ವ ದೋಷಪರಿಹಾರವಾಗುತ್ತದೆ' ಎನ್ನುವುದು ಸರಿಯಲ್ಲ. ವ್ಯಾವಹಾರಿಕ ಭೇದ ವ್ಯಾವೃತ್ತಿ ಮಾತ್ರವೆ ಅನಾದಿಪದಪ್ರಯೋಜನವಾಗಿದ್ದರೆ ಹಿಂದಿನ ಅನುಮಾನದಲ್ಲಿಯೂ ಅನಾದಿತ್ವವಿಶೇಷಣವನ್ನೇ ನೀಡಿದರೆ ಲಾಘವವಿರುತ್ತಿತ್ತು.

'ಘಟಪಟಯೋಃ' ಎಂದು ಮೂಲದಲ್ಲಿ ಪಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ದೃಷ್ಟಾಂತ ದಲ್ಲಿ ಸಾಧ್ಯ ನಿರ್ವಾಹೋಪಪಾದನ ಮಾಡುವ ಅಭಿಪ್ರಾಯವಿಲ್ಲ. ಅದರ ಅಭಿಪ್ರಾಯವನ್ನು ಮುಂದೆ ಹೇಳುತ್ತೇವೆ.

ಆದರಿಂದ ಘಟಧ್ವಂಸಪ್ರಾಗಭಾವಗಳಿಗೆ ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕತ್ವವನ್ನೂ ಪಟಾದಿ ಧರ್ಮಿಕತ್ವವನ್ನೂ ಒಪ್ಪುವ ತಾರ್ಕಿಕೈಕದೇಶಿಗಳ ಅಭಿಪ್ರಾಯಾನುಸಾರ ಈ ಗ್ರಂಥ ಹೊರಟಿದೆ ಎನ್ನುವುದೇ ಯುಕ್ತವೆಂದು ನಮಗೆ ಕಾಣುತ್ತದೆ.

**—घटध्वंसो वेति । घटस्य यः संसर्गानवच्छिन्नप्रतियोगिताक-पटादिधर्मिकनित्याभावस्तदन्य इत्यर्थः । दृष्टान्ते घटध्वंसान्यत्वमादाय, पक्षे च घटभेदान्यत्वमादाय साध्यमुपपादनीयम् । घटप्रागभावान्यत्व-मादाय सिद्धसाधनवारणाय नित्येति । उद्देश्यसिद्ध्यर्थं पटादिधर्मिकेति । घटात्यन्ताभावान्यत्वमादाय सिद्धार्थताभङ्गाय संसर्गानवच्छिन्न-प्रतियोगिताकेति । पटीयरूपध्वंसान्यत्वमादाय तद्दोषनिरासार्थं घटेति । अत्रापि पटध्वंसादेर्दृष्टान्तत्वसम्भवेऽपि पूर्ववत् स्फुटप्रतिपत्तये प्रागभाव-ग्रहणम् ।**

ಘಟಧ್ವಂಸ ಪಕ್ಷಕಾನುಮಾನದಲ್ಲಿಯೂ 'ಘಟದ ಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕ ಪಟಾದಿಧರ್ಮಿಕ ನಿತ್ಯ ಅಭಾವ ಯಾವುದಿದೆಯೋ ಅದಕ್ಕಿಂತ ಅನ್ಯ' ಎಂದು ಸಾಧ್ಯ. ದೃಷ್ಟಾಂತದಲ್ಲಿ ಘಟಧ್ವಂಸಾನ್ಯತ್ವವಿಟ್ಟುಕೊಂಡು ಸಾಧ್ಯವನ್ನು ಕೂಡಿಸಬೇಕು. ಪಕ್ಷದಲ್ಲಿ ಘಟಭೇದಾನ್ಯತ್ವ ವಿಟ್ಟುಕೊಂಡೇ ಸಾಧ್ಯವನ್ನು ಉಪಪಾದನ ಮಾಡಬೇಕು. ಘಟಪ್ರಾಗಭಾವಾನ್ಯತ್ವವು ಪಕ್ಷವಾದ ಘಟಧ್ವಂಸದಲ್ಲಿ ಸಿದ್ಧವಿರುವುದರಿಂದ ಸಿದ್ಧಸಾಧನ ವಾರಣೆಗಾಗಿ 'ನಿತ್ಯ' ಅಭಾವ ಎಂದು ಅಭಾವಕ್ಕೆ ವಿಶೇಷಣ. ಪಟಾದಿಧರ್ಮಿಕ ಘಟಭೇದ ಸಿದ್ಧಿಯು ಉದ್ದೇಶ್ಯವಾಗಿರುವುದರಿಂದ ಉದ್ದೇಶ್ಯಸಿದ್ಧಿಗಾಗಿ

ಪಟಾದಿಧರ್ಮಿಕ ಅಭಾವ ಎಂದು ಅಭಾವಕ್ಕೆ ವಿಶೇಷಣ. ಘಟಾತ್ಯಂತಾಭಾವಾನ್ಯತ್ವವಿಟ್ಟುಕೊಂಡು ಸಿದ್ಧಸಾಧನ ಪರಿಹಾರಕ್ಕಾಗಿ ಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕ ಅಭಾವ ಎಂದು ಅಭಾವದಲ್ಲಿ ವಿಶೇಷಣ. ಪಟಧರ್ಮಿಕ ರೂಪಧ್ವಂಸಾನ್ಯತ್ವವಿಟ್ಟುಕೊಂಡು ಸಿದ್ಧಸಾಧನ ಪರಿಹಾರಕ್ಕಾಗಿ 'ಘಟಸ್ಯ ಅಭಾವ' 'ಘಟದ ಅಭಾವ' ಎಂದು ಅಭಾವದಲ್ಲಿ ಘಟಪ್ರತಿಯೋಗಿಕತ್ವ ವಿಶೇಷಣ.

ಈ ಅನುಮಾನದಲ್ಲಿಯೂ 'ಪಟಧ್ವಂಸ ಪಟಾತ್ಯಂತಾಭಾವಾದಿಗಳನ್ನು ದೃಷ್ಟಾಂತವಾಗಿ ಕೊಡಬಹುದಾಗಿದ್ದರೂ ನಿತ್ಯಘಟಧ್ವಂಸಾನ್ಯತ್ವಕ್ಕೆ ಅನಿತ್ಯವಾದ ಘಟಪ್ರಾಗಭಾವವು ಸ್ಫುಟವಾದ ದೃಷ್ಟಾಂತವೆಂದು ಅದನ್ನೆ ತೋರಿಸಿದ್ದಾರೆ.

**घटपटयोरभेदवादिना पटे घटप्रतियोगिकात्यन्ताभावादेर्घटसंसर्गानवच्छिन्नप्रतियोगिकत्वादेरङ्गीकार्यत्वात् न साध्यवैकल्यादि दृष्टान्तस्य । तयोः पारमार्थिकाभेदेऽपि व्यावहारिकभेदमात्रेण पटप्रतियोगिकात्यन्ताभावादेर्घटसंसर्गानवच्छिन्नप्रतियोगिकत्वमित्यङ्गीकार्यम् । अन्यथा घटार्थिनः घटे प्रवृत्तिप्रसङ्गः । सिद्धघटस्य पुंसः पटसामाग्र्यनुपादानप्रसङ्गश्च ।**

ಘಟಪಟಗಳಿಗೆ ಅಭೇದವೆನ್ನುವವನೂ ಕೂಡ ಪಟಪ್ರತಿಯೋಗಿಕ ಅತ್ಯಂತಾಭಾವಾದಿಗಳಿಗೆ ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕತ್ವಾದಿಗಳನ್ನು ಅಂಗೀಕರಿಸಬೇಕಾಗಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ. ಸಿದ್ಧಸಾಧನವೂ ಇಲ್ಲ. ಪಾರಮಾರ್ಥಿಕ ಅಭೇದವಿದ್ದರೂ ವ್ಯಾವಹಾರಿಕಭೇದದಿಂದಲೇ ಪಟಪ್ರತಿಯೋಗಿಕಾತ್ಯಂತಾಭಾವಾದಿಗಳಿಗೆ ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕತ್ವಾದಿಗಳನ್ನು ಅಂಗೀಕರಿಸಲೇಬೇಕು. ಇಲ್ಲದಿದ್ದರೆ ಘಟಾರ್ಥಿಯು ಪಟ ಸಂಪಾದನೆಗೆ ಪ್ರವೃತ್ತಿ ಮಾಡುವ ಪ್ರಸಂಗ. ಘಟವು ಒಬ್ಬನಿಗೆ ಸಿಕ್ಕಿದ್ದರೆ ಅವನು ಮತ್ತೆ ಪಟಸಾಮಗ್ರಿಯನ್ನು ಬೇಡವೆನ್ನುವ ಪ್ರಸಂಗವೂ ಬರುತ್ತದೆ.

**न च व्यावहारिकान्योन्याभावसिद्ध्याऽर्थान्तरत्वम् । त्रैकालिकत्वादिनाऽन्योन्याभावस्य विशेषितत्वात् । व्यावहारिकत्वे च तदयोगात् । अनुकूलतर्कस्यात्रैवोक्तत्वात् नोपाध्याभाससमानयोगक्षेमत्वाप्रयोजकत्वानि।**

**ವ್ಯಾವಹಾರಿಕಾನ್ಯೋನ್ಯಾಭಾವಸಿದ್ಧಿಯಿಂದ ಅರ್ಥಾಂತರತ್ವ ದೋಷವೆಂದು ಹೇಳ ಬಾರದು. ತ್ರೈಕಾಲಿಕತ್ವಾದಿ ವಿಶೇಷಣಗಳನ್ನು ಅನ್ಯೋನ್ಯಾಭಾವಕ್ಕೆ ಕೊಟ್ಟಿರುವುದರಿಂದ ವ್ಯಾವಹಾರಿಕ ಅನ್ಯೋನ್ಯಾಭಾವ ಸಿದ್ಧಿಸಲಾರದು. ವ್ಯಾವಹಾರಿಕವಾದರೆ ತ್ರೈಕಾಲಿ ಕತ್ವಾದಿ ವಿಶೇಷಣ ಕೂಡಲಾರದು. ಅನುಕೂಲತರ್ಕವನ್ನು ನಾವು ಇಲ್ಲಿಯೇ ಹೇಳಿರುವುದರಿಂದ ಉಪಾಧಿ, ಆಭಾಸಸಾಮ್ಯ, ಅಪ್ರಯೋಜಕತ್ವದೋಷಗಳಿಗೂ ಅವಕಾಶವಿಲ್ಲ.**

नन्वत्र घटपक्षकानुमाने दृष्टान्तस्य साध्यवैकल्यम्। घटपटयोरभेदमते पटात्यन्ताभावस्यापि घटसंसर्गावच्छिन्नप्रतियोगिताकत्वेन तदन्याभाव-प्रतियोगित्वस्य पटादावभावात् । एवं घटात्यन्ताभावादिपक्षकानुमानेषु सिद्धसाधनम् । पटात्यन्ताभावस्यापि घटप्रतियोगिकतया, पटसंसर्गस्यापि घटनिष्ठधर्मतया, पटप्रागभावध्वंसयोरपि घटप्रतियोगिकत्वपटधर्मिकत्व-सम्भवेन च तत्तदन्यत्वरूपसाध्यस्य घटात्यन्ताभावादिरूपपक्षे सिद्धत्वादित्यत आह — **घटपटयोरिति** । पटात्यन्ताभावादेरित्यादिपदेन पटसंसर्गपटप्रागभावपटध्वंसानां परिग्रहः । धटसंसर्गानवच्छिन्नप्रति-योगिताकत्वादेरित्यादिपदेन घटप्रतियोगिकत्वधटनिष्ठधर्मत्वपटधर्मिकत्वानां राहित्यपरिग्रहः । दृष्टान्तस्य साध्यवैकल्यादीत्यादिपदेन सिद्धसाधन-परिग्रहः ।

ಇಲ್ಲಿ ಘಟಪಕ್ಷಕಾನುಮಾನದಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿದೆ. ಘಟಪಟಗಳು ಅಭಿನ್ನವೆಂಬ ಮತದಲ್ಲಿ ಪಟಾತ್ಯಂತಾಭಾವಕ್ಕೂ ಘಟಸಂಸರ್ಗಾವಚ್ಛಿನ್ನಪ್ರತಿಯೋಗಿತಾಕತ್ವ ವಿರುವುದರಿಂದ ತದನ್ಯ ಅಭಾವಪ್ರತಿಯೋಗಿತ್ವವು ಪಟದಲ್ಲಿ ಬರುವುದಿಲ್ಲ.

ಹೀಗೇ ಘಟಾತ್ಯಂತಾಭಾವಾದಿ ಪಕ್ಷಕ ಅನುಮಾನಗಳಲ್ಲಿ ಸಿದ್ಧಸಾಧನ. ಹೇಗೆಂದರೆ, ಘಟಾತ್ಯಂತಾಭಾವಪಕ್ಷಕ ಅನುಮಾನದಲ್ಲಿ ಪಟಾತ್ಯಂತಾಭಾವವೂ ಕೂಡ ಘಟಪ್ರತಿಯೋಗಿಕ ವಾದ್ದರಿಂದ ಘಟಪ್ರತಿಯೋಗಿಕಾಭಾವವೆಂದು ಪಟಾತ್ಯಂತಾಭಾವವನ್ನಿಟ್ಟುಕೊಂಡು ತದನ್ಯತ್ವವನ್ನು ಘಟಾತ್ಯಂತಾಭಾವದಲ್ಲಿ ಹೇಳಲು ಬರುವುದರಿಂದ ಸಿದ್ಧಸಾಧನ.

ಘಟಸಂಸರ್ಗಪಕ್ಷಕ ಅನುಮಾನದಲ್ಲಿ ಪಟಸಂಸರ್ಗವೂ ಕೂಡ ಘಟನಿಷ್ಠ ಧರ್ಮ

ವಾಗಿರುವುದರಿಂದ ಘಟನಿಷ್ಠಧರ್ಮವೆಂದು ಪಟಸಂಸರ್ಗವಿಟ್ಟುಕೊಂಡು ತದನ್ಯತ್ವವನ್ನು ಘಟಸಂಸರ್ಗದಲ್ಲಿ ಹೇಳಲು ಬರುವುದರಿಂದ ಸಿದ್ಧಸಾಧನ.

ಘಟಪ್ರಾಗಭಾವಪಕ್ಷಕಾನುಮಾನದಲ್ಲಿ ಪಟಪ್ರಾಗಭಾವದಲ್ಲಿ ಕೂಡ ಘಟಪ್ರತಿಯೋಗಿಕತ್ವ ಪಟಧರ್ಮಿಕತ್ವಗಳಿರಬಹುದಾದ್ದರಿಂದ ತದನ್ಯತ್ವವನ್ನು ಘಟಪ್ರಾಗಭಾವದಲ್ಲಿ ಹೇಳಿ ಸಿದ್ಧಸಾಧನ ವೆನ್ನಬಹುದು.

ಘಟಧ್ವಂಸಪಕ್ಷಕಾನುಮಾನದಲ್ಲಿ ಪಟಧ್ವಂಸದಲ್ಲಿಯೂ ಘಟಪ್ರತಿಯೋಗಿತ್ವ ಪಟಧರ್ಮಿಕತ್ವ ಗಳು ಬರುವುದರಿಂದ ತದನ್ಯತ್ವವು ಘಟಧ್ವಂಸದಲ್ಲಿದೆ ಎಂದು ಸಿದ್ಧಸಾಧನವೆನ್ನಬಹುದು. ಇದಕ್ಕೆಲ್ಲ ಒಂದೇ ಪರಿಹಾರವನ್ನು ಹೇಳುತ್ತಾರೆ, 'ಘಟಪಟಗಳಿಗೆ ಪಾರಮಾರ್ಥಿಕ ಅಭೇದವಿದ್ದರೂ ವ್ಯಾವಹಾರಿಕ ಭೇದವಿದೆ' ಎಂದು.

'ಪಟಾತ್ಯಂತಾಭಾವಾದಿಗಳಿಗೆ' ಎಂಬಲ್ಲಿ 'ಆದಿ'ಪದದಿಂದ ಪಟಸಂಸರ್ಗ ಪಟಪ್ರಾಗಭಾವ – ಪಟಧ್ವಂಸಗಳನ್ನಿಟ್ಟುಕೊಳ್ಳಬೇಕು. 'ಘಟಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕತ್ವಾದಿಗಳನ್ನು' ಎಂಬಲ್ಲಿ 'ಆದಿ'ಪದದಿಂದ ಘಟಪ್ರತಿಯೋಗಿತ್ವರಾಹಿತ್ಯ–ಘಟನಿಷ್ಠಧರ್ಮತ್ವರಾಹಿತ್ಯ–ಪಟಧರ್ಮಿಕತ್ವರಾಹಿತ್ಯ ಗಳನ್ನು ಇಟ್ಟುಕೊಳ್ಳಬೇಕು.

ಘಟಪಕ್ಷಕಾನುಮಾನದಲ್ಲಿ ಪಾರಮಾರ್ಥಿಕ ಅಭೇದದೃಷ್ಟಿಯಿಂದ ಪಟಾತ್ಯಂತಾಭಾವಕ್ಕೆ ಘಟಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕತ್ವವಿಟ್ಟುಕೊಂಡು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಹೇಳಿದ್ದಾನೆ. ವ್ಯಾವಹಾರಿಕ ಭೇದಬಲದಿಂದ ಆ ಪಟಾತ್ಯಂತಾಭಾವಕ್ಕೆ ಘಟಸಂಸರ್ಗಾನವಚ್ಛಿನ್ನಪ್ರತಿಯೋಗಿತಾಕತ್ವ ಬರುವುದರಿಂದ ತತ್ಪ್ರತಿಯೋಗಿತ್ವವು ಪಟದಲ್ಲಿ ಇದೆ ಎಂದು ಸಾಧ್ಯಸತ್ವನಿರ್ವಾಹವಾಗುತ್ತದೆ.

ಘಟಾತ್ಯಂತಾಭಾವ ಪಕ್ಷಕ ಅನುಮಾನದಲ್ಲಿ ಪಟಾತ್ಯಂತಾಭಾವದಲ್ಲಿ ಘಟಪ್ರತಿಯೋಗಿಕತ್ವ ವಿಲ್ಲ. ಘಟಭೇದವನ್ನೇ ಇಟ್ಟುಕೊಂಡು ತದನ್ಯತ್ವವನ್ನು ಪಕ್ಷದಲ್ಲಿ ಹೇಳಬೇಕಾಗುವುದರಿಂದ ಸಿದ್ಧಸಾಧನವಿಲ್ಲ.

ಘಟಸಂಸರ್ಗಪಕ್ಷಕಾನುಮಾನದಲ್ಲಿ ಪಟಸಂಸರ್ಗಕ್ಕೆ ಘಟನಿಷ್ಠಧರ್ಮತ್ವವಿಲ್ಲ. ಪಟಧರ್ಮಿಕ ಭೇದಪ್ರತಿಯೋಗಿತಾವಚ್ಛೇದಕವಾದ ಘಟನಿಷ್ಠ ತಾದಾತ್ಮ್ಯವನ್ನೇ ಇಟ್ಟುಕೊಂಡು ತದನ್ಯತ್ವವನ್ನು ಘಟಸಂಸರ್ಗದಲ್ಲಿ ಹೇಳಬೇಕಾಗುವುದರಿಂದ ಸಿದ್ಧಸಾಧನವಿಲ್ಲ.

ಘಟಪ್ರಾಗಭಾವ ಪಕ್ಷಕಾನುಮಾನದಲ್ಲಿ ಪಟಪ್ರಾಗಭಾವದಲ್ಲಿ ಘಟಪ್ರತಿಯೋಗಿಕತ್ವ ಪಟಧರ್ಮಿಕತ್ವಗಳಿಲ್ಲ. ಘಟಪ್ರತಿಯೋಗಿಕ ಪಟಧರ್ಮಿಕ ಘಟಭೇದಾನ್ಯತ್ವವನ್ನೇ ಇಟ್ಟುಕೊಂಡು ಸಾಧ್ಯಸತ್ವನಿರ್ವಾಹ ಮಾಡಬೇಕಾಗುವುದರಿಂದ ಸಿದ್ಧಸಾಧನವಿಲ್ಲ.

ಘಟಧ್ವಂಸಪಕ್ಷಕಾನುಮಾನದಲ್ಲಿಯೂ ಪಟಧ್ವಂಸದಲ್ಲಿ ಘಟಪ್ರತಿಯೋಗಿಕತ್ವ ಪಟಧರ್ಮಿಕತ್ವ

ಗಳಿಲ್ಲದ್ದರಿಂದ ಘಟಪ್ರತಿಯೋಗಿಕ ಪಟಧರ್ಮಿಕ ಘಟಭೇದಾನ್ಯತ್ವವಿಟ್ಟುಕೊಂಡೇ ಸಾಧ್ಯಸತ್ವ ನಿರ್ವಾಹ ಮಾಡಬೇಕಾಗುವುದರಿಂದ ಸಿದ್ಧಸಾಧನವಿಲ್ಲ.

ದೃಷ್ಟಾಂತದಲ್ಲಿ 'ಸಾಧ್ಯವೈಕಲ್ಯಾದಿ'ಗಳಿಲ್ಲ ಎಂಬಲ್ಲಿ ಆದಿಪದದಿಂದ ಸಿದ್ಧಸಾಧನವನ್ನಿಟ್ಟು ಕೊಳ್ಳಬೇಕು.

**यत्त्वत्यन्तान्योन्याभावयोरैक्यमते घटान्योन्याभावस्य घट-संसर्गावच्छिन्नप्रतियोगिताकान्यत्वायोगाद् बाधस्यादिपदेन सङ्ग्रह इति तन्न । उभयसिद्धप्रमाणविरोधाभावेन बाधानवकाशात् । अत्यन्ताभावस्य सत्यत्वेन मिथ्याभूतान्योन्याभावैक्यायोगाच्च । अन्यथा पटात्यन्ताभावस्य त्रैकालिकत्वायोगेन दृष्टान्तवैकल्यस्य दुरुद्धरत्वप्रसङ्गात् । तस्माद्भावाद्वैत-निरासपरोऽसौ ग्रन्थ इत्यवधेयम् ।**

**अन्यथेति ।** उक्तव्यवस्थानिर्वाहकव्यावहारिकभेदानङ्गीकार इत्यर्थः । सिद्धघटस्य लब्धघटस्य पटसामग्र्यां प्रवृत्तिर्न स्यादित्यर्थः । कारणीभूतपटेच्छानुपपत्तेरिति भावः । त्रैकालिकत्वादिनेत्यादिनाऽनादित्व-नित्यत्वपरिग्रहः । **तदयोगादिति ।** त्रैकालिकत्वाद्ययोगादित्यर्थः । व्यावहारिकस्याविद्याकार्यत्वादिति भावः ।

ಇಲ್ಲಿ ಕೆಲವರು ಅತ್ಯಂತಾಭಾವ ಅನ್ಯೋನ್ಯಾಭಾವಗಳಿಗೆ ಐಕ್ಯವೆನ್ನುವ ಮತದಲ್ಲಿ ಘಟಾನ್ಯೋನ್ಯಾಭಾವಕ್ಕೆ ಘಟಸಂಸರ್ಗಾವಚ್ಛಿನ್ನಪ್ರತಿಯೋಗಿತಾಕಾನ್ಯತ್ವವು ಬಾರದಿರುವುದರಿಂದ ಬಾಧ ಬರುತ್ತದೆ, ಇದನ್ನು ಆದಿಪದದಿಂದ ಹೇಳಿದ್ದಾರೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಅದು ಸರಿಯಲ್ಲ. ಬಾಧವನ್ನು ಹೇಳಬೇಕಾದರೆ ಉಭಯವಾದಿ ಸಿದ್ಧವಾದ ಪ್ರಮಾಣದ ವಿರೋಧ ಬರಬೇಕು. ಅದು ಪ್ರಕೃತದಲ್ಲಿಲ್ಲದ್ದರಿಂದ ಬಾಧಕ್ಕೆ ಅವಕಾಶವಿಲ್ಲ. ಅತ್ಯಂತಾಭಾವ ಸತ್ಯ. ಭೇದ ಮಿಥ್ಯಾ. ಇವೆರಡಕ್ಕೆ ಐಕ್ಯ ಕೂಡುವುದೂ ಇಲ್ಲ. ಅತ್ಯಂತಾಭಾವ ಸತ್ಯವೆಂದು ಒಪ್ಪದಿದ್ದರೆ ಪಟಾತ್ಯಂತಾಭಾವ ಮಿಥ್ಯಾ ಆದ್ದರಿಂದ ತ್ರೈಕಾಲಿಕತ್ವ ಕೂಡುವುದಿಲ್ಲ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಅಪರಿಹಾರ್ಯವಾಗುತ್ತದೆ. ಅದರಿಂದ ಭಾವಾದ್ವೈತ ನಿರಾಸಕ್ಕೇ ಹೊರಟಿರುವುದು ಈ ಗ್ರಂಥ ಹೊರತು ಸರ್ವಾದ್ವೈತ ನಿರಾಸಕ್ಕೆ ಅಲ್ಲ ಎಂದು ತಿಳಿಯಬೇಕು.

ಮೇಲೆ ಹೇಳಿದ ವ್ಯವಸ್ಥಾ ನಿರ್ವಾಹಕವಾಗಿ ವ್ಯಾವಹಾರಿಕಭೇದವನ್ನು ಒಪ್ಪದಿದ್ದರೆ ಯಾವನೂ

ಘಟ ಸಿಕ್ಕಿದಾಗ ಪಟಸಾಮಗ್ರಿಯಲ್ಲಿ ಪ್ರಯತ್ನ ಮಾಡಲಾರ. ಏಕೆಂದರೆ ಪ್ರವೃತ್ತಿಗೆ ಕಾರಣ ಪಟೇಚ್ಛೆ. ಪಟಾಭಿನ್ನವಾದ ಘಟಲಾಭದಿಂದಲೆ ಪಟೇಚ್ಛೆ ಪೂರ್ತಿಯಾಗಿರುತ್ತದೆ.

'ಅನ್ಯೋನ್ಯಾಭಾವಕ್ಕೆ ತ್ರೈಕಾಲಿಕತ್ವಾದಿ ವಿಶೇಷಣ ಕೊಟ್ಟಿದ್ದೇವೆ' ಎಂಬಲ್ಲಿ ಆದಿಪದದಿಂದ ಅನಾದಿತ್ವ ನಿತ್ಯತ್ವ ವಿಶೇಷಣಗಳನ್ನಿಟ್ಟುಕೊಳ್ಳಬೇಕು. ಅನ್ಯೋನ್ಯಾಭಾವ ವ್ಯಾವಹಾರಿಕವೆಂದರೆ ತ್ರೈಕಾಲಿಕತ್ವ ಅನಾದಿತ್ವ ನಿತ್ಯತ್ವಗಳು ಕೂಡಲಾರವು. ಏಕೆಂದರೆ ವ್ಯಾವಹಾರಿಕವು ಅವಿದ್ಯಾ ಕಾರ್ಯವಾಗಿರುತ್ತದೆ.

**नन्वेतावताऽप्यर्थान्तरत्वं दुर्वारमेव। यावत्कालवृत्तित्वरूपत्रैकालिकत्वस्य व्यावहारिकभेदेऽपि सम्भवात्। कालस्याप्यविद्याकार्यत्वेन तदभावे तदभावावश्यम्भावात्। एवं पूर्वोत्तरकालराहित्यरूपानादित्वनित्यत्वयोरपि सम्भवो द्रष्टव्यः। मैवम्। प्रागभावाप्रतियोगित्वमनादित्वम्। ध्वंसाप्रतियोगित्वं नित्यत्वम्। तदुभयशालित्वं च त्रैकालिकत्वम्। न चैतद् व्यावहारिके सम्भवति। न च व्यावहारिकेऽप्यविद्यावदनादित्वमिष्यत इति वाच्यम्। स्वरूपतोऽनादित्वेऽविद्याकार्यत्वानुपपत्तेः। अन्यथा नित्यस्य निवृत्तिरित्यपि स्यात्। प्रतियोगितादात्म्याविद्यानधीनप्रतीतिकत्वरूपानादित्व विवक्षायामर्थान्तरशङ्कानवकाशाच्चेति दिक्।**

ಇಲ್ಲಿ ಪ್ರಶ್ನೆ ಬರುತ್ತದೆ. ವ್ಯಾವಹಾರಿಕ ಭೇದದಲ್ಲಿಯೂ ತ್ರೈಕಾಲಿಕತ್ವವು ಕೂಡಬಹುದು. ತ್ರೈಕಾಲಿಕತ್ವವೆಂದರೆ ಎಲ್ಲ ಕಾಲದಲ್ಲಿರುವುದು. ಕಾಲವೂ ಕೂಡ ಅವಿದ್ಯಾ ಕಾರ್ಯವೆ. ಆದರಿಂದ ಅವಿದ್ಯೆ ಇಲ್ಲದಾಗ ಅವಿದ್ಯಾಕಾರ್ಯವಾದ ಕಾಲವೂ ಇಲ್ಲವೆಂದು ಅವಶ್ಯ ಹೇಳಬೇಕು. ಆದರಿಂದಲೆ ಪೂರ್ವಕಾಲರಾಹಿತ್ಯರೂಪವಾದ ಅನಾದಿತ್ವವೂ ಉತ್ತರಕಾಲರಾಹಿತ್ಯ ರೂಪವಾದ ನಿತ್ಯತ್ವವೂ ವ್ಯಾವಹಾರಿಕಕ್ಕೆ ಕೂಡಬಹುದು' ಎಂದು.

ಇದು ಸರಿಯಲ್ಲ. ಪ್ರಾಗಭಾವಾಪ್ರತಿಯೋಗಿತ್ವವು ಅನಾದಿತ್ವ. ಧ್ವಂಸಾಪ್ರತಿಯೋಗಿತ್ವವು ನಿತ್ಯತ್ವ. ಇವೆರಡೂ ಇರುವುದೇ ತ್ರೈಕಾಲಿಕತ್ವ. ಇದು ವ್ಯಾವಹಾರಿಕ ಅನ್ಯೋನ್ಯಾಭಾವದಲ್ಲಿಲ್ಲ. 'ವ್ಯಾವಹಾರಿಕದಲ್ಲಿಯೂ ಅವಿದ್ಯೆಯಂತೆ ಅನಾದಿತ್ವವನ್ನು ಒಪ್ಪುತ್ತೇವೆ' ಎನ್ನಬಾರದು. ವ್ಯಾವಹಾರಿಕವು ಸ್ವರೂಪದಿಂದ ಅನಾದಿ ಎಂದರೆ ಅದಕ್ಕೆ ಅವಿದ್ಯಾಕಾರ್ಯತ್ವವು ಕೂಡಲಾರದು. ಅನಾದಿಗೆ ಕಾರ್ಯತ್ವವಿರಬಹುದಾದರೆ, ನಿತ್ಯಕ್ಕೆ ನಿವೃತ್ತಿಯೂ ಇರಬಹುದು.

ಪ್ರತಿಯೋಗಿತಾದಾತ್ಮ್ಯ ವಿಷಯಕವಾದ ಅವಿದ್ಯೆಗೆ ಅನಧೀನವಾದ ಪ್ರತೀತಿಯಲ್ಲಿ ಗೋಚರ ವಾಗುವುದೇ ಅನಾದಿತ್ವವೆಂದು ವಿವಕ್ಷೆ ಮಾಡಿದರೆ ಅರ್ಥಾಂತರಕ್ಕೆ ಅವಕಾಶವಿಲ್ಲ. ಶುಕ್ತಿಯಲ್ಲಿ ಶುಕ್ತಿತ್ವವಿದ್ದರೂ ಅದು ಅವಿದ್ಯಾವೃತವಾದ್ದರಿಂದ ಅಂಥ ಆವರಕ ಅವಿದ್ಯೆಗೆ ಅಧೀನವಾಗಿ ರಜತವು ಪ್ರತೀತವಾಗುವಂತೆ, ಪ್ರತಿಯೋಗಿತಾದಾತ್ಮ್ಯವು ಅವಿದ್ಯಾವೃತವಾದಾಗ ಅದರ ಅಧೀನವಾಗಿ ಪ್ರತಿಯೋಗಿತಾದಾತ್ಮ್ಯನಿಷೇಧರೂಪವಾದ ಅನ್ಯೋನ್ಯಾಭಾವವು ಪ್ರತೀತವಾಗುತ್ತದೆ. ಅದರಿಂದ ಅನ್ಯೋನ್ಯಾಭಾವವು ವ್ಯಾವಹಾರಿಕ. ಪ್ರಕೃತ ಅನುಮಾನದಿಂದ ವ್ಯಾವಹಾರಿಕ ಅನ್ಯೋನ್ಯಾಭಾವವೇ ಸಿದ್ಧವಾಗುತ್ತದೆ ಎಂದು ಪೂರ್ವಪಕ್ಷಿಯು ಅರ್ಥಾಂತರತ್ವವನ್ನು ಹೇಳುತ್ತಾನೆ. ಅದಕ್ಕೆ ನಾವು ಅಭಾವದಲ್ಲಿ ಪ್ರತಿಯೋಗಿ ತಾದಾತ್ಮ್ಯಾವಿದ್ಯಾನಧೀನಪ್ರತೀತಿಕತ್ವ ವಿಶೇಷಣ ಕೊಡುತ್ತೇವೆ. ವ್ಯಾವಹಾರಿಕಾನ್ಯೋನ್ಯಾಭಾವದಲ್ಲಿ ಪ್ರತಿಯೋಗಿ ತಾದಾತ್ಮ್ಯಾವಿದ್ಯಾನಧೀನಪ್ರತೀತಿಕತ್ವ ಕೂಡುವು ದಿಲ್ಲವಾದ್ದರಿಂದ ಅದನ್ನಿಟ್ಟುಕೊಂಡು ಅರ್ಥಾಂತರತ್ವವನ್ನು ಹೇಳಲಾಗುವುದಿಲ್ಲ. ಇದೊಂದು ದಿಕ್‌ಪ್ರದರ್ಶನ. ಈ ದಿಶೆಯಲ್ಲಿ ಇನ್ನೂ ವಿಚಾರಕ್ಕೆ ಅವಕಾಶವಿದೆ.

ननूक्तानुमानेषु पक्षेतरत्वादिकमुपाधिः । अनुकूलतर्काभावे पक्षेतरत्वस्याप्युपाधित्वसम्भवात् । अत एव तादात्म्यानवच्छिन्नप्रतियोगिताकत्वेनाभावविशेषणादाभाससमानयोगक्षेमत्वमप्रयोजकत्वं चेत्यत आह — **अनुकूलतर्कस्येति ।** घटपटाद्यभेदस्य पारमार्थिकत्वे घटपटादिस्वरूपं पारमार्थिकं स्यादित्यतिप्रसङ्गरूपस्यात्रैवोक्तत्वात् । अन्यत्रेति पाठे जडभेदाभावे मुक्तिसाङ्कर्यादिप्रसङ्गरूपस्य न्यायामृतादौ चोक्तत्वादित्यर्थः। इदमुपलक्षणम् । 'आत्मन आकाशः सम्भूतः । आकाशाद्वायुः । वायोरग्निः । अग्नेरापः । अद्भ्यः पृथिवी । पृथिव्या ओषधयः' इत्यादयः श्रुतयोऽपि जडभेद उदाहर्तव्याः ।

ಈ ಅನುಮಾನಗಳಲ್ಲಿ ಪಕ್ಷೇತರತ್ವಾದಿ ಉಪಾಧಿಗಳನ್ನು ಹೇಳಬಹುದು. ಅನುಕೂಲತರ್ಕ ವಿಲ್ಲದಿದ್ದರೆ ಪಕ್ಷೇತರತ್ವವೂ ಉಪಾಧಿಯಾಗಬಹುದು. ಅದರಿಂದಲೇ ಸಂಸರ್ಗಾನವಚ್ಛಿನ್ನ ಪ್ರತಿಯೋಗಿತಾಕತ್ವದಂತೆಯೇ ತಾದಾತ್ಮ್ಯಾನವಚ್ಛಿನ್ನ ಪ್ರತಿಯೋಗಿತಾಕತ್ವವಿಶೇಷಣವನ್ನೂ ಅಭಾವ ದಲ್ಲಿ ಕೊಟ್ಟು ಪಂಚಮಾಭಾವ ಸಾಧನೆಗೆ ಆಭಾಸಾನುಮಾನಪ್ರಯೋಗ ಮಾಡಲು ಶಕ್ಯವಿದೆ. ಆದರಿಂದ ಈ ಅನುಮಾನಗಳು ಅಪ್ರಯೋಜಕವೆಂದು ಪೂರ್ವಪಕ್ಷಿ ಹೇಳಿದರೆ, ಅನುಕೂಲ ತರ್ಕವನ್ನು ಇಲ್ಲಿಯೆ ಹಿಂದೆ ಹೇಳಿದ್ದೇವೆ ಎನ್ನುತ್ತಾರೆ. ಘಟಪಟಗಳಿಗೆ ಅಭೇದ ಪಾರಮಾರ್ಥಿಕ ವಾದರೆ ಘಟಪಟಸ್ವರೂಪವು ಪಾರಮಾರ್ಥಿಕವೆಂದಾದೀತು ಎಂದು.

'ಬೇರೆಕಡೆ ಹೇಳಿದ್ದೇವೆ' ಎಂಬ ಪಾಠದಲ್ಲಿ ಜಡಭೇದವಿಲ್ಲದಿದ್ದಲ್ಲಿ ಮುಕ್ತಿ ಸಂಸಾರಗಳಿಗೆ ಭೇದವಿಲ್ಲ ಎಂಬ ಸಾಂಕರ್ಯಾದಿ ಪ್ರಸಂಗವೆಂದು ನ್ಯಾಯಾಮೃತಾದಿಗ್ರಂಥಗಳಲ್ಲಿ ನಾವು ಹೇಳಿದ್ದೇವೆ ಎಂದರ್ಥ.

ಜಡಭೇದ ವಿಷಯದಲ್ಲಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ' ಇತ್ಯಾದಿ ಶ್ರುತಿಗಳನ್ನೂ ಪ್ರಮಾಣವಾಗಿ ಉದಾಹರಿಸಬೇಕು.

**'ಅಹಂ' ಶುದ್ಧ ಚೈತನ್ಯವಲ್ಲ**

**यदुक्तमभेदे प्रत्यक्षं प्रमाणमिति तदसत् । अहङ्कारस्य चिदचित्संवलनात्मकस्य त्वया भिन्नत्वाङ्गीकारेणाहंप्रत्ययस्य तदभेदेऽप्रमाणत्वात् ।**

**ಅಭೇದವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣ ಎಂದು ಹೇಳಿದ್ದು ಸರಿಯಲ್ಲ. 'ಅಹಂ' ಎಂದು ಕಾಣುವುದು ಶುದ್ಧ ಚೈತನ್ಯವಲ್ಲ, ಅಂತಃಕರಣಾವಚ್ಛಿನ್ನಚೈತನ್ಯ. ಅಂತಃಕರಣ ಭೇದೇನ ಅದು ಭಿನ್ನವೆಂದು ನೀನೇ ಅಂಗೀಕರಿಸಿರುವುದರಿಂದ 'ಅಹಂ ಅಹಂ' ಎಂದು ಏಕಾಕಾರಾನುಭವವು ಶುದ್ಧ ಚೈತನ್ಯಾಭೇದದಲ್ಲಿ ಪ್ರಮಾಣವಾಗುವುದಿಲ್ಲ.**

**ಆತ್ಮತ್ವಹೇತು ಅಸಿದ್ಧ್ಯಾದಿ ದೋಷಗ್ರಸ್ತ**

**आद्यानुमानेऽवेद्यत्वरूपस्वप्रकाशत्वस्यास्माभिरनङ्गीकारादसिद्धिः । अबाध्यत्वमात्मत्वमिति चेत् तर्ह्यस्माभिर्देहादेः स्वरूपेणाबाधितत्वाङ्गीकारात् व्यभिचारः । न च तदपि पक्षतुल्यमिति वाच्यम् । त्वयाऽपि देहात्माभेदस्याध्यस्तत्वाङ्गीकारेण तदभेदस्यापारमार्थिकतया परमार्थतो न भिद्यन्त इति साध्याभावात् । भेदाभावस्यैवाभेदत्वात् ।**

**ಮೊದಲನೆ ಅನುಮಾನದಲ್ಲಿ ಹೇತುವಾಗಿರುವ ಅವೇದ್ಯತ್ವರೂಪವಾದ ಸ್ವಪ್ರಕಾಶತ್ವವನ್ನು ನಾವು ಅಂಗೀಕರಿಸಿಲ್ಲವಾದ್ದರಿಂದ ಅಸಿದ್ಧಿ. ಅಬಾಧ್ಯತ್ವರೂಪ ಆತ್ಮತ್ವವು ಹೇತು ಎನ್ನುತ್ತೇನೆ ಎಂದರೆ ನಾವು ದೇಹಾದಿಗಳಿಗೆ ಸ್ವರೂಪೇಣ**

ಅಬಾಧ್ಯತ್ವವನ್ನು ಅಂಗೀಕರಿಸಿರುವುದರಿಂದ ವ್ಯಭಿಚಾರ. ಅದೂ ಪಕ್ಷತುಲ್ಯವೆ ಎನ್ನಬಾರದು. ನೀನು ದೇಹಾತ್ಮಾಭೇದವನ್ನು ಅಧ್ಯಸ್ತವೆಂದು ಅಂಗೀಕರಿಸಿರುವುದರಿಂದ ಅಭೇದವು ಅಪಾರಮಾರ್ಥಿಕ. ಪರಮಾತ್ಮನಿಂದ ಪಾರಮಾರ್ಥಿಕಭೇದವಿಲ್ಲ ಎಂಬಸಾಧ್ಯ ಅದರಲ್ಲಿಲ್ಲ. ಭೇದಾಭಾವವೇ ಅಭೇದ.

**ज्ञानत्वं चेदात्मत्वं तदा नैयायिकं प्रत्यसिद्धिः । ज्ञानाधारत्वमात्मत्वमिति चेत् तर्हि तवैवासिद्धिः । उपाधेर्बाधव्यभिचारान्यतरोद्भावनद्वारा दूषणत्वपक्षे परमात्मानुसंहितदुःखाननुसन्धातृत्वमुपाधिश्च ।**

ಜ್ಞಾನತ್ವರೂಪವಾದ ಆತ್ಮತ್ವವು ಹೇತುವೆಂದರೆ ನೈಯಾಯಿಕನಿಗೆ ಅಸಿದ್ಧಿ. ಜ್ಞಾನಾಧಾರತ್ವವನ್ನೇ ಆತ್ಮತ್ವವೆನ್ನುತ್ತೇನೆ ಎಂದರೆ ನಿನಗೇ ಅಸಿದ್ಧಿ. ಉಪಾಧಿಯು ಬಾಧ ಅಥವಾ ವ್ಯಭಿಚಾರ ಉದ್ಭಾವನ ಮಾಡುವ ಮೂಲಕ ದೋಷವಾಗುತ್ತದೆ ಎಂಬ ಪಕ್ಷದಲ್ಲಿ ಪರಮಾತ್ಮನು ಅನುಭವಿಸದ ದುಃಖವನ್ನು ಅನುಭವಿಸದಿರುವುದು ಉಪಾಧಿ.

एवं भेदे प्रमाणमुपपाद्य परोक्तमभेदप्रमाणं खण्डयति — **यदुक्तमिति । अहङ्कारस्येति ।** अहम्प्रत्ययविषयस्यान्तःकरणावच्छिन्नचिद्रूपस्य शुद्धचिद्रूपत्वाभावान्न तत्प्रत्ययस्य शुद्धचिदैक्यप्रमाणत्वमिति भावः । यदप्युक्तमनुमानानि चेत्यादि तदप्यसदित्याह — **आद्यानुमान इति ।** विमता आत्मानः परमात्मनः परमार्थतो न भिद्यन्ते आत्मत्वात् परमात्मवदित्यनुमान इत्यर्थः । अत्र हेतुभूतमात्मत्वं स्वप्रकाशत्वमित्युक्तम् । तद्दूषयति — **अवेद्यत्वेति ।** प्रकाशाविषयत्वरूपस्य स्वेतरप्रकाशाविषयत्वरूपस्य वेत्यर्थः । अस्माभिरनङ्गीकारादित्यनेन स्वात्मकप्रकाशविषयत्वरूपस्वप्रकाशत्वस्य क्रियाकर्मविरोधेन परैरनङ्गीकारादसिद्धिरिति सूचितम् । इतोऽतिरिक्तस्वप्रकाशत्वं तु दुर्वचमेवेति भावः ।

ಹೀಗೆ ಭೇದದಲ್ಲಿ ಪ್ರಮಾಣವನ್ನು ಉಪಪಾದಿಸಿ, ಅಭೇದವಾದಿಯು ಹೇಳಿದ ಅಭೇದ

ಪ್ರಮಾಣವನ್ನು ನಿರಾಕರಿಸುತ್ತಾರೆ. ಅಹಂಕಾರ ಅಂದರೆ ಅಹಂ ಎಂದು ಕಾಣುವ ಅಂತಃಕರಣಾವಚ್ಛಿನ್ನ ಚೈತನ್ಯ. ಅದು ಶುದ್ಧ ಚೈತನ್ಯರೂಪವಲ್ಲವಾದ್ದರಿಂದ ಅದನ್ನು ವಿಷಯೀಕರಿಸುವ ಅನುಭವವು ಶುದ್ಧಚೈತನ್ಯಾಭೇದದಲ್ಲಿ ಪ್ರಮಾಣವಾಗಲಾರದೆಂದು ಭಾವ.

ಅಭೇದದಲ್ಲಿ ಅನುಮಾನಗಳನ್ನು ಹೇಳಿದ್ದೂ ಸರಿಯಲ್ಲ ಎನ್ನುತ್ತಾರೆ— 'ಆತ್ಮರು ಪರಮಾತ್ಮನಿಗಿಂತ ಪಾರಮಾರ್ಥಿಕವಾಗಿ ಬೇರೆ ಅಲ್ಲ, ಆತ್ಮತ್ವವಿರುವುದರಿಂದ ಪರಮಾತ್ಮನಂತೆ' ಎಂಬ ಮೊದಲನೆ ಅನುಮಾನದಲ್ಲಿ ಸ್ವಪ್ರಕಾಶತ್ವರೂಪವಾದ ಆತ್ಮತ್ವ ಹೇತು ಎಂದಿದ್ದಾನೆ. ಅದು ಸರಿಯಲ್ಲ. ಸ್ವಪ್ರಕಾಶತ್ವವೆಂದರೆ 'ಪ್ರಕಾಶಕ್ಕೆ ಅವಿಷಯ' ಅಥವಾ 'ಸ್ವೇತರಪ್ರಕಾಶಕ್ಕೆ ಅವಿಷಯ'ನಾಗುವುದೆಂದು ಅವನ ಮತ. ಅದನ್ನು ನಾವು ಒಪ್ಪದಿರುವುದರಿಂದ ಅಸಿದ್ಧಿ. ನಾವು ಸ್ವಾತ್ಮಕಪ್ರಕಾಶವಿಷಯತ್ವವನ್ನು ಸ್ವಪ್ರಕಾಶತ್ವವೆಂದು ಒಪ್ಪಿದ್ದೇವೆ. ಅದನ್ನು ಅವನು ಕ್ರಿಯಾಕರ್ಮತ್ವಗಳೆರಡೂ ಒಂಡೆ ಇರುವುದಿಲ್ಲ, ವಿರೋಧವೆಂದು, ಒಪ್ಪದಿರುವುದರಿಂದ ಅಸಿದ್ಧಿ ಎಂದು ಸೂಚಿತವಾಗಿದೆ. ಬೇರೆ ಸ್ವಪ್ರಕಾಶತ್ವವನ್ನು ಹೇಳಲಾಗುವುದಿಲ್ಲವೆಂದು ಅಭಿಪ್ರಾಯ.

तर्हि न स्वप्रकाशत्वमात्मत्वम् । अपि तर्ह्यन्यदेवेत्याशङ्कते – **अबाध्यत्वमिति** । ननु देहादेरारोपितकर्तृत्वाद्याकारेण बाध्यत्वात् कथमबाध्यत्वमित्याशङ्कापरिहाराय स्वरूपेणेत्युक्तम् । अयं भावः । सर्वथाऽबाध्यत्वस्य हेतुत्वेऽसिद्धिः । आत्मनोऽप्यारोपिताकारेण बाध्यत्वात् । अतः सत्त्वेनाबाध्यत्वं वाच्यम् । तच्च सत्त्वप्रकारक-प्रमितिविषयत्वपर्यवसितं देहेन्द्रियादौ साध्यशून्येऽप्यस्तीत्यनैकान्त्यमिति ।

'ಹಾಗಾದರೆ ಸ್ವಪ್ರಕಾಶತ್ವರೂಪ ಆತ್ಮತ್ವವನ್ನು ಹೇತು ಮಾಡುವುದಿಲ್ಲ, ಬೇರೆಯೇ ಅಬಾಧ್ಯತ್ವರೂಪ ಆತ್ಮತ್ವವು ಹೇತು' ಎಂದರೆ ದೇಹಾದಿಗಳಲ್ಲಿ ವ್ಯಭಿಚಾರ ಎನ್ನುತ್ತಾರೆ. ಅದರಲ್ಲಿ ಅಬಾಧ್ಯತ್ವಹೇತುವಿದೆ. ಅಭೇದರೂಪ ಸಾಧ್ಯವಿಲ್ಲ ಎಂದು. ದೇಹಾದಿಗಳಲ್ಲಿ ಕರ್ತೃತ್ವಾರೋಪ ವಿರುವುದರಿಂದ ಆರೋಪಿತ ಕರ್ತೃತ್ವರೂಪದಿಂದ ಬಾಧ್ಯವಾಗಿರುವಾಗ ಅಬಾಧ್ಯತ್ವ ಹೇಗೆ ಎಂದರೆ ಸ್ವರೂಪೇಣ ಅಬಾಧ್ಯತ್ವವಿದೆ ಎನ್ನುತ್ತಾರೆ. ಇದರ ಅಭಿಪ್ರಾಯ ಹೀಗೆ– ಸರ್ವಥಾಅಬಾಧ್ಯತ್ವವನ್ನು ಹೇತುಮಾಡಿದರೆ ಆತ್ಮನಿಗೂ ಆರೋಪಿತಾಕಾರದಿಂದ ಬಾಧ್ಯತ್ವವಿರುವುದರಿಂದ ಅಸಿದ್ಧಿ. ಅದರಿಂದ ಸತ್ವೇನಾಬಾಧ್ಯತ್ವವನ್ನು ಹೇಳಬೇಕು. ಸತ್ವೇನ ಅಬಾಧ್ಯತ್ವವೆಂದರೆ ಸತ್ವಪ್ರಕಾರಕ ಯಥಾರ್ಥಜ್ಞಾನ ವಿಷಯತ್ವ. ಅದು ಸಾಧ್ಯಶೂನ್ಯವಾದ ದೇಹಇಂದ್ರಿಯಾದಿಗಳಲ್ಲಿಯೂ ಇರುವುದರಿಂದ ವ್ಯಭಿಚಾರ.

ननु देहादावप्यात्माभेदसाधनान्न दोष इत्याशङ्कां निराह – **न चेति** । पक्षतुल्यं प्रकृतधर्मितुल्यं सन्दिग्धसाध्यकमिति यावत् ।

निश्चितसाध्याभाववति व्यभिचारस्यैव दोषत्वादिति भावः। देहादेः पक्षतुल्यत्वमसिद्धम्। तत्रात्माभेदाङ्गीकारेऽपसिद्धान्तापत्तेरित्याह **—त्वयाऽपीति। अध्यस्तत्वेति।** अन्यथा देहात्मनोरितरेतराध्यास-समर्थनानुपपत्तेरिति भावः। तदभेदस्य देहपरमात्माभेदस्यापारमार्थिकतया पारमार्थिकभेदाभावरूपसाध्याभावादित्यर्थः। नन्वभेदस्यापारमार्थिकत्वेऽपि कुतस्तादृशसाध्याभाव इत्यत आह **—भेदाभावस्येति।**

'ದೇಹಾದಿಗಳಲ್ಲಿಯೂ ಆತ್ಮಾಭೇದವನ್ನು ನಾವು ಸಾಧಿಸುತ್ತೇವೆ. ಅದು ಪಕ್ಷತುಲ್ಯ. ಪ್ರಕೃತಪಕ್ಷದಂತೆಯೆ ಸಾಧ್ಯಾಸಂದೇಹಉಳ್ಳದ್ದು. ಅಲ್ಲಿ ವ್ಯಭಿಚಾರವು ದೋಷವಲ್ಲ. ಸಾಧ್ಯಭಾವ ನಿಶ್ಚಯವಿರುವಲ್ಲಿಯೇ ವ್ಯಭಿಚಾರವು ದೋಷವಾಗುವುದು'ಎಂದರೆ ಹೇಳುತ್ತಾರೆ, 'ಹಾಗೆ ಹೇಳಬೇಡ, ನೀನು ದೇಹಾತ್ಮೈಕ್ಯವನ್ನು ಅಧ್ಯಸ್ತ ಎನ್ನುವವನು; ದೇಹಾದಿಗಳಲ್ಲಿ ಆತ್ಮಾಭೇದವು ವಸ್ತುತಃ ಇಲ್ಲ ಎನ್ನುವವನು, ಇದೆ ಎಂದು ಸಾಧಿಸಲು ಹೊರಟರೆ ಅಪಸಿದ್ಧಾಂತ ದೋಷಬರುವುದು. ಇಲ್ಲದಿದ್ದರೆ ದೇಹ ಆತ್ಮಗಳಿಗೆ ಅನ್ಯೋನ್ಯ ಅಧ್ಯಾಸವನ್ನು ನಿಮ್ಮ ಭಾಷ್ಯದಲ್ಲಿ ಸಮರ್ಥಿಸುವುದು ಕೂಡಲಾರದು. ಹೀಗಾಗಿ ದೇಹ ಪರಮಾತ್ಮಾಭೇದವು ಅಪಾರಮಾರ್ಥಿಕವಾದ್ದರಿಂದ ಪಾರಮಾರ್ಥಿಕ ಭೇದಾಭಾವರೂಪ ಸಾಧ್ಯವು ಅಲ್ಲಿ ಇಲ್ಲ. ಏಕೆಂದರೆ ಭೇದಾಭಾವವೇ ಅಭೇದ.

न चाभेदस्तादात्म्यम्। तच्च स्वरूपमेव न भेदाभाव इति वाच्यम्। आत्मस्वरूपस्याप्यध्यस्तत्वेन मिथ्यात्वापातात्। न चाध्यस्तमपि देहादिस्वरूपमेव मिथ्या, नात्मस्वरूपमिति वाच्यम्। इतरेतराध्यासे वैचित्र्यकल्पनस्यायुक्तत्वात्। देहात्मनोः पारमार्थिकभेदाभावे तत एव तदुभयस्वरूपैक्यापत्तेश्च।

इदमुपलक्षणम्। देहादेः पक्षतुल्यत्वेऽपि सन्दिग्धानैकान्त्यं दुर्वारमेव। अनुकूलतर्काभावे तस्यापि दोषत्वादित्यपि बोध्यम्॥

'ಅಭೇದವು ತಾದಾತ್ಮ್ಯರೂಪ. ಅದು ಆತ್ಮ ಸ್ವರೂಪವೆ, ಭೇದಾಭಾವರೂಪವಲ್ಲ' ಎನ್ನಬಾರದು. ಹಾಗೆ ಹೇಳಿದರೆ ಆತ್ಮಸ್ವರೂಪವಾದ ಅಭೇದ ಅಧ್ಯಸ್ತವಾದ್ದರಿಂದ ಆತ್ಮಸ್ವರೂಪ ಅಧ್ಯಸ್ತವಾಗಿದ್ದು ಮಿಥ್ಯಾ ಎಂದಾದೀತು. 'ಅಧ್ಯಸ್ತವೇ ಆದರೂ ದೇಹಾದಿಸ್ವರೂಪಮಾತ್ರವೆ ಮಿಥ್ಯಾ, ಆತ್ಮಸ್ವರೂಪವು ಮಿಥ್ಯಾ ಅಲ್ಲ. ಅದರ ಸಂಸರ್ಗವು ಅಧ್ಯಸ್ತವಾದ್ದರಿಂದ ಮಿಥ್ಯಾ ಎನ್ನುತ್ತೇನೆ' ಎಂದರೆ

ದೇಹ ಆತ್ಮಗಳಿಗೆ ಅನ್ಯೋನ್ಯ ಅಧ್ಯಾಸವಿದೆ ಎಂದಮೇಲೆ ಈ ರೀತಿಯ ವ್ಯತ್ಯಾಸವನ್ನು ಕಲ್ಪಿಸುವುದು ಕೂಡುವುದಿಲ್ಲ. ದೇಹ ಆತ್ಮಗಳಿಗೆ ಪಾರಮಾರ್ಥಿಕ ಭೇದಾಭಾವವನ್ನೇ ಹೇಳಿದರೂ ಅದರಿಂದಲೇ ಎರಡಕ್ಕೆ ಸ್ವರೂಪೈಕ್ಯ ಪ್ರಸಂಗವಿದ್ದೇ ಇದೆ. ಇಲ್ಲಿ ಇನ್ನೊಂದು ದೋಷವನ್ನೂ ವಿವಕ್ಷಿತವೆಂದಿಟ್ಟು ಕೊಳ್ಳಬೇಕು, ಏನೆಂದರೆ ದೇಹಾದಿಗಳು ಪಕ್ಷ ತುಲ್ಯವೆಂದಿಟ್ಟುಕೊಂಡರೂ ಸಂದಿಗ್ಧಾನೈಕಾಂತ್ಯ ದೋಷವಿದ್ದೇ ಇದೆ. ಅದು ಸಾಧ್ಯಸಂದೇಹರೂಪವಾದರೂ ಅನುಕೂಲತರ್ಕವಿಲ್ಲದಿರುವಾಗ ಈ ಸಂದೇಹವೂ ಅನುಮಿತಿಗೆ ಪ್ರತಿಬಂಧಕವೇ ಆಗುವುದು.

**असिद्धेरिति ।** नैयायिकेनात्मनो ज्ञानाधारत्वस्यैवोपगमात् पक्षदृष्टान्तयोः साधनस्य व्याप्तेश्चासिद्धेरित्यर्थः । यद्यपि वृत्तिज्ञाने व्यभिचारः सिद्धान्तेऽपि शक्यते वक्तुम् । तथापि नित्यज्ञानत्वस्य हेतुत्वे न तथेत्याशयः । **तवैवासिद्धेरिति ।** आत्मनो ज्ञानमात्रत्वाङ्गीकारादिति भावः । न चाजडत्वमात्मत्वमिति वाच्यम् । जडत्वस्यानात्मत्वरूपतया परस्पराश्रयात् । न च पृथिव्यादिद्रव्यान्यत्वे सति गुणाद्यन्यत्वमात्मत्वमिति वाच्यम् । मां प्रति गुणाद्यन्यत्वासिद्धेः । तदनुक्तौ तार्किकमते गुणादौ व्यभिचारात् ।

ನೈಯಾಯಿಕನು ಆತ್ಮನನ್ನು ಜ್ಞಾನಾಧಾರ ಎಂದೇ ಒಪ್ಪಿದ್ದಾನೆ ಹೊರತು ಜ್ಞಾನತ್ವವನ್ನು ಒಪ್ಪಿಲ್ಲ. ಅವನಿಗೆ ಜ್ಞಾನತ್ವವೆಂಬ ಹೇತುವು ಪಕ್ಷ ದೃಷ್ಟಾಂತಗಳೆರಡರಲ್ಲಿಯೂ ಅಸಿದ್ಧ. ವ್ಯಾಪ್ತಿಯೂ ಅಸಿದ್ಧ. ಯದ್ಯಪಿ ಸಿದ್ಧಾಂತದಲ್ಲಿಯೂ ಜ್ಞಾನತ್ವರೂಪ ಹೇತುವು ವೃತ್ತಿಜ್ಞಾನದಲ್ಲಿ ಬರುವುದರಿಂದ ವ್ಯಭಿಚಾರವಿದೆ. ಆದರೆ ಅವನು ನಿತ್ಯಜ್ಞಾನತ್ವವನ್ನು ಹೇತುಮಾಡಿದರೆ ವ್ಯಭಿಚಾರ ಬರಲಾರದೆಂಬ ಅಭಿಪ್ರಾಯದಿಂದ ಅದನ್ನು ಹೇಳಿಲ್ಲ.

ಜ್ಞಾನಾಧಾರತ್ವವನ್ನು ಹೇತುಮಾಡಿದರೆ ಅಭೇದವಾದಿಗೇ ಅಸಿದ್ಧಿ. ಅವನು ಆತ್ಮನನ್ನು ಜ್ಞಾನಸ್ವರೂಪನೆಂದು ಅಂಗೀಕರಿಸಿದ್ದಾನೆ. ಅಜಡತ್ವವು ಆತ್ಮತ್ವವೆಂದರೆ ಜಡತ್ವವು ಅನಾತ್ಮತ್ವ ರೂಪವಾದ್ದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಪೃಥಿವ್ಯಾದಿದ್ರವ್ಯಾನ್ಯತ್ವೇ ಸತಿ ಗುಣಾದ್ಯನ್ಯತ್ವವು ಆತ್ಮತ್ವವೆಂದರೆ, ಸಿದ್ಧಾಂತಿಗೆ ಗುಣಾದ್ಯನ್ಯತ್ವವು ಆತ್ಮನಲ್ಲಿ ಅಸಿದ್ಧ. ಗುಣಾದ್ಯನ್ಯತ್ವ ವನ್ನು ಹೇಳದಿದ್ದರೆ ತಾರ್ಕಿಕ ಮತದಲ್ಲಿ ಪೃಥಿವ್ಯಾದಿದ್ರವ್ಯಾನ್ಯತ್ವವು ಗುಣಾದಿಗಳಲ್ಲಿ ಇದೆ, ವ್ಯಭಿಚಾರ ಬರುತ್ತದೆ.

**ಅಭೇದಾನುಮಾನ ಉಪಾಧಿಗ್ರಸ್ತ**

कथञ्चित् हेतुनिर्वचनेऽप्यनुकूलतर्काभावादुपाध्यादिग्रस्तत्वं दुर्वारमित्याह **—उपाधेरिति**। अत्र परमात्माननुसंहिताननुसन्धातृत्वमात्रं दुःखाननुसन्धातृत्वमात्रं वोपाधिः। प्रथमे दुःखेति स्वरूपकीर्तनम्। द्वितीये परमात्माननुसंहितेत्युपाधेः साध्यव्यापकत्वोपपादनमित्यवगन्तव्यम्। ननूपाधेर्बाधव्यभिचाराद्यनात्मकत्वाददूषणत्वमित्यत उक्तम् **—दूषणत्वपक्ष इति**। साक्षादनुमित्यविरोधित्वेन दूषणत्वायोगाद् **बाधव्यभिचारोद्भावनद्वारेति**। परार्थप्रसङ्गादुद्भावनेत्युक्तम्। बाधोन्नयनद्वारा व्यभिचारोन्नयनद्वारा वेत्यर्थः। प्रकृते चोपाध्यभावेन पक्षे साध्याभावानुमानस्योपाधिव्यभिचारेण हेतौ साध्यव्यभिचारानुमानस्य च सम्भवादिति भावः।

ಕಷ್ಟದಿಂದ ಏನೇ ನಿರ್ವಚನ ಮಾಡಿದರೂ ಅನುಕೂಲತರ್ಕವಿಲ್ಲದಿರುವುದರಿಂದ ಹೇತುವು ಉಪಾಧಿಗ್ರಸ್ತವಾಗುವುದು, ಅದನ್ನು ಪರಿಹರಿಸಲಾಗದು ಎನ್ನುತ್ತಾರೆ. 'ಪರಮಾತ್ಮನು ಅನುಭವಿಸದಿರುವ ದುಃಖವನ್ನು ಅನುಭವಿಸದಿರುವುದು ಉಪಾಧಿ' ಎಂಬ ಒಂದು ಮಾತಿನಲ್ಲಿ ಪರಮಾತ್ಮನು ಅನುಭವಿಸದಿರುವುದನ್ನು ಅನುಭವಿಸದಿರುವುದು ಉಪಾಧಿ, ಅಥವಾ ದುಃಖವನ್ನು ಅನುಭವಿಸದಿರುವುದು ಉಪಾಧಿ ಎಂದು ವಿವಕ್ಷಿತವಾಗಿದೆ. ಮೊದಲನೆ ಪಕ್ಷದಲ್ಲಿ 'ದುಃಖ' ಎಂದು ಸ್ವರೂಪಕೀರ್ತನ. ಎರಡನೇಪಕ್ಷದಲ್ಲಿ 'ಪರಮಾತ್ಮನು ಅನುಭವಿಸದಿರುವ' ಎಂಬ ಅಂಶವು ಉಪಾಧಿಗೆ ಸಾಧ್ಯವ್ಯಾಪಕತ್ವದ ಉಪಪಾದನೆಗಾಗಿ ಹೇಳಿದ್ದೆಂದು ಇಟ್ಟುಕೊಳ್ಳಬೇಕು.

ಉಪಾಧಿಯು ಬಾಧವ್ಯಭಿಚಾರಾದಿರೂಪವಲ್ಲದ್ದರಿಂದ ಸಾಕ್ಷಾತ್ತಾಗಿ ಅನುಮಿತಿಗೆ ವಿರೋಧಿಯಲ್ಲ. ಬಾಧೋನ್ನಯನದ್ವಾರಾ ಅಥವಾ ವ್ಯಭಿಚಾರೋನ್ನಯನ ದ್ವಾರಾ ದೂಷಣವಾಗುತ್ತದೆ. 'ಬಾಧ ಅಥವಾ ವ್ಯಭಿಚಾರ ಉದ್ಭಾವನ ಮಾಡುವ ಮೂಲಕ ದೂಷಣ' ಎಂದು ಉದ್ಭಾವನ ಶಬ್ದಪ್ರಯೋಗ ಮಾಡಿರುವುದು ಪರಾರ್ಥಾನುಮಾನ ಪ್ರಸಂಗವಾದ್ದರಿಂದ. ಸ್ವಾರ್ಥಾನುಮಿತಿಯಲ್ಲಿ ಉದ್ಭಾವನವೆಂಬುದಿಲ್ಲ, ಉನ್ನಯನವಿದೆ. ಏಕೆಂದರೆ ಉಪಾಧ್ಯಭಾವದಿಂದ ಪಕ್ಷದಲ್ಲಿ ಸಾಧ್ಯಾಭಾವಾನುಮಾನ ನಡೆಯುವುದರಿಂದ ಬಾಧೋನ್ನಯನ. ಉಪಾಧಿವ್ಯಭಿಚಾರದಿಂದ ಸಾಧ್ಯವ್ಯಭಿಚಾರೋನ್ನಯನ.

यद्वा ननु पक्षे साध्यसन्देहेन विपक्षे च हेत्वभावेन क्वचिदुपाधेर्व्यभिचारोन्नायकत्वासम्भवात्कथं दूषणत्वमित्यत उक्तम्- **बाधव्यभिचारोद्भावनद्वारेति ।** बाधोन्नीतव्यभिचारोन्नयनद्वारेत्यर्थः । तथा चोपाधेः पक्षे साध्याभावनिश्चयसम्पादनद्वारा व्यभिचारोन्नायकत्वं सम्भवतीत्याशयः । अत्र च बाधोन्नायकत्वेनापि दूषणत्वं बोध्यम्।

ಅಥವಾ ಹೀಗೆ ಅರ್ಥ- ಪಕ್ಷದಲ್ಲಿ ಸಾಧ್ಯಸಂದೇಹವಿದೆ, ಸಾಧ್ಯಾಭಾವನಿಶ್ಚಯವಿಲ್ಲ. ವಿಪಕ್ಷದಲ್ಲಿ ಹೇತುವಿಲ್ಲ. ಹೀಗಾಗಿ ಉಪಾಧಿಯು ಎಲ್ಲಿಯೂ ವ್ಯಭಿಚಾರೋನ್ನಾಯಕವಾಗದಿರುವುದರಿಂದ ಹೇಗೆ ದೋಷವಾಗುವುದೆಂಬ ಪ್ರಶ್ನೆ ಬಂದರೆ, 'ಬಾಧವ್ಯಭಿಚಾರೋದ್ಭಾವನದ್ವಾರಾ' ಎನ್ನುತ್ತಾರೆ. 'ಬಾಧೋನ್ನೀತ ವ್ಯಭಿಚಾರೋನ್ನಯನದ್ವಾರಾ' ಎಂದರ್ಥ. ಉಪಾಧಿಯು ಪಕ್ಷದಲ್ಲಿ ಸಾಧ್ಯಾಭಾವಾನುಮಿತಿ ಉಂಟುಮಾಡಿ ಆ ಬಾಧದ ಬಲದಿಂದ ಪಕ್ಷದಲ್ಲಿಯೇ ವ್ಯಭಿಚಾರವನ್ನು ಉನ್ನಯನ ಮಾಡಿಕೊಡುತ್ತದೆ. ಬಾಧೋನ್ನಾಯಕವಾಗಿಯೂ ಉಪಾಧಿಯು ದೋಷವಾಗುತ್ತದೆ ಎಂದಿಟ್ಟುಕೊಳ್ಳಬೇಕು.

**विमता आत्मानः परमात्मनः अपरमार्थतो न भिद्यन्ते । आत्मत्वात् परमात्मवदित्याभाससमानयोगक्षेमत्वं च । अनुकूलतर्काभावादप्रयोजकता च ।**

**द्वितीये देवदत्तशब्देन देवदत्तशरीरावच्छिन्नचैतन्यविवक्षायां यज्ञदत्तादिशरीराणां देवदत्तशरीरावच्छिन्नचैतन्याधीनत्वा-सम्भवेन तद्भोगायतनत्वे साध्ये बाधः । अनवच्छिन्नचैतन्य-विवक्षायां तस्याभोक्तृत्वेन बाधः । सुप्तमूर्च्छितादिशरीरे व्यभिचारः । तेषामपि पक्षत्वे बाधः । न च वाच्यं भोगायतनत्वात्यन्ताभावानधिकरणत्वं साध्यमिति । त्वया भोगायतनत्वस्य मिथ्यात्वाङ्गीकारेण तदधिकरणस्य शरीरस्य तदत्यन्ताभावाधिकरणत्वाङ्गीकारादिति ।**

**ವಿಮತರಾದ ಆತ್ಮರು ಪರಮಾತ್ಮನಿಂದ ಅಪಾರಮಾರ್ಥಿಕವಾಗಿ ಭಿನ್ನರಲ್ಲ,**

ಆತ್ಮತ್ವವಿರುವುದರಿಂದ, ಪರಮಾತ್ಮನಂತೆ ಎಂದು ಆಭಾಸ ಸಮಾನ ಯೋಗಕ್ಷೇಮತ್ವವೂ ಇದೆ. ಅನುಕೂಲತರ್ಕವಿಲ್ಲದ್ದರಿಂದ ಅಪ್ರಯೋಜಕತ್ವವೂ ಇದೆ.

ಎರಡನೆ ಅನುಮಾನದಲ್ಲಿ ದೇವದತ್ತ ಶಬ್ದದಿಂದ ತಚ್ಛರೀರವಿಶಿಷ್ಟ ಚೈತನ್ಯ ವಿವಕ್ಷೆ ಮಾಡುವುದಾದರೆ ಯಜ್ಞದತ್ತಾದಿ ಶರೀರಗಳಿಗೆ ದೇವದತ್ತಶರೀರಾವಚ್ಛಿನ್ನ ಚೈತನ್ಯಾಧೀನತ್ವವಿಲ್ಲದ್ದರಿಂದ ತದ್‌ಭೋಗಾಯತನತ್ವವನ್ನು ಸಾಧಿಸಲು ಹೊರಟರೆ ಬಾಧದೋಷ. ಅನವಚ್ಛಿನ್ನ ಶುದ್ಧ ಚೈತನ್ಯ ವಿವಕ್ಷೆ ಮಾಡುವುದಾದರೆ ಅದು ಭೋಕ್ತೃ ಅಲ್ಲವಾದ್ದರಿಂದ ಬಾಧ. ಸುಪ್ತಮೂರ್ಛಿತಶರೀರಗಳಲ್ಲಿ ವ್ಯಭಿಚಾರ. ಅವುಗಳಲ್ಲಿಯೂ ಭೋಗಾಯತನತ್ವವನ್ನು ಸಾಧಿಸುವೆನೆಂದರೆ ಬಾಧ. ಭೋಗಾಯತನತ್ವಾತ್ಯಂತಾಭಾವಾನಧಿಕರಣತ್ವವನ್ನು ಸಾಧಿಸುವೆನೆಂದರೂ ಬಾಧವೆ. ಏಕೆಂದರೆ ನಿನ್ನ ಮತದಲ್ಲಿ ಭೋಗಾಯತನತ್ವವು ಮಿಥ್ಯಾ ಅಂದರೆ ಶರೀರದಲ್ಲಿ ಭೋಗಾಯತನತ್ವದೊಂದಿಗೇ ಭೋಗಾಯತನತ್ವಾತ್ಯಂತಾಭಾವಾಧಿಕರಣತ್ವವೂ ಇದೆ. ಅನಧಿಕರಣತ್ವವು ನಿನ್ನ ಮತಪ್ರಕಾರವೇ ಬಾಧಿತ.

**तृतीये साध्यानिरुक्तिः। न चाधिष्ठानयाथात्म्यज्ञाननिवर्त्यत्वं तत्। निवृत्तिशब्देन प्रध्वंसविवक्षायां मिथ्यात्वासम्भवात्। अत्यन्ताभावविवक्षायां च बाधः। त्वयाऽपि व्यवहारदशायां भेदाङ्गीकारेण तदयोगात्। पारमार्थिकत्वाकारेण तथात्वमिति चेन्न। अबाध्यत्वरूपपारमार्थिकत्वस्य त्वयोच्यमानबाध्यत्वज्ञानाधीनज्ञानत्वेनान्योन्याश्रयत्वात्।**

ಮೂರನೆ ಅನುಮಾನದಲ್ಲಿ ಸಾಧ್ಯವನ್ನು ನಿರ್ವಚನ ಮಾಡಲು ಬರುವುದಿಲ್ಲ. ಅಧಿಷ್ಠಾನ ಯಾಥಾತ್ಮ್ಯ ಜ್ಞಾನ ನಿವರ್ತ್ಯತ್ವವು ಮಿಥ್ಯಾತ್ವ ಎಂದರೆ ನಿವೃತ್ತಿ ಶಬ್ದದಿಂದ ಧ್ವಂಸ ವಿವಕ್ಷೆ ಮಾಡಿದರೆ ಮಿಥ್ಯಾತ್ವ ಅಸಂಭವ. ಅತ್ಯಂತಾಭಾವವಿವಕ್ಷಾ ಮಾಡಿದರೆ ಬಾಧ. ಏಕೆಂದರೆ ನಿನ್ನ ಮತದಲ್ಲಿಯೂ ವ್ಯವಹಾರಕಾಲದಲ್ಲಿ ಭೇದವಿದೆ ಎಂದೇ ಅಂಗೀಕರಿಸಿರುವೆ. ಪಾರಮಾರ್ಥಿಕವಾಗಿ ಅತ್ಯಂತಾಭಾವವನ್ನು ಹೇಳುವೆನೆನ್ನಬೇಡ. ಪಾರಮಾರ್ಥಿಕತ್ವವೆಂದರೆ ಅಬಾಧ್ಯತ್ವ, ಬಾಧ್ಯತ್ವವೆಂದರೆ ಪಾರಮಾರ್ಥಿಕವಾಗಿ ಇಲ್ಲದಿರುವುದು ಎಂದು ಅನ್ಯೋನ್ಯಾಶ್ರಯ ಬರುತ್ತದೆ.

**ಅಭೇದಾನುಮಾನಕ್ಕೆ ಆಭಾಸ ಸಾಮ್ಯ**

**विमता आत्मान इति ।** यद्यप्यत्र व्यावहारिकभेदस्य परं प्रत्यसिद्ध्या साध्याप्रसिद्धिः । तथापि व्यवहारगोचरभेदशून्यत्वस्य साध्यत्वान्न दोषः । परमते पारमार्थिकस्यैव व्यवहारगोचरत्वात् । यद्वा ब्रह्मज्ञानेतराबाध्यभेदशून्यत्वं साध्यम् । न च प्रत्यक्षविरुद्धत्वान्नैवमनुमानसम्भव इति वाच्यम् । परमार्थतो न भिद्यन्त इत्यस्य प्रमाणत्रयविरुद्धत्वात्। तच्च व्युत्पादितम् ।

ಯದ್ಯಪಿ ಇಲ್ಲಿ 'ಅಪಾರಮಾರ್ಥಿಕವಾಗಿ ಅಂದರೆ ವ್ಯಾವಹಾರಿಕವಾಗಿ ಭಿನ್ನರಲ್ಲ' ಎಂದು ಅಭೇದವಾದಿ ಹೇಳಿದರೆ ಅದು ಹೇಗೆ ಆಭಾಸವೋ ಹಾಗೇ 'ಪಾರಮಾರ್ಥಿಕವಾಗಿ ಭಿನ್ನರಲ್ಲ' ಎಂದು ಹೇಳಿದರೂ ಆಭಾಸವೆ ಎಂದು ಹೇಳುತ್ತಿದ್ದಾರೆ. ಆದರೆ ಅಭೇದವಾದಿ ಅಪಾರಮಾರ್ಥಿಕವಾಗಿ ವ್ಯಾವಹಾರಿಕವಾಗಿ ಭಿನ್ನರಲ್ಲ ಎನ್ನುವ ಸಂಭವವಿಲ್ಲ. ಪರಾರ್ಥಾನುಮಾನವಿದು. ಪರನಿಗೆ ಸಾಧ್ಯ ಪ್ರಸಿದ್ಧವಾಗಿರಬೇಕು. ಪರರು ನಾವು ಸಿದ್ಧಾಂತಿಗಳು ವ್ಯಾವಹಾರಿಕ ಭೇದವನ್ನು ಒಪ್ಪಿಲ್ಲವಾದ್ದರಿಂದ ಅದು ಅಪ್ರಸಿದ್ಧ. ಸಾಧ್ಯಾಪ್ರಸಿದ್ಧಿ ಬರುತ್ತದೆ.

ಆದರೆ ವ್ಯಾವಹಾರಿಕವೆಂದರೆ ಆವಿದ್ಯಕ ಎಂದು ಅವನು ಹೇಳುತ್ತಿಲ್ಲ. ವ್ಯವಹಾರಗೋಚರ ಭೇದ ಶೂನ್ಯತ್ವವನ್ನು ಹೇಳುತ್ತಿದ್ದಾನೆ. ವ್ಯವಹಾರಗೋಚರವು ಅವನಿಗೆ ಮಾಯಿಕ ಪ್ರಸಿದ್ಧ. ನಮಗೆ ಪಾರಮಾರ್ಥಿಕ ಪ್ರಸಿದ್ಧ. ಪಾರಮಾರ್ಥಿಕವೇ ನಮಗೆ ವ್ಯವಹಾರಗೋಚರವಾಗುತ್ತದೆ. ಅಥವಾ ಬ್ರಹ್ಮಜ್ಞಾನೇತರಾಬಾಧ್ಯಭೇದಶೂನ್ಯತ್ವವನ್ನು ಹೇಳುತ್ತಿದ್ದಾನೆ. ನಮಗೆ ಯಾವ ಜ್ಞಾನದಿಂದಲೂ ಅಬಾಧ್ಯವಾದುದು ಬ್ರಹ್ಮಜ್ಞಾನೇತರ ಜ್ಞಾನದಿಂದ ಅಬಾಧ್ಯವೆ ಆಗಿರುತ್ತದೆ.

ಪ್ರತ್ಯಕ್ಷ ವಿರುದ್ಧವಾದ ಭೇದಶೂನ್ಯತ್ವವನ್ನು ಸಾಧ್ಯ ಮಾಡಿ ಅವನು ಅನುಮಾನ ಮಾಡುವುದು ಅಸಂಭವ. ಹಾಗೆ ಮಾಡಿದರೆ ಬಾಧದೋಷ ಬರುತ್ತದೆ ತಾನೆ? ಎಂದರೆ, ಅದಕ್ಕೆ ಅವನು ಭಯಪಡುವುದಿಲ್ಲ. ಏಕೆಂದರೆ ಪಾರಮಾರ್ಥಿಕ ಭೇದಶೂನ್ಯತ್ವವನ್ನು ಅವನು ಹೇಳಿದ್ದಾನೆ, ಅದು ಬರಿ ಪ್ರತ್ಯಕ್ಷದಿಂದಲ್ಲ, ಪ್ರತ್ಯಕ್ಷಾದಿ ಪ್ರಮಾಣತ್ರಯದಿಂದಲೂ ವಿರುದ್ಧವಾಗಿದೆ. ಅದನ್ನು ಹಿಂದೆ ಸಮರ್ಥಿಸಿದ್ದೇವೆ.

**अनुकूलतर्काभावादिति ।** न चैक्ये लाघवमेवानुकूलतर्क इति वाच्यम्। लाघवस्य प्रमाणबाधितत्वात्। अन्यथा परमलाघवात्

शून्यवादमेवाङ्गीकुर्याः । ब्रह्मातिरिक्तवियदाद्यशेषप्रामाणिकप्रपञ्चस्यात्यन्तानुपपन्नाविद्याकल्पितत्वकल्पन एव गौरवाच्च ।

ಅಭೇದಾನುಮಾನಕ್ಕೆ ಅನುಕೂಲತರ್ಕವಿಲ್ಲವೆಂದರೆ ಅಭೇದವಾದಿ ಐಕ್ಯವನ್ನು ಅಂಗೀಕರಿಸಿದರೆ ಲಾಘವವಿದೆ ಎಂದು ಅನುಕೂಲ ತರ್ಕವನ್ನು ಹೇಳುತ್ತಾನೆ. ಆದರೆ ಆಲಾಘವವು ಪ್ರಮಾಣಬಾಧಿತವಾಗಿವೆ. ಪ್ರಮಾಣಬಾಧವು ದೋಷವಲ್ಲವೆಂದರೆ ಪರಮಲಾಘವವಿರುವುದರಿಂದ ಶೂನ್ಯವಾದವನ್ನೇ ಏಕೆ ಅಂಗೀಕರಿಸಬಾರದು? ವಸ್ತುತಃ ಅಭೇದವಾದದಲ್ಲಿ ಲಾಘವವಿಲ್ಲ, ಗೌರವವೇ ಇದೆ. ಬ್ರಹ್ಮ ಒಂದನ್ನು ಬಿಟ್ಟು ಬೇರೆ ಆಕಾಶಾದಿ ಸಮಸ್ತ ಪ್ರಾಮಾಣಿಕ ಪ್ರಪಂಚವನ್ನು ಅತ್ಯಂತ ದುರ್ಘಟವಾದ ಅವಿದ್ಯೆಯಿಂದ ಕಲ್ಪಿತವೆಂದು ಕಲ್ಪಿಸುವುದು ಅತ್ಯಂತ ಗೌರವದೋಷಗ್ರಸ್ತವಾಗಿದೆ.

**ಶುದ್ಧ ಚೈತನ್ಯಭೋಗ ಅಪ್ರಸಿದ್ಧ**

**तद्भोगायतनत्व इति ।** देवदत्तशरीरावच्छिन्नचैतन्यभोगावच्छेदकत्वे साध्ये बाध इत्यर्थः । अन्यथा यज्ञदत्तशरीरसुखादौ देवदत्तस्य ममेदमित्याद्यनुसन्धानापत्तेरिति भावः । **बाध इति ।** साध्याप्रसिद्ध्या पक्षे साध्यसत्त्वानिर्वाह इत्यर्थः ।

ದ್ವಿತೀಯಾನುಮಾನದಲ್ಲಿ 'ದೇವದತ್ತ ಶರೀರಾವಚ್ಛಿನ್ನ ಚೈತನ್ಯದ ಭೋಗಕ್ಕೇ ಎಲ್ಲ ಶರೀರಗಳೂ ಅವಚ್ಛೇದಕವಾಗಿವೆ' ಎಂದು ಸಾಧ್ಯವಿಟ್ಟುಕೊಂಡರೆ ಬಾಧದೋಷವಿದೆ. ಇಲ್ಲದಿದ್ದರೆ ಯಜ್ಞದತ್ತ ಶರೀರದ ಸುಖಾದಿಗಳನ್ನು ದೇವದತ್ತನು ನನ್ನವು ಈ ಸುಖಾದಿಗಳೆಂದು ಅನುಭವಿಸುವ ಪ್ರಸಂಗವಿದೆ. ದೇವದತ್ತ ಶಬ್ದದಿಂದ ಅನವಚ್ಛಿನ್ನ ಶುದ್ಧಚೈತನ್ಯವನ್ನೇ ಇಟ್ಟುಕೊಳ್ಳುವ ಪಕ್ಷದಲ್ಲಿ ಶುದ್ಧಚೈತನ್ಯ ಭೋಕ್ತೃವಲ್ಲದ್ದರಿಂದ ಬಾಧ, ಅಂದರೆ, ಶುದ್ಧಚೈತನ್ಯಭೋಗ ಅಪ್ರಸಿದ್ಧವಾದ್ದರಿಂದ ತದ್ಘಟಿತ ಸಾಧ್ಯ ಅಪ್ರಸಿದ್ಧವಾಗಿದ್ದು ಪಕ್ಷದಲ್ಲಿ ಸಾಧ್ಯಸತ್ವ ನಿರ್ವಾಹವಾಗುವುದಿಲ್ಲ ಎಂದರ್ಥ ಹೊರತು, ಪ್ರಮಾಣ ವಿರೋಧರೂಪವಾದ ಬಾಧವಲ್ಲ.

अथ देवदत्तप्रतियोगिकपारमार्थिकभेदाभाववद्भोगावच्छेदकत्वस्य साध्यघटकत्वान्नायं बाधः । यज्ञदत्तादेस्तादृशभेदाभाववत्त्वसम्भवात् । अथवा देवदत्तभिन्नभोगानवच्छेदकत्वे सति भोगावच्छेदकत्वमात्रं साध्यमस्तु । भोक्तुर्देवदत्तत्वमर्थात् सेत्स्यतीति चेदेवमपि

देवदत्तयज्ञदत्तादीनां पारमार्थिकभेदग्राहकोक्तविधप्रत्यक्षादिप्रमाणबाधो दुर्वारः। न च तेषामप्रामाण्यम्। प्रामाण्ये बाधकाभावात्। बलवद्विरोधिप्रमाणानुपलम्भादिति। एवमत्र देवदत्तकर्मनिर्मितत्वमुपाधिरित्यादिकं च द्रष्टव्यम्। अत्र प्रागुक्तदोषे परोक्तसमाधानं दूषयितुमाह – **सुषुप्तमूर्च्छितेति**। विवृतमेतदधस्तात्। **त्वयेत्यादि**। तथा च पुनर्बाध एवेति भावः।

'ದೇವದತ್ತ ಭೋಗಾವಚ್ಛೇದಕತ್ವವೆಂದರೆ ದೇವದತ್ತ ಪ್ರತಿಯೋಗಿಕ ಪಾರಮಾರ್ಥಿಕ ಭೇದಾಭಾವವುಳ್ಳವನ ಭೋಗಕ್ಕೆ ಅವಚ್ಛೇದಕತ್ವವೆಂದರ್ಥ. ಯಜ್ಞದತ್ತಾದಿಗಳು ಅಂಥ ಭೇದಾಭಾವ ಉಳ್ಳವರೆ ಆದ್ದರಿಂದ ಅವರ ಭೋಗ ಅಪ್ರಸಿದ್ಧವಾಗುವುದಿಲ್ಲ. ಅಥವಾ 'ದೇವದತ್ತ ಭೋಗಾವಚ್ಛೇದಕ'ವೆಂದು ನೇರವಾಗಿ ನಾನು ಹೇಳುವುದೇ ಇಲ್ಲ. ದೇವದತ್ತಭಿನ್ನನ ಭೋಗಕ್ಕೆ ಅನವಚ್ಛೇದಕವಾಗಿದ್ದು ಭೋಗಾವಚ್ಛೇದಕವಾಗಿದೆ ಎಂದು ಸಾಧ್ಯ ಮಾಡುತ್ತೇನೆ. ಭೋಕ್ತೃ ದೇವದತ್ತನೆಂದು ಅರ್ಥಾತ್ ಹೇಳಿದಂತಾಗುವುದು, ಅಪ್ರಸಿದ್ಧಿ ಇಲ್ಲ' ಎಂದು ಪರಿಷ್ಕಾರ ಮಾಡಿದರೂ ದೇವದತ್ತ ಯಜ್ಞದತ್ತಾದಿಗಳಿಗೆ ಪಾರಮಾರ್ಥಿಕ ಭೇದವಿದೆ ಎಂದು ತಿಳಿಸುವ ಪ್ರತ್ಯಕ್ಷಾದಿ ಪ್ರಮಾಣಗಳ ಬಾಧವಿದ್ದೇ ಇದೆ. ಅದನ್ನು ಪರಿಹರಿಸಲಾಗುವುದಿಲ್ಲ ಅವುಗಳನ್ನೇ ಅಪ್ರಮಾಣವೆನ್ನುತ್ತೇನೆ ಎಂದರೆ ಪ್ರಾಮಾಣ್ಯವು ಸ್ವತಃ. ಪ್ರಬಲವಾದ ವಿರೋಧಿಪ್ರಮಾಣ ಕಾಣದಿರುವುದರಿಂದ ಬಾಧಕಾಭಾವ ವಿರುವುದರಿಂದ ಪ್ರಾಮಾಣ್ಯವನ್ನು ಒಪ್ಪಲೇಬೇಕು.

ಮತ್ತು ಇಲ್ಲಿ ದೇವದತ್ತಕರ್ಮನಿರ್ಮಿತತ್ವವು ಉಪಾಧಿ ಎಂಬ ದೋಷವೂ ಇದೆ. ದೇವದತ್ತಕರ್ಮನಿರ್ಮಿತವಾದ ಶರೀರವೇ ದೇವದತ್ತನಿಗೆ ಭೋಗಾವಚ್ಛೇದಕವಾಗುತ್ತದೆ. ದೇವದತ್ತ ಭೋಗಾವಚ್ಛೇದಕತ್ವಕ್ಕೆ ದೇವದತ್ತಕರ್ಮನಿರ್ಮಿತತ್ವವು ವ್ಯಾಪಕ. ಅದು ಯಜ್ಞದತ್ತಾದಿ ಶರೀರದಲ್ಲಿ ಇಲ್ಲದಿರುವುದರಿಂದ ದೇವದತ್ತಭೋಗಾವಚ್ಛೇದಕತ್ವವಿರಲು ಶಕ್ಯವಿಲ್ಲ. ಸುಪ್ತಮೂರ್ಛಿತಶರೀರಗಳಲ್ಲಿ ವ್ಯಭಿಚಾರವೂ ಬರುತ್ತದೆ. ಇದಕ್ಕೆ ವಿವರಣೆ ಹಿಂದೆ ಪೂರ್ವಪಕ್ಷಗ್ರಂಥದಲ್ಲಿಯೆ ವಿಸ್ತಾರವಾಗಿ ಬಂದಿದೆ. ಸುಪ್ತಾದಿಶರೀರವೂ ಪಕ್ಷಸಮ ಎಂದರೆ ಪುನಃ ಬಾಧ ಬರುತ್ತದೆ.

**ಭೋಗಾಯನತ್ವಾಭಾವಾನಧಿಕರಣತ್ವ ಕೂಡುವುದಿಲ್ಲ**

अथ देवदत्तभोगायतनत्वस्य पारमार्थिकत्वेनाभावेऽपि व्यावहारिकत्वेन तत्सत्त्वाभ्युपगमात्तेन रूपेण तदभावानधिकरणत्वस्य साध्यत्वान्न बाधावकाशः। न च परं प्रति व्यावहारिकत्वाप्रसिद्धिः। सप्रकारकज्ञाना-

**बाध्यत्वेन भोगायतनत्वस्य योऽभावस्तदनधिकरणत्वस्यैव साध्यत्वात् । सप्रकारकज्ञानाबाध्यत्वस्य च परमते पारमार्थिक एव प्रसिद्धेरेति चेन्न । सप्रकारकज्ञानाबाध्यत्वेन भोगायतनत्वाभावस्यैवाप्रसिद्धेः । व्यधिकरण-धर्मावच्छिन्नाभावानङ्गीकारिभिः सामान्यरूपेण विशेषाभावानभ्युपगमात् ।**

'ಭೋಗಾಯತನತ್ವವು ಬಾಧಿತವಾದರೂ ಆದರ ಅತ್ಯಂತಾಭಾವಾನಧಿಕರಣತ್ವವನ್ನು ಸಾಧಿಸುತ್ತೇನೆ ಆದು ಬಾಧಿತವಲ್ಲ' ಎಂದರೆ ಅದು ಸರಿಯಲ್ಲ. ಭೋಗಾಯತನತ್ವವು ಮಿಥ್ಯೆಯಾದ್ದರಿಂದ ಆದರ ಜೊತೆಗೆ ಆದರ ಅತ್ಯಂತಾಭಾವವೂ ಇರಲೇಬೇಕು. ಅತ್ಯಂತಾಭಾವಾಧಿಕರಣತ್ವವೇ ಇರುತ್ತದೆ, ಅನಧಿಕರಣತ್ವವು ಬಾಧಿತವೆ.

'ಭೋಗಾಯತನತ್ವವು ಪಾರಮಾರ್ಥಿಕತ್ವೇನ ಇಲ್ಲದಿದ್ದರೂ ವ್ಯಾವಹಾರಿಕತ್ವೇನ ಇರುವುದರಿಂದ ವ್ಯಾವಹಾರಿಕತ್ವೇನ ಅತ್ಯಂತಾಭಾವಾನಧಿಕರಣತ್ವವನ್ನು ಸಾಧಿಸುತ್ತೇನೆ. ಬಾಧಕ್ಕೆ ಅವಕಾಶವಿಲ್ಲ. ಭೇದವಾದಿಗೆ ವ್ಯಾವಹಾರಿಕತ್ವವು ಅಪ್ರಸಿದ್ಧ ಎನ್ನುವುದಾದರೆ ಸಪ್ರಕಾರಕಜ್ಞಾನಾಬಾಧ್ಯತ್ವೇನ ಅಭಾವಾನಧಿಕರಣತ್ವವನ್ನು ಹೇಳುತ್ತೇನೆ. ಸಪ್ರಕಾರಕಜ್ಞಾನಾಬಾಧ್ಯತ್ವವು ಭೇದವಾದಿಗೆ ಪಾರಮಾರ್ಥಿಕ ಸತ್ಯದಲ್ಲಿಯೇ ಪ್ರಸಿದ್ಧವಾಗಿದೆ' ಎಂದು ಅಭೇದವಾದಿಯು ಹೇಳಬಹುದು, ಆದರೆ ಸಪ್ರಕಾರಕ ಜ್ಞಾನಾಬಾಧ್ಯತ್ವವು ಸಾಮಾನ್ಯಧರ್ಮ. ಭೋಗಾಯತನತ್ವತ್ವವು ವಿಶೇಷಧರ್ಮ. ಭೋಗಾಯನತ್ವಾಭಾವ ಪ್ರತಿಯೋಗಿತೆಯಲ್ಲಿ ವಿಶೇಷಧರ್ಮವೇ ಅವಚ್ಛೇದಕ ಹೊರತು ಸಾಮಾನ್ಯಧರ್ಮವು ವ್ಯಧಿಕರಣಧರ್ಮಾವಚ್ಛಿನ್ನಾಭಾವವನ್ನು ಅಂಗೀಕರಿಸದಿದ್ದವರ ಮತದಲ್ಲಿ ಅವಚ್ಛೇದಕವಾಗುವುದಿಲ್ಲ. ಸಾಮಾನ್ಯ ರೂಪದಿಂದ ವಿಶೇಷಾಭಾವವನ್ನು ಅವರು ಒಪ್ಪುವುದಿಲ್ಲ.

**न च सप्रकारकज्ञानाबाध्यत्वविशिष्टभोगायतनत्वत्वेन भोगायतनत्वा-भावस्य विवक्षितत्वान्न दोष इति वाच्यम् । तस्य केवलभोगायतनत्वत्वापेक्षया गुरुत्वेनाभावप्रतियोगितानवच्छेदकत्वात् । एतेन भोगायतनत्वस्य मिथ्यात्वे तदत्यन्ताभाववत्तदधिकरणत्वस्यापि मिथ्यात्वेन तदनधिकरणत्वमप्यव्याहतमेवेति नोक्तबाधावकाश इत्यपास्तम् । व्यावहारिकत्वादिना तदधिकरणत्वाभावस्याप्रसिद्धेः । तदधिकरणत्वाभावमात्रस्य साध्यत्वे तु प्रातिभासिकत्वादिना तदभावमादायार्थान्तरतादवस्थ्यादिति दिक् ।**

'ಸಪ್ರಕಾರಕ ಜ್ಞಾನಾಬಾಧ್ಯತ್ವವು ಸಾಮಾನ್ಯಾಕಾರವಾಗಿದ್ದರೂ ಸಪ್ರಕಾರಕಜ್ಞಾನಾಬಾಧ್ಯತ್ವ ವಿಶಿಷ್ಟ ಭೋಗಾಯತನತ್ವವು ವಿಶೇಷಾಕಾರವೇ ಆಗುವುದರಿಂದ ಆ ರೂಪದಿಂದ ಭೋಗಾಯತನತ್ವಾಭಾವವನ್ನು ಸಾಧಿಸುತ್ತೇನೆ' ಎಂದರೆ ಅದೂ ಸರಿಯಲ್ಲ. ಕೇವಲ ಭೋಗಾಯತನತ್ವತ್ವಕ್ಕಿಂತ ವಿಶಿಷ್ಟ ಭೋಗಾಯತನತ್ವತ್ವವು ಗುರುಧರ್ಮವಾಗುವುದರಿಂದ ಅದೂ ಪ್ರತಿಯೋಗಿತಾವಚ್ಛೇದಕವಾಗುವುದಿಲ್ಲ.

ಅಭೇದವಾದಿ ಹೀಗೂ ಹೇಳಬಹುದು– 'ಭೋಗಾಯತನತ್ವವು ಮಿಥ್ಯೆಯಾದ್ದರಿಂದ ಅದರ ಅತ್ಯಂತಾಭಾವವು ಹೇಗೆ ಇರಲೇಬೇಕೋ ಹಾಗೇ ಅದರ ಅಧಿಕರಣತ್ವವೂ ಮಿಥ್ಯೆಯಾದ್ದರಿಂದ ಅದರ ಅತ್ಯಂತಾಭಾವವೂ, ಅಂದರೆ, ಅನಧಿಕರಣತ್ವವೂ ಇರಲೇಬೇಕು. ಬಾಧ ಹೇಗೆ?' ಎಂದು. ಆದರೆ ವ್ಯಾವಹಾರಿಕವಾಗಿ ಅಧಿಕರಣತ್ವವಿರುವಾಗ ವ್ಯಾವಹಾರಿಕತ್ವೇನ ಅದರ ಅತ್ಯಂತಾಭಾವವನ್ನು ಹೇಳಲಾಗುವುದಿಲ್ಲ. ಏಕೆಂದರೆ ವ್ಯಾವಹಾರಿಕತ್ವ ಭೇದವಾದಿಗಳಿಗೆ ಅಪ್ರಸಿದ್ಧ. ವ್ಯಾವಹಾರಿಕತ್ವಾ ಕಾರಣೇಣ ಅಭಾವ ಅಪ್ರಸಿದ್ಧವಾಗುತ್ತದೆ. ಪಾರಮಾರ್ಥಿಕತ್ವೇನ ಅಭಾವವು ವ್ಯಧಿಕರಣ ಧರ್ಮಾವಚ್ಛಿನ್ನಾಭಾವವಾಗುವುದರಿಂದ ಅದೂ ಅಪ್ರಸಿದ್ಧವಾಗುತ್ತದೆ: ಅಧಿಕರಣತ್ವಾಭಾವ ಮಾತ್ರವನ್ನೇ ಸಾಧಿಸುವೆನೆಂದರೆ ಪ್ರಾತಿಭಾಸಿಕತ್ವೇನ ತದಭಾವ ಸಿದ್ಧವಾಗಬಹುದಾದ್ದರಿಂದ ಅರ್ಥಾಂತರತ್ವದೋಷ ಹಾಗೇ ಉಳಿಯುತ್ತದೆ. ಇದು ದಿಙ್ಮಾತ್ರಪ್ರದರ್ಶನ.

**ಭೇದದಲ್ಲಿ ಮಿಥ್ಯಾತ್ವನಿರ್ವಚನ ಅಶಕ್ಯ**

**तृतीय इति ।** भेदो मिथ्या भेदत्वात् चन्द्रभेदवत् इत्यनुमाने निर्दुष्टमिथ्यात्वनिर्वचनासम्भव इत्यर्थः । सम्भवन्निर्वचनस्य दुष्टत्वादिति भावः । तदेवाह **– न चेति ।** बाध्यत्वरूपं मिथ्यात्वमिति शेषः । **मिथ्यात्वासम्भवादिति ।** सत्यत्वप्रतिक्षेपासम्भवादित्यर्थः । प्रध्वंसप्रतियोगित्वस्य मन्मते सत्यत्वव्याप्यत्वादिति भावः । अत्र दृष्टान्ते साध्यवैकल्यमपि बोध्यम् । न चाधिष्ठानयाथात्म्यज्ञानजन्यध्वंसप्रतियोगिज्ञानविषयत्वविवक्षणात् न दोष इति वाच्यम् । तद्धि भ्रमविषयत्वपर्यवसितम् । तथा च मया सतोऽपि भ्रमविषयत्वाङ्गीकारेणार्थान्तरतादवस्थ्यात् । **तदयोगादिति ।** अत्यन्ताभावप्रतियोगित्वासम्भवादित्यर्थः । अन्यथाऽत्यन्तासत्त्वापत्तिरिति भावः ।

'ಭೇದವು ಮಿಥ್ಯೆ, ಭೇದತ್ವವಿರುವುದರಿಂದ ಚಂದ್ರಭೇದದಂತೆ' ಎನ್ನುವ ಮೂರನೇ ಅನುಮಾನದಲ್ಲಿ ಸಾಧ್ಯವಾದ ಮಿಥ್ಯಾತ್ವವೆಂದರೇನೆಂದು ನಿರ್ದುಷ್ಟವಾಗಿ ನಿರ್ವಚನ ಮಾಡುವುದು ಅಸಂಭವ. ಸಂಭವವಿರುವ ನಿರ್ವಚನಗಳೆಲ್ಲವೂ ದುಷ್ಟ. ಅದು ಹೇಗೆಂದರೆ, ಮಿಥ್ಯಾತ್ವವೆಂದರೆ ಬಾಧ್ಯತ್ವ ಎನ್ನುತ್ತಾನೆ. ಆದರೆ ಬಾಧ್ಯತ್ವವೆಂದರೆ ಅಧಿಷ್ಠಾನ ಯಾಥಾತ್ಮ್ಯಜ್ಞಾನ ನಿವರ್ತ್ಯತ್ವ. ನಿವೃತ್ತಿ ಶಬ್ದದಿಂದ ಧ್ವಂಸ ವಿವಕ್ಷೆ ಮಾಡಿದರೆ ನನ್ನ ಮತದಲ್ಲಿ ಧ್ವಂಸ ಪ್ರತಿಯೋಗಿತ್ವವು ಸತ್ಯತ್ವಕ್ಕೆ ವ್ಯಾಪ್ಯವಾಗಿದೆ. ಧ್ವಂಸವು ಸತ್ಯವಸ್ತುವಿಗೆ ಮಾತ್ರ ಸಾಧ್ಯವಾಗುವುದರಿಂದ ಮಿಥ್ಯಾತ್ವಾಸಂಭವ. ಸತ್ಯತ್ವವನ್ನು ಇಲ್ಲವೆನ್ನಲಾಗುವುದಿಲ್ಲ. ಇಲ್ಲಿ ದೃಷ್ಟಾಂತದಲ್ಲಿ ಚಂದ್ರಭೇದದಲ್ಲಿ ಸಾಧ್ಯವೈಕಲ್ಯವೂ ಬರುತ್ತದೆ. ಚಂದ್ರಭೇದವು ಅಸತ್ತಾದ್ದರಿಂದ ಅದಕ್ಕೆ ಧ್ವಂಸರೂಪವಾದ ನಿವೃತ್ತಿ ಇಲ್ಲ.

ಅಧಿಷ್ಠಾನ ಯಾಥಾತ್ಮ್ಯಜ್ಞಾನಜನ್ಯ ಧ್ವಂಸ ಪ್ರತಿಯೋಗಿಜ್ಞಾನವಿಷಯತ್ವವನ್ನು ವಿವಕ್ಷೆ ಮಾಡುವುದರಿಂದ ದೋಷವಿಲ್ಲ ಎನ್ನಬಾರದು. ಈ ನಿರ್ವಚನವು 'ಭ್ರಮವಿಷಯತ್ವವೇ ಮಿಥ್ಯಾತ್ವ' ಎನ್ನುವಲ್ಲಿ ಪರ್ಯವಸಾನವಾಗುತ್ತದೆ. ನಾನು ಸತ್ಯಕ್ಕೂ ಭ್ರಮವಿಷಯತ್ವವನ್ನು ಅಂಗೀಕಾರ ಮಾಡಿರುವುದರಿಂದ ನಿನಗೆ ಅರ್ಥಾಂತರತ್ವದೋಷ ಪರಿಹಾರವಾಗುವುದಿಲ್ಲ.

ನಿವೃತ್ತಿ ಶಬ್ದದಿಂದ ಅತ್ಯಂತಾಭಾವವನ್ನು ವಿವಕ್ಷೆ ಮಾಡಿದರೆ ನೀನು ವ್ಯವಹಾರ ದಶಾದಲ್ಲಿ ಭೇದಸತ್ವವನ್ನು ಅಂಗೀಕಾರ ಮಾಡಿರುವುದರಿಂದ ಅದಕ್ಕೆ ಅತ್ಯಂತಾಭಾವ ಪ್ರತಿಯೋಗಿತ್ವವು ಕೂಡುವುದಿಲ್ಲ. ಇಲ್ಲದಿದ್ದರೆ, ಅತ್ಯಂತಾಭಾವಪ್ರತಿಯೋಗಿತ್ವವನ್ನು ಒಪ್ಪಿದರೆ, ಭೇದವು ಶಶವಿಷಾಣದಂತೆ ಅತ್ಯಂತಾಸತ್ತಾಗಬೇಕಾದೀತು. ಹಾಗೆ ನೀನು ಒಪ್ಪಿಲ್ಲ.

केचित्तु अधिष्ठानयाथात्म्यज्ञानजन्यात्यन्ताभावप्रतियोगित्वं मिथ्यात्वमित्यङ्गीकारे जीवन्मुक्तिकालीनव्यवहारदशायां त्वया भेदानुवृत्त्यङ्गीकारेणासम्भवप्रसङ्गादिति व्याचक्षते । व्यवहारसतोऽपि भेदस्य पारमार्थिकत्वेनात्यन्ताभावप्रतियोगित्वोपगमान्न दोष इत्याशङ्कते – **पारमार्थिकत्वेति** । तथात्वमत्यन्ताभावप्रतियोगित्वं मिथ्यात्वमिति शेषः । **अबाध्यत्वेति** । पारमार्थिकत्वेनात्यन्ताभावप्रतियोगित्वरूपबाध्यत्व-ज्ञानस्य पारमार्थिकत्वज्ञानाधीनत्वात्तस्य चैतादृशबाध्यत्वाभावरूपस्य बाध्यत्वज्ञानाधीनत्वेनान्योन्याश्रयादित्यर्थः । उपलक्षणमेतत् । दृष्टान्ते साध्यवैकल्यं च । पारमार्थिकत्वेन चन्द्रभेदाभावाप्रसिद्धेः । असतः सद्रूपेण प्रतियोगित्वानुपगमात् । न चात्यन्ताभावप्रतियोगित्वमात्रं मिथ्यात्वम् ।

**तच्च सद्रूपेण असद्रूपेण वा मतद्वयसिद्धमेवेति वाच्यम् । भेदस्य सत्त्वेऽप्यसत्त्वेनात्यन्ताभावप्रतियोगित्वसम्भवादर्थान्तरप्रसङ्गात् ।**

ಇಲ್ಲಿ ಕೆಲವರ ವ್ಯಾಖ್ಯಾನ ಹೀಗಿದೆ— ಅಧಿಷ್ಠಾನ ಯಾಥಾತ್ಮ್ಯಜ್ಞಾನಜನ್ಯಾತ್ಯಂತಾಭಾವ ಪ್ರತಿಯೋಗಿತ್ವವು ಮಿಥ್ಯಾತ್ವವೆಂದು ಅಂಗೀಕರಿಸಿದರೆ, ಜೀವನ್ಮುಕ್ತಿಕಾಲೀನ ವ್ಯವಹಾರದಶಾದಲ್ಲಿ ಭೇದಾನುವೃತ್ತಿಯನ್ನು ಅಂಗೀಕರಿಸಿರುವುದರಿಂದ, ಅತ್ಯಂತಾಭಾವ ಪ್ರತಿಯೋಗಿತ್ವ ಅಸಂಭವ ಪ್ರಸಂಗ ಎಂದು.

'ಭೇದವು ವ್ಯವಹಾರ ಸತ್ತಾಗಿದ್ದರೂ ಪಾರಮಾರ್ಥಿಕತ್ವಾಕಾರೇಣ ಅದಕ್ಕೆ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಒಪ್ಪುತ್ತೇವೆ. ಅದರಿಂದ ಅಸಂಭವ ದೋಷವಿಲ್ಲ, ಶಶವಿಷಾಣ ಸಾಮ್ಯಪ್ರಸಕ್ತಿ ದೋಷವೂ ಇಲ್ಲ' ಎಂದು ಹೇಳಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಪಾರಮಾರ್ಥಿಕತ್ವೇನ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಬಾಧ್ಯತ್ವ ಜ್ಞಾನವು ಪಾರಮಾರ್ಥಿಕತ್ವ ಜ್ಞಾನಾಧೀನವಾಗಿದೆ. ಪಾರಮಾರ್ಥಿಕತ್ವ ಜ್ಞಾನವು, ಪಾರಮಾರ್ಥಿಕತ್ವವು ಈ ಬಾಧ್ಯತ್ವದ ಅಭಾವರೂಪವಾದ್ದರಿಂದ, ಬಾಧ್ಯತ್ವಜ್ಞಾನಾಧೀನ. ಹೀಗೆ ಅನ್ಯೋನ್ಯಾಶ್ರಯ.

ಇದು ಉಪಲಕ್ಷಣ. ದೃಷ್ಟಾಂತದಲ್ಲಿ ಸಾಧ್ಯ ವೈಕಲ್ಯ. ಏಕೆಂದರೆ ಪಾರಮಾರ್ಥಿಕತ್ವೇನ ಚಂದ್ರಭೇದಾಭಾವ ಅಪ್ರಸಿದ್ಧ. ಅಸತ್ತು ಸದ್ರೂಪೇಣ ಅಭಾವಕ್ಕೆ ಪ್ರತಿಯೋಗಿ ಎಂದು ಒಪ್ಪಲಾಗದು. ವ್ಯಧಿಕರಣಧರ್ಮಾವಚ್ಛಿನ್ನಾಭಾವವನ್ನು ಒಪ್ಪಿಲ್ಲ. ಮತ್ತು ಅಸತ್ತಿಗೆ ಸ್ವರೂಪೇಣ ಅತ್ಯಂತಾಭಾವವನ್ನೇ ಎಲ್ಲರೂ ಒಪ್ಪುತ್ತಾರೆ.

'ಅತ್ಯಂತಾಭಾವಪ್ರತಿಯೋಗಿತ್ವ ಮಾತ್ರವೆ ಮಿಥ್ಯಾತ್ವ. ಅದು ಸದ್ರೂಪದಿಂದಾಗಲಿ ಅಸದ್ರೂಪದಿಂದಾಗಲಿ ಭೇದ-ಅಭೇದವಾದಿಗಳಿಬ್ಬರಿಗೂ ಸಂಮತ' ಎಂದರೆ, ಭೇದವು ಸತ್ವೇನ ಇರಲಿ, ಆದರೂ ಅಸತ್ವೇನ ಅತ್ಯಂತಾಭಾವಪ್ರತಿಯೋಗಿತ್ವಸಂಭವವಿರುವುದರಿಂದ ಅರ್ಥಾಂತರತ್ವ ಪ್ರಸಂಗವಿದೆ.

**भेदत्वेन प्रतीयमानत्वादित्यत्र किमिदंप्रतीयमानत्वम्? प्रमाविषयत्वमप्रमाविषयत्वं वा ? प्रतीतित्वसामान्यावच्छिन्नविषयत्वं वा ? नाद्यः, तवासिद्धेः । न द्वितीयः, ममासिद्धेः । न तृतीयः, चन्द्रभेदप्रतीतेरपि मिथ्यात्वेनाप्रामाणिकत्वात् प्रामाणिकाप्रामाणिकयोश्चानुगतसामान्या-**

**भावेनासिद्धेः । भेदाभेदयोः भेदेऽनैकान्त्यं च । तस्यापि पक्षत्वे बाधः ।**

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 10 ನೋಡಿ)

'ಭೇದವು ಮಿಥ್ಯಾ, ಭೇದತ್ವೇನ ಪ್ರತೀಯಮಾನವಾಗುವುದರಿಂದ' ಎಂಬಲ್ಲಿ ಈ ಪ್ರತೀಯಮಾನತ್ವವೆಂದರೇನು? ಪ್ರಮಾವಿಷಯತ್ವವೆ, ಅಪ್ರಮಾವಿಷಯತ್ವವೆ, ಅಥವಾ ಪ್ರತೀತಿ ಸಾಮಾನ್ಯ ವಿಷಯತ್ವವೆ? ಪ್ರಮಾವಿಷಯತ್ವವನ್ನು ನೀನು ಒಪ್ಪಿಲ್ಲ, ನಿನಗೆ ಅಸಿದ್ಧಿ. ಅಪ್ರಮಾವಿಷಯತ್ವವನ್ನು ನಾನು ಒಪ್ಪಿಲ್ಲ, ನನಗೆ ಅಸಿದ್ಧಿ. ಪ್ರತೀತಿ ಸಾಮಾನ್ಯವಿಷಯತ್ವವು ಅಸಿದ್ಧ ಏಕೆಂದರೆ, ಚಂದ್ರಭೇದಪ್ರತೀತಿಯು ಭ್ರಮ, ನಿನ್ನ ಮತದಲ್ಲಿ ಪ್ರಾತಿಭಾಸಿಕ. ಘಟಭೇದಪ್ರತೀತಿಯು ವ್ಯಾವಹಾರಿಕ. ವ್ಯಾವಹಾರಿಕ ಪ್ರತೀತಿ ಪ್ರಾತಿಭಾಸಿಕಪ್ರತೀತಿಗಳಲ್ಲಿ ಅನುಗತವಾಗಿ ಪ್ರತೀತಿಸಾಮಾನ್ಯವೆಂಬುದಿಲ್ಲ. ಬೇದ-ಅಭೇದಗಳ ಭೇದದಲ್ಲಿ ವ್ಯಭಿಚಾರವೂ ಇದೆ. ಅದನ್ನೂ ಪಕ್ಷ ಮಾಡುತ್ತೇನೆ ಎಂದರೆ ಬಾಧ ಬರುತ್ತದೆ.

**भेदाभेदयोर्भेदस्यापारमार्थिकत्वे तु अनेनैवानुमानेनाभेद-स्यापि मिथ्यात्वं स्यात् । व्यावहारिकभेदसद्भावेऽपि परमार्थतो ब्रह्माभिन्नस्य जीवस्य पारमार्थिकत्वत् परमार्थतः पारमार्थिकाभेदाभिन्नो भेदोऽपि पारमार्थिकः स्यादिति मिथ्यात्वसाधने बाधः । पारमार्थिकापारमार्थिक-ब्रह्मप्रपञ्चभेदे व्यभिचारश्च । तस्यापि पक्षत्वे बाधो वा ।**

ಭೇದ ಅಭೇದಗಳ ಭೇದವೂ ಮಿಥ್ಯಾ ಆದರೆ ಇದೇ ಅನುಮಾನದಿಂದ ಅಭೇದವೂ ಮಿಥ್ಯಾ ಎಂದು ಸಿದ್ಧವಾದೀತು. ಜೀವಬ್ರಹ್ಮರಿಗೆ ವ್ಯಾವಹಾರಿಕ ಭೇದವಿದ್ದರೂ ಪಾರಮಾರ್ಥಿಕನಾಗಿ ಬ್ರಹ್ಮಾಭಿನ್ನನಾದ ಜೀವನು ಪಾರಮಾರ್ಥಿಕವಾಗಿರುವಂತೆ ಪಾರಮಾರ್ಥಿಕವಾಗಿ ಪಾರಮಾರ್ಥಿಕ ಅಭೇದದಿಂದ ಅಭಿನ್ನವಾದ ಭೇದವು ಕೂಡ ಪಾರಮಾರ್ಥಿಕವೇ ಆಗಬೇಕು. ಅದನ್ನು ಮಿಥ್ಯೆ ಎಂದು ಸಾಧಿಸಲು ಹೊರಟರೆ ಬಾಧ ಬರುತ್ತದೆ. ಪಾರಮಾರ್ಥಿಕ ಬ್ರಹ್ಮನಿಂದ ಅಪಾರಮಾರ್ಥಿಕವಾದ ಪ್ರಪಂಚಕ್ಕೆ ಇರುವ ಭೇದದಲ್ಲಿ ವ್ಯಭಿಚಾರವೂ ಬರುತ್ತದೆ. ಅದೂ ಪಕ್ಷವೆಂದರೆ ಪುನಃ ಬಾಧವೇ.

**ब्रह्मणि धर्मिसत्तासमानसत्ताको भेदो नास्तीति पारमार्थिकत्वं घटादौ चास्तीत्यपारमार्थिकत्वमिति चेत् तर्हि ब्रह्मणः प्रपञ्चात् धर्मिसमानसत्ताको भेदो नास्तीति तदपारमार्थिकत्वं प्रपञ्चवत् स्यात् । चन्द्रभेदे प्रातिभासिकत्वमुपाधिश्च । न च तत् पक्षे साधयितुं शक्यम् । व्यावहारिकत्वाङ्गीकारविरोधात् ।**

ಬ್ರಹ್ಮನಲ್ಲಿ ಧರ್ಮಿಸಮಸತ್ತಾಕ ಬ್ರಹ್ಮಭೇದವಿಲ್ಲದ್ದರಿಂದ ಬ್ರಹ್ಮವು ಪಾರಮಾರ್ಥಿಕ. ಘಟಾದಿಯಲ್ಲಿ ಧರ್ಮಿಸಮತ್ತಾಕ ಬ್ರಹ್ಮಭೇದವಿರುವುದರಿಂದ ಘಟಾದಿಯು ಅಪಾರಮಾರ್ಥಿಕ ಎನ್ನುತ್ತೇನೆ ಎಂದರೆ ಬ್ರಹ್ಮನಲ್ಲಿ ಪ್ರಪಂಚ ಪ್ರತಿಯೋಗಿಕ ಧರ್ಮಿಸಮಸತ್ತಾಕ ಭೇದವಿಲ್ಲದ್ದರಿಂದ ಬ್ರಹ್ಮವು ಪ್ರಪಂಚದಂತೆ ಅಪಾರಮಾರ್ಥಿಕ ವಾಗಿದೆ ಎಂದು ನಾನು ಹೇಳುತ್ತೇನೆ; ನ್ಯಾಯವು ಸಮಾನವಾದ್ದರಿಂದ. ಪ್ರಾತಿಭಾಸಿಕತ್ವವು ಉಪಾಧಿ ಎಂದೂ ಹೇಳುತ್ತೇನೆ. ಅದು ಚಂದ್ರಭೇದಾದಿಗಳಲ್ಲಿ ಮಿಥ್ಯಾತ್ವರೂಪ ಸಾಧ್ಯಕ್ಕೆ ವ್ಯಾಪಕವಾಗಿದೆ. ಪಕ್ಷವಾದ ಭೇದದಲ್ಲಿ ಅದನ್ನು ಸಾಧಿಸಲು ಶಕ್ಯವಿಲ್ಲ. ಅದನ್ನು ವ್ಯಾವಹಾರಿಕವೆಂದು ನೀನು ಅಂಗೀಕರಿಸಿರುವುದರಿಂದ ಅದರ ವಿರೋಧ ಬರುತ್ತದೆ.

**अभेदो मिथ्या अभेदत्वात्, देहात्माभेदवदित्याद्याभाससाम्यं च । न च दृष्टान्तस्य साध्यवैकल्यं शङ्क्यम् । तथात्वेऽन्योन्यस्मिन्नन्योन्यात्मकतामन्योन्यधर्मांश्चाध्यस्येतिभाष्यस्योन्मत्तप्रलापत्वप्रसङ्गः । गौरोऽहं कृशोऽहमित्यादिज्ञानस्य तत्त्वावेदकत्वेन प्रामाण्यप्रसङ्गश्च ।**

ಅಭೇದವು ಮಿಥ್ಯಾ, ಅಭೇದತ್ವವಿರುವುದರಿಂದ, ದೇಹಾತ್ಮಾಭೇದದಂತೆ ಎಂದು ಆಭಾಸ ಸಾಮ್ಯವೂ ಇದೆ. ಇಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿದೆ ಎಂದು ನೀನು ಹೇಳುವಂತಿಲ್ಲ. ಹೇಳಿದರೆ, 'ದೇಹ ಆತ್ಮಗಳಿಗೆ ಪರಸ್ಪರ ಅಭೇದವನ್ನೂ ಪರಸ್ಪರ ಧರ್ಮಗಳನ್ನೂ ಅಧ್ಯಾಸಮಾಡಿಯೇ ಲೋಕದಲ್ಲಿ ಎಲ್ಲ ವ್ಯವಹಾರ ನಡೆಯುತ್ತಿವೆ' ಎಂದು ಹೇಳುವ ಅಧ್ಯಾಸಭಾಷ್ಯ ಉನ್ಮತ್ತಪ್ರಲಾಪವೆಂದಾದೀತು. ಮತ್ತು ನಾನು

ಬಳಿಯಾಗಿದ್ದೇನೆ ಕೃಶನಾಗಿದ್ದೇನೆ ಎನ್ನುವುದು ಅಬಾಧಿತವಿಷಯಕವಾದ್ದರಿಂದ ತತ್ತ್ವಾವೇದಕ ಪ್ರಮಾಣವೆಂದಾದೀತು.

चतुर्थे तु नानापदार्थानामेव सेनावनादिवदुपाधिभेदेन जगच्छब्दवाच्यतया पदार्थान्तराभावेन घटादीनां तदभेदसाधने बाधः। पृथिव्यादीनां जगदाख्यपदार्थान्तरारम्भकत्वे तु तदारब्धे जगति पृथिवीत्वादिजातिसाङ्कर्यप्रसङ्गः। गुणादीनां जगदन्तर्भूतानां तदारम्भकत्वे तेषां द्रव्यत्वापत्तिश्च। निरवयवानां द्रव्यारम्भकत्वप्रसङ्गश्च। घटादिपदार्थानामन्त्यावयवित्वहानिश्च स्यात्। घटादिपदार्थानामेव पक्षत्वे तु स्वान्तर्भेदहीनशब्देन स्वप्रतियोगिकभेदाभावेऽभिमते सिद्धसाधनम्। भेदाभावमात्रसाधने तु साध्यविकलो दृष्टान्तः। आकाशभेदसाधनं त्वस्माभिरन्यत्र कृतम्। ग्रन्थगौरवभयान्नेह तन्यते। तस्मान्नाभेदेऽनुमानं प्रमाणम्।

(ಅನುಬಂಧದಲ್ಲಿ ಟಿಪ್ಪಣಿ ವಿಶೇಷಾಂಶ 11 ನೋಡಿ)

ಜಗತ್ತು ವಸ್ತುತಃ ಸ್ವಾಂತರ್ಭೇದಹೀನವಾಗಿದೆ. ಮೇಯತ್ವವಿರುವುದರಿಂದ, ಆಕಾಶದಂತೆ ಎಂಬ ನಾಲ್ಕನೆ ಅನುಮಾನದಲ್ಲಿ ಘಟಪಟಾದಿ ನಾನಾ ಪದಾರ್ಥಗಳೆ ಸೈನ್ಯ ಅರಣ್ಯಾದಿಗಳಂತೆ ಸಮೂಹತ್ವವೆಂಬ ಒಂದು ಉಪಾಧಿಯಿಂದ ಜಗತ್ತೆನಿಸಿದ್ದು ಪದಾರ್ಥಾಂತರವಲ್ಲದಿರುವುದರಿಂದ ಘಟಾದಿಗಳಿಗೆ ಅದರ ಅಭೇದ ಸಾಧನೆ ಮಾಡಿದರೆ ಬಾಧ. ಜಗತ್ತನ್ನು ಪದಾರ್ಥಾಂತರವೆಂದಿಟ್ಟುಕೊಂಡು ಪೃಥಿವ್ಯಾದಿಗಳು ಅದರ ಅವಯವಗಳೆನ್ನುವುದಾದರೆ ಪೃಥಿವೀತ್ವಾದಿಗಳಿಗೆ ಸಾಂಕರ್ಯಪ್ರಸಂಗ. ಜಗತ್ತಿನಲ್ಲಿ ಅಂತರ್ಭೂತವಾಗಿರುವ ಗುಣಾದಿಗಳು ಜಗದವಯವಗಳಾದರೆ ಅವುಗಳಿಗೆ ದ್ರವ್ಯತ್ವಾಪತ್ತಿ. ನಿರವಯವವಾದ ಆಕಾಶಾದಿಗಳು ದ್ರವ್ಯಾರಂಭಕವಾಗುವ ಪ್ರಸಂಗ. ಘಟಾದಿಪದಾರ್ಥಗಳಿಗೆ ಅಂತ್ಯಾವಯವಿತ್ವ ಹಾನಿಪ್ರಸಂಗ. ಘಟಾದಿಪದಾರ್ಥಗಳನ್ನೇ ಪಕ್ಷಮಾಡುವುದಾದರೆ, ಸ್ವಾಂತರ್ಭೇದಶೂನ್ಯತ್ವ ಶಬ್ದದಿಂದ ಸ್ವಪ್ರತಿಯೋಗಿಕ ಭೇದಾಭಾವ ವಿವಕ್ಷಿತವಾದರೆ ಸಿದ್ಧಸಾಧನ. ಪರಸ್ಪರ ಭೇದಾಭಾವ ಮಾತ್ರ ಸಾಧನ

**ಮಾಡುವುದಾದರೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ಆಕಾಶೈಕದೇಶಗಳಿಗೆ ಭೇದಸಾಧನೆಯನ್ನು ಅನ್ಯತ್ರಮಾಡಿದ್ದೇವೆ. ಗ್ರಂಥದ ಗಾತ್ರ ಹೆಚ್ಚುವ ಭಯದಿಂದ ನಾವು ಇಲ್ಲಿ ಅದನ್ನು ವಿವರಿಸುವುದಿಲ್ಲ. ಅದರಿಂದ ಆತ್ಮಭೇದದಲ್ಲಿ ಅನುಮಾನವು ಪ್ರಮಾಣವಲ್ಲ.**

**ಚಂದ್ರಾಂತರವೇ ಆರೋಪಿತ ಹೊರತು ಚಂದ್ರಭೇದವಲ್ಲ**

परोक्तहेतुमपि दूषयति **– भेदत्वेनेति ।** इदंप्रतीयमानत्व-मित्येकपदम् । इदं वक्ष्यमाणविशेषसामान्याकारबोधौपयिकं प्रतीयमानत्व-पदं यत्परं तत्प्रतीतिविशेषणं किमित्यर्थः । तेन न वक्ष्यमाणविकल्पानुप-पत्त्यवकाशः **। तवासिद्धेरिति ।** भेदमात्रस्य मिथ्यात्वेन तत्प्रतीतेः प्रमात्वायोगात् पक्षदृष्टान्तयोर्हेत्वसिद्धेरित्यर्थः **। ममासिद्धेरिति ।** घटपटादिभेदास्यारोपितानारोपितचन्द्रभेदस्य च सत्यत्वादिति भावः । न च चन्द्रान्तरस्यारोपितत्वे गौरवम् । चन्द्रसमीपदेशे चन्द्रान्तरारोपं विना तत्प्रतीत्यनुपपत्तेः । मिथ्यैव चन्द्रान्तरं प्रत्यभादित्यनुस्मृतेश्च । एतेन दृष्टान्ते साध्यवैकल्पं च सूचितम् ।

ಭೇದವು ಮಿಥ್ಯಾ, ಭೇದತ್ವವಿರುವುದರಿಂದ, ಚಂದ್ರಭೇದದಂತೆ ಎಂಬ ಅನುಮಾನದಲ್ಲಿ ಭೇದತ್ವಹೇತುವನ್ನು ದೂಷಿಸುತ್ತಾರೆ. 'ಕಿಮಿದಂಪ್ರತೀಯಮಾನತ್ವಂ?' ಎಂಬಲ್ಲಿ ಇದಂಪ್ರತೀಯ ಮಾನತ್ವವೆಂದು ಒಂದು ಸಮಾಸಪದ. 'ಇದಂ ಪ್ರತೀಯಮಾನತ್ವಂ ಯತ್‌ಪರಂ' ಎಂದು ಸಮಾಸ. 'ಈ 'ಪ್ರತೀಯಮಾನತ್ವ' ಎಂಬ ಪದವು ಏನು ಪ್ರತೀತಿಯ ವಿಶೇಷಾಕಾರ ಸಾಮಾನ್ಯಾಕಾರಗಳನ್ನು ಹೇಳಲು ಹೊರಟಿದೆಯೋ ಅದು' ಅಂದರೆ ಈ ಪ್ರತೀಯಮಾನತ್ವಪದದ ವಿವಕ್ಷಿತಾರ್ಥವು ಏನು? ಎಂದು ಪ್ರಶ್ನೆಯ ಅರ್ಥ. ವಿವಕ್ಷಿತಾರ್ಥವು ಪ್ರಮಾವಿಷಯತ್ವವೆ, ಅಪ್ರಮಾವಿಷಯತ್ವವೆ, ಅಥವಾ ಪ್ರತೀತಿಸಾಮಾನ್ಯ ವಿಷಯತ್ವವೆ' ಎಂದು ಮುಂದೆ ವಿಶೇಷಾಕಾರ ಸಾಮಾನ್ಯಾಕಾರಗಳನ್ನು ವಿಕಲ್ಪ ಮಾಡುವುದು ಈ ಅಭಿಪ್ರಾಯದಿಂದ ಕೂಡುತ್ತದೆ.

ಪ್ರಮಾವಿಷಯತ್ವ ಹೇತುವು ಭೇದದಲ್ಲಿ ಬರಲಾರದು. ಏಕೆಂದರೆ ಎಲ್ಲ ಭೇದವೂ ಮಿಥ್ಯೆ. ಅದರ ಪ್ರತೀತಿ ಪ್ರಮಾ ಆಗಲಾರದು. ಆದರಿಂದ ನಿನಗೆ ಪಕ್ಷ ದೃಷ್ಟಾಂತಗಳೆರಡರಲ್ಲಿಯೂ ಪ್ರಮಾ ವಿಷಯತ್ವರೂಪ ಹೇತು ಅಸಿದ್ಧ ಎಂದರ್ಥ.

ಅಪ್ರಮಾವಿಷಯತ್ವ ಹೇತು ನನಗೆ ಅಸಿದ್ಧ. ಏಕೆಂದರೆ ಘಟಪಟಾದಿ ಭೇದವು ಪಕ್ಷ. ಆರೋಪಿತಚಂದ್ರ, ಅನಾರೋಪಿತಚಂದ್ರರಿಗೆ ಇರುವ ಭೇದವು ದೃಷ್ಟಾಂತ. ಇವೆರಡೂ ನನ್ನ ಮತದಲ್ಲಿ ಸತ್ಯವಾದ್ದರಿಂದ ಪಕ್ಷದೃಷ್ಟಾಂತಗಳೆರಡರಲ್ಲಿಯೂ ಹೇತು ನನಗೆ ಅಸಿದ್ಧ.

'ಚಂದ್ರಾಂತರ ಆರೋಪಪಕ್ಷದಲ್ಲಿ ಗೌರವ ಬರುತ್ತದೆ. ಲಾಘವಕ್ಕಾಗಿ, ಇರುವ ಚಂದ್ರನಲ್ಲಿ ಭೇದವನ್ನೇ ಆರೋಪ ಮಾಡಬೇಕು' ಎಂದು ಅಭೇದವಾದಿ ಹೇಳಿದರೆ ಅದು ಸರಿಯಲ್ಲ. ಚಂದ್ರನ ಸಮೀಪಪ್ರದೇಶದಲ್ಲಿ ಚಂದ್ರಾಂತರ ಕಾಣುತ್ತದೆ. ಅದು ಚಂದ್ರಾಂತರ ಆರೋಪವಿಲ್ಲದೆ ಕೂಡುವುದಿಲ್ಲ. ಮತ್ತು 'ಚಂದ್ರನ ಸಮೀಪದಲ್ಲಿ, ಇಲ್ಲದಿದ್ದ ಇನ್ನೊಂದು ಚಂದ್ರ ಕಾಣಿಸಿತು' ಎಂದು ಅನುಸ್ಮೃತಿಯೂ ಇದೆ. ಇದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೂ ಸೂಚಿತವಾಯಿತು. ದೃಷ್ಟಾಂತವಾದ ಆರೋಪಿತ ಅನಾರೋಪಿತ ಚಂದ್ರರ ಭೇದ ಸತ್ಯವಾದ್ದರಿಂದ ಮಿಥ್ಯಾತ್ವರೂಪ ಸಾಧ್ಯ ಅದರಲ್ಲಿ ಬರಲಾರದು.

**चन्द्रभेदप्रत्यक्षप्रतीतेरिति** । तन्मते चन्द्रभेदप्रत्यक्षस्य भ्रमत्वेन प्रातिभासिकत्वात् व्यावहारिकप्रातिभासिकयोरनुगतसामान्याभावेन हेत्वसिद्धेरित्यर्थः । अन्यथा बाष्पारोपितधूमादिमति वह्न्याद्यभावादनुमानोच्छेदप्रसङ्ग इति भावः । अभ्युपेत्यापि दोषमाह —**भेदाभेदेति** । भेदाभेदयोर्यो भेदस्तत्रेत्यर्थः । **तस्यापि पक्षत्व इति** । तत्साधारणविमतेः पक्षतावच्छेदकत्वात् पक्षे व्यभिचारस्य चादोषत्वादिति भावः । ननु भेदाभेदयोर्भेदस्यापि मिथ्यात्वाङ्गीकारात् न बाध इत्यत आह —**भेदाभेदयोरिति** । **मिथ्यात्वं स्यादिति** । अभेदस्यापि भेदत्वेन पक्षत्वात् हेतुमत्त्वाच्चेति भावः ।

ಚಂದ್ರಭೇದ ಪ್ರತ್ಯಕ್ಷ ಪ್ರತೀತಿಯೂ ಭ್ರಮವಾದ್ದರಿಂದ ಅಭೇದಮತದಲ್ಲಿ ಪ್ರಾತಿಭಾಸಿಕ ವಾಗಿದೆ, ಘಟಾದಿಭೇದಪ್ರತೀತಿ ವ್ಯಾವಹಾರಿಕ. ವ್ಯಾವಹಾರಿಕ ಪ್ರಾತಿಭಾಸಿಕಗಳಲ್ಲಿ ಅನುಗತವಾಗಿ ಒಂದು ಸಾಮಾನ್ಯ ಇಲ್ಲದ್ದರಿಂದ ಸಾಮಾನ್ಯವನ್ನು ಹೇತು ಮಾಡಿದರೆ ಹೇತ್ವಸಿದ್ಧಿ. ಹೀಗೆ ಒಪ್ಪದಿದ್ದರೆ ಬಾಷ್ಪಾರೋಪಿತ ಧೂಮಾದಿಗಳಿರುವಲ್ಲಿ ವಹ್ನ್ಯಾದಿಗಳಿರುವುದಿಲ್ಲವಾದ್ದರಿಂದ ಅನುಮಾನ ಯಾವುದೂ ಪ್ರಮಾಣವಾಗದೆ ಹೋಗುವ ಪ್ರಸಂಗ ಬರುತ್ತದೆ.

ಅಭ್ಯುಪಗಮವಾದದಿಂದ ಹೇತು ಎಂದು ಒಪ್ಪಿಯೂ ವ್ಯಭಿಚಾರವನ್ನು ಹೇಳುತ್ತಾರೆ— 'ಭೇದ–ಅಭೇದಗಳಿಗೆ ಇರುವ ಭೇದ ಸತ್ಯ. ಅದರಲ್ಲಿ ಮಿಥ್ಯಾತ್ವವಿಲ್ಲ. ಹೇತುವಿಗೆ ಅದರಲ್ಲಿ

ವ್ಯಭಿಚಾರ' ಎಂದು. ಅಭೇದವಾದಿ ಹೇಳುತ್ತಾನೆ– 'ಅದೂ ಪಕ್ಷವೇ, ಏಕೆಂದರೆ ತತ್ಸಾಧಾರಣವಾದ ವಿಮತಿಯು ಪಕ್ಷತಾವಚ್ಛೇದಕ. ಪಕ್ಷದಲ್ಲಿ ವ್ಯಭಿಚಾರ ದೋಷವಾಗುವುದಿಲ್ಲ' ಎಂದು. ಹೀಗೆ ಪಕ್ಷವಾದರೆ ಬಾಧ ಎನ್ನುತ್ತಾರೆ. 'ಬಾಧವಿಲ್ಲ, ಅದನ್ನೂ ನಾನು ಮಿಥ್ಯಾ ಎಂದೇ ಅಂಗೀಕರಿಸುತ್ತೇನೆ' ಎಂದು ಅವನು ಹೇಳಿದರೆ ಹೇಳುತ್ತಾರೆ, ಭೇದಾಭೇದಗಳಿಗೆ ಭೇದವು ಮಿಥ್ಯಾ ಎಂದರೆ ಅಭೇದದಲ್ಲಿ ಭೇದತ್ವವನ್ನು ಒಪ್ಪಿದಂತಾಯಿತು. ಈಗ, ಭೇದತ್ವೇನ ಅಭೇದವೂ ಪಕ್ಷದಲ್ಲಿ ಸೇರುವುದರಿಂದ, ಮತ್ತು ಭೇದತ್ವರೂಪ ಹೇತುವೂ ಬರುವುದರಿಂದ ಅಭೇದವೂ ಮಿಥ್ಯಾ ಎಂದು ಈ ಅನುಮಾನದಿಂದಲೇ ಸಿದ್ಧವಾಗುವುದು'.

अत्रैव दोषान्तरमाह – **व्यावहारिकेति । पारमार्थिकः स्यादिति ।** अभेदस्य पारमार्थिकत्वे तदभिन्नभेदस्य मिथ्यात्वायोगादिति भावः ।

भेदाभेदयोः व्यावहारिकभेदसत्त्वात् कथमभेद इत्यत उक्तम् – **परमार्थतोऽभिन्न इति ।** व्यावहारिकभेदश्च न पारमार्थिकाभेद-विरोधीत्याशयः । अत्र दृष्टान्तो व्यावहारिकेत्यादिः ।

स्थलान्तरे व्यभिचारमाह – **पारमार्थिकेति ।** पारमार्थिकं ब्रह्म अपारमार्थिकश्च प्रपञ्च इत्यनयोर्भेदस्य पारमार्थिकत्वात् तत्रापि व्यभिचार इत्यर्थः । **तस्यापीति ।** ब्रह्मप्रपञ्चभेदस्यापीत्यर्थः । तस्यापारमार्थिकत्वे च ब्रह्मवत् प्रपञ्चस्य पारमार्थिकत्वापत्त्या तदन्तर्गतभेदे पुनर्बाध एवेत्यर्थः ।

ಇಲ್ಲಿಯೇ ಇನ್ನೊಂದು ದೋಷವನ್ನೂ ಹೇಳುತ್ತಾರೆ— 'ಬ್ರಹ್ಮನು ಪಾರಮಾರ್ಥಿಕನಾದ್ದರಿಂದ ಅವನಿಂದ ವ್ಯಾವಹಾರಿಕ ಭೇದವಿದ್ದರೂ ವಸ್ತುತಃ ತದಭಿನ್ನನಾದ ಜೀವನು ಪಾರಮಾರ್ಥಿಕನೆಂದು ಅಭೇದಮತ. ಈಗ ಅಭೇದವು ಪಾರಮಾರ್ಥಿಕವೆಂದಾದರೆ ತದಭಿನ್ನವಾದ ಭೇದವು ಮಿಥ್ಯೆಯಾಗಲು ಶಕ್ಯವಿಲ್ಲ' ಎಂದು.

ಭೇದ–ಅಭೇದಗಳಿಗೆ ವ್ಯಾವಹಾರಿಕ ಭೇದವಿರುವಾಗ ಅಭೇದ ಹೇಗೆ ಎಂದರೆ ಅವುಗಳು 'ವಸ್ತುತಃ ಅಭಿನ್ನ' ವ್ಯಾವಹಾರಿಕ ಭೇದವಿದ್ದರೂ ಅದು ವಾಸ್ತವಾಭೇದಕ್ಕೆ ವಿರೋಧಿಯಲ್ಲ. ಇದಕ್ಕೆ ದೃಷ್ಟಾಂತ– 'ವ್ಯಾವಹಾರಿಕ ಭೇದವಿದ್ದರೂ ವಾಸ್ತವವಾಗಿ ಬ್ರಹ್ಮಾಭಿನ್ನನಾದ ಜೀವನು ಪಾರಮಾರ್ಥಿಕ ನೆನಿಸಿದ್ದಾನೆ' ಎಂದು.

ಇನ್ನೊಂದು ಕಡೆ ವ್ಯಭಿಚಾರವನ್ನು ಹೇಳುತ್ತಾರೆ— 'ಬ್ರಹ್ಮವು ಪಾರಮಾರ್ಥಿಕ. ಪ್ರಪಂಚವು ಅಪಾರಮಾರ್ಥಿಕ. ಇವರಿಗೆ ಭೇದವು ಪಾರಮಾರ್ಥಿಕವಾದ್ದರಿಂದ ಅಲ್ಲಿಯೂ ಹೇತುವಿಗೆ ವ್ಯಭಿಚಾರ'. 'ಅದನ್ನೂ ಪಕ್ಷವೆಂದು ಅಂಗೀಕರಿಸಿದರೆ ಪುನಃ ಬಾಧವೆ', ಅಂದರೆ ಬ್ರಹ್ಮಪ್ರಪಂಚಭೇದ ವನ್ನೂ ಕೂಡ ಅಪಾರಮಾರ್ಥಿಕವೆಂದು ಅಂಗೀಕರಿಸಿದರೆ ಬ್ರಹ್ಮ ಪ್ರಪಂಚಗಳಿಗೆ ಭೇದವು ವಸ್ತುತಃ ಇಲ್ಲವೆಂದ ಮೇಲೆ, ಬ್ರಹ್ಮದಂತೆ ಪ್ರಪಂಚವೂ ಪಾರಮಾರ್ಥಿಕ, ಅದರೊಳಗೆ ಸೇರಿರುವ ಭೇದವೂ ಪಾರಮಾರ್ಥಿಕ ಎಂದಾಗುವುದು. ಆದರೂ ನೀನು ಅದರಲ್ಲಿ ಅಪಾರಮಾರ್ಥಿಕತ್ವ ಸಾಧನೆ ಮಾಡಲು ಹೊರಟರೆ ಪುನಃ ಬಾಧವೇ ಬರುತ್ತದೆ ಎಂದರ್ಥ.

**स्यादेवं यदि ब्रह्मप्रतियोगिकपारमार्थिकभेदशून्यत्वं ब्रह्मधर्मापादकं स्यात् । न चैवम् । अपि तु ब्रह्मप्रतियोगिकधर्मिसत्तासमसत्ताकभेदशून्यत्वमेवातो नोक्तदोष इत्याशङ्कते – ब्रह्मणीति । भेदो ब्रह्मभेदः – प्रपञ्चवत् स्यादिति । तुल्यन्यायेन प्रपञ्चप्रतियोगिकधर्मिसत्तासमानसत्ताकभेदशून्यत्वस्य प्रपञ्चधर्मापादकत्वप्राप्तेरिति भावः ।**

ಅಭೇದವಾದಿ ಹೇಳುತ್ತಾನೆ— 'ಬ್ರಹ್ಮ ಪ್ರತಿಯೋಗಿಕ ಪಾರಮಾರ್ಥಿಕ ಭೇದಶೂನ್ಯತ್ವ ಮಾತ್ರದಿಂದ ಪ್ರಪಂಚಕ್ಕೆ ಬ್ರಹ್ಮನಂತೆ ಪಾರಮಾರ್ಥಿಕತ್ವ ಬರುವುದಿಲ್ಲ. ಬ್ರಹ್ಮಪ್ರತಿಯೋಗಿಕ ಧರ್ಮಿಸತ್ತಾಸಮಸತ್ತಾಕ ಭೇದ ಶೂನ್ಯತ್ವ ಬರಬೇಕು. ಆಗ ಬ್ರಹ್ಮಧರ್ಮ ಬರುತ್ತದೆ, ಬ್ರಹ್ಮನಲ್ಲಿ ಬ್ರಹ್ಮಪ್ರತಿಯೋಗಿಕ ಧರ್ಮಿ ಸಮಸತ್ತಾಕ ಭೇದಶೂನ್ಯತ್ವವಿರುವುದರಿಂದಲೇ ಬ್ರಹ್ಮನು ಬ್ರಹ್ಮನಂತೆ ಪಾರಮಾರ್ಥಿಕ. ಪ್ರಪಂಚದಲ್ಲಿ ಬ್ರಹ್ಮಪ್ರತಿಯೋಗಿಕ ಧರ್ಮಿ ಸಮಸತ್ತಾಕವಾದ ವ್ಯಾವಹಾರಿಕ ಭೇದವೇ ಇದೆ. ಭೇದಶೂನ್ಯತ್ವವಿಲ್ಲ. ಆದರಿಂದ ಪ್ರಪಂಚ ಪಾರಮಾರ್ಥಿಕವಾಗುವುದಿಲ್ಲ. ತದಂತರ್ಗತವಾದ ಭೇದವೂ ಪಾರಮಾರ್ಥಿಕವಾಗುವುದಿಲ್ಲ. ಆದರಲ್ಲಿ ಮಿಥ್ಯಾತ್ವ ಸಾಧನೆ ಮಾಡಿದರೆ ಬಾಧಕ್ಕೆ ಅವಕಾಶವಿಲ್ಲ' ಎಂದು. ಇಲ್ಲಿ ಮೂಲದಲ್ಲಿ 'ಬ್ರಹ್ಮಣಿ ಧರ್ಮಿಸಮಸತ್ತಾಕ ಭೇದೋ ನಾಸ್ತಿ' 'ಬ್ರಹ್ಮನಲ್ಲಿ ಧರ್ಮಿಸಮಸತ್ತಾಕ ಭೇದವಿಲ್ಲ' ಎಂದಿದೆ. ಯಾವುದರ ಭೇದವೆಂದು ಹೇಳಿಲ್ಲ. 'ಭೇದೋ ಬ್ರಹ್ಮಭೇದಃ' ಈ ಭೇದವು ಬ್ರಹ್ಮಪ್ರತಿಯೋಗಿಕಭೇದವೆಂದಿಟ್ಟುಕೊಳ್ಳಬೇಕು.

ಅಭೇದವಾದಿ ಹೀಗೆ ಹೇಳಿದರೆ ಇದಕ್ಕೆ ಉತ್ತರ– 'ಬ್ರಹ್ಮನಲ್ಲಿ ಪ್ರಪಂಚ ಪ್ರತಿಯೋಗಿಕ ಧರ್ಮಿ ಸಮಾನ ಸತ್ತಾಕ ಭೇದವಿಲ್ಲ. ಆದರಿಂದ ಬ್ರಹ್ಮನಲ್ಲಿ ಪ್ರಪಂಚದಂತೆ ಅಪಾರಮಾರ್ಥಿಕತ್ವ ಬರಬೇಕಾದೀತು' ಇದರ ಅರ್ಥ— ಬ್ರಹ್ಮಪ್ರತಿಯೋಗಿಕ ಧರ್ಮಿಸತ್ತಾಸಮಾನಸತ್ತಾಕ ಭೇದಶೂನ್ಯತ್ವ ಬ್ರಹ್ಮನಲ್ಲಿ ಬಂದಿದ್ದರಿಂದ ಬ್ರಹ್ಮನಂತೆ ಪಾರಮಾರ್ಥಿಕತ್ವ ಬ್ರಹ್ಮನಿಗಿದೆ. ಆದರಿಂದ ಧರ್ಮಿಸಮಸತ್ತಾಕ ತದ್ಭೇದಶೂನ್ಯತ್ವವು ತದ್ಧರ್ಮಾಪಾದಕ. ಪ್ರಕೃತ ಪ್ರಪಂಚಪ್ರತಿಯೋಗಿಕ ಧರ್ಮಿಸಮಸತ್ತಾಕ

ಭೇದಶೂನ್ಯತ್ವ ಬ್ರಹ್ಮನಲ್ಲಿ ಬರುತ್ತದೆ ಎಂದು ನೀನು ಒಪ್ಪಿರುವೆ. ಎಂದಮೇಲೆ ಅದು, 'ಧರ್ಮಿಸಮಸತ್ತಾಕ ತದ್ಭೇದಶೂನ್ಯತ್ವವು ತದ್ಧರ್ಮಾಪಾದಕ' ಎಂದು ನಿನ್ನ ನ್ಯಾಯದಂತೆಯೆ ಬ್ರಹ್ಮನಲ್ಲಿ ಪ್ರಪಂಚಧರ್ಮಾಪಾದಕ, ಅಂದರೆ ಬ್ರಹ್ಮನು ಪ್ರಪಂಚದಂತೆ ಅಪಾರಮಾರ್ಥಿಕವಾಗ ಬೇಕಾಯಿತು. 'ಅಪಾರಮಾರ್ಥಿಕತ್ವಂ ಪ್ರಪಂಚವತ್ ಸ್ಯಾತ್' ಎಂದು ಹೇಳುತ್ತಾರೆ.

**चन्द्रभेद इति साध्यव्यापकत्वप्रदर्शनार्थम् । यद्यपि मिथ्यात्ववति घटादौ न प्रातिभासिकत्वम् । तथापि भेदत्वावच्छिन्नसाध्यव्यापकत्वादुपाधित्वमिति । नन्वस्य साधनव्यापकत्वात् नोपाधित्वम् । भेदत्वेन पक्षेऽप्युपाध्यनुमानादित्याशङ्कां वारयति – न चेति । तथा चापसिद्धान्त इति भावः ।**

'ಚಂದ್ರಭೇದದಲ್ಲಿ ಪ್ರಾತಿಭಾಸಿಕತ್ವವು ಉಪಾಧಿ' ಎಂದರೆ ಪ್ರಾತಿಭಾಸಿಕತ್ವವೆಂಬ ಉಪಾಧಿಗೆ ಮಿಥ್ಯಾತ್ವರೂಪ ಸಾಧ್ಯವ್ಯಾಪಕತ್ವವು ಚಂದ್ರಭೇದದಲ್ಲಿ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಯದ್ಯಪಿ ಮಿಥ್ಯಾತ್ವಉಳ್ಳ ಘಟಾದಿಗಳಲ್ಲಿ ಪ್ರಾತಿಭಾಸಿಕತ್ವವಿಲ್ಲ. ಸಾಧ್ಯವ್ಯಾಪಕತ್ವ ಅದಕ್ಕೆ ಬರಲಿಲ್ಲ. ಆದರೆ ಭೇದತ್ವರೂಪ ಸಾಧನಾವಚ್ಛಿನ್ನ ಸಾಧ್ಯ ವ್ಯಾಪಕತ್ವವಿರುವುದರಿಂದ ಉಪಾಧಿಯಾಗುತ್ತದೆ.

ಅಭೇದವಾದಿ ಹೀಗೆ ಹೇಳಬಹುದು– ಈ ಉಪಾಧಿ ಸಾಧನವ್ಯಾಪಕವಾಗಿದೆ. ಏಕೆಂದರೆ ಪಕ್ಷದಲ್ಲಿ ಸಾಧನವಾದ ಆ ಭೇದತ್ವಹೇತುವಿನಿಂದಲೆ ನಾನು ಪ್ರಾತಿಭಾಸಿಕತ್ವವನ್ನೂ ಸಾಧಿಸುತ್ತೇನೆ' ಎಂದು. ಅದಕ್ಕೆ ಹೇಳುತ್ತಾರೆ ಪ್ರಾತಿಭಾಸಿಕತ್ವವನ್ನು ಪಕ್ಷದಲ್ಲಿ ಸಾಧಿಸಲು ಬರುವುದಿಲ್ಲ. ಏಕೆಂದರೆ ವ್ಯಾವಹಾರಿಕತ್ವವನ್ನೇ ನಿನ್ನ ಮತದಲ್ಲಿ ಅಂಗೀಕರಿಸಿದ್ದಾರೆ' ಎಂದು. ಇದರ ಅಭಿಪ್ರಾಯ ನಿನಗೆ ಅಪಸಿದ್ಧಾಂತ ದೋಷ ಎಂದು.

**शाङ्करभाष्यविरोधमेव विवृणोति – गौरोऽहमिति । देहात्माभेदस्य मिथ्यात्वानङ्गीकारे तद्विषयस्य गौरोऽहमित्यादिज्ञानस्याबाधितविषयत्वेन प्रमात्वापत्त्या तद्भ्रमत्ववर्णनपरभाष्यविरोध इति भावः । प्रामाण्यप्रसङ्गाच्चेति पाठे तु दूषणान्तराभिधानमेतदिति ज्ञातव्यम् ।**

'ಅಭೇದವು ಮಿಥ್ಯಾ ಅಭೇದವಾಗಿರುವುದರಿಂದ ದೇಹಾತ್ಮಭೇದದಂತೆ' ಎಂಬ ಆಭಾಸ ಸಾಮ್ಯ ಕೊಟ್ಟಾಗ ದೃಷ್ಟಾಂತವಾದ ದೇಹಾತ್ಮಾಭೇದದಲ್ಲಿ ಮಿಥ್ಯಾತ್ವವಿಲ್ಲ, ಅದರಿಂದ ಸಾಧ್ಯವೈಕಲ್ಯ' ಎಂದು ಅಭೇದವಾದಿ ಹೇಳಿದರೆ ಅವನಿಗೆ ಅಧ್ಯಾಸಭಾಷ್ಯ ವಿರೋಧ ಬರುತ್ತದೆ ಎಂದು ಹೇಳುತ್ತಾರೆ. ಅದನ್ನೇ ವಿವರಿಸುತ್ತಾರೆ— 'ನಾನು ಬಿಳಿ, ಕೃಶನಾಗಿದ್ದೇನೆ' ಎಂದು ಮುಂತಾಗಿ ಲೋಕವ್ಯವಹಾರ

ಏದೆ. ದೇಹಾತ್ಮಾಭೇದ ಮಿಥ್ಯಾ ಎಂದು ಅಂಗೀಕರಿಸದಿದ್ದರೆ ತದ್ವಿಷಯಕವಾದ ಈ ವ್ಯವಹಾರ ತತ್ತ್ವಾವೇದಕ ಅಂದರೆ ಅಬಾಧಿತವಿಷಯಕ, ಪ್ರಮಾ ಎನಿಸುವುದರಿಂದ ಅದನ್ನು ಕೇವಲ ಅಧ್ಯಾಸವೆಂದು ಭ್ರಮ ಎಂದು ವರ್ಣಿಸುವ ಶಾಂಕರಭಾಷ್ಯದ ವಿರೋಧ ನಿನಗೇ ಬರುತ್ತದೆ ಎಂದು.

ಇಲ್ಲಿ ಮೂಲದಲ್ಲಿ 'ಪ್ರಾಮಾಣ್ಯಪ್ರಸಂಗಾಚ್ಚ' ಎಂದು ಚಕಾರಸಹಿತವಾದ ಪಾಠ ಪ್ರಚಲಿತವಿದೆ. ಆದರೆ ಕಾಶಿಕಾಕಾರರ ಪಾಠ ಚಕಾರರಹಿತವಿರಬಹುದು. ಅದರಿಂದ 'ಶಾಂಕರಭಾಷ್ಯ ವಿರೋಧವನ್ನೇ ವಿವರಣ ಮಾಡುತ್ತಾರೆ' 'ಶಾಂಕರಭಾಷ್ಯ ವಿರೋಧಮೇವ ವಿವೃಣೋತಿ' ಎಂದು 'ಗೌರೋಹಂ ಕೃಶೋಹಂ ಇತ್ಯಾದಿ ಜ್ಞಾನಸ್ಯ ತತ್ತ್ವಾವೇದಕತ್ವೇನ ಪ್ರಾಮಾಣ್ಯ ಪ್ರಸಂಗಾತ್' ಎನ್ನುವ ವಾಕ್ಯಕ್ಕೆ ಅವತಾರಿಕೆ ಕೊಡುತ್ತಾರೆ. ಇದೀಗ 'ಪ್ರಾಮಾಣ್ಯ ಪ್ರಸಂಗಾಚ್ಚ' ಎಂದು ಚಕಾರ ಸಹಿತಪಾಠವನ್ನು ಕೂಡ 'ದೂಷಣಾಂತರಾಭಿಧಾನಮೇತದಿತಿ ಜ್ಞಾತವ್ಯಂ' 'ದೋಷಾಂತರೋಕ್ತಿ' ಎಂದು ವಿವರಿಸುತ್ತಿದ್ದಾರೆ. ದೇಹಾತ್ಮಭೇದಕ್ಕೆ ಸತ್ಯತ್ವ ಸಾಧನ ಮಾಡುವ ಪಕ್ಷದಲ್ಲಿ 'ಅನ್ಯೋನ್ಯ ಸ್ಮಿನ್ನನ್ಯೋನ್ಯಾತ್ಮಕತಾಮಧ್ಯಸ್ಯ' ಎಂದು ದೇಹಾತ್ಮಭೇದಾಧ್ಯಾಸವರ್ಣನದ ವಿರೋಧ ಒಂದು ದೋಷ. 'ಗೌರೋಹಂ' ಇತ್ಯಾದಿ ವ್ಯವಹಾರ ಯುಕ್ತವೆಂದಾಗುವುದರಿಂದ ಅನ್ಯೋನ್ಯಧರ್ಮಾಂಶ್ಚಾಧ್ಯಸ್ಯ' ಎಂದು ದೇಹಾತ್ಮಾಗಳಿಗೆ ಭಾಷ್ಯದಲ್ಲಿ ಕಾಣುವ ಅನ್ಯೋನ್ಯಧರ್ಮಾಧ್ಯಾಸವರ್ಣನದ ವಿರೋಧ ಇನ್ನೊಂದು ದೋಷ ಎಂದು.

**यत्तु जीवेशाभेदस्यापि मिथ्यात्वमिष्टमेवेति नोक्ताभाससाम्यापत्तिः। न चैवं भेदस्य सत्यत्वापत्तिः। श्रुत्या दृश्यत्वावच्छेदेनैव मिथ्यात्वावधारणादिति, तत् तुच्छम्। भेदाभेदोभयमिथ्यात्वस्य व्याहतत्वेन श्रुत्यापि प्रतिपादयितुमशक्यत्वात्। उपपन्नस्यैव श्रुत्यर्थत्वात्। अन्यथाऽभिमान्यधिकरणविरोधादिति।**

ಅಭೇದವಾದಿ ಹೀಗೂ ಹೇಳುವುದುಂಟು– 'ಜೀವೇಶ್ವರಾಭೇದವು ಕೂಡ ಮಿಥ್ಯಾ ಎಂದಾಗಲಿ, ನಮಗೆ ಅದು ಇಷ್ಟವೆ. ಹಾಗಾದರೆ ಭೇದ ಸತ್ಯವೆಂದಾಗುವುದಿಲ್ಲವೆ? ಎಂದರೆ ಇಲ್ಲ, ಶ್ರುತಿಯು ದೃಶ್ಯತ್ವಾವಚ್ಛೇದೇನೈವ ದೃಶ್ಯವಾದುದಕ್ಕೆಲ್ಲಕ್ಕೂ ಮಿಥ್ಯಾತ್ವವನ್ನು ಹೇಳುವುದರಿಂದ ದೃಶ್ಯತ್ವೇನ ಭೇದವೂ ಮಿಥ್ಯಾ ಎಂದೇ ಸಿದ್ಧವಾಗುವುದು' ಎಂದು. ಇದು ವ್ಯಾಹತ. ಭಾವಾಭಾವರೂಪದ ಪರಸ್ಪರ ವಿರುದ್ಧವಾದ ಭೇದಅಭೇದವೆರಡೂ ಮಿಥ್ಯೆಯಾಗಲಾರವು. ಇಂಥ ವ್ಯಾಹತವಾದ ಮಾತನ್ನು ಶ್ರುತಿಯೂ ಹೇಳಲಾರದು. ವ್ಯಾಹತವಾದುದು ಎಂದೂ ಶ್ರುತ್ಯರ್ಥವಾಗಲಾರದು. ಇಲ್ಲದಿದ್ದರೆ ಅಭಿಮಾನ್ಯಧಿಕರಣ ವಿರೋಧ ಬಂದೀತು. ಅಲ್ಲಿ 'ಮಣ್ಣು ಮಾತಾಡಿತೆಂ'ಬ ಮಾತನ್ನು ವ್ಯಾಹತವಾಗದಂತೆ ಮಣ್ಣಿನ ಅಭಿಮಾನಿ ದೇವತೆ ಮಾತನಾಡಿದಳೆಂದು ಸರಿಯಾಗಿ ಅರ್ಥೈಸಬೇಕೆಂದು ನಿರ್ಣಯಿಸಲಾಗಿದೆ.

**ಜಗತ್ತೆಂಬುದು ಬೇರೆ ಪದಾರ್ಥವಲ್ಲ**

चतुर्थानुमाने विमतं जगत् तत्त्वतः स्वान्तर्भेदहीनं मेयत्वात् गगनवत् इत्यत्र गगनादिवत् जगतः स्वतन्त्रपदार्थत्वे तदवयवरूपतदेकदेशप्रसिद्ध्या तदभेदरूपसाध्यसिद्धिः स्यात् । न चैवम् । नानावस्तूनामेव सेनावनादिपदार्थत्ववत् समूहत्वविशेषोपाधिना जगत्पदार्थत्वात् । तदवच्छिन्ने च साध्यस्य विशेषणाप्रसिद्ध्या बाध इत्याह **– चतुर्थे त्विति ।**

ವಿಮತವಾದ ಜಗತ್ತು ವಸ್ತುತಃ ಸ್ವಾಂತರ್ಭೇದಹೀನವಾಗಿದೆ. ಪ್ರಮೇಯವಾದ್ದರಿಂದ ಗಗನದಂತೆ ಎಂಬ ನಾಲ್ಕನೆ ಅನುಮಾನದಲ್ಲಿ ಜಗತ್ತು ಗಗನಾದಿಗಳಂತೆ ಒಂದು ಪ್ರತ್ಯೇಕ ಪದಾರ್ಥವಾಗಿದ್ದರೆ ಅದರ ಅವಯವವಾದ ಅದರ ಏಕದೇಶಗಳು ಪ್ರಸಿದ್ಧವಾಗುವುದರಿಂದ ಅವುಗಳ ಅಭೇದರೂಪವಾದ ಸಾಧ್ಯ ಸಿದ್ಧವಾದೀತು. ಆದರೆ ಅದು ಹಾಗಿಲ್ಲ. ನಾನಾ ವಸ್ತುಗಳೇ ಸೈನ್ಯ ಅರಣ್ಯ ಮುಂತಾದವುಗಳಂತೆ ಸಮೂಹತ್ವವಿಶೇಷರೂಪ ಉಪಾಧಿಯಿಂದ 'ಜಗತ್' ಎನಿಸಿವೆ. ಆ ಉಪಾಧಿ ವಿಶಿಷ್ಟದಲ್ಲಿ ಸಾಧ್ಯವು ವಿಶೇಷಣ ಅಪ್ರಸಿದ್ಧಿಯಿಂದ ಬಾಧಿತವಾಗಿದೆ ಎನ್ನುತ್ತಾರೆ.

नन्वस्तु तर्हि गगनादिवत् जगत् पदार्थान्तरमेव । न चैतावता पृथिव्यादीनां कथमभेदसिद्धिरिति वाच्यम् । पृथिव्यादीनां जगदुपादानत्वेन तदेकदेशत्वादित्याशङ्क्याऽह **–पृथिव्यादीनामिति । जातिसाङ्कर्य प्रसङ्ग इति ।** पृथिव्याद्यारब्धस्य पृथिव्यादित्वनियमादिति भावः **जगदन्तर्भूतानामिति** जगदारम्भकत्वे हेतुः **। द्रव्यत्वापत्तिरिति ।** उपादानत्वरूपारम्भकत्वस्य द्रव्यधर्मत्वादिति भावः । निरवयवानां विभुद्रव्याणां जगदाख्यद्रव्यारम्भकत्वे ततोऽपकृष्टपरिमाणत्वप्राप्त्या विभुत्वव्याघात इति द्रष्टव्यम् **। अन्त्यावयवित्वहानिश्चेति ।** अन्त्यावयवित्वस्य द्रव्यानारम्भकद्रव्यत्वरूपत्वादिति भावः । इदमुपलक्षणम्। पृथिव्यारब्धस्य जगतोऽपि जगदन्तर्गतत्वेन जगदारम्भकत्वावश्यम्भावेन जगदन्तरस्वीकारापत्त्याऽनवस्था च बोध्या ।

'ಹಾಗಾದರೆ ಜಗತ್ತು ಗಗನಾದಿಗಳಂತೆ ಪ್ರತ್ಯೇಕ ಸ್ವತಂತ್ರಪದಾರ್ಥವೆಂದೇ ಹೇಳುತ್ತೇನೆ. ಪೃಥಿವ್ಯಾದಿಗಳಿಗೆ ಹೇಗೆ ಅಭೇದ ಸಿದ್ಧಿ ಎಂದರೆ ಅವು ಜಗತ್ತಿಗೆ ಉಪಾದಾನವಾದ್ದರಿಂದ ಅದರ ಭಾಗವಾಗಿವೆ' ಎಂದು ಪ್ರಶ್ನೆ ಮಾಡಿಕೊಂಡು, ಪೃಥಿವ್ಯಾದಿಗಳು ಜಗತ್ತೆಂಬ ಸ್ವತಂತ್ರ ಪದಾರ್ಥಕ್ಕೆ ಆರಂಭಕ ಅವಯವವೆನ್ನುವುದಾದರೆ ಅವುಗಳಿಂದ ಆರಬ್ಧವಾದ ಒಂದು ಜಗತ್ತಿನಲ್ಲಿ ಪೃಥಿವೀತ್ವಾದಿ ಎಲ್ಲ ಜಾತಿಗಳು ಸೇರಿಕೊಳ್ಳುವ ಪ್ರಸಂಗ. ಈ ಜಾತಿಸಾಂಕರ್ಯ ಜಾತಿತ್ವಕ್ಕೇ ಬಾಧಕ. ಗುಣಾದಿಗಳೂ ಕೂಡ ಜಗತ್ತಿನಲ್ಲಿ ಅಂತರ್ಭೂತವಾಗಿರುವುದರಿಂದ ಅವು ಜಗತ್ತಿಗೆ ಆರಂಭಕ ಅವಯವವೆನಿಸುವುದರಿಂದ ದ್ರವ್ಯವೆನಿಸುವ ಪ್ರಸಂಗವೂ ಇದೆ. ಉಪಾದಾನತ್ವರೂಪ ಆರಂಭಕತ್ವವು ದ್ರವ್ಯಧರ್ಮ. ಮತ್ತು ನಿರವಯವವಾದ ವಿಭುದ್ರವ್ಯಗಳೂ ಜಗತ್ತೆಂಬ ಒಂದು ದ್ರವ್ಯಕ್ಕೆ ಆರಂಭಕ ಅವಯವ ಎಂದರೆ ಜಗತ್ತಿಗಿಂತ ಕಡಿಮೆ ಪರಿಮಾಣವಿರಬೇಕಾಗುವುದರಿಂದ ಅವುಗಳ ವಿಭುತ್ವಕ್ಕೇ ವ್ಯಾಹತಿ ಬರುತ್ತದೆ ಎಂದೂ ತಿಳಿಯಬೇಕು. ಘಟಾದಿಗಳು ಜಗದಾರಂಭಕ ಅವಯವವಾದರೆ ಅವುಗಳು ಅಂತ್ಯಾವಯವಿಗಳಲ್ಲ ವೆಂದಾದೀತು. ದ್ರವ್ಯಾನಾರಂಭಕ ದ್ರವ್ಯವಾಗಿರುವುದೇ ಅಂತ್ಯಾವಯವಿತ್ವ. ಇದು ಉಪಲಕ್ಷಣ. ಪೃಥಿವ್ಯಾರಬ್ಧವಾದ ಈ ಜಗತ್ತೂ ಜಗತ್ತಿನಲ್ಲಿ ಅಂತರ್ಗತವಾದ್ದರಿಂದ ಅದೂ ಜಗದಾರಂಭಕವೆನ್ನ ಬೇಕಾಗುವುದು, ಇನ್ನೊಂದು ಜಗತ್ತನ್ನು ಒಪ್ಪಬೇಕಾಗಿಬರುವುದರಿಂದ ಅನವಸ್ಥಾಪತ್ತಿ ಎಂದೂ ತಿಳಿಯಬೇಕು.

**ननु विशिष्टघटादिः स्वान्तर्भेदहीन इति साधनान्नोक्तदोष इत्याशङ्क्य साध्यविकल्पेन दूषयति — घटादिपदार्थानामिति । साध्यविकल इति । मया गगने घटादिप्रतियोगिकपारमार्थिक भेदाभ्युपगमादिति भावः । स्वैकदेशभेदाभावसाधनेऽप्याह — आकाशेति । आकाशैकदेशानामाकाशेन मिथश्च तात्त्विकभेदसाधनमन्यत्र न्यायामृतादौ कृतमतो दृष्टान्ते साध्यवैकल्यमिति भावः ।**

ವಿಶಿಷ್ಟವಾದ ಘಟಾದಿಗಳನ್ನೇ ಸ್ವಾಂತರ್ಭೇದಹೀನವೆಂದು ಸಾಧಿಸುತ್ತೇನೆ ಎಂದರೆ ಸಾಧ್ಯವಿಕಲ್ಪಮಾಡಿ ಖಂಡಿಸುತ್ತಾರೆ. 'ಸ್ವಾಂತರ್ಭೇದಹೀನ ಎಂದರೆ ಪರಸ್ಪರ ಪ್ರತಿಯೋಗಿಕ ಭೇದಶೂನ್ಯ ಎಂದರ್ಥ' ಎಂದರೆ, ನಾವು ಗಗನಾದಿಗಳಲ್ಲಿ ಪರಸ್ಪರವಾಗಿ ಘಟಾದಿ ಪ್ರತಿಯೋಗಿಕ ಪಾರಮಾರ್ಥಿಕ ಭೇದವನ್ನು ಒಪ್ಪಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. 'ಸ್ವಾಂತರ್ಭೇದಹೀನ ಎಂದರೆ ಸ್ವೈಕದೇಶ ಪ್ರತಿಯೋಗಿಕ ಭೇದಶೂನ್ಯ ಎಂದರ್ಥ. ಸ್ವೈಕದೇಶ ಭೇದಾಭಾವವನ್ನೇ ಸಾಧನ ಮಾಡುತ್ತೇನೆ' ಎಂದರೆ ಆಕಾಶೈಕದೇಶಗಳಿಗೆ ಆಕಾಶದಿಂದಲೂ ಪರಸ್ಪರವಾಗಿಯೂ ತಾತ್ವಿಕಭೇದವನ್ನು ನಾವು ಅನ್ಯತ್ರ ನ್ಯಾಯಾಮೃತಾದಿಗಳಲ್ಲಿ ಸಾಧನ ಮಾಡಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯ ವೈಕಲ್ಯ ಎಂಬ ಭಾವ.

एवं विमतौ परमार्थतः परस्पराभिन्नौ प्रमेयत्वात् परस्परवत् इत्याद्यशेषाभिलषिताभेदसाधकानुमानेषु प्रत्यक्षादिप्रमाणबाधः । सर्वत्र साक्षिणः परमेश्वरस्य च भेदप्रत्यक्षस्य प्रमाणसिद्धत्वात्, विमतौ न परमार्थतः परस्पराभिन्नौ परस्परविरुद्धधर्मवत्त्वात् व्यतिरेकेण परस्परवत् इत्यनुमानात्, द्वासुपर्णेत्याद्यागमाच्च । परस्परविरुद्धधर्मानधिकरणत्व-मन्ततः पक्षेतरत्वमप्युपाधिः । विमतौ व्यवहारतोऽपि परस्पराभिन्नौ मेयत्वात् परस्परवत् इत्याभाससाम्यम् । अनुकूलतर्काभावादेवाप्रयोजकत्वं चेत्येवमाद्यनन्तदोषदुष्टत्वात् नाद्वैतमुपादेयम् ।

ಹೀಗೇ ವಿಮತರಾದ ಜೀವೇಶ್ವರರು ಪಾರಮಾರ್ಥಿಕವಾಗಿ ಪರಸ್ಪರ ಅಭಿನ್ನರು ಪ್ರಮೇಯರಾದ್ದರಿಂದ ಪರಸ್ಪರರಂತೆ ಎಂದು ಮುಂತಾಗಿ ಅಭೇದವಾದಿಗಳಿಗೆ ಇಷ್ಟವಾದ ಎಲ್ಲ ಅಭೇದಸಾಧಕ ಅನುಮಾನಗಳಿಗೂ ಪ್ರತ್ಯಕ್ಷಾದಿ ಪ್ರಮಾಣ ಬಾಧವಿದೆ, ಎಲ್ಲರ ಸಾಕ್ಷಿಗೂ ಪರಮೇಶ್ವರ ನಿಗೂ ಭೇದಪ್ರತ್ಯಕ್ಷವಿರುವುದು ಪ್ರಮಾಣಸಿದ್ಧವಾದ್ದರಿಂದ, 'ವಿಮತರಾದ ಜೀವೇಶ್ವರರು ಪಾರಮಾರ್ಥಿಕವಾಗಿ ಪರಸ್ಪರ ಅಭಿನ್ನರಲ್ಲ, ಪರಸ್ಪರ ವಿರುದ್ಧಧರ್ಮಉಳ್ಳವರಾದ್ದರಿಂದ, ವ್ಯತಿರೇಕೇಣ ಪರಸ್ಪರರಂತೆ' ಎಂದು ಅನುಮಾನವಿರುವುದರಿಂದ ಮತ್ತು ದ್ವಾಸುಪರ್ಣಾ ಇತ್ಯಾದಿ ಆಗಮಗಳಿರುವುದರಿಂದ. ಪರಸ್ಪರ ವಿರುದ್ಧ ಧರ್ಮಾನಧಿಕರಣತ್ವವು ಉಪಾಧಿ. ಅಂತತೋಗತ್ವಾ ಪಕ್ಷೇತರತ್ವವೂ ಉಪಾಧಿ. ವಿಮತರು ವ್ಯಾವಹಾರಿಕವಾಗಿಯೂ ಪರಸ್ಪರ ಅಭಿನ್ನರು ಪ್ರಮೇಯ ರಾದ್ದರಿಂದ, ಪರಸ್ಪರರಂತೆ ಎಂದು ಆಭಾಸಸಾಮ್ಯ. ಅನುಕೂಲತರ್ಕ ಇಲ್ಲದಿರುವುದರಿಂದಲೇ ಅಪ್ರಯೋಜಕತ್ವವೂ ಇದೆ. ಇಂಥ ಅನಂತ ದೋಷ ದುಷ್ಟವಾಗಿರುವುದರಿಂದ ಅದ್ವೈತವು ಉಪಾದೇಯವಲ್ಲ.

**ಭೇದವು ಧರ್ಮಿಸ್ವರೂಪ ಮತ್ತು ಧರ್ಮರೂಪ ಹೇಗೆಂದು ಆಕ್ಷೇಪ**

यदत्र केनचित्प्रलपितम् । सोऽयं भेदः किं धार्मिस्वरूपस्तद्धर्मो वा । नाद्यः । भिन्नमिति प्रतीतौ प्रकारत्वानुपपत्तेः । घटभेदप्रतीत्योर-विशेषप्रसङ्गाच्च । विषयवैलक्षण्याभावात् । ग्राहकसामग्रीवैचित्र्यानुपप-त्तेश्च। घटप्रतीतौ भेदसन्देहानुपपत्तेश्च । अज्ञातांशाभावात् भेदस्य सप्रतियोगित्वानुपपत्तेश्च । धर्मिणो घटादेर्निष्प्रतियोगिकत्वात् ।

रूपादेरपि धर्मिस्वरूपत्वापत्तेश्च । भेदवदभेदस्यापि धर्मिस्वरूपत्वेन भेदाभेदयोरभेदापत्तेश्च । तत्प्रतीत्योरविशेषप्रसङ्गाच्च । तत्पदयोः पर्यायत्वापत्तेश्च । एतेन कारणत्वादीनां धर्मिस्वरूपत्वमप्यपास्तं वेदितव्यम् ।

ಈ ವಿಷಯದಲ್ಲಿ ಒಬ್ಬನ ಪ್ರಲಾಪ ಹೀಗಿದೆ– ಈ ಭೇದವೆನ್ನುವುದು ಧರ್ಮಿಸ್ವರೂಪವೆ, ಅದರ ಧರ್ಮವೆ? ಧರ್ಮಿಸ್ವರೂಪವೆನ್ನಲಾಗದು. ಧರ್ಮಿಸ್ವರೂಪವಾದರೆ 'ಭಿನ್ನ' ಎಂಬ ಪ್ರತೀತಿಯಲ್ಲಿ ಭೇದವು ಧರ್ಮಿಯಲ್ಲಿ ಪ್ರಕಾರವಾಗಿ ಕಾಣುವುದು ಕೂಡಲಾರದು. ಘಟಪ್ರತೀತಿಗೂ ಭೇದಪ್ರತೀತಿಗೂ ವೈಲಕ್ಷಣ್ಯವಿಲ್ಲದಾಗುವ ಪ್ರಸಂಗವೂ ಉಂಟು. ಏಕೆಂದರೆ ವಿಷಯ ವೈಲಕ್ಷಣ್ಯವಿಲ್ಲ. ಘಟಕ್ಕೂ ಭೇದಕ್ಕೂ ಗ್ರಾಹಕ ಸಾಮಗ್ರಿಗಳಲ್ಲಿ ವೈಲಕ್ಷಣ್ಯವು ಕೂಡಲಾರದು. ಘಟ ಕಾಣುವಾಗ ಭೇದವಿಷಯದಲ್ಲಿ ಸಂದೇಹವೂ ಕೂಡಲಾರದು. ಏಕೆಂದರೆ ಘಟ ಕಂಡಿದೆ ಎಂದ ಮೇಲೆ ಅದರ ಸ್ವರೂಪವಾದ ಭೇದವೂ ಕಂಡಿರುವುದರಿಂದ ಕಾಣದಿದ್ದ ಅಂಶವೆ ಇಲ್ಲ. ಧರ್ಮಿಯಾದ ಘಟಾದಿಗಳು ನಿಷ್ಪ್ರತಿಯೋಗಿಕವಾಗಿರುವಾಗ ಧರ್ಮಿಸ್ವರೂಪವೇ ಆದ ಭೇದವೂ ಸಪ್ರತಿಯೋಗಿಕವಾಗಿರುವುದೂ ಕೂಡಲಾರದು. ಭೇದದಂತೆ ಅಭೇದವೂ ಒಂದೇ ಧರ್ಮಿಯ ಸ್ವರೂಪವಾಗಿರುವುದರಿಂದ ಭೇದ ಅಭೇದಗಳಿಗೆ ಅಭೇದ ಎಂದಾದೀತು. ಭೇದ ಪ್ರತೀತಿ ಅಭೇದ ಪ್ರತೀತಿಗಳಿಗೆ ವೈಲಕ್ಷಣ್ಯವಿಲ್ಲವೆಂದಾಗುವ ಪ್ರಸಂಗವೂ ಉಂಟು. 'ಭೇದ' 'ಅಭೇದ' ಶಬ್ದಗಳು ಪರ್ಯಾಯ ಶಬ್ದಗಳೆನಿಸುವ ಪ್ರಸಂಗವೂ ಉಂಟು. ಇವೇ ಯುಕ್ತಿಗಳಿಂದ ಕಾರಣತ್ವಾದಿಗಳಿಗೂ ಧರ್ಮಿಸ್ವರೂಪತ್ವವನ್ನು ಹೇಳುವುದು ನಿರಾಕೃತವಾಯಿತೆಂದು ತಿಳಿಯಬೇಕು.

द्वितीये भावोऽभावो वा ? नाद्यः । जात्यादिरूपत्वे सप्रतियोगिकत्वाद्यनुपपत्तेः । पृथक्त्वादिरूपत्वे च गुणादौ भेदप्रत्ययानुपपत्तेः । अन्योन्याभावेनैवोपपत्तौ पृथक्त्वरूपगुणान्तरानङ्गीकाराच्च । नान्त्यः । भेदस्यान्योन्याभावरूपत्वे कपिसंयोगवति वृक्षे तद्भेदसत्त्वप्रसङ्गात् । मूले वृक्षो न कपिसंयोगीति प्रतीतेः । अत्यन्ताभावरूपत्वे च नास्ति न भवतीति प्रतीत्योरविशेषप्रसङ्गात् । स्वस्मिन्नपि स्वात्यन्ताभावसत्त्वेन स्वभेदबुद्ध्यापत्तेश्च । तद्भेदस्य तद्धर्मात्यन्ताभावरूपत्वे च प्रथमदोषानिस्तारात् ।

ಭೇದವು ವಸ್ತುವಿನ ಧರ್ಮ ಎನ್ನುವ ಪಕ್ಷದಲ್ಲಿ ಅದು ಭಾವವೊ ಅಭಾವವೊ? ಭಾವವಲ್ಲ, ಏಕೆಂದರೆ, ಜಾತ್ಯಾದಿರೂಪವೆನ್ನುವುದಾದರೆ ಸಪ್ರತಿಯೋಗಿಕತ್ವಾದಿಗಳು ಕೂಡಲಾರವು. ಪೃಥಕ್ತ್ವಾದಿ ಸಪ್ರತಿಯೋಗಿಕ ಭಾವದಲ್ಲಿ ಸೇರುತ್ತದೆ ಎಂದರೆ ಗುಣಾದಿಗಳಲ್ಲಿ ಭೇದಪ್ರತೀತಿ ಕೂಡಲಾರದು, ಗುಣದಲ್ಲಿ ಗುಣ ಅಂಗೀಕರಿಸಿಲ್ಲವಾದ್ದರಿಂದ. ಅನ್ಯೋನ್ಯಾಭಾವದಿಂದಲೆ 'ಇದು ಬೇರೆ' ಎನ್ನುವ ಪ್ರತೀತಿ ಕೂಡುವಾಗ ಬೇರೆ ಪೃಥಕ್ತ್ವವೆಂಬ ಗುಣವನ್ನು ಒಪ್ಪುವುದೂ ಬೇಡ. ಭೇದವು ಅಭಾವರೂಪವೆನ್ನುವ ಪಕ್ಷದಲ್ಲಿ ಅದು ಅನ್ಯೋನ್ಯಾಭಾವವೆಂದು ಸ್ವೀಕರಿಸಿದರೆ ಕಪಿ ಸಂಯೋಗಉಳ್ಳ ವೃಕ್ಷದಲ್ಲಿ ಅದರ ಭೇದಪ್ರಸಂಗ, ಮೂಲದಲ್ಲಿ ವೃಕ್ಷವು ಕಪಿಸಂಯೋಗಿ ಅಲ್ಲ ಎಂದು ಭೇದಪ್ರತೀತಿ ಬರುವುದರಿಂದ. ಭೇದವು ಅತ್ಯಂತಾಭಾವರೂಪವೆನ್ನುವ ಪಕ್ಷದಲ್ಲಿ 'ಇಲ್ಲ', 'ಅಲ್ಲ' ಎನ್ನುವ ಪ್ರತೀತಿಗಳಿಗೆ ವೈಲಕ್ಷಣ್ಯ ಇಲ್ಲವೆಂದಾದೀತು. ಅತ್ಯಂತಾಭಾವವು ತನ್ನಲ್ಲಿ ತಾನಿರುವುದರಿಂದ ಭೇದವೂ ತನ್ನಲ್ಲಿ ತಾನು ಕಾಣಬೇಕಾದೀತು. ತದ್ಭೇದವು ತದ್ಧರ್ಮದ ಅತ್ಯಂತಾಭಾವ ಸ್ವರೂಪವೆಂದರೂ ಮೊದಲು ಹೇಳಿದ ದೋಷವಿಲ್ಲವಾಗುವುದಿಲ್ಲ.

**किञ्च प्रतियोगिप्रमाणयोरभावान्न भेदसिद्धिः । तथाहि । न तावत् घटभेदस्य घटः प्रतियोगी । घटवति घटभेदानुपपत्तेः । लघवाद-भावत्वावच्छेदेनैव प्रतियोगिविरोधावधारणात् । किञ्च भेदस्याभेदा-भावत्वेनाभेदस्यैव तत्प्रतियोगित्वं स्यात् । न चाभेदो घटादिस्वरूप एवेति वक्तुं शक्यम् । घटवति घटभेदानुपपत्तेः । न चाभेदस्यापि भेदप्रतियोगित्वं सम्भवति । तज्ज्ञानस्य भेदज्ञानाधीनत्वात् भेदज्ञानस्य च प्रतियोगिज्ञानाधीनत्वेनान्योन्याश्रयात् । अत एव न तत्र प्रत्यक्षं प्रमाणम्। अन्योन्याश्रयात् ।**

ಭೇದಕ್ಕೆ ಪ್ರತಿಯೋಗಿ ಇಲ್ಲದ್ದರಿಂದಲೂ ಪ್ರಮಾಣವಿಲ್ಲದ್ದರಿಂದಲೂ ಭೇದವೆಂಬುದಿಲ್ಲ. ಮೊದಲಿಗೆ, ಭೇದಕ್ಕೆ ಪ್ರತಿಯೋಗಿ ಇಲ್ಲ ಏಕೆಂದರೆ ಘಟವಿದ್ದಲ್ಲಿ ಘಟಭೇದ ಕೂಡದಿದ್ದೀತು. ಲಾಘವಕ್ಕಾಗಿ ಎಲ್ಲ ಅಭಾವಗಳಿಗೂ ಅಭಾವತ್ವಾವಚ್ಛೇದೇನೈವ ಪ್ರತಿಯೋಗಿ ವಿರೋಧವನ್ನು ಒಪ್ಪಬೇಕು. ವಿರೋಧಿಯಾದ ಘಟರೂಪ ಪ್ರತಿಯೋಗಿ ಇರುವ ಭೂತಲದಲ್ಲಿ ಘಟಭೇದವಿರಲಾರದು. ಭೇದವು ಅಭೇದಾಭಾವರೂಪವಾದ್ದರಿಂದ ಅಭೇದವೇ ಭೇದಕ್ಕೆ ಪ್ರತಿಯೋಗಿ ಹೊರತು ಘಟವಲ್ಲ. ಅಭೇದವು ಘಟಾದಿ ಸ್ವರೂಪವೆ ಎನ್ನುವಂತಿಲ್ಲ. ಹಾಗೆ ಹೇಳಿದರೆ, ಘಟವಿದ್ದ ಭೂತಲದಲ್ಲಿ ಪ್ರತಿಯೋಗಿ ಇರುವುದರಿಂದ ಅದಕ್ಕೆ ವಿರೋಧಿಯಾದ ಘಟಭೇದ ಬರಲಾರದೆನ್ನುವ ದೋಷ ಪುನಃ ಹಾಗೇ ಇದೆ ಎಂದಾಗುತ್ತದೆ. ಅಭೇದವು ಭೇದಕ್ಕೆ

ಪ್ರತಿಯೋಗಿಯಾಗುವ ಸಂಭವವೂ ಇಲ್ಲ. ಏಕೆಂದರೆ ಪ್ರತಿಯೋಗಿಯಾದ ಅಭೇದದ ಜ್ಞಾನವು ಭೇದಜ್ಞಾನಾಧೀನ. ಭೇದಜ್ಞಾನವು ಪ್ರತಿಯೋಗಿಯಾದ ಅಭೇದಜ್ಞಾನಾಧೀನ ಹೀಗೆ ಅನ್ಯೋನ್ಯಾಶ್ರಯ. ಹೀಗೆ ಅನ್ಯೋನ್ಯಾಶ್ರಯವಿರುವುದರಿಂದಲೇ ಭೇದದ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣ ಕೂಡುವುದಿಲ್ಲ.

**एवं घटे पटभेदाभेदयोः संशयनिश्चयदशायां पटे घटभेदनिश्चयादर्शनात् घटभेदनिश्चये पटभेदनिश्चयस्य हेतुत्वं वाच्यम् । 'यत्संशयव्यतिरेकनिश्चयौ यत्र प्रतिबन्धकौ तन्निश्चयस्तद्धेतु'रिति नियमात्। एवं पटभेदनिश्चये घटभेदनिश्चयस्य हेतुत्वमित्यन्योन्याश्रयः । किञ्च प्रतियोगित्वग्राहकसन्निकर्षाभावान्न प्रतियोगित्वविशेषितभेदप्रत्यक्ष-सम्भवः । ज्ञानमेव सन्निकर्ष इति चेत् हन्त तर्हि तज्ज्ञानं प्रतियोगित्व-विषयं भेदज्ञानापेक्षमित्यन्योन्याश्रयः ।**

ಘಟದಲ್ಲಿ ಪಟಭೇದ ಸಂಶಯ, ಪಟಾಭೇದ ನಿಶ್ಚಯಗಳಿರುವಾಗ ಪಟದಲ್ಲಿ ಘಟಭೇದನಿಶ್ಚಯ ಕಂಡಿಲ್ಲವಾದ್ದರಿಂದ ಘಟಭೇದ ನಿಶ್ಚಯಕ್ಕೆ ಪಟಭೇದನಿಶ್ಚಯ ಕಾರಣವೆನ್ನಬೇಕು. ಯಾವುದರ ಸಂಶಯ, ಅಭಾವನಿಶ್ಚಯಗಳು ಯಾವುದಕ್ಕೆ ಪ್ರತಿಬಂಧಕಗಳೋ ಅದರ ನಿಶ್ಚಯ ಅದಕ್ಕೆ ಹೇತು ಎಂದು ನಿಯಮವಿದೆ. ಹೀಗೇ ಪಟಭೇದ ನಿಶ್ಚಯಕ್ಕೆ ಘಟಭೇದನಿಶ್ಚಯವೂ ಕಾರಣವೆನ್ನಬೇಕಾಗುವುದರಿಂದ ಅನ್ಯೋನ್ಯಾಶ್ರಯ. ಪ್ರತಿಯೋಗಿತ್ವದ ಅಂಶದಲ್ಲಿ ಗ್ರಾಹಕವಾದ ಸನ್ನಿಕರ್ಷವಿಲ್ಲದ್ದರಿಂದ ಪ್ರತಿಯೋಗಿತ್ವ ವಿಶಿಷ್ಟವಾದ ಭೇದ ಪ್ರತ್ಯಕ್ಷ ಬರಲಾರದು. ಜ್ಞಾನವೇ ಸನ್ನಿಕರ್ಷ ಎನ್ನುವುದಾದರೆ ಆ ಜ್ಞಾನವು ಪ್ರತಿಯೋಗಿತ್ವ ವಿಷಯಕವಾಗಿರಬೇಕಾದರೆ ಭೇದಜ್ಞಾನವು ಅದಕ್ಕೆ ಮೊದಲಿರಬೇಕಾಗುತ್ತದೆ ಹೀಗೆ ಅನ್ಯೋನ್ಯಾಶ್ರಯ.

**नाप्यनुमानम् । देवदत्तो यज्ञदत्तभेदवान् तद्दुःखाननुसन्धातृत्वा-दित्यादेरौपाधिकभेदेनाप्युपपत्तेः । अत एव नागमः । पारमार्थिकभेदा-साधकत्वात् । तस्मात् सर्वोऽपि भेदप्रतीतिरनिर्वचनीयाविद्याविलास एवेति युक्तम् । तदुक्त'मसम्भावनीयावभासचतुरा हि से'ति ।**

ಭೇದ ವಿಷಯದಲ್ಲಿ, ಅನುಮಾನವು ಕೂಡ ಪ್ರಮಾಣವಾಗಲಾರದು. ದೇವದತ್ತನು ಯಜ್ಞದತ್ತನ ಭೇದ ಉಳ್ಳವನು, ಯಜ್ಞದತ್ತನ ದುಃಖವನ್ನು ಅನುಭವಿಸದಿರುವುದರಿಂದ ಇತ್ಯಾದಿ

ಹೇತುವು ದೇಹಾದಿ ಉಪಾಧಿ ಭೇದದಿಂದಲೂ ಕೂಡುವುದರಿಂದ ಅಪ್ರಯೋಜಕ. ಆದರಿಂದಲೇ ಆಗಮವೂ ಕೂಡ ಭೇದ ವಿಷಯದಲ್ಲಿ ಪ್ರಮಾಣವಾಗಲಾರದು. ಅದು ಪಾರಮಾರ್ಥಿಕಭೇದ ಸಾಧಕವಲ್ಲ. ಆದರಿಂದ ಭೇದ ಪ್ರತೀತಿ ಎಲ್ಲವೂ ಅನಿರ್ವಚನೀಯ ಅವಿದ್ಯಾವಿಲಾಸ ಎನ್ನುವುದೇ ಯುಕ್ತ. ಅವಿದ್ಯೆಯು ಅಸಂಭಾವಿತವಾದುದನ್ನು ತೋರಿಸುವಲ್ಲಿ ಸಮರ್ಥವಾಗಿದೆ ಎಂದಿದ್ದಾರೆ.

**ಅಭೇದವಿರುವಲ್ಲಿ ಭೇದವ್ಯವಹಾರ ವಿಶೇಷ ಬಲದಿಂದ**

**तदेतत् सर्वमपि विशेषाङ्गीकारपराहतम् । तथाहि भेदस्तावत् धर्मिस्वरूपस्तद्धर्मश्च भवति । अभेदेऽपि धर्मधर्मिभावो विशेषप्रभावात् । अत एव भिन्नमिति प्रतीतौ प्रकारत्वमपि । घटभेद्रप्रतीत्योर्वैलक्षण्यमपि विशेषादेव ।**

ಈ ಎಲ್ಲ ಆಕ್ಷೇಪಗಳೂ ವಿಶೇಷಾಂಗೀಕಾರದಿಂದ ಪರಿಹೃತವಾಗಿವೆ. ಭೇದವು ಧರ್ಮಿವಸ್ತುವಿನ ಸ್ವರೂಪವೂ ಆಗಿದೆ ಅದರ ಧರ್ಮವೂ ಆಗಿದೆ. ಅಭೇದವಿದ್ದರೂ ವಸ್ತುವು ಧರ್ಮಿ, ಭೇದವು ಧರ್ಮ ಎಂಬುದು ವಿಶೇಷದ ಪ್ರಭಾವದಿಂದ. ವಿಶೇಷ ಪ್ರಭಾವದಿದಂದಲೆ 'ಭಿನ್ನ' ಎಂಬ ಪ್ರತೀತಿಯಲ್ಲಿ ವಸ್ತುವು ವಿಶೇಷ್ಯವಾಗಿ ಭೇದವು ಪ್ರಕಾರವಾಗಿ ಕಾಣುತ್ತದೆ. ಘಟಪ್ರತೀತಿಗೂ ಭೇದಪ್ರತೀತಿಗೂ ವೈಲಕ್ಷಣ್ಯವಿರುವುದೂ ವಿಶೇಷ ಪ್ರಭಾವದಿಂದಲೆ.

**न च विशेषस्य तटस्थस्य प्रतीतिवैचित्र्यनियामकत्वे विषयवैयर्थ्यात् विज्ञानवादप्रसङ्गः । विषयविधया तथात्वे चानुभवविरोध इति वाच्यम् । घटत्वभेदत्वरूपप्रकारवैचित्र्यादेव प्रतीतिवैचित्र्यम् । प्रकारयोस्तु विशेषकृतं वैचित्र्यमित्यत्र दोषाभावात् ।**

'ವಿಶೇಷವು ಪ್ರತೀತಿಯಲ್ಲಿ ಕಾಣದೆ ತಟಸ್ಥವಾಗಿ ಪ್ರತೀತಿಯ ವೈಲಕ್ಷಣ್ಯಕ್ಕೆ ಕಾರಣವಾಗುವುದಾದರೆ ಪ್ರತೀತಿಗೆ ವಿಷಯ ವ್ಯರ್ಥ, ಅದು ಬೇಡ ಎಂದು ವಿಜ್ಞಾನವಾದ ಪ್ರಸಂಗ. ವಿಶೇಷವು ವಿಷಯವಾಗಿಯೇ ಪ್ರತೀತಿಯಲ್ಲಿ ವೈಲಕ್ಷಣ್ಯ ಉಂಟುಮಾಡುತ್ತದೆ ಎಂದರೆ ಅನುಭವ ವಿರೋಧ' ಎಂಬ ಆಕ್ಷೇಪ ಬಂದರೆ ಹೀಗೆ ಸಮಾಧಾನ-ಪ್ರತೀತಿಯಲ್ಲಿ ಘಟತ್ವವು ಪ್ರಕಾರವಾಗಿದ್ದರೆ ಅದು 'ಘಟ' ಎಂಬ ಪ್ರತೀತಿ. ಭೇದತ್ವವು ಪ್ರಕಾರವಾಗಿದ್ದರೆ ಅದು 'ಭೇದ' ಎಂಬ ಪ್ರತೀತಿ ಎಂದು ಪ್ರಕಾರ ವೈಲಕ್ಷಣ್ಯದಿಂದಲೆ ಪ್ರತೀತಿಗಳಲ್ಲಿ ವೈಲಕ್ಷಣ್ಯವಿದೆ. ಘಟತ್ವ ಭೇದತ್ವರೂಪ ಪ್ರಕಾರಗಳಲ್ಲಿ ವೈಲಕ್ಷಣ್ಯವು ವಿಶೇಷಪ್ರಭಾವದಿಂದಾಗಿದೆ ಎಂದರೆ ಇಲ್ಲಿ ಏನೂ ದೋಷವಿಲ್ಲ.

**अत एव ग्राहकसामग्रीवैचित्र्यमप्युपपद्यते । ग्राह्यवैचित्र्यस्योपपादितत्वात् । एतेन घटप्रतीतौ भेदसन्देहानुपपत्तिरित्यपि निरस्तम् । घटत्वेन तत्प्रतीतावपि भेदत्वेन तदप्रतीतेः । घटत्वभेदत्वयोरभेदेऽपि विशेषसद्भावादेव तदुपपत्तेः ।**

ಆದರಿಂದಲೇ ಘಟಗ್ರಾಹಕ ಸಾಮಗ್ರಿಗೂ ಭೇದಗ್ರಾಹಕಸಾಮಗ್ರಿಗೂ ವೈಲಕ್ಷಣ್ಯವು ವಿಶೇಷದಿಂದ ಕೂಡುತ್ತದೆ. ವಿಶೇಷವು ತಟಸ್ಥವಾದರೂ ಗ್ರಾಹ್ಯವಾದ ಘಟತ್ವ ಮತ್ತು ಭೇದತ್ವಗಳಲ್ಲಿ ವೈಲಕ್ಷಣ್ಯಕ್ಕೆ ಅದೇ ನಿಯಾಮಕವಾಗಿದೆ. ಗ್ರಾಹ್ಯ ವೈಚಿತ್ರ್ಯದಿಂದ ಗ್ರಾಹಕದಲ್ಲಿ ವೈಚಿತ್ರ್ಯ ಬಂದಿದೆ. ಇದರಿಂದಲೆ ಘಟನಿಶ್ಚಯವಿದ್ದಾಗಲೂ ಭೇದ ಸಂದೇಹ ಯುಕ್ತವೆ. ಘಟತ್ವೇನ ಘಟನಿಶ್ಚಯವಿದ್ದರೂ ಭೇದತ್ವೇನ ಅದರ ನಿಶ್ಚಯವಿಲ್ಲದಿರುವುದು ಭೇದಸಂದೇಹಕ್ಕೆ ಕಾರಣವಾಗಿದೆ. ಘಟತ್ವ ಭೇದತ್ವಗಳೊಂದಾಗಿದ್ದರೂ ವಿಶೇಷ ಬಲದಿಂದಲೇ ಘಟತ್ವ ನಿಶ್ಚಯವಿರುವಾಗಲೂ ಭೇದತ್ವ ನಿಶ್ಚಯವಿಲ್ಲದಿರುವುದು ಕೂಡುತ್ತದೆ. ಘಟತ್ವೇನ ಘಟನಿಶ್ಚಯವಿದ್ದರೂ ಭೇದತ್ವೇನ ಅದರ ನಿಶ್ಚಯವಿಲ್ಲ. ಆದರಿಂದ ಘಟನಿಶ್ಚಯವಿದ್ದರೂ ಭೇದ ಸಂದೇಹವಿರುವುದು ಶಕ್ಯವಾಗಿದೆ.

**भेदस्य सप्रतियोगिकत्वमपि विशेषबलादेव । न चैवं घटो न सप्रतियोगिक इति व्यवहारानुपपत्तिः, सप्रतियोगिकभेदाभिन्नत्वादिति वाच्यम् । तदभिन्नत्वेऽपि तद्विशेषस्यैव तद्व्यवहारविषयत्वात्। अभेदे भेदकार्यनिर्वाहको विशेषः ।**

ಭೇದವು ಸಪ್ರತಿಯೋಗಿಕವಾಗಿರುವುದೂ ವಿಶೇಷ ಬಲದಿಂದಲೆ. 'ಘಟವು ಸಪ್ರತಿಯೋಗಿಕವಾದ ಭೇದದಿಂದ ಅಭಿನ್ನವೇ ಆಗಿರುವಾಗ 'ಘಟವು ಸಪ್ರತಿಯೋಗಿಕವಲ್ಲ' ಎಂಬ ವ್ಯವಹಾರ ಹೇಗೆ?' ಎಂದರೆ, ಈ ವ್ಯವಹಾರದಲ್ಲಿ 'ಅಲ್ಲ' 'ನ' ಎಂದು ಕಾಣುವುದು ಭೇದವಲ್ಲ. ಘಟಕ್ಕೂ ಸಪ್ರತಿಯೋಗಿಕವಾದ ಭೇದಕ್ಕೂ ಭೇದವಿಲ್ಲ. ಆದರಿಂದ 'ನ' ಎಂದು ಕಾಣುವುದು ವಿಶೇಷವೆ. ಘಟದಲ್ಲಿ ಸಪ್ರತಿಯೋಗಿಕದ ಅಭೇದವಿದ್ದರೂ, ಅದು ನಿರ್ವಿಶೇಷಾಭೇದವಲ್ಲ, ಸವಿಶೇಷಾಭೇದ. ಆದರಿಂದ 'ಪಟದಲ್ಲಿ ಸಪ್ರತಿಯೋಗಿಕದ ವಿಶೇಷವಿದೆ' ಎಂಬುದೇ 'ಘಟವು ಸಪ್ರತಿಯೋಗಿಕವಲ್ಲ' ಎನ್ನುವ ಶಬ್ದಪ್ರಯೋಗದ ಅರ್ಥ. ಹೀಗೆ ವಿಶೇಷಕ್ಕೆ ವ್ಯವಹಾರ ವಿಷಯತ್ವವನ್ನು ಅಂಗೀಕರಿಸುತ್ತೇವೆ. ಅಭೇದವಿರುವಲ್ಲಿ ಭೇದಕಾರ್ಯವನ್ನು ನಿರ್ವಾಹ ಮಾಡುವುದು ವಿಶೇಷ. ಘಟದಲ್ಲಿ ಸಪ್ರತಿಯೋಗಿಕದ ಅಭೇದವೆ ಇದ್ದರೂ 'ನ ಸಪ್ರತಿಯೋಗಿಕಃ' ಎಂದು ಶಬ್ದಪ್ರಯೋಗರೂಪ ಭೇದವ್ಯವಹಾರಕ್ಕೆ ನಿರ್ವಾಹಕವಾಗಿದೆ, ವಿಶೇಷ.

**ರೂಪಾದಿ ಗುಣಗಳೂ ಧರ್ಮಿಸ್ವರೂಪ**

रूपादेर्धर्मिस्वरूपत्वं त्विष्यत एव । न चैवं रूपप्रतीतौ रसादिप्रतीतिप्रसङ्गः । रसत्वादिना तदप्रतीतेर्विशेषत एवोपपत्तेः । भेदाभेदयोरभेदश्चेष्ट एव । परापेक्षया भेदस्य स्वापेक्षयाऽभेदत्वे बाधकाभावात् । न चैवं घटे स्वापेक्षयेव परापेक्षयाऽपि अभेदव्यवहार-प्रसङ्गः । स्वरूपे विशेषाभावादिति वाच्यम् । विशेषाभावे स्वापेक्षये-त्यस्यैवानुपपत्तेः । तद्भावे तु तत एव स्वाभेदो न पराभेदः । अत एव न भेदाभेदप्रतीत्योरविशेषः । न वा तत्पदयोः पर्यायत्वम् । प्रतिपाद्यवैचित्र्य-स्योक्तत्वात् । एतेन कारणत्वादिकमपि व्याख्यातम् ।

ರೂಪಾದಿ ಗುಣಗಳಿಗೂ ಧರ್ಮಿಸ್ವರೂಪತ್ವವನ್ನು ಅಂಗೀಕರಿಸುತ್ತೇವೆ. ಆದರೂ ರೂಪ ಪ್ರತೀತವಾಗುವಾಗ ರಸಾದಿ ಪ್ರತೀತಿ ಪ್ರಸಂಗವಿಲ್ಲ. ಏಕೆಂದರೆ ರಸತ್ವಾದಿ ಪ್ರಕಾರದಿಂದ ರೂಪ ಕಾಣುತ್ತಿಲ್ಲ. ಅದು ವಿಶೇಷ ಬಲದಿಂದ. ಭೇದ ಅಭೇದಗಳಿಗೂ ಅಭೇದವೂ ಅಂಗೀಕೃತವೆ. ಏಕೆಂದರೆ ಇನ್ನೊಬ್ಬನಿಂದ ಇರುವ ಭೇದವೇ ತನ್ನಿಂದ ಅಭೇದವೆನಿಸಿದರೆ ಅದರಲ್ಲೇನೂ ಬಾಧಕವಿಲ್ಲ. (ಅಪ್ಪನಿಗೆ ಮಗನಾಗಿರುವವನು ಮಗನಿಗೆ ಅಪ್ಪನೆನಿಸುತ್ತಾನೆ) 'ಘಟವು ತನಗೆ ಹೇಗೋ ಹಾಗೆ ಪಟಕ್ಕೂ ಅಭಿನ್ನವೆಂದು ವ್ಯವಹಾರ ಪ್ರಸಂಗ. ಸ್ವರೂಪದಲ್ಲಿ ವಿಶೇಷವಿಲ್ಲ ತಾನೆ?' ಎನ್ನಬಾರದು. ಸ್ವರೂಪದಲ್ಲಿ ವಿಶೇಷವಿಲ್ಲದಿದ್ದರೆ 'ತನ್ನಿಂದ' ಎನ್ನುವುದೇ ಕೂಡಲಾರದು. ವಿಶೇಷವಿದ್ದರೆ ಆದರಿಂದಲೇ ತನ್ನಿಂದ ಅಭೇದವೇ ಹೊರತು ಪಟದಿಂದ ಅಭೇದವಲ್ಲ ಎನ್ನುವುದು ಕೂಡುತ್ತದೆ. ಆದರಿಂದಲೇ ಭೇದ ಪ್ರತೀತಿ ಅಭೇದ ಪ್ರತೀತಿಗಳಿಗೆ ಅವೈಲಕ್ಷಣ್ಯವೂ ಇಲ್ಲ, ಅವುಗಳನ್ನು ಹೇಳುವ 'ಭೇದ' 'ಅಭೇದ' ಶಬ್ದಗಳಿಗೆ ಪರ್ಯಾಯತ್ವವೂ ಇಲ್ಲ. ಏಕೆಂದರೆ ಪ್ರತಿಪಾದ್ಯದಲ್ಲಿ ವಿಶೇಷ ಬಲದಿಂದ ವೈಲಕ್ಷಣ್ಯವಿದೆ ಎಂದು ಹೇಳಿದ್ದೇವೆ. ಇದರಿಂದಲೇ ಕಾರಣತ್ವಾದಿಗಳು ಕಾರಣಾದಿ ಸ್ವರೂಪವಾದರೂ ಅನುಪಪತ್ತಿ ಇಲ್ಲ.

यच्चोक्तं भावोऽभावो वेति, तत्र ब्रूमो यो भेदो यत्र प्रतीयते स तत्स्वरूप इति । न चैवं घटात्यन्ताभावे प्रतीयमानघटभेदस्य घटात्यन्ताभावरूपतया तस्य च घटेऽपि सत्त्वात् घटभेदप्रतीतिप्रसङ्ग इति वाच्यम् । घटे घटभेदत्वेन तदसत्त्वात् । न च स्वरूप-प्रतियोगि प्रति-

योगितावच्छेदकाविशेषे भेदत्वात्यन्ताभावत्वयोरप्यविशेष इति वाच्यम् । घटनिषेधोऽत्यन्ताभावो घटतादात्म्यनिषेधोऽन्योन्याभाव इति विशेषात् । घटो न भवतीति साक्षाद्घटस्य प्रतियोगित्वं भासत इति चेत् घटोऽपि प्रतियोग्येव । तादात्म्यं भेदप्रतियोगितावच्छेदकमित्यप्याहुः ।

ಭೇದವು ಭಾವವೆ ಅಥವಾ ಅಭಾವವೆ? ಎಂದು ವಿಕಲ್ಪಮಾಡಿ ಆಕ್ಷೇಪಿಸಿದ್ದೂ ಯುಕ್ತವಲ್ಲ. ಯಾವ ಭೇದವು ಎಲ್ಲಿ ಕಾಣುವುದೋ ಅದು ಅದರ ಸ್ವರೂಪ. ಭಾವದಲ್ಲಿ ಭಾವಸ್ವರೂಪ, ಅಭಾವದಲ್ಲಿ ಅಭಾವಸ್ವರೂಪ. 'ಹಾಗಾದರೆ ಘಟಾತ್ಯಂತಾಭಾವದಲ್ಲಿ ಪ್ರತೀಯಮಾನವಾದ ಘಟಭೇದವು ಘಟಾತ್ಯಂತಾಭಾವ ಸ್ವರೂಪವಾದ್ದರಿಂದ ಘಟಾತ್ಯಂತಾಭಾವವು ಘಟದಲ್ಲಿಯೂ ಇರುವುದರಿಂದ ಘಟದಲ್ಲಿ ಘಟಭೇದ ಪ್ರತೀತಿ ಪ್ರಸಂಗ' ಎನ್ನಬಾರದು. ಘಟಾತ್ಯಂತಾಭಾವ ಸ್ವರೂಪವಾದ ಘಟಭೇದವು ಘಟದಲ್ಲಿದ್ದರೂ ಘಟಭೇದತ್ವೇನ ಇಲ್ಲ. 'ಸ್ವರೂಪ, ಪ್ರತಿಯೋಗಿ, ಪ್ರತಿಯೋಗಿತಾವಚ್ಛೇದಕ ಈ ಮೂರರಲ್ಲಿಯೂ ವಿಶೇಷವಿಲ್ಲದಿರುವಾಗ ಭೇದತ್ವ-ಅತ್ಯಂತಾಭಾವತ್ವಗಳಲ್ಲಿ ವಿಶೇಷವಿರಲು ಶಕ್ಯವಿಲ್ಲ' ಎನ್ನಬಾರದು. ಘಟನಿಷೇಧವು ಅತ್ಯಂತಾಭಾವ. ಘಟತಾದಾತ್ಮ್ಯ ನಿಷೇಧವು ಅನ್ಯೋನ್ಯಾಭಾವ ಎಂದು ಭೇದತ್ವ-ಅತ್ಯಂತಾಭಾವತ್ವಗಳಿಗೆ ವಿಶೇಷವಿದ್ದೇ ಇದೆ.

'ಘಟವಿಲ್ಲ' 'ಘಟವಲ್ಲ' ಎಂದು ಘಟಕ್ಕೇ ಪ್ರತಿಯೋಗಿತ್ವವು ಸಾಕ್ಷಾತ್ ಪ್ರತೀತವಾಗುತ್ತದೆಯಾದ್ದರಿಂದ ಪ್ರತಿಯೋಗಿಯಲ್ಲಿ ವೈಲಕ್ಷಣ್ಯವಿಲ್ಲದಿದ್ದರೂ ಪ್ರತಿಯೋಗಿತಾವಚ್ಛೇದಕದಲ್ಲಿ ವೈಲಕ್ಷಣ್ಯವಿದೆ. ಭೇದಕ್ಕೆ ತಾದಾತ್ಮ್ಯವು ಪ್ರತಿಯೋಗಿತಾವಚ್ಛೇದಕ, ಅತ್ಯಂತಾಭಾವಕ್ಕೆ ಸಂಸರ್ಗವು ಪ್ರತಿಯೋಗಿತಾವಚ್ಛೇದಕ' ಎಂದೂ ಹೇಳುತ್ತಾರೆ.

### ಅತ್ಯಂತಾಭಾವ ಅನ್ಯೋನ್ಯಾಭಾವಗಳು ಬೇರೆ

एतेन संयोगेन संयोग्यत्यन्ताभावस्य संयोगरूपसंयोगितादात्म्यावच्छिन्नप्रतियोगिताकतया तद्भेदत्वापत्तिरिति निरस्तम् । संयोगस्य संयोग्यत्यन्ताभावाप्रतियोगित्वात् । तदवच्छेदकत्वेऽपि संयोगत्वेनैव । न तु तादात्म्यत्वेनेति विशेषात् । वस्तुतोऽन्योन्यात्यन्ताभावयोः सदसत्प्रतियोगिकत्वाभ्यामस्ति महान् विशेषः । एतेन नास्ति, न भवतीति प्रतीत्योरविशेषप्रसङ्गोऽपि निरस्तः ।

'ಸಂಯೋಗೇನ ಸಂಯೋಗ್ಯತ್ಯಂತಾಭಾವಕ್ಕೆ ಸಂಯೋಗರೂಪ ಸಂಯೋಗಿತಾದಾತ್ಮ್ಯ

ವಚ್ಛಿನ್ನ ಪ್ರತಿಯೋಗಿತಾಕತ್ವವಿರುವುದರಿಂದ ಅದು ಸಂಯೋಗಿಭೇದವೇ ಎಂದಾಯಿತು' ಎನ್ನಬಾರದು. ಸಂಯೋಗವು ಸಂಯೋಗ್ಯಂತ್ಯಂತಾಭಾವಕ್ಕೆ ಪ್ರತಿಯೋಗಿಯಲ್ಲೂ ಅದು ಪ್ರತಿಯೋಗಿತಾವಚ್ಛೇದಕವೇ ಆದರೂ ಸಂಯೋಗತ್ವೇನೈವ ಪ್ರತಿಯೋಗಿತಾವಚ್ಛೇದಕವಾಗಿದೆ ಹೊರತು ಸಂಯೋಗಿ ತಾದಾತ್ಮ್ಯತ್ವೇನ ಅಲ್ಲ. ಸಂಯೋಗಿಭೇದದಲ್ಲಿ ಸಂಯೋಗವು ಸಂಯೋಗಿತಾದಾತ್ಮ್ಯತ್ವೇನ ಪ್ರತಿಯೋಗಿತಾವಚ್ಛೇದಕವಾಗಿದೆ ಎಂದು ವೈಲಕ್ಷಣವಿದೆ. ಮತ್ತು ಸಂಯೋಗ್ಯತ್ಯಂತಾಭಾವಕ್ಕೆ ಸಂಯೋಗಿಯು ಪ್ರತಿಯೋಗಿ, ಸಂಯೋಗಿ ಭೇದಕ್ಕೆ ಸಂಯೋಗಿತಾದಾತ್ಮ್ಯವು ಪ್ರತಿಯೋಗಿ ಎಂದು ಪ್ರತಿಯೋಗಿ ವೈಲಕ್ಷಣ್ಯವೂ ಇರುವುದರಿಂದ ಎರಡೂ ಬೇರೆಯೆ. ವಸ್ತುತಃ ಅನ್ಯೋನ್ಯಾಭಾವವು ಸತ್‌ಪ್ರತಿಯೋಗಿಕ, ಅತ್ಯಂತಾಭಾವವು ಅಸತ್‌ಪ್ರತಿಯೋಗಿಕವೆಂದು ಮಹಾವೈಲಕ್ಷಣ್ಯವಿದೆ. ಇದರಿಂದ ಇಲ್ಲ ಅಲ್ಲ ಎಂಬ ಪ್ರತೀತಿಗಳಿಗೆ ವೈಲಕ್ಷಣ್ಯವಿಲ್ಲ ಎನ್ನುವ ಪ್ರಸಂಗವೂ ಇಲ್ಲ.

**यदपि मूले वृक्षः कपिसंयोगी नेति प्रतीतेर्मूलावच्छिन्नवृक्षे कपिसंयोगिभेदः सिद्ध्येदिति तदिष्टमेव विशिष्टभेदवादिनाम् । न चैवं प्रत्यभिज्ञाविरोधः । शाखामूलाद्यवच्छिन्नयोरभेदस्यापि सत्त्वात् । न च भेदाभेदयोर्विरोधः। विशेषबलादविरोधोपपत्तेः। न चैवं विशेष एवास्तु, किं भेदेनेति वाच्यम् । भेदस्य प्रमितत्वात् ।**

ಮೂಲದಲ್ಲಿ ವೃಕ್ಷವು ಕಪಿಸಂಯೋಗಿಯಲ್ಲ ಎಂದು ಪ್ರತೀತಿ ಇರುವುದರಿಂದ ಮೂಲಾವಚ್ಛಿನ್ನ ವೃಕ್ಷದಲ್ಲಿ ಕಪಿಸಂಯೋಗಿಭೇದ ಸಿದ್ಧವಾದೀತು ಎಂದು ಆಪಾದಿಸಿದ್ದು ಕೂಡ ವಿಶಿಷ್ಟ ಭೇದವಾದಿಗಳಾದ ನಮಗೆ ಇಷ್ಟಾಪತ್ತಿಯೆ. ಅದೇ ಇದೆಂದು ಪ್ರತ್ಯಭಿಜ್ಞಾವಿರೋಧ ಎನ್ನಬಾರದು. ಶಾಖಾವಚ್ಛಿನ್ನ ಮೂಲಾವಚ್ಛಿನ್ನಗಳಿಗೆ ಅಭೇದವೂ ಇದೆ. ಆದರಿಂದ ಪ್ರತ್ಯಭಿಜ್ಞಾ ಕೂಡುತ್ತದೆ 'ಭೇದ ಅಭೇದಗಳಿಗೆ ವಿರೋಧ'ವೆಂದರೆ, ವಿಶೇಷ ಬಲದಿಂದ ಅವಿರೋಧವೆನ್ನುತ್ತೇವೆ. 'ಹಾಗಾದರೆ ವಿಶೇಷವೆ ಇರಲಿ, ಭೇದವೇಕೆ?' ಎನ್ನಬಾರದು ಭೇದವು ಪ್ರಮಿತವಾಗಿದೆ.

**ಅಭಾವಕ್ಕೆ ಪ್ರತಿಯೋಗಿತಾವಚ್ಛೇದಕ ಸಂಬಂಧದಿಂದ ಪ್ರತಿಯೋಗಿ ವಿರೋಧ**

यत्त्वभावत्वावच्छेदेन प्रतियोगिविरोधावधारणात् घटवति घटभेदानुपपत्तिरिति । तदसत् । घटवति घटप्रागभावादेरनुपपत्तेः । प्रागभावादेः प्रतियोगिदेशवृत्तित्वस्य प्रमितत्वात् प्रतियोगिकालावृत्तित्वरूपो विरोधस्तत्रावधार्यत इति चेत् तर्हि भेदस्य प्रतियोगिदेशकालवृत्तित्वस्य

**प्रमितत्वात् प्रतियोगिवस्त्ववृत्तित्वरूपो विरोधोऽत्रावधार्यताम् । प्रतियोगिनैकदैकत्रानवस्थानरूपविरोधः प्रागभावाद्यनुगत इति चेत् स्वाभावेनैकदैकत्रानवस्थानरूपविरोधो भेदाद्यनुगत इत्यस्तु । वस्तुतः प्रतियोगितावच्छेदकसम्बन्धेन प्रतियोगिविरोधः सर्वाभावसाधारणः । भेदस्यापि तादात्म्येन प्रतियोगिविरुद्धत्वात् ।**

'ಅಭಾವತ್ವಾವಚ್ಛೇದೇನ ಪ್ರತಿಯೋಗಿ ವಿರೋಧವಿದೆ, ಆದರಿಂದ ಘಟಭೇದಕ್ಕೆ ಪ್ರತಿಯೋಗಿಯಾಗಿರುವ ಘಟವಿರುವ ಭೂತಲದಲ್ಲಿ ಘಟಭೇದವಿರಲಾರದು' ಎಂದು ಆಕ್ಷೇಪಿಸಿದ್ದು ಸರಿಯಲ್ಲ. ಅಭಾವತ್ವಾವಚ್ಛೇದೇನ ಪ್ರತಿಯೋಗಿ ವಿರೋಧವೆಂದೊಪ್ಪಿದರೆ ಘಟವತ್ತಾದ ಕಪಾಲಾದಿ ಗಳಲ್ಲಿ ಘಟಪ್ರಾಗಭಾವಾದಿಗಳಿರಬಾರದೆಂದಾದೀತು.

'ಪ್ರಾಗಭಾವಾದಿಗಳು ಪ್ರತಿಯೋಗಿ ದೇಶದಲ್ಲಿಯೇ ಇರುವುದು ಪ್ರಮಿತವಾಗಿರುವುದರಿಂದ ಪ್ರತಿಯೋಗಿ ಕಾಲದಲ್ಲಿ ಪ್ರಾಗಭಾವಾದಿಗಳಿಲ್ಲ ಎಂದು ವಿರೋಧ'ವೆನ್ನುವುದಾದರೆ, ಭೇದಕ್ಕೂ ಕೂಡ ಪ್ರತಿಯೋಗಿ ದೇಶ–ಕಾಲ ವೃತ್ತಿತ್ವವು ಪ್ರಮಿತವಾಗಿರುವುದರಿಂದ ಪ್ರತಿಯೋಗಿ ವಸ್ತುವಿನಲ್ಲಿ ವೃತ್ತಿಯಿಲ್ಲ ಎನ್ನುವ ವಿರೋಧವನ್ನೇ ಒಪ್ಪಬೇಕು. ಪ್ರತಿಯೋಗಿಯೊಂದಿಗೆ ಸಮಾನ ದೇಶ ಕಾಲಗಳಲ್ಲಿರುವುದಿಲ್ಲ ಎನ್ನುವ ವಿರೋಧವು ಪ್ರಾಗಭಾವಾದಿಗಳಲ್ಲಿ, ಅನುಗತವಾಗಿ ಇದೆ. ತನ್ನ ಅಭಾವದೊಂದಿಗೆ ಸಮಾನದೇಶಕಾಲಗಳಲ್ಲಿರುವುದಿಲ್ಲ ಎನ್ನುವ ವಿರೋಧವು ಭೇದಾದಿಗಳಲ್ಲಿ ಅನುಗತವಾಗಿ ಇದೆ ಎನ್ನೋಣ.

ವಸ್ತುತಃ ಪ್ರತಿಯೋಗಿತಾವಚ್ಛೇದಕ ಸಂಬಂಧದಿಂದ ಪ್ರತಿಯೋಗಿವಿರೋಧವು ಭೇದಾದಿ ಸರ್ವಾಭಾವಗಳಲ್ಲಿ ಅನುಗತವಾಗಿದೆ. ಭೇದವು ಕೂಡ ಪ್ರತಿಯೋಗಿತಾವಚ್ಛೇದಕ ತಾದಾತ್ಮ್ಯ ಸಂಬಂಧದಿಂದ ಪ್ರತಿಯೋಗಿಗೆ ವಿರುದ್ಧವಾಗಿದೆ.

**यदपि भेदस्याभेदाभावत्वान्न घटादेस्तत्प्रतियोगित्वमिति, तदपि न । प्रागभावादेरिव भेदस्य स्वाभावाभावत्वेऽपि घटादिप्रतियोगिकत्वाविरोधात्। अभेदस्य घटादिस्वरूपत्वेऽपि न दोषः । अभेदत्वेनाभेदस्य प्रतियोगिन्येव सत्त्वात्। घटत्वघटाभेदत्वयोर्विशेषसद्भावादेव घटत्वेन घटवति घटाभेदत्वेन तदसत्त्वसम्भवात् ।**

'ಭೇದವು ಅಭೇದಾಭಾವರೂಪವಾದ್ದರಿಂದ ಅದಕ್ಕೆ ಘಟಾದಿ ಪ್ರತಿಯೋಗಿಯಲ್ಲ,

ಅಭೇದವೇ ಪ್ರತಿಯೋಗಿ' ಎಂದು ಹೇಳಿದ್ದೂ ಸರಿಯಲ್ಲ. ಪ್ರಾಗಭಾವಾದಿಗಳಂತೆಯೇ ಭೇದವೂ ಸ್ವಾಭಾವಾಭಾವರೂಪವಾದರೂ ಘಟಾದಿಪ್ರತಿಯೋಗಿಕತ್ವಕ್ಕೆ ಬಾಧಕವಿಲ್ಲ. ಅಭೇದವು ಘಟಾದಿಸ್ವರೂಪವಾದರೂ ದೋಷವಿಲ್ಲ. ಅಭೇದತ್ವೇನ ಅಭೇದವು ಪ್ರತಿಯೋಗಿಯಲ್ಲೇ ಇರುತ್ತದೆ. ಘಟತ್ವ-ಘಟಾಭೇದತ್ವಗಳಿಗೆ ವಿಶೇಷವಿರುವುದರಿಂದ ಘಟತ್ವೇನ ಘಟವಿರುವಲ್ಲಿ ಘಟಾಭೇದತ್ವೇನ ಘಟವಿಲ್ಲದಿರಬಹುದು.

**यदपि भेदाभेदयोः परस्परज्ञानाधीनज्ञानत्वादन्योन्याश्रय इति । तत्तुच्छम् । घटाभेदज्ञानहेतोर्घटभेदज्ञानस्य घटत्वेन घटज्ञानमात्राधीनत्वात् । अत एव भेदप्रत्यक्षमप्युपपद्यते ।**

'ಭೇದಾಭೇದಗಳಿಗೆ ಪರಸ್ಪರ ಜ್ಞಾನಾಧೀನಜ್ಞಾನತ್ವವಿರುವುದರಿಂದ ಅನ್ಯೋನ್ಯಾಶ್ರಯ' ಎಂಬ ಆಕ್ಷೇಪ ಹುರುಳಿಲ್ಲದ್ದು. ಏಕೆಂದರೆ ಘಟಾಭೇದಜ್ಞಾನ ಬರಬೇಕಾದರೆ ಘಟಭೇದಜ್ಞಾನ ಬೇಕು, ನಿಜ. ಆದರೆ ಘಟತ್ವೇನ ಘಟಜ್ಞಾನ ಮಾತ್ರದಿಂದಲೇ ಘಟಭೇದ ಜ್ಞಾನ ಬರುತ್ತದೆ. ಘಟಾಭೇದಜ್ಞಾನವು ಅದಕ್ಕೆ ಬೇಕಾಗಿಲ್ಲ. ಅದರಿಂದಲೆ ಭೇದ ಪ್ರತ್ಯಕ್ಷವೂ ಕೂಡುತ್ತದೆ. ಘಟಭೇದ ಪ್ರತ್ಯಕ್ಷಕ್ಕೆ ಘಟತ್ವೇನ ಘಟಜ್ಞಾನ ಮಾತ್ರವೆ ಸಾಕು.

**यदपि घटपटभेदयोरन्योन्यज्ञानाधीनज्ञानत्वादन्योन्याश्रय इति । तदपि न साधु । घटपटभेदयोरन्योन्यसंशयस्य ग्राह्यसंशयवदन्योन्यज्ञानाप्रतिबन्धकत्वेनान्योन्यज्ञानाधीनज्ञानत्वासिद्धेः । अन्यथा ग्राह्यसंशयस्यापि प्रतिबन्धकत्वप्रसङ्गेन वस्तुमात्रस्यैव स्वज्ञानाधीनज्ञानत्वापत्त्या ज्ञानमात्रापलापापत्तेः । विपक्षे बाधकाभावेन यत्संशयेत्यादिनियमस्याप्रयोजकत्वाच्च ।**

'ಘಟದಲ್ಲಿ, ಪಟಭೇದ ಸಂಶಯವು ಪಟದಲ್ಲಿ ಘಟಭೇದ ನಿಶ್ಚಯಕ್ಕೆ ಮತ್ತು ಪಟದಲ್ಲಿ ಘಟಭೇದ ಸಂಶಯವು ಘಟದಲ್ಲಿ ಪಟಭೇದ ನಿಶ್ಚಯಕ್ಕೆ ಪ್ರತಿಬಂಧಕವಾದ್ದರಿಂದ ಘಟದಲ್ಲಿ ಪಟಭೇದ ನಿಶ್ಚಯವು ಪಟದಲ್ಲಿ ಘಟಭೇದ ನಿಶ್ಚಯಕ್ಕೆ ಕಾರಣ, ಪಟದಲ್ಲಿ ಘಟಭೇದ ನಿಶ್ಚಯವು ಘಟದದಲ್ಲಿ ಪಟಭೇದ ನಿಶ್ಚಯಕ್ಕೆ ಕಾರಣ'—ಹೀಗೆ ಭೇದಜ್ಞಾನದಲ್ಲಿ ಅನ್ಯೋನ್ಯಾಶ್ರಯತ್ವವನ್ನು ಹೇಳಿದ್ದೂ ಸರಿಯಲ್ಲ. ಘಟದಲ್ಲಿ ಪಟಭೇದ ಸಂಶಯವು ಪಟದಲ್ಲಿ ಘಟಭೇದ ನಿಶ್ಚಯಕ್ಕೆ ಪ್ರತಿಬಂಧಕವೆ ಅಲ್ಲ. ಹಾಗೇ ಪಟದಲ್ಲಿ ಘಟಭೇದ ಸಂಶಯವೂ ಘಟದಲ್ಲಿ ಪಟಭೇದ ನಿಶ್ಚಯಕ್ಕೆ ಪ್ರತಿಬಂಧಕವಲ್ಲ. ಯಾವುದೇ ನಿಶ್ಚಯಕ್ಕೆ ಗ್ರಾಹ್ಯಸಂಶಯವು ಹೇಗೆ ಪ್ರತಿಬಂಧಕವಲ್ಲವೋ ಹಾಗೇ

ಘಟದಲ್ಲಿ ಪಟಭೇದ ಮತ್ತು ಪಟದಲ್ಲಿ ಘಟಭೇದಗಳ ಸಂಶಯಗಳೂ ಘಟಭೇದ ಪಟಭೇದ ನಿಶ್ಚಯಗಳಿಗೆ ಪ್ರತಿಬಂಧಕವಲ್ಲ, ಅವು ಪ್ರತಿಬಂಧಕವೆನ್ನುವುದಾದರೆ ಗ್ರಾಹ್ಯಸಂಶಯವೂ ಪ್ರತಿಬಂಧಕವಾದೀತು. ಆಗಲಿ ಎಂದರೆ ಯಾವುದೇ ವಸ್ತುವಿನ ನಿಶ್ಚಯಕ್ಕೆ ಅದರ ನಿಶ್ಚಯವೇ ಕಾರಣವಾಗಿ ಆತ್ಮಾಶ್ರಯದೋಷದಿಂದ ಉತ್ಪನ್ನವಾಗದೇ ಹೋದೀತು.

'ಯಾವುದರ ಸಂಶಯ ಯಾವುದರ ನಿಶ್ಚಯಕ್ಕೆ ಪ್ರತಿಬಂಧಕವೋ ಅದರ ನಿಶ್ಚಯ ಅದರ ನಿಶ್ಚಯಕ್ಕೆ ಕಾರಣ'ವೆಂಬ ನಿಯಮವನ್ನು ಒಪ್ಪದಿದ್ದರೆ ಬಾಧಕವಿಲ್ಲದಿರುವುದರಿಂದ ಅಪ್ರಯೋಜಕ ವಾಗಿದೆ.

**यदपि प्रतियोगित्वांशे सन्निकर्षाभावात् प्रतियोगित्वविशेषितभेद-प्रत्यक्षानुपपत्तिरिति तदतिमन्दम् । निर्विकल्पकोपस्थितेरेव सन्निकर्षत्व-सम्भवात् । तस्याश्च भेदज्ञानानपेक्षत्वेनान्योन्याश्रयानवकाशात् । प्रतियोगित्वस्य प्रतियोगिस्वरूपत्वेन तदुपस्थितेस्तत्सन्निकर्षत्वसम्भवाच्च ।**

ಪ್ರತಿಯೋಗಿತ್ವಾಂಶದಲ್ಲಿ ಸನ್ನಿಕರ್ಷವಿಲ್ಲದಿದ್ದರಿಂದ ಪ್ರತಿಯೋಗಿ ವಿಶಿಷ್ಟಭೇದ ಪ್ರತ್ಯಕ್ಷ ಬರಲಾರದೆಂದು ಹೇಳಿದ್ದೂ ಸರಿಯಲ್ಲ. ಜ್ಞಾನವೇ ಸನ್ನಿಕರ್ಷ ಎನ್ನುತ್ತೇವೆ. ಜ್ಞಾನವೂ ಕೂಡ ನಿರ್ವಿಕಲ್ಪಕವೇ ಸಾಕು. ಅದಕ್ಕೆ ಭೇದಜ್ಞಾನ ಮೊದಲಿಗೆ ಇರಬೇಕಾಗಿಲ್ಲ. ಅದರಿಂದ ಅನ್ಯೋನ್ಯಾಶ್ರಯಕ್ಕೆ ಅವಕಾಶವಿಲ್ಲ. ಪ್ರತಿಯೋಗಿತ್ವವು ಪ್ರತಿಯೋಗಿ ಸ್ವರೂಪವಾದ್ದರಿಂದ ಪ್ರತಿಯೋಗಿಯ ಉಪಸ್ಥಿತಿಯನ್ನೇ ಸನ್ನಿಕರ್ಷ ಎನ್ನಲೂ ಶಕ್ಯವಿದೆ.

**एवमनुमाने धर्मिसत्तासमानसत्ताकत्वेन भेदविशेषणादुद्देश्यसिद्धिः । न चाप्रयोजकत्वम्। विपक्षे चैत्रादेर्मैत्रादिदुःखानुसन्धानापत्तेर्बाधकत्वात्। चैत्रमैत्रयोरैक्याच्चैत्रचैतन्यस्य मैत्रीयदुःखाद्यनुसन्धानमिष्टमेवेति वाच्यम् । मैत्रशरीरोत्पन्नदुःखादेश्चैत्रशरीरेऽनुसन्धानस्यानिष्टत्वात् । न च तत्तच्छरीरगतान्तःकरणभेदादनुसन्धानाभाव इति वाच्यम् । योगिन्य-नुपपत्तेरुक्तत्वात् । अत एवाऽऽगमोऽपि स्वाभाविकभेदमेव ग्राहयति । अत्त्यनश्नन् इत्युक्ताशनानशनयोः स्वाभाविकभेदेन विनाऽनुपपत्तेः । मुक्तौ भेदश्रुतीनामुदाहृतत्वाच्च ।**

ಅನುಮಾನದಲ್ಲಿ ಧರ್ಮಿಸತ್ತಾಸಮಾನಸತ್ತಾಕ ಎಂದು ಭೇದಕ್ಕೆ ವಿಶೇಷಣ ನೀಡುವುದರಿಂದ

ಉದ್ದೇಶ್ಯಸಿದ್ಧಿಯಾಗುತ್ತದೆ. ಅನುಮಾನ ಅಪ್ರಯೋಜಕವೆಂದೆನ್ನಲೂ ಬರುವುದಿಲ್ಲ. ಭೇದವನ್ನು ಒಪ್ಪದಿದ್ದರೆ ಚೈತ್ರನಿಗೆ ಮೈತ್ರನ ದುಃಖಾದಿ ಅನುಭವ ಪ್ರಸಂಗವೇ ಬಾಧಕ. 'ಚೈತ್ರಮೈತ್ರರು ವಸ್ತುತಃ ಒಬ್ಬರೇ ಆದ್ದರಿಂದ ಅವನ ದುಃಖಾದಿಗಳನ್ನು ಅವನೇ ಅನುಭವಿಸಿದಂತಾಗುವುದರಿಂದ ಇಷ್ಟಾಪತ್ತಿ' ಎನ್ನಬಾರದು. ಚೈತ್ರಶರೀರದಲ್ಲಿ ಉತ್ಪನ್ನವಾದ ದುಃಖಾದಿಗಳು ಮೈತ್ರಶರೀರದಲ್ಲಿ ಅನುಭವಕ್ಕೆ ಬರಲೆಂದು ಆಪತ್ತಿ. ಅದು ಅನಿಷ್ಟವೆ.

'ಚೈತನ್ಯ ಒಂದೇ ಆದರೂ ಆಯಾ ಶರೀರಗಳಲ್ಲಿರುವ ಅಂತಃಕರಣಗಳು ಭಿನ್ನವಾದ್ದರಿಂದ ಒಂದು ಶರೀರದಲ್ಲಿ ಉಂಟಾದ ದುಃಖ ಇನ್ನೊಂದು ಶರೀರದಲ್ಲಿ ಅನುಭವಕ್ಕೆ ಬರುವುದಿಲ್ಲ' ಎಂದರೆ ಯೋಗಿಯಲ್ಲಿ ಅಂತಃಕರಣಗಳು ಅವನ ಶರೀರಗಳಲ್ಲಿ ಬೇರೆ ಬೇರೆ ಇದ್ದರೂ ದುಃಖಾದಿ ಅನುಭವವೇ ಕಂಡಿದೆ ಎಂದು ಹಿಂದೆಯೇ ಹೇಳಿದ್ದೇವೆ.

ಹೀಗಾಗಿ ಆಗಮವೂ ಸ್ವಾಭಾವಿಕ ಭೇದವನ್ನೇ ಹೇಳುತ್ತದೆ. 'ಅತ್ತಿ' 'ಅನಶ್ನನ್' ಜೀವನು ಕರ್ಮಫಲವನ್ನು ಉಣ್ಣುತ್ತಾನೆ' 'ಈಶ್ವರನು ಉಣ್ಣುವುದಿಲ್ಲ' ಎಂದು ಹೇಳಿದ್ದು ಸ್ವಾಭಾವಿಕ ಭೇದವಿಲ್ಲದೆ ಕೂಡಲಾರದು. ಮುಕ್ತಿಯಲ್ಲಿಯೂ ಭೇದವಿದೆ ಎಂದು ಹೇಳುವ ಶ್ರುತಿಗಳನ್ನೂ ಉದಾಹರಿಸಿದ್ದೇವೆ.

**न च भेदस्य वस्तुस्वरूपत्वाङ्गीकारात् स्वरूपस्य च स्वाभाविकत्वे विवादाभावादर्थान्तरमिति वाच्यम् । यतो न भेदो वस्तुस्वरूपमात्रम् । धर्मधर्मिभावाद्यनुपपत्तेः । किन्तु तद्विशेष इत्युक्तम् । तथा च धर्मत्व परप्रतियोगिकत्वादि विशेषित वस्तुस्वरूपविशेषस्य साध्यत्वान्न दोषः ।**

'ಭೇದವು ವಸ್ತುಸ್ವರೂಪವೆಂದು ನೀವು ಒಪ್ಪಿರುವುದರಿಂದ ಸ್ವರೂಪವು ಸ್ವಾಭಾವಿಕವೆನ್ನುವಲ್ಲಿ ವಿವಾದವಿಲ್ಲದ್ದರಿಂದ ಅರ್ಥಾಂತರತ್ವ' ಎಂದರೆ ಅದೂ ಸರಿಯಲ್ಲ. 'ಭೇದವು ವಸ್ತುಸ್ವರೂಪ ಮಾತ್ರವೆ ಅಲ್ಲ. ವಸ್ತುಸ್ವರೂಪವೆ ಎನ್ನುವುದಾದರೆ ಧರ್ಮಧರ್ಮಿಭಾವಾದಿಗಳು ಕೂಡಲಾರವು. ವಸ್ತುಸ್ವರೂಪದಲ್ಲಿ ವಿಶೇಷವೂ ಇದೆ' ಎಂದು ಹೇಳಿದ್ದೇವೆ. ಆದರಿಂದ ಧರ್ಮತ್ವ ಪರಪ್ರತಿಯೋಗಿಕತ್ವ ಮುಂತಾದವುಗಳಿಂದ ವಿಶಿಷ್ಟವಾದ ವಸ್ತುಸ್ವರೂಪವಿಶೇಷವೆ ಭೇದ, ಅದನ್ನು ನಾವು ಸಾಧಿಸುವುದರಿಂದ ಅರ್ಥಾಂತರತ್ವ ಬರುವುದಿಲ್ಲ.

**अथ वस्तुस्वरूप एव विशेषसद्भावे किं मानमिति चेदिदं तावत् । स्वरूपस्य वस्त्वभिन्नत्वेऽपि 'वस्तुनः स्वरूपमि'ति सम्बन्धानुभवादेव स्वरूपस्य वस्तुतो विशेषसिद्धिः । एवं 'यथोदकं दुर्गे वृष्टं पर्वतेषु**

**विधावति । एवं धर्मान् पृथक् पश्यंस्तानेवानुविधावति', 'एकधैवानुद्रष्टव्यं', 'नेह नानास्ति' इत्यादिश्रुतिभिः ब्रह्मणस्तद्धर्माणां चाभेदः सिद्धः । दृश्यते च 'सत्यं ज्ञानमनन्तं ब्रह्म', 'आनन्दं ब्रह्मणो विद्वान्' इत्यादौ विशेष्यविशेषणभावादिना व्यवहारः । तदुभयविरोधादर्थादाक्षिप्यते विशेषः । एवं घटतद्धर्माणामपि पृथगनुपलम्भेनैकत्वे सिद्धे धर्मधर्मिभावादेर्विशेष एव शरणमिति ।।**

ವಸ್ತುಸ್ವರೂಪದಲ್ಲಿಯೇ ವಿಶೇಷವಿದೆ ಎನ್ನಲು ಏನು ಪ್ರಮಾಣ ಎಂದರೆ ಹೇಳುತ್ತೇವೆ- ಸ್ವರೂಪವು ವಸ್ತುವಿನಿಂದ ಅಭಿನ್ನವಾದರೂ 'ವಸ್ತುವಿನ ಸ್ವರೂಪ' ಎಂದು ಸಂಬಂಧಾನುಭವ ವಿರುವುದರಿಂದಲೇ ಸ್ವರೂಪಕ್ಕೆ ವಸ್ತುವಿಗಿಂತ ವಿಶೇಷವಿದೆ ಎಂದು ಸಿದ್ಧವಾಗುತ್ತದೆ.

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್‌ಪಶ್ಯನ್ ತಾನೇವಾನುವಿಧಾವತಿ ॥

ಏಕಧೈವಾನುದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ ॥

ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೂ ಅವನ ಧರ್ಮಗಳಿಗೂ ಅಭೇದವು ಸಿದ್ಧವಾಗಿದೆ.

ಸತ್ಯಂ ಜ್ಞಾನಮನಂತಂ ಬ್ರಹ್ಮ
ಆನಂದಂ ಬ್ರಹ್ಮಣೋ ವಿದ್ವಾನ್

ಇತ್ಯಾದಿ ಕಡೆಗಳಲ್ಲಿ ಜ್ಞಾನಾನಂದಾದಿ ಬ್ರಹ್ಮಧರ್ಮಗಳಿಗೆ ವಿಶೇಷ್ಯ ವಿಶೇಷಣಭಾವದಿಂದ ವ್ಯವಹಾರವೂ ಕಂಡಿದೆ. ಈ ಎರಡರ ವಿರೋಧದಿಂದ ಅರ್ಥಾತ್ ವಿಶೇಷವಿದೆ ಎಂದು ತಿಳಿದು ಬರುತ್ತದೆ. ಹೀಗೇ ಘಟ ಮತ್ತು ತದ್ಧರ್ಮಗಳೂ ಪ್ರತ್ಯೇಕವಾಗಿ ಕಾಣದಿರುವುದರಿಂದ ಅಭೇದ ಸಿದ್ಧವಾಗಿರುವಾಗ ಧರ್ಮಧರ್ಮಿಭಾವವೂ ಕಾಣುವುದಕ್ಕೆ ವಿಶೇಷವೇ ಕಾರಣ ಎಂದು.

### ವಿಷಯ ನಿರಪೇಕ್ಷವಾಗಿ ಅವಿದ್ಯೆಯಿಂದ ವ್ಯವಹಾರ ನಡೆಯದು

**यत्त्वनिर्वाच्याविद्यासामर्थ्यादेव सर्वलौकिकवैदिकव्यवहारोपपत्तौ किं विशेषेणेति । तत्तुच्छम् । अविद्याया विषयनिरपेक्षत्वे विज्ञानवादप्रसङ्गात्। तत्सापेक्षत्वे च तत्स्वभावभूतयोरभेदधर्मत्वयोर्विरोधध्रौव्यात् । अभेद एव स्वाभाविको धर्मत्वं तु मिथ्यैवेति चेत् तर्हि तत्प्रतिपादकश्रुतीनाम्**

अतत्त्वावेदकत्वादप्रामाण्यप्रसङ्गः । परमार्थतो निर्विशेषचैतन्यस्वरूपमात्रे सर्वश्रुतीनां तात्पर्यान्नायं दोष इति चेन्न । दृष्टादृष्टत्यागकल्पनाप्रसङ्गात् । प्रतीतविशेषपरित्यागेनाप्रतीतनिर्विशेषस्वीकारात् । शब्दतो निर्विशेषानुभवस्यादृष्टत्वाच्च ।

न च सोऽयमित्यादौ तत्तेदन्ताविशिष्टयोरभेदान्वयबाधेन स्वरूपमात्रबोधो दृष्ट एवेति वाच्यम् । तत्राप्यतीतसम्बन्धरूपतत्तोपलक्षितस्य तत्कालसम्बन्धध्वंसरूपतत्ताविशिष्टस्य वा वर्तमानकालसम्बन्धरूपेदन्त्वविशिष्टेनाभेदान्वयात् ।

ಅನಿರ್ವಚನೀಯವಾದ ಅವಿದ್ಯೆಯ ಸಾಮರ್ಥ್ಯದಿಂದಲೇ ಎಲ್ಲ ಲೌಕಿಕ ವೈದಿಕ ವ್ಯವಹಾರ ಕೂಡುತ್ತಿರುವಾಗ ವಿಶೇಷಕಲ್ಪನೆ ಬೇರೆ ಏಕೆ ಎಂದು ಆಕ್ಷೇಪಿಸುವುದು ಅರ್ಥಹೀನ. ಅವಿದ್ಯೆಯು ವಿಷಯನಿರಪೇಕ್ಷವಾಗಿ ವ್ಯವಹಾರವನ್ನು ಕೂಡಿಸುವುದಾದರೆ ವಿಜ್ಞಾನವಾದ ಪ್ರಸಂಗ. ವಿಷಯಾಪೇಕ್ಷೆ ಇದೆ ಎನ್ನುವುದಾದರೆ ವಿಷಯಸ್ವಭಾವಭೂತವಾದ ಅಭೇದ ಮತ್ತು ಧರ್ಮತ್ವಗಳಿಗೆ ವಿರೋಧ ಅಪರಿಹಾರ್ಯವಾಗುವುದು. ಅಭೇದವೇ ಸ್ವಾಭಾವಿಕ, ಧರ್ಮತ್ವವು ಮಿಥ್ಯೆಯೆ ಎಂದರೆ ಅದನ್ನು ಹೇಳುವ ಶ್ರುತಿಗಳು ಅತತ್ವಾವೇದಕವಾಗಿದ್ದು ಅಪ್ರಮಾಣವಾಗುವ ಪ್ರಸಂಗ. ಪಾರಮಾರ್ಥಿಕವಾಗಿ ನಿರ್ವಿಶೇಷ ಚೈತನ್ಯಸ್ವರೂಪ ಮಾತ್ರದಲ್ಲಿಯೇ ಎಲ್ಲ ಶ್ರುತಿಗಳಿಗೆ ತಾತ್ಪರ್ಯವಿರುವುದರಿಂದ ಈ ದೋಷವಿಲ್ಲ ಎಂದರೆ ದೃಷ್ಟತ್ಯಾಗ ಅದೃಷ್ಟಕಲ್ಪನಾದೋಷ ಬರುತ್ತದೆ, ಪ್ರತೀತವಾದ ವಿಶೇಷವನ್ನು ತ್ಯಾಗಮಾಡುವುದು ಮತ್ತು ಅಪ್ರತೀತವಾದ ನಿರ್ವಿಶೇಷವನ್ನು ಕಲ್ಪನೆ ಮಾಡುವುದು ದೋಷ. ಮತ್ತು ಶಬ್ದದಿಂದ ನಿರ್ವಿಶೇಷದ ಬೋಧ ಬರುವುದೂ ಕಂಡಿಲ್ಲ.

'ಅವನೇ ಇವನು' ಎಂದು ಶಬ್ದದಿಂದ ಎರಡು ವಿಶಿಷ್ಟಗಳಿಗೆ ಅಭೇದ ಅನ್ವಯ ಬಾಧಿತವಾದ್ದರಿಂದ ಸ್ವರೂಪ ಮಾತ್ರವೇ ಬೋಧಿತವಾಗುತ್ತದೆ' ಎನ್ನಕೂಡದು. ಅತೀತಕಾಲ ಸಂಬಂಧದಿಂದ ಉಪಲಕ್ಷಿತಕ್ಕೆ ಅಥವಾ ಅತೀತಕಾಲ ಸಂಬಂಧಧ್ವಂಸ ವಿಶಿಷ್ಟಕ್ಕೆ ವರ್ತಮಾನ ಕಾಲಸಂಬಂಧ ವಿಶಿಷ್ಟದ ಅಭೇದವನ್ನು ಹೇಳಿದರೆ ವಿರೋಧವಿಲ್ಲ. ಅದರಿಂದ ನಿರ್ವಿಶೇಷಬೋಧವನ್ನು ಒಪ್ಪಬೇಕಾಗಿಲ್ಲ.

**ಆತ್ಮವೇ ಅವಿದ್ಯೆ ಎಂದಾಗಲಿ, ಮಿಥ್ಯಾತ್ವಕ್ಕೆ ಅದು ಅನುಕೂಲ!**

किञ्चाद्वैतवादे तावदविद्यैव नोपपद्यते । विकल्पदोषात् । सत्यत्वे द्वैतप्रसङ्गात् । मिथ्यात्वे कल्पकाभावः । स्वकल्पितत्वे आत्माश्रयात् ।

अविद्यान्तरकल्पितत्वे चानवस्था । तथा च कुतो धर्मत्वादेर्मिथ्यात्वपरिकल्पनावकाशः । नन्वेवमनुपपन्नत्वं मिथ्यात्वे साधकमेव । उपपन्नत्वे हि सत्यत्वं स्यादिति चेत् तर्हि लाघवादात्मैवाविद्येति कल्प्यताम् । आत्मनोऽविद्यात्वमविद्यानिवृत्तावात्मनिवृत्त्यापत्त्याऽनुपपन्नमिति चेदत एव मिथ्येत्यस्य सुवचत्वात् । आत्मनोऽविद्यात्वमप्रामाणिकमिति चेत्तद्धर्मस्याविद्यात्वे किं प्रमाणमुपलब्धमायुष्मता ? प्रतीतप्रमाणानां निरस्तत्वादिति दिक् ।

ಮತ್ತು ಅಭೇದವಾದದಲ್ಲಿ ಅವಿದ್ಯೆಯೆ ಕೂಡುವುದಿಲ್ಲ. ಏಕೆಂದರೆ ಅದು ಸತ್ಯವಾದರೆ ದ್ವೈತಪ್ರಸಂಗ. ಮಿಥ್ಯೆಯಾದರೆ ಅದಕ್ಕೆ ಕಲ್ಪಕನಿಲ್ಲ. ಅವಿದ್ಯೆ ತನಗೆ ತಾನೇ ಕಲ್ಪಿತವಾಗುತ್ತದೆ ಎಂದರೆ ಆತ್ಮಾಶ್ರಯದೋಷ. ಇನ್ನೊಂದು ಅವಿದ್ಯೆ ಈ ಅವಿದ್ಯೆಯನ್ನು ಕಲ್ಪಿಸುತ್ತದೆ ಎಂದರೆ ಆ ಅವಿದ್ಯೆಗೆ ಇನ್ನೊಂದು ಅವಿದ್ಯೆ ಕಲ್ಪಕವೆನ್ನಬೇಕು. ಹೀಗೆ ಅನವಸ್ಥಾ ದೋಷ. ಹೀಗಾಗಿ ಧರ್ಮತ್ವಾದಿಗಳ ಮಿಥ್ಯಾತ್ವಕಲ್ಪನೆಗೆ ಅವಕಾಶವಿಲ್ಲ.

'ಹೀಗೆ ಅನುಪಪತ್ತಿಗಳಿರುವುದು ಮಿಥ್ಯಾತ್ವಕ್ಕೆ ಸಾಧಕವೆ. ಉಪಪನ್ನವಾದರೆ ಸತ್ಯವಾದೀತು' ಎನ್ನುವುದಾದರೆ ಲಾಘವಕ್ಕಾಗಿ ಆತ್ಮವೇ ಅವಿದ್ಯೆ ಎಂದು ಕಲ್ಪಿಸು. ಆತ್ಮವೇ ಅವಿದ್ಯೆಯಾದರೆ ಅವಿದ್ಯಾನಿವೃತ್ತಿಯಾದಾಗ ಆತ್ಮನಿವೃತ್ತಿಪ್ರಸಂಗ ಬರುವುದರಿಂದ ಅದು ಅನುಪಪನ್ನ ಎಂದರೆ ಅದರಿಂದಲೆ ಅದು ಮಿಥ್ಯೆ ಎಂದು ಸುಲಭವಾಗಿ ಹೇಳಬಹುದು. ಆತ್ಮನು ಅವಿದ್ಯೆಯೆ ಎನ್ನುವುದು ಅಪ್ರಾಮಾಣಿಕ ಎಂದರೆ ಅವನ ಧರ್ಮವು ಅವಿದ್ಯೆ ಎನ್ನಲು ನಿನಗೇನು ಪ್ರಮಾಣ ಉಪಲಬ್ಧವಾಗಿದೆ? ನೀನು ಹೇಳಿರುವ ಪ್ರಮಾಣಗಳನ್ನೆಲ್ಲ ನಾವು ನಿರಾಕರಿಸಿಯೆ ಇದ್ದೇವೆ. ಇದು ದಿಙ್ಮಾತ್ರ ಪ್ರದರ್ಶನ.

नन्वेवं विशेषोऽपि नोपपद्यते । विकल्पदोषात् । तथाहि । धर्मधर्मिणोर्विशेषो यदि धर्मधर्मिभ्यां भिन्नस्तर्हि भेद एवास्तु किमन्तर्गडुना विशेषेण । यद्यभिन्नस्तर्हि धर्मधर्मिणावेव स्तो न विशेषः । तथा च धर्मधर्मिभावोऽपि न स्यादिति चेन्मैवम् । अभिन्नत्वेऽपि विशेषस्य तन्मात्रत्वाभावेन दोषाभावात् । विशेषस्य विशेषित्वे विशेषानवस्था स्यादिति चेत् वस्त्वन्तरत्वाभावेनादोषत्वादिति । स्यादेतत् ।

भेदविशेषयोर्नित्यत्वे नानित्यघटादिस्वरूपत्वम् । अनित्यत्वे चोत्तरकालं निर्विशेषाभेदापत्तिरिति चेन्मैवम् । अनित्यगतस्यानित्यत्वेऽप्युत्तरकालं वस्तुन एवाभावेन निर्विशेषाभिन्नवस्त्ववशेषप्रसङ्गाभावात् । नित्यगतस्य नित्यत्वेन सर्वाभेदप्रसङ्गस्यात्यन्तमयुक्तत्वाच्च ।

'ನೀವು ಹೀಗೆ ಹೇಳಿದರೆ ನಿಮ್ಮ ವಿಶೇಷವೂ ಉಪಪನ್ನವಾಗುವುದಿಲ್ಲ. ಏಕೆಂದರೆ ಧರ್ಮ ಧರ್ಮಿಗಳ ವಿಶೇಷವು ಧರ್ಮಧರ್ಮಿಗಳಿಗಿಂತ ಭಿನ್ನವಾದರೆ ಭೇದವೆ ಇರಲಿ, ನಡುವೆ ಈ ವಿಶೇಷವೇಕೆ? ಅಭಿನ್ನವಾದರೆ ಧರ್ಮ ಧರ್ಮಿಗಳೇ ಇವೆ, ವಿಶೇಷವಿಲ್ಲ. ಹೀಗಾಗಿ ಧರ್ಮಧರ್ಮಿಭಾವವು ಕೂಡ ಇಲ್ಲ.' ಎಂದರೆ ವಿಶೇಷವು ಧರ್ಮಧರ್ಮಿಗಳಿಗೆ ಅಭಿನ್ನವೇ ಆದರೂ ಅದು ಧರ್ಮಧರ್ಮಿಮಾತ್ರವಾಗಿರುವುದಿಲ್ಲ. ವಿಶೇಷವೂ ಇದೆ ಎಂದು ಹೇಳಿದ್ದೇವೆ. ವಿಶೇಷಕ್ಕೆ ಪುನಃ ವಿಶೇಷವೆಂದರೆ ಅನವಸ್ಥೆ ಎಂದು ತಿಳಿಯಬಾರದು. ವಸ್ತ್ವಂತರಕಲ್ಪನ ಮಾಡುತ್ತ ಹೋದರೇ ಅನವಸ್ಥೆ. ಇಲ್ಲಿ ವಿಶೇಷವು ವಸ್ತ್ವಂತರವಲ್ಲ. ಅದರಿಂದ ದೋಷವಿಲ್ಲ. 'ಭೇದ ಮತ್ತು ವಿಶೇಷಗಳು ನಿತ್ಯವಾಗಿದ್ದರೆ ಅನಿತ್ಯ ಘಟಾದಿಸ್ವರೂಪತ್ವ ಕೂಡಲಾರದು. ಅನಿತ್ಯವಾಗಿದ್ದರೆ ಅದರ ನಾಶಾನಂತರ ನಿರ್ವಿಶೇಷವಾದ ಅಭೇದ ಬರಬೇಕಾದೀತು'— ಹೀಗೂ ಹೇಳಬಾರದು. ಅನಿತ್ಯವಸ್ತುವಿನಲ್ಲಿರುವ ವಿಶೇಷವು ಅನಿತ್ಯವೇ. ಆದರೂ ಅದರ ನಾಶಾನಂತರದಲ್ಲಿ ವಸ್ತುವೇ ಇಲ್ಲದಿರುವುದರಿಂದ ನಿರ್ವಿಶೇಷಾಭಿನ್ನ ವಸ್ತು ಉಳಿಯುವ ಪ್ರಸಂಗವಿಲ್ಲ. ನಿತ್ಯವಸ್ತುವಿನಲ್ಲಿರುವ ವಿಶೇಷವು ನಿತ್ಯವಾಗಿರುವುದರಿಂದ ಸರ್ವಾಭೇದಪ್ರಸಂಗ ಅತ್ಯಂತ ಅಯುಕ್ತವಾಗುತ್ತದೆ.

**ಪಂಚಭೇದ ನಿರ್ವಚನ**

तस्माज्जडजीवेश्वराणां मिथः स्वाभाविक एव पञ्चविधो भेदः । तथा हि श्रुतिः—

'जीवेश्वरभिदा चैव जडेश्वरभिदा तथा ।
जीवभेदो मिथश्चैव जडजीवभिदा तथा ।
मिथश्च जडभेदोऽयं प्रपञ्चो भेदपञ्चकः ।।

सोऽयं सत्यो ह्यनादिश्च सादिश्चेन्नाशमाप्नुयात् ।
न च नाशं प्रयात्येष न चासौ भ्रान्तिकल्पितः ।।

कल्पितश्चेन्निवर्तेत न चासौ विनिवर्तते ।
द्वैतं न विद्यत इति तस्मादज्ञानिनां मतम्' ।। इत्यादिः ।।

अत्र जीवेश्वरभेदत्वं नाम न जीवेश्वरोभयप्रतियोगिकभेदत्वम् । परस्परभेदस्योभयप्रतियोगिकत्वाभावेनासङ्ग्रहात् । अत एव नोभयानुयोगिकभेदत्वम्। एकस्योभयानुयोगिकत्वाभावात् । नापि जीवेश्वरान्यतरप्रतियोगिकभेदत्वमन्यतरानुयोगिकभेदत्वं वा । जडेश्वरभेदादेः पृथगुपादानवैयर्थ्यात् । नापि जीवेश्वरान्यतरप्रतियोग्यनुयोगिकभेदत्वम् । मिथो जीवभेदस्य पृथगुपादानानुपपत्तेः। किन्तु जीवेश्वरद्वित्वसमानाधिकरणप्रतियोगितानुयोगिताकभेदत्वम् । जीवेश्वरगतप्रतियोगित्वानुयोगित्वयोर्जीवेश्वरद्वित्वसमानाधिकरणत्वाज्जीवेश्वरभेदसङ्ग्रहः । जडेश्वरगतप्रतियोगित्वानुयोगित्वयोरतथात्वान्न तत्सङ्ग्रहः । न चैवं मिथोजीवभेदसङ्ग्रहापत्तिः । तत्प्रतियोगित्वानुयोगित्वयोः प्रत्येकं जीवेश्वरद्वित्वसमानाधिकरणत्वादिति वाच्यम् । स्वानुयोगिवृत्तिजीववेश्वरद्वित्वसमानाधिकरणप्रतियोगिताकभेदत्वस्य विवक्षितत्वात् । मिथो जीवभेदस्य च स्वानुयोगिवृत्ति यज्जीवेश्वरद्वित्वं तत्समानाधिकरणप्रतियोगिताकत्वाभावेनासङ्ग्रहात् । एतेन जडेश्वरभेदत्वं जडजीवभेदत्वं च व्याख्यातं वेदितव्यम् । मिथो जीवभेदत्वादिकं च जीवप्रतियोगिकजीवानुयोगिकभेदत्वादिरूपम् । जीवत्वं चात्र भगवत्प्रतिबिम्बत्वमेवेति सङ्क्षेपः ।

ಆದರಿಂದ ಜಡ–ಜೀವ–ಈಶ್ವರನಿಗೆ ಪರಸ್ಪರವಾಗಿ ಸ್ವಾಭಾವಿಕವೇ ಆದ ಪಂಚವಿಧ ಭೇದವಿದೆ. ಶ್ರುತಿ ಹಾಗೇ ಹೇಳುತ್ತದೆ—

ಜೀವೇಶ್ವರ ಭಿದಾ ಚೈವ ಜಡೇಶ್ವರಭಿದಾ ತಥಾ ।
ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ।
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದ ಪಂಚಕಃ ।
ಸೋಽಯಂ ಸತ್ಯೋ ಹ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ।
ನಚ ನಾಶಂ ಪ್ರಯಾತ್ಯೇಷ ನಚಾಸೌ ಭ್ರಾಂತಿಕಲ್ಪಿತಃ ।
ಕಲ್ಪಿತಶ್ಚೇನ್ನಿವರ್ತೇತ ನಚಾಸೌ ವಿನಿವರ್ತತೇ ।

ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಂ । ಇತ್ಯಾದಿ ॥

ಇಲ್ಲಿ ಜೀವೇಶ್ವರ ಭೇದತ್ವವೆಂದರೆ ಜೀವ ಈಶ್ವರ ಉಭಯ ಪ್ರತಿಯೋಗಿಕ ಭೇದತ್ವವಲ್ಲ, ಪರಸ್ಪರ ಭೇದವು ಉಭಯ ಪ್ರತಿಯೋಗಿಕವಾಗದುದರಿಂದ ಅದರ ಸಂಗ್ರಹವಾಗಲಾರದು. ಅದರಿಂದಲೆ ಉಭಯ ಅನುಯೋಗಿಕ ಭೇದತ್ವವೆಂದೂ ಹೇಳುವಂತಿಲ್ಲ, ಒಂದು ಭೇದ ಉಭಯಾನುಯೋಗಿಕವಾಗದು. ಜೀವೇಶ್ವರರಲ್ಲಿ ಒಬ್ಬನ ಭೇದ ಅಥವಾ ಒಬ್ಬನಲ್ಲಿರುವ ಭೇದ ಎಂದೂ ಹೇಳಲಾಗದು. ಜಡೇಶ್ವರ ಭೇದ ಮುಂತಾದುವನ್ನು ಪ್ರತ್ಯೇಕ ಹೇಳುವುದು ವ್ಯರ್ಥವಾದೀತು. ಜೀವೇಶ್ವರಾನ್ಯತರನು ಪ್ರತಿಯೋಗಿಯೂ ಅನುಯೋಗಿಯೂ ಆಗಿರುವಂಥ ಭೇದವೆಂದರೆ ಪರಸ್ಪರ ಜೀವಭೇದವನ್ನು ಪ್ರತ್ಯೇಕ ಹೇಳಿದ್ದೂ ಕೂಡಲಾರದು. ಅದರಿಂದ, ಜೀವೇಶ್ವರರ ದ್ವಿತ್ವಕ್ಕೆ ಸಮಾನಾಧಿಕರಣವಾದ ಪ್ರತಿಯೋಗಿತಾ ಮತ್ತು ಅನುಯೋಗಿತಾಗಳಿಗೆ ನಿರೂಪಕವಾದ ಭೇದ ಎಂದರ್ಥ. ಜೀವ ಈಶ್ವರರಲ್ಲಿರುವ ಪ್ರತಿಯೋಗಿತ್ವ ಅನುಯೋಗಿತ್ವಗಳು ಜೀವೇಶ್ವರದ್ವಿತ್ವಕ್ಕೆ ಸಮಾನಾಧಿಕರಣವಾದ್ದರಿಂದ ಜೀವೇಶ್ವರ ಭೇದವೆಲ್ಲವೂ ಒಟ್ಟಿಗೆ ಸಂಗ್ರಹ ವಾಗುತ್ತದೆ. ಜಡ ಈಶ್ವರರಲ್ಲಿರುವ ಪ್ರತಿಯೋಗಿತ್ವ ಅನುಯೋಗಿತ್ವಗಳು ಜೀವೇಶ್ವರದ್ವಿತ್ವಸಮಾನಾಧಿ ಕರಣವಾಗದಿರುವುದರಿಂದ ಜಡೇಶ್ವರಭೇದ ಇದರಲ್ಲಿ ಸೇರುವುದಿಲ್ಲ.

ಆದರೆ ಹೀಗೆ ಹೇಳಿದರೆ ಪರಸ್ಪರ ಜೀವಭೇದವೂ ಸಂಗ್ರಹವಾಗುವ ಪ್ರಸಂಗವಿದೆ. ಏಕೆಂದರೆ ಅದರ ಪ್ರತಿಯೋಗಿತ್ವಾನುಯೋಗಿತ್ವಗಳು ಕೂಡ ಪ್ರತ್ಯೇಕವಾಗಿ ಜೀವೇಶ್ವರ ದ್ವಿತ್ವ ಸಮಾನಾಧಿಕರಣವೇ ಆಗಿವೆ ಎಂದು ಸಮಸ್ಯೆ ಬರುತ್ತದೆ. ಅದಕ್ಕೆ ಸ್ವಾನುಯೋಗಿ ವೃತ್ತಿಯಾದ ಜೀವೇಶ್ವರದ್ವಿತ್ವಕ್ಕೇ ಯಾವ ಪ್ರತಿಯೋಗಿತ್ವವು ಸಮಾನಾಧಿಕರಣವಾಗುವುದೋ ಆ ಪ್ರತಿಯೋಗಿತಾನಿರೂಪಕ ಭೇದವೆ ಜೀವೇಶ್ವರಭೇದ ಎಂದು ಹೇಳಬೇಕು. ಜೀವಜೀವಭೇದವಿಟ್ಟುಕೊಂಡರೆ ಸ್ವಾನುಯೋಗಿಜೀವ ವೃತ್ತಿ ಜೀವೇಶ್ವರದ್ವಿತ್ವವು ಪ್ರತಿಯೋಗಿ ಜೀವನಲ್ಲಿರುವುದಿಲ್ಲ. ಹೀಗಾಗಿ ಈ ಭೇದವು ಅನುಯೋಗಿವೃತ್ತಿ ಜೀವೇಶ್ವರದ್ವಿತ್ವಕ್ಕೆ ಸಮಾನಾಧಿಕರಣವಾದ ಪ್ರತಿಯೋಗಿತಾಕವಾಗುವುದಿಲ್ಲ. ಆದರಿಂದ ಅದು ಸಂಗ್ರಹವಾಗುವುದಿಲ್ಲ. ಜೀವೇಶ್ವರ ಭೇದವಿಟ್ಟುಕೊಂಡರೆ ಜೀವಪ್ರತಿಯೋಗಿಕಭೇದಕ್ಕೆ ಅನುಯೋಗಿ ಯಾದ ಈಶ್ವರನಲ್ಲಿರುವ ದ್ವಿತ್ವವೇ ಪ್ರತಿಯೋಗಿಯಾದ ಜೀವನಲ್ಲಿರುವುದರಿಂದ ಅನುಯೋಗಿವೃತ್ತಿ ದ್ವಿತ್ವ ಸಮಾನಾಧಿಕರಣ ಪ್ರತಿಯೋಗಿತಾಕವಾಗುತ್ತದೆ.

ಇದೇರೀತಿ ಜಡೇಶ್ವರಭೇದತ್ವ ಮತ್ತು ಜಡಜೀವಭೇದತ್ವಗಳನ್ನು ನಿರ್ವಚನ ಮಾಡಬೇಕು. ಜೀವ ಜೀವ ಭೇದವೆಂದರೆ ಜೀವಪ್ರತಿಯೋಗಿಕ ಜೀವಾನುಯೋಗಿಕ ಭೇದ. ಜಡ ಜಡ ಭೇದವೆಂದರೆ ಜಡಪ್ರತಿಯೋಗಿಕ ಜಡಾನುಯೋಗಿಕ ಭೇದ. ಜೀವತ್ವವೆಂದರೆ ಈಶ್ವರ ಪ್ರತಿಬಿಂಬತ್ವವೆ.

**नन्वेवमीश्वरस्य परब्रह्मत्वानुपपत्तिः । तस्य त्रिविधपरिच्छेद-राहित्यरूपत्वात् । देशकालपरिच्छेदातिरिक्तवस्तुपरिच्छेदस्य तद्भेद-**

**रूपत्वादिति चेन्मैवम् अप्रामाणिकं भाषिष्ठाः । 'अथ कस्मादुच्यते ब्रह्मेति बृहन्तो ह्यस्मिन् गुणा' इत्यादिनिगमनिरुक्तनिरवधिकनिःशेषनिर्दोष-कल्याणगुणपूर्णत्वस्यैव परब्रह्मत्वरूपत्वात् । तस्मात् जडजीवेश्वराणां परस्परभेदप्रपञ्चस्य पारमार्थिकत्वात् परमेश्वरपरमप्रसादसिद्धये सकल-जगज्जन्मादिकारणत्वाद्यनन्तकल्याणगुणाकरतया सर्वोत्तमत्वेन सर्वदैव समुपास्यः श्रीनारायण एवेति सिद्धम् ।**

'ಈಶ್ವರನಿಗೆ ಪರಬ್ರಹ್ಮತ್ವ ಹೇಗೆ? ಅದು ತ್ರಿವಿಧ ಪರಿಚ್ಛೇದರಾಹಿತ್ಯರೂಪವಾದುದು. ದೇಶಪರಿಚ್ಛೇದ ಕಾಲಪರಿಚ್ಛೇದ ವಸ್ತುಪರಿಚ್ಛೇದಗಳಿರಬಾರದು. ಆದರೆ ವಸ್ತು ಪರಿಚ್ಛೇದವೆಂದರೆ ಭೇದ. ಭೇದರಾಹಿತ್ಯ ಈಶ್ವರನಲ್ಲಿಲ್ಲವಾದ್ದರಿಂದ ಪರಬ್ರಹ್ಮತ್ವ ಬರಲಾರದು' ಎಂದು ಅಭೇದವಾದಿ ಹೇಳುತ್ತಾನೆ. ಆದರೆ ಅದು ಅಪ್ರಮಾಣಕ. ಪ್ರಮಾಣಭೂತವಾದ ಶ್ರುತಿಯು ಗುಣಪರಿಚ್ಛೇದರಾಹಿತ್ಯವನ್ನು ಪರಬ್ರಹ್ಮತ್ವವೆಂದು ಹೇಳುತ್ತದೆ. ವಸ್ತುಪರಿಚ್ಛೇದರಾಹಿತ್ಯವನ್ನಲ್ಲ. 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ? ಬೃಹಂತೋ ಹ್ಯಸ್ಮಿನ್ ಗುಣಾಃ' 'ಯಾವ ಕಾರಣದಿಂದ ಈಶ್ವರನು ಬ್ರಹ್ಮನೆನಿಸಿದ್ದಾನೆ? ಅವನಲ್ಲಿ ಪೂರ್ಣಗುಣಗಳಿರುವುದರಿಂದ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ನಿರವಧಿಕ ನಿಃಶೇಷ ನಿರ್ದೋಷ ಕಲ್ಯಾಣ ಗುಣಪೂರ್ಣತ್ವವೇ ಪರಬ್ರಹ್ಮತ್ವ.

ಆದರಿಂದ ಜಡಜೀವ ಈಶ್ವರರಿಗೆ ಪರಸ್ಪರ ಭೇದ ಪ್ರಪಂಚವು ಪಾರಮಾರ್ಥಿಕವಾದ್ದರಿಂದ, ಪರಮೇಶ್ವರ ಪರಮ ಪ್ರಸಾದ ಸಿದ್ಧಿಗಾಗಿ, ಸಕಲ ಜಗಜ್ಜನ್ಮಾದಿಕಾರಣತ್ವಾದಿ ಅನಂತಕಲ್ಯಾಣ ಗುಣಾಕರನಾದ್ದರಿಂದ ಸರ್ವೋತ್ತಮನೆಂದು ಸರ್ವದಾ ಸಮುಪಾಸ್ಯನು ಶ್ರೀನಾರಾಯಣನೇ ಎಂಬುದು ಸಿದ್ಧವಾಯಿತು.

**ಭಾಸ್ಕರಾದ್ವೈತವು ಅನುಪಪನ್ನ**

**यच्चेदमुच्यते विमतो घटः पटप्रतियोगिकतादात्म्याधिकरणम् अभिधेयत्वात् प्रमेयत्वाद्वा पटवत् । पटो वा घटान्न वस्तुतो भिद्यते द्रव्यत्वात् पृथिवीत्वाद्वा घटवत् । तत्रेदं वक्तव्यम् । मुद्गरप्रहारादिना किं घटो नश्यति उत नेति । नेति चेत् अनित्यत्वप्रतिपादकश्रुतिविरोधः । अपसिद्धान्तश्च । घटार्थं क्रियमाणव्यापारवैयर्थ्यं च स्यात् ।**

ಘಟವು ಪಟಪ್ರತಿಯೋಗಿಕ ತಾತ್ವಿಕತಾದಾತ್ಮ್ಯಾಧಿಕರಣ, ಅಭಿಧೇಯವಾದ್ದರಿಂದ ಅಥವಾ ಪ್ರಮೇಯವಾದ್ದರಿಂದ, ಪಟದಂತೆ. ಪಟವು ಘಟದಿಂದ ವಸ್ತುತಃ ಭಿನ್ನವಲ್ಲ ದ್ರವ್ಯವಾದ್ದರಿಂದ ಅಥವಾ ಪೃಥಿವಿಯಾದ್ದರಿಂದ, ಘಟದಂತೆ ಎಂದು ಭಾಸ್ಕರಾದ್ವೈತಿ ಹೇಳುವ ಜಡ–ಜಡಾಭೇದಸಾಧಕಾನುಮಾನಗಳೆರಡೂ ಸರಿಯಲ್ಲ. ಘಟವನ್ನು ದೊಣ್ಣೆಯಿಂದ ಹೊಡೆದಾಗ ಅದು ನಾಶವಾಗುವುದೆ, ಇಲ್ಲವೆ? ನಾಶವಾಗುವುದಿಲ್ಲ ವೆಂದರೆ 'ಅತೋಽನ್ಯದಾರ್ತಂ' ಎಂದು ಮುಂತಾಗಿ ನಾಶಪ್ರತಿಪಾದಕವಾದ ಶ್ರುತಿಗಳ ವಿರೋಧ, ಅಪಸಿದ್ಧಾಂತ ದೋಷವೂ ಬರುತ್ತದೆ. ಘಟವು ಬ್ರಹ್ಮಸ್ವರೂಪದಿಂದ ನಿತ್ಯವೇ ಆಗಿರುವಾಗ ಘಟದ ಉತ್ಪತ್ತಿಗಾಗಿ ಪ್ರಯತ್ನ ಮಾಡುವುದು ವ್ಯರ್ಥವೇ ಆದೀತು.

**आद्ये तदैव गगनाविद्यादिप्रपञ्चः नश्यत्युत नेति । आद्ये क्रियाभावः प्रसज्येत । गगनाविद्ययोर्नाशायोगाच्च । महाप्रलयमोक्षौ च स्याताम् ।**

ಘಟವು ನಾಶವಾಗುತ್ತದೆ ಎಂದರೆ, ಆಗಲೇ ಗಗನ ಅವಿದ್ಯಾದಿ ಸಮಸ್ತ ಪ್ರಪಂಚವೂ ನಾಶವಾಗುವುದೇ? ಇಲ್ಲವೆ? ನಾಶವಾಗುತ್ತದೆ ಎಂದರೆ ಘಟಾದಿಗಳಿಂದ ಜಲಾಹರಣಾದಿ ಅರ್ಥಕ್ರಿಯಾ ಆಗದಿರುವ ಪ್ರಸಂಗ. ಗಗನ ಮತ್ತು ಅವಿದ್ಯೆಗಳಿಗೆ ನಾಶವೂ ಆಗಲಾರದು. ಗಗನಾದಿಗಳು ನಿರವಯವ ಪದಾರ್ಥಗಳು. ಉಪಾದಾನವಿಲ್ಲದವುಗಳು. ಉತ್ಪನ್ನವಾದ ಸಾವಯವ ಪದಾರ್ಥಗಳು ತಮ್ಮ ಹಿಂದಿನ ಉಪಾದಾನಾವಸ್ಥೆಗೆ ಬರುವುದೇ ಅವುಗಳಿಗೆ ನಾಶ. ನಿರವಯವವಾದ ಗಗನಾದಿಗಳಿಗೆ ಇಂಥ ನಾಶ ಬರುವುದು ಅಸಂಭವ.

ಎಲ್ಲ ಪದಾರ್ಥಗಳಿಗೂ ಘಟಾಭೇದವಿರುವುದರಿಂದ ಘಟನಾಶವಾದಾಗಲೆ ಎಲ್ಲ ಪದಾರ್ಥಗಳ ನಾಶವಾಗಬೇಕಾಗುವುದರಿಂದ ಮಹಾಪ್ರಳಯ ಬರಬೇಕಾದೀತು. ಅವಿದ್ಯಾ ನಾಶವು ಆಗಬೇಕಾಗುವುದರಿಂದ ಮೋಕ್ಷವೂ ಆಗಬೇಕಾದೀತು.

**द्वितीये कथं घटस्य पटादिना पारमार्थिकाभेदः । न हि नष्टे रजतेऽनुवृत्तायाः शुक्तेः पारमार्थिकाभेदः । दूरस्थवनस्पत्योरभेदग्राहि च प्रत्यक्षं तत्त्वावेदकप्रमाणं स्यात् । वस्तुतस्तयोस्तादात्म्यादिति प्रतिकूलतर्का ऊह्याः ।**

ಘಟವು ನಾಶವಾದರೂ ಗಗನಾದಿ ಪ್ರಪಂಚವು ನಾಶವಾಗುವುದಿಲ್ಲ ಎಂದರೆ ಅದಕ್ಕೆ ವಾಸ್ತವವಾಗಿ ಘಟಾಭೇದ ಹೇಗೆ ಕೂಡುತ್ತದೆ? ರಜತ ನಾಶವಾದರೂ ಉಳಿಯುವ ಶುಕ್ತಿಗೆ ವಾಸ್ತವವಾಗಿ ರಜತಾಭೇದವಿಲ್ಲವಷ್ಟೆ?

ಜಡಗಳಿಗೆ ಅಭೇದವೇ ವಾಸ್ತವವೆನ್ನುವುದಾದರೆ, ದೂರದಲ್ಲಿರುವ ಎರಡು ಮರಗಳನ್ನು ಒಂದೆಂದು ತಿಳಿಸುವ ಪ್ರತ್ಯಕ್ಷವು ತತ್ತ್ವಾವೇದಕ ಪ್ರಮಾಣವೆನಿಸೀತು. ವಸ್ತುತಃ ಅವುಗಳಿಗೆ ಅಭೇದವು ತಾತ್ತ್ವಿಕವಾದ್ದರಿಂದ ಹಾಗೇ ನೀನು ಹೇಳಬೇಕಾಗುತ್ತದೆ ಎಂದು ಮುಂತಾಗಿ ಪ್ರತಿಕೂಲತರ್ಕಗಳನ್ನು ಊಹಿಸಿಕೊಳ್ಳಬೇಕು.

**अभेदसाधकानुमानमात्रस्य प्रत्यक्षानुमानागमबाधकतर्कप-राहतिसोपाधिकत्वाभाससमानयोगक्षेमत्वादीनि साधारणदूष-णानीति ।**

**अद्वैतश्रुतयस्तु भगवत्पादैरेवान्यत्रान्यथा व्याख्याता इति समासः ॥**

ಅಭೇದಸಾಧಕವಾದ ಎಲ್ಲ ಅನುಮಾನಗಳಿಗೂ ಹೀಗೇ ಪ್ರತ್ಯಕ್ಷ ಅನುಮಾನ ಆಗಮ ಗಳ ಬಾಧವಿದೆ. ಪ್ರತಿಕೂಲತರ್ಕಪರಾಹತಿ ಇದೆ. ಸೋಪಾಧಿಕತ್ವ ಆಭಾಸಸಾಮ್ಯಾದಿ ಸಕಲ ದೋಷಗಳು ಸಾಧಾರಣವಾಗಿ ಎಲ್ಲ ಅಭೇದಾನುಮಾನಗಳಿಗೂ ಬರುತ್ತವೆ. ಅದ್ವೈತ ಶ್ರುತಿಗಳು ಅದ್ವೈತ ಪರವಲ್ಲ, ದ್ವೈತಪರವೆಂದು ಭಗವತ್ಪಾದರೇ ಬೇರೆಕಡೆ ಬೇರೆ ರೀತಿಯಿಂದ ವ್ಯಾಖ್ಯಾನಿಸಿದ್ದಾರೆ.

ಅದರಿಂದ ಸ್ವಭಾವತಃ ಸ್ವತಂತ್ರತ್ವಾದಿ ಸಕಲಗುಣಗಳಿಂದ ಸಕಲ ಪ್ರಪಂಚ ವಿಲಕ್ಷಣನು ಸರ್ವೋತ್ತಮನು ವಿಷ್ಣು ಎಂಬುದು ಸಿದ್ಧವಾಯಿತು.

**रमानाथाय हरये पूर्णानन्दशरीरिणे ।**
**निर्दोषगुणपूर्णाय सर्वयज्ञभुजे नमः ॥**

ರಮಾನಾಥನಾದ ಶ್ರೀಹರಿ ಪೂರ್ಣಾನಂದ ಶರೀರಿ, ನಿರ್ದೋಷಗುಣ ಪೂರ್ಣ.
ಸರ್ವಯಜ್ಞಭೋಕ್ತನಾದ ಅವನಿಗೆ ನಮಸ್ಕಾರ. ಈ ವಾಗ್ಯಜ್ಞವನ್ನು ಸ್ವೀಕರಿಸಿ
ಅವನು ಪ್ರಸನ್ನನಾಗಲಿ.

**इति श्रीमत्पदवाक्यप्रमाणपारावारपारङ्गतश्रीमद्ब्रह्मण्यतीर्थ पूज्य पादशिष्येण व्यासयतिना कृतं भेदोज्जीवनं समाप्तम् ।।**

ಪದವಾಕ್ಯ ಪ್ರಮಾಣ ಪಾರಾವಾರ ಪಾರಂಗತ ಶ್ರೀಬ್ರಹ್ಮಣ್ಯತೀರ್ಥ
ಪೂಜ್ಯಪಾದರ ಶಿಷ್ಯರಾದ ಶ್ರೀವ್ಯಾಸಯತಿಗಳಿಂದ ವಿರಚಿತವಾದ
ಈ ಭೇದೋಜ್ಜೀವನವು ಸಮಾಪ್ತವಾಯಿತು.

**दुरन्तदुर्मतध्वान्तध्वंसकृन्मध्वभास्करः ।**
**बळित्थेत्यादिवेदोक्तगुणः प्रीतोऽस्तु मे सदा ।।**

ದುರಂತ ದುರ್ಮತವೆಂಬ ಧ್ವಾಂತಕ್ಕೆ ಧ್ವಂಸಕರಾದ ಮಧ್ವಭಾಸ್ಕರರು
ಬಳಿತ್ಥೇತ್ಯಾದಿ ವೇದೋಕ್ತಗುಣಶಾಲಿಗಳು, ನಮ್ಮಲ್ಲಿ ಸದಾ ಸುಪ್ರೀತರಾಗಿರಲಿ.

**इति श्रीमद्व्यासराजतीर्थश्रीपादकृतभेदोज्जीवन व्याख्यानं श्रीमहामहोपाध्याय काशी तिरुमलाचार्य कृतं समाप्तम् ।।**

ಶ್ರೀಮದ್ವ್ಯಾಸತೀರ್ಥಶ್ರೀಪಾದಕೃತ ಭೇದೋಜ್ಜೀವನದ ವ್ಯಾಖ್ಯಾನವು
ಶ್ರೀ ಮಹಾಮಹೋಪಾಧ್ಯಾಯ ಕಾಶೀ ತಿರುಮಲಾಚಾರ್ಯ
ಕೃತವಾದುದು ಸಮಾಪ್ತವಾಯಿತು.

॥ ಶ್ರೀಮಲ್ಲಕ್ಷ್ಮೀ ನೃಸಿಂಹಾತ್ಮಕ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಮದನಂತಃ ಪ್ರೀಯತಾಂ ॥

# ಅನುಬಂಧ–ಟಿಪ್ಪಣಿ ವಿಶೇಷಾಂಶಗಳು

## ೧. ಜೀವೇಶ್ವರ ಭೇದವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲ

'ವಿಭಿನ್ನೋ ವಿಶ್ವತೋ ವಿಷ್ಣುಃ' ಎಂದು ಪ್ರಸಕ್ತವಾಗಿರುವುದು ಜಗತ್‌ಪ್ರತಿಯೋಗಿಕ ಈಶ್ವರಭೇದ. ಈಶ್ವರ ಪ್ರತಿಯೋಗಿಕ ಭೇದ ಅಪ್ರಸಕ್ತ. 'ಈಶ್ವರ ಅಪ್ರತ್ಯಕ್ಷನಾದ್ದರಿಂದ ಈಶ್ವರ ಪ್ರತಿಯೋಗಿಕ ಭೇದ ಪ್ರತ್ಯಕ್ಷವಲ್ಲ' ಎಂದು ಏಕೆ ನಿರಾಕರಿಸಬೇಕು?

'ಇಮೌ ಸಂಯುಕ್ತೌ' ಎಂಬಂತೆ 'ಇಮೌ ಭಿನ್ನೌ' ಎಂದೂ ವ್ಯವಹಾರವಿರುವುದರಿಂದ ಒಂದೇ ಭೇದಕ್ಕೆ ಎರಡೂ ಪ್ರತಿಯೋಗಿ ಎರಡೂ ಅನುಯೋಗಿಯಾಗಬಹುದೆಂದು ಒಂದು ಮತವಿದೆ. ಅದರಿಂದ ಪ್ರಸಕ್ತವಾದ ಜಗತ್‌ಪ್ರತಿಯೋಗಿಕ ಭೇದಕ್ಕೆ ಈಶ್ವರನೂ ಪ್ರತಿಯೋಗಿ. ಜಗದ್ಧರ್ಮಿಕ ಭೇದಕ್ಕೆ ಈಶ್ವರನೂ ಧರ್ಮಿ. ಇಲ್ಲಿ ಈಶ್ವರನು ಪ್ರತ್ಯಕ್ಷನಲ್ಲ. ಜಗತ್ತು ಪ್ರತ್ಯಕ್ಷವಾದರೂ ಭೇದಪ್ರತ್ಯಕ್ಷವಾಗುವುದಿಲ್ಲ. ಘಟ ಗಗನ ಸಂಯೋಗದಂತೆ. ಸಂಬಂಧಪ್ರತ್ಯಕ್ಷಕ್ಕೆ ಯಾವದಾಶ್ರಯಪ್ರತ್ಯಕ್ಷ ಬೇಕು. ಹಾಗೇ ಜೀವೇಶ್ವರಭೇದ ಪ್ರತ್ಯಕ್ಷಕ್ಕೂ ಯಾವದಾಶ್ರಯ ಪ್ರತ್ಯಕ್ಷ ಬೇಕು.

'ಸ್ತಂಭವು ಪಿಶಾಚಿಯಲ್ಲ' ಎಂಬಲ್ಲಿ ಪಿಶಾಚಿ ಪ್ರತ್ಯಕ್ಷವಿಲ್ಲದಿದ್ದರೂ ಭೇದಪ್ರತ್ಯಕ್ಷ ಹೇಗೆ? ಎಂದರೆ, ಇದು ಪ್ರತ್ಯಕ್ಷವಲ್ಲ, ಶಾಬ್ದ ಅಥವಾ ಅನುಮಾನ ಎನ್ನುತ್ತೇವೆ.

ಭೇದವು ಪ್ರತಿಯೋಗಿಯಲ್ಲಿ ಇಲ್ಲ ಎನ್ನುವ ಸರ್ವಸಮ್ಮತ ಪಕ್ಷದಲ್ಲಿಯೂ ಭಾಸ್ಕರಮತದಲ್ಲಿ ಕಾರ್ಯಕಾರಣಗಳಿಗೆ ಭೇದ ಅಭೇದಗಳು ವ್ಯವಸ್ಥಿತವಾಗಿವೆ. ಘಟದಲ್ಲಿ ಮೃತ್ತಿನಿಂದ ಅತ್ಯಂತಭೇದವೆ. ಮೃತ್ತಿನಲ್ಲಿ ಘಟದಿಂದ ಅತ್ಯಂತ ಅಭೇದವೆ. ಹಾಗೆ ಈಶ್ವರನಲ್ಲಿ ಜಗತ್ತಿನಿಂದ ಅತ್ಯಂತಾಭೇದವೆ. ಜಗತ್ತಿನಲ್ಲಿ ಈಶ್ವರನಿಂದ ಅತ್ಯಂತ ಭೇದವೆ. ಇದನ್ನು ನಿರಾಕರಿಸಲು 'ಭಿನ್ನಃ' ಎನ್ನದೆ 'ವಿಭಿನ್ನಃ' ಎಂದಿದ್ದಾರೆ. 'ಸ್ವಾತ್ಯಂತಭಿನ್ನೇನ ಜಗತಾಽತ್ಯಂತಭಿನ್ನತ್ವಂ ವಿಭಿನ್ನತ್ವಂ' ಇದು ಮಂಗಳಾಚರಣೆಯಲ್ಲಿ ಪ್ರಸಕ್ತವಾಗಿದೆ. 'ಕಥಂ ವಿಶ್ವ ಭಿನ್ನತ್ವಂ?' ಎಂಬುದಕ್ಕೂ ಇದೇ ಅರ್ಥ. ಅದರಿಂದ ಈಶ್ವರಪ್ರತಿಯೋಗಿಕ ಭೇದ ಪ್ರಸಕ್ತವಾಗಿದೆ ಎಂದು ಅದರ ನಿರಾಸ ಮಾಡುತ್ತಾನೆ ಪೂರ್ವಪಕ್ಷ.

'ಸ್ತಂಭವು ಪಿಶಾಚಿಯಲ್ಲ' ಎಂಬುದು ಪ್ರತ್ಯಕ್ಷವಲ್ಲ, ಪ್ರತ್ಯಕ್ಷವಾಗಬೇಕಾದರೆ ವಿರುದ್ಧ ಧರ್ಮ ಕಾಣಬೇಕು. ಪ್ರತಿಯೋಗಿಯೇ ಕಾಣದಿದ್ದಾಗ ಅದರಲ್ಲಿ ವಿರುದ್ಧ ಧರ್ಮ ಕಾಣಲಾರದು. ಅಥವಾ ಭೇದ ಪ್ರತೀತಿಗೆ ಪ್ರತಿಯೋಗಿತಾವಚ್ಛೇದಕ ವಿಶಿಷ್ಟ ಪ್ರತಿಯೋಗಿ ನಿರ್ಣಯವಿದ್ದರೆ ಸಾಕು, ಪ್ರತ್ಯಕ್ಷಬೇಕಾಗಿಲ್ಲ. ಪಿಶಾಚಿಯ ವಿಷಯದಲ್ಲಿ ಲೋಕವ್ಯವಹಾರದಿಂದಲೇ ಅಂಥ ನಿರ್ಣಯವಿದೆ, ಭೇದ ಪ್ರತ್ಯಕ್ಷ ಬರುತ್ತದೆ ಎಂದು ಒಪ್ಪಬಹುದು. ಆದರೆ ಈಶ್ವರ ವಿಷಯದಲ್ಲಿ ಪ್ರತ್ಯಕ್ಷವಿಲ್ಲ, ಅನುಮಾನ ಸಾಧಕವಲ್ಲ, ಆಗಮವೂ ಚಿನ್ಮಾತ್ರವಿಷಯಕ, ಸ್ವತಂತ್ರ ಈಶ್ವರ ವಿಷಯಕವಲ್ಲ. ಅದರಿಂದ ಈಶ್ವರಭೇದಪ್ರತ್ಯಕ್ಷವನ್ನು ಒಪ್ಪಲಾಗದು.

**೨. 'ಜಾತಿತ್ವ'ವೆಂದರೇನು?**

'ಆತ್ಮತ್ವವು ನಾನಾವ್ಯಕ್ತಿ ನಿಷ್ಠವಾಗಿದೆ. ಅಂದರೆ ಸ್ವಪ್ರತಿಯೋಗಿವೃತ್ತಿತ್ವ ಸ್ವಾನುಯೋಗಿವೃತ್ತಿತ್ವೋಭಯಸಂಬಂಧೇನ ಭೇದವಿಶಿಷ್ಟವಾಗಿದೆ. ಜಾತಿತ್ವವಿರುವುದರಿಂದ' ಎಂಬ ಅನುಮಾನದಲ್ಲಿ 'ಜಾತಿತ್ವ'ವೆಂದರೇನು? 'ಜಾತಿ' ಎಂದು ವ್ಯವಹೃತವಾಗುವುದೆಂ'ದರೆ 'ಅಸದುತ್ತರಂ ಜಾತಿಃ' ಎಂಬಂತೆ ಜಾತ್ಯುತ್ತರವನ್ನೂ ಕೂಡ 'ಜಾತಿ' ಎಂದು ವ್ಯವಹರಿಸುತ್ತಾರೆ. ಇಂಥ ಜಾತಿತ್ವ ಹೇತುವಾಗಲಾರದು. 'ಮುಖ್ಯವಾಗಿ ಜಾತಿ ಎನಿಸುವುದೇ ಜಾತಿತ್ವ' ಎಂದರೆ, ಕೋಶಾದಿ ಪ್ರಮಾಣಗಳಿಲ್ಲದಿರುವುದರಿಂದ ಮುಖ್ಯ ಅಮುಖ್ಯ ನಿರ್ಣಯ ಶಕ್ಯವಿಲ್ಲ ಎಂಬ ಸಮಸ್ಯೆ ಬರುತ್ತದೆ. ಅದಕ್ಕೆ ಪರಿಹಾರ— 'ಅನವಚ್ಛಿನ್ನ ಸಮವಾಯಸಂಬಂಧಾವಚ್ಛಿನ್ನ ಪ್ರಕಾರತಾಶಾಲಿತ್ವ'ವೇ 'ಜಾತಿತ್ವ' ಎನ್ನಬೇಕು. ಜಾತಿಯು ವ್ಯಕ್ತಿಯಲ್ಲಿ ಸಮವಾಯ ಸಂಬಂಧದಿಂದ ಸ್ವರೂಪೇಣ ಪ್ರಕಾರವಾಗಿ ಕಾಣುವುದರಿಂದ ಅದೇ ಜಾತಿತ್ವ. ಅಂತ್ಯ ವಿಶೇಷವು ತನ್ನಲ್ಲಿ ತಾನು ತಾದಾತ್ಮ್ಯೇನ ಅನವಚ್ಛಿನ್ನ ಪ್ರಕಾರತಾಶಾಲಿಯಾದರೂ ಸಮವಾಯೇನ ಪ್ರಕಾರತಾಶಾಲಿಯಲ್ಲ. ಘಟರೂಪದಲ್ಲಿರುವ ತದ್‌ವ್ಯಕ್ತಿತ್ವ ಅಖಂಡವಾಗಿದ್ದು ಸ್ವರೂಪಸಂಬಂಧದಿಂದ ಸ್ವರೂಪೇಣ ಕಾಣುತ್ತದೆ ಎಂಬ ಪಕ್ಷದಲ್ಲಿ ವ್ಯಭಿಚಾರವಾರಣೆಗಾಗಿ 'ಸಮವಾಯಸಂಬಂಧಾವಚ್ಛಿನ್ನ' ಎಂದು ಪ್ರಕಾರತಾಕ್ಕೆ ವಿಶೇಷಣ ನಿವಿಷ್ಟವಾಗಿದೆ.

**೩. ಜಾತಿಯ ನಾನಾ ವ್ಯಕ್ತಿ ನಿಷ್ಠತ್ವವೆಂದರೇನು?**

ಸ್ವವ್ಯಾಪಕತಾ ಸಂಬಂಧೇನ ಯತ್‌ಕಿಂಚಿದ್ ದ್ವಿತ್ವ ವಿಶಿಷ್ಟತ್ವ. ವಸ್ತುತಃ ಯಾವ ಸುಖವೂ ಒಂದೇ, ಇಬ್ಬರು ಆತ್ಮರಲ್ಲಿಲ್ಲ. ದ್ವಿತ್ವ ವ್ಯಾಪಕವಾಗುವುದಿಲ್ಲ. ಆದರೂ ಜಗತ್ತಿನಲ್ಲಿ ನೀಲಪೀತಾದದಿ ಗುಣವೆಲ್ಲವೂ ಒಂದೊಂದೇ ಸಾಮಗ್ರೀವಶದಿಂದ ಆಯಾ ಘಟಾದಿ ವ್ಯಕ್ತಿಗಳಲ್ಲಿ ಸಂಬಂಧಿಸುತ್ತವೆ, ವಿಯೋಗ ಹೊಂದುತ್ತವೆ. ಹಾಗೇ ಸುಖವೂ ಎಲ್ಲ ವ್ಯಕ್ತಿಗಳಲ್ಲಿ ಏಕವೇ ಎಂಬ ಮತಾನುಸಾರ ಸುಖವು ನಾನಾವ್ಯಕ್ತಿನಿಷ್ಠವಾಗುತ್ತದೆ, ವ್ಯಾಪಕತಾ ಸಂಬಂಧದಿಂದ ದ್ವಿತ್ವವಿಶಿಷ್ಟವಾಗುತ್ತದೆ. ಅಥವಾ 'ಯತ್ಕಿಂಚಿದ್ ದ್ವಿತ್ವ ವ್ಯಾಪಕತಾವಚ್ಛೇದಕ ಗುಣತ್ವ ನ್ಯೂನ ವೃತ್ತಿ ಜಾತಿ ಮತ್ತ್ವ'ವೇ ದ್ವಿತ್ವವಿಶಿಷ್ಟತ್ವ, ಗುಣತ್ವ ನ್ಯೂನವೃತ್ತಿ ಜಾತಿಯು ಸುಖತ್ವ. ಗುಣತ್ವವನ್ನೂ ಸತ್ತಾಜಾತಿಯನ್ನೂ ಇಟ್ಟುಕೊಂಡು ಸಿದ್ಧಸಾಧನತಾವಾರಣೆಗಾಗಿ ಗುಣತ್ವ ನ್ಯೂನವೃತ್ತಿ ಎಂದು ಜಾತಿಗೆ ವಿಶೇಷಣ.

'ಸುಖತ್ವವು ನಾನಾ ವ್ಯಕ್ತ್ಯಾಶ್ರಿತಾಶ್ರಿತ' ಎಂದರೆ 'ಸ್ವಸಮವಾಯಿ ಸಮವಾಯಿತ್ವ ಸಂಬಂಧೇನ ಯತ್‌ಕಿಂಚಿದ್ ದ್ವಿತ್ವ ವ್ಯಾಪಕವೆಂದರ್ಥ.

**೪. ಈಶ್ವರನು ಜೀವರನ್ನು ಪ್ರತ್ಯಕ್ಷಕಾಣಲು ಸಮರ್ಥ**

'ಈಶ್ವರ ಧರ್ಮಿಕ ಜೀವಪ್ರತಿಯೋಗಿಕ ಭೇದ ಈಶ್ವರನಿಗೆ ಪ್ರತ್ಯಕ್ಷ. ಏಕೆಂದರೆ ಈಶ್ವರನು ಜೀವರನ್ನು ಪ್ರತ್ಯಕ್ಷಕಾಣಲು ಸಮರ್ಥ' ಎಂದು ಸಮಾಧಾನ ಹೇಳುವುದು, ಇದು ಸಿದ್ಧಾಂತಕಥನ

ಸಂದರ್ಭವಾದ್ದರಿಂದ, ವಸ್ತುಸ್ಥಿತಿಗೆ ಅನುಸಾರವಾಗಿದೆ. ಹಿಂದೆ ಪೂರ್ವಪಕ್ಷಿಯು ಭೇದವನ್ನು ಸಂಯೋಗವಂತೆ ಪ್ರತಿಯೋಗ್ಯನುಯೋಗಿ ಉಭಯ ವೃತ್ತಿಯಾದ್ದರಿಂದ ಘಟಗಗನ ಸಂಯೋಗದಂತೆ ಜೀವೇಶ್ವರಭೇದವೂ ಯಾವದಾಶ್ರಯ ಪ್ರತ್ಯಕ್ಷವಿಲ್ಲದ್ದರಿಂದ ಅಪ್ರತ್ಯಕ್ಷ, ಜಗತ್ತು ಪ್ರತ್ಯಕ್ಷವಾದರೂ ಈಶ್ವರನು ಅಪ್ರತ್ಯಕ್ಷನಾದ್ದರಿಂದ ಈ ಸಮಸ್ಯೆ ಬರುತ್ತಿದೆ ಎಂದು ಆಕ್ಷೇಪಮಾಡಿದ್ದಾನೆ. ಆದರೆ ಭೇದವು ಪ್ರತಿಯೋಗ್ಯನುಯೋಗಿ ಉಭಯವೃತ್ತಿ ಎನ್ನುವುದು ಸಿದ್ಧಾಂತ ಸಮ್ಮತವಲ್ಲವಾದ್ದರಿಂದ ವಸ್ತುಸ್ಥಿತಿಗನುಸಾರ ಹೇಳುತ್ತಿದ್ದಾರೆ– ಜೀವೇಶ್ವರಭೇದ ಯಾರಿಗೂ ಪ್ರತ್ಯಕ್ಷವಲ್ಲದಿದ್ದರೆ ಪ್ರತ್ಯಕ್ಷಪ್ರಮಾಣವಿಲ್ಲ ಎನ್ನಬಹುದು. ಆದರೆ ಈಶ್ವರನಿಗೆ ಪ್ರತ್ಯಕ್ಷವಿದೆ. ಅದರಿಂದ ನಮಗೆ ಭೇದಸತ್ವ ನಿಶ್ಚಯ ಹೇಗೆ ಎಂದರೆ, ನಮಗೆ 'ಭೇದವು ಅವನಿಗೆ ಪ್ರತ್ಯಕ್ಷಸಿದ್ಧ'ವೆಂದು ನಿಶ್ಚಯವಿದ್ದರೆ ಸಾಕು. ಆ ಪ್ರತ್ಯಕ್ಷ ಬಲದಿಂದ ನಮಗೆ ಭೇದವು ಸಿದ್ಧವಾಗುತ್ತದೆ. ವಿದೇಶಗಳಲ್ಲಿರುವ ವಿಶೇಷವಸ್ತುಗಳ ಬಗ್ಗೆ ಅಲ್ಲಿಯವರಿಗೆ ಪ್ರತ್ಯಕ್ಷವಿದೆ ಎಂದು ಅವರ ಮಾತಿನಿಂದ ನಾವು ತಿಳಿದರೆ ನಮಗೆ ಆ ವಸ್ತುಗಳ ಬಗ್ಗೆ ನಿಶ್ಚಯ ಉಂಟಾಗುವುದು ಕಂಡಿದೆ. ಹಾಗೇ ಈಶ್ವರನ ವಚನಗಳಿಂದ ಅವನಿಗೆ ಭೇದ ಪ್ರತ್ಯಕ್ಷವಿರುವುದು ನಮಗೆ ತಿಳಿದುಬರುವುದರಿಂದ ನಮಗೆ ಭೇದಸತ್ವ ನಿಶ್ಚಯವಾಗುವುದು. ಯದ್ಯಪಿ ಈಶ್ವರನಿಗೆ ಇರುವ ಭೇದಪ್ರತ್ಯಕ್ಷ ನಮಗೆ ಅನುಮಾನವಾಗಿ ಭೇದ ಸಾಧಕ ಹೊರತು ಪ್ರತ್ಯಕ್ಷವಾಗಿ ಅಲ್ಲ, ನಿಜ. ಆದರೂ ವಾದದಲ್ಲಿ ಮಧ್ಯಸ್ಥನಿಗೆ ಲೋಕದ ಜನರ ಪ್ರತ್ಯಕ್ಷಾನುಭವವನ್ನು ಹೇಳಿದರೆ ಅವನಿಗೆ ಆ ಪ್ರತ್ಯಕ್ಷದಿಂದ ವಿಷಯ ಸಿದ್ಧಿಯಾಗುವುದು ಕಂಡಿದೆ.

ಇಲ್ಲಿ ಪ್ರಶ್ನೆ ಬರುತ್ತದೆ— ಈಶ್ವರನಿಗೆ ಜೀವನಂತೆ ಶರೀರ ಅಂತಃಕರಣಗಳಿಲ್ಲ, ಮಾಯಾವೃತ್ತ್ಯಾತ್ಮಕ ಜ್ಞಾನಮಾತ್ರವೆ ಇದೆ, ಅಂತಃಕರಣವೃತ್ತ್ಯಾತ್ಮಕ ಜ್ಞಾನವಿಲ್ಲ. ಮಾಯಾವೃತ್ತಿಯೂ ನಿತ್ಯವಲ್ಲ, ಜನ್ಯವಾಗಿದೆ. ಅದರಿಂದ ಭೇದವು ಧರ್ಮಿಪ್ರತಿಯೋಗಿ ಉಭಯದಲ್ಲಿ ವ್ಯಾಸಜ್ಯವೃತ್ತಿಯಾಗಿರುವಾಗ ಈಶ್ವರನಿಗೂ ಭೇದದ ಪ್ರತ್ಯಕ್ಷಾತ್ಮಕ ಮಾಯಾವೃತ್ತಿ ಜನಿಸಲು ಉಭಯಪ್ರತ್ಯಕ್ಷ ಮೊದಲಿಗೆ ಆವಶ್ಯಕ. ನಿತ್ಯವೆಂದೇ ಅಂಗೀಕರಿಸಿದರೂ ಉಭಯಪ್ರತ್ಯಕ್ಷವು ಭೇದಪ್ರತ್ಯಕ್ಷಕ್ಕೆ ವ್ಯಾಪಕವೆಂದು ಅವ್ಯಭಿಚರಿತ ಸಹಚಾರದಿಂದ ನಿಶ್ಚಿತವಾಗಿದೆ. ಈಶ್ವರನಿಗೆ ಉಭಯಪ್ರತ್ಯಕ್ಷ ಸಂಭವವಿಲ್ಲದ್ದರಿಂದ ಭೇದಪ್ರತ್ಯಕ್ಷ ಸಂಭವವಿಲ್ಲ, ಏಕೆಂದರೆ, ಜೀವ ಅಣು. ಲೌಕಿಕ ಚಾಕ್ಷುಷಪ್ರತ್ಯಕ್ಷಕ್ಕೆ ಮಹತ್ವ ಉದ್ಭೂತರೂಪಗಳು ಕಾರಣ. ಅವಿಲ್ಲದ್ದರಿಂದ ಜೀವಪ್ರತ್ಯಕ್ಷ ಈಶ್ವರನಿಗೂ ಇರುವ ಸಂಭವವಿಲ್ಲ, ಹೀಗೆ ಪೂರ್ವಪಕ್ಷಿ ಹೇಳಿದರೆ ಸಮಾಧಾನ– 'ಈಶ್ವರ'ನಿಗೆ ಭೇದಪ್ರತ್ಯಕ್ಷವಿದೆ ಎಂದು. 'ಈಶ್ವರ' ಶಬ್ದ ಹೇತುಗರ್ಭ, ಈಶ್ವರತ್ವ ಅಂದರೆ ಅಘಟಿತ ಘಟನಾಶಕ್ತಿ ಅವನಿಗಿದೆ. ಅಣುವಾದ ಜೀವನನ್ನೂ ಪ್ರತ್ಯಕ್ಷವಾಗಿ ಅವನು ಕಾಣಬಲ್ಲ, ಎಂದು. ಹಾಗಾದರೆ ಆ ಶಕ್ತಿಯಿಂದ ಜೀವನನ್ನು ಘಟವಾಗಿ ಮಾಡಲಿ, ಘಟವನ್ನೂ ಈಶ್ವರನನ್ನಾಗಿ ಮಾಡಲಿ ಎನ್ನಬಾರದು, ಪ್ರಮಾಣಸಿದ್ಧವಾಗಿದ್ದು ಲೋಕರೀತಿಯಿಂದ ಕೂಡಿಸಲು ಬಾರದಿದ್ದುದನ್ನು ಈಶ್ವರ ತನ್ನ ಶಕ್ತಿಯಿಂದ ಕೂಡಿಸುತ್ತಾನೆ ಹೊರತು ಪ್ರಮಾಣಸಿದ್ಧವಲ್ಲದ, ಪ್ರಮಾಣವಿರುದ್ಧವಾದ ವಸ್ತುವನ್ನು

ಕೂಡಿಸುವುದಿಲ್ಲ. 'ಯಃಸರ್ವಜ್ಞಃ ಸರ್ವವಿತ್' ಎಂದು ಶ್ರುತಿಯು ಹೇಳುವಂತೆ ಈಶ್ವರನು ಸರ್ವಜ್ಞನೆನಿಸಿರುವುದು ಈ ಶಕ್ತಿಯಿಂದಲೆ. ಆದರಿಂದ ಈಶ್ವರನ ವಿಷಯದಲ್ಲಿ 'ನ ಚೋದ್ಯಾವಕಾಶಃ' ಪ್ರಶ್ನೆಗೇ ಅವಕಾಶವಿಲ್ಲ ಎನ್ನುತ್ತಾರೆ.

ಪ್ರಶ್ನೆಗೆ ಅವಕಾಶವಿಲ್ಲವೆಂದರೆ ಪ್ರತಿಯೋಗಿ ಪ್ರತ್ಯಕ್ಷವು ಭೇದಪ್ರತ್ಯಕ್ಷಕ್ಕೆ ಬೇಕಾಗಿಲ್ಲ ಎಂದು ಪರಿಹಾರವೇಕೆ ಹೇಳುತ್ತಾರೆ ಎಂದರೆ, ಈಶ್ವರ ವಿಷಯದಲ್ಲಿ ಪ್ರಶ್ನೆಗೆ ಅವಕಾಶವಿಲ್ಲದಿದ್ದರೂ ಜೀವನ ವಿಷಯದಲ್ಲಿ ಅದು ಇದೆ.

### ೫. ವಿಷ್ಣುಮಿತ್ರ-ಯಜ್ಞದತ್ತರ ಭೇದ ದೇವದತ್ತನಿಗೆ ಪ್ರತ್ಯಕ್ಷ

'ವಿಷ್ಣುಮಿತ್ರಧರ್ಮಿಕಃ ಯಜ್ಞದತ್ತಪ್ರತಿಯೋಗಿಕಃ ಭೇದಃ ದೇವದತ್ತಸ್ಯ ಪ್ರತ್ಯಕ್ಷ ಇತ್ಯಾದ್ಯೂಹ್ಯಂ' ಎಂದು ಪಾಠಾಂತರ ಅನೇಕ ಕಡೆ ಕಂಡುಬರುತ್ತದೆ. ಅದನ್ನು ಪ್ರಾಮಾದಿಕವೆಂದು ಕಡೆಗಣಿಸುವಂತಿಲ್ಲ. ಅದೂ ಸರಿಯೆ. ಯದ್ಯಪಿ ದೇವದತ್ತನಿಗೆ ಕಣ್ಣಿಗೆ ಕಾಣುವ ವಿಷ್ಣುಮಿತ್ರ ಯಜ್ಞದತ್ತ ಶರೀರಗಳಲ್ಲಿ ಮಾತ್ರ ಪ್ರತ್ಯಕ್ಷವಾಗಿ ಭೇದ ಕಂಡುಬಂದೀತು, ವಿಷ್ಣುಮಿತ್ರ ಯಜ್ಞದತ್ತ ಚೇತನರಲ್ಲಿ ಭೇದ ಕಾಣಲು ಶಕ್ಯವಿಲ್ಲ, ಪರಜೀವರು ಜೀವನಿಗೆ ಪ್ರತ್ಯಕ್ಷಯೋಗ್ಯರಲ್ಲ. ಆದರೆ, ಯೋಗ್ಯಾನುಪಲಬ್ಧಿ ಸಹಕೃತವಾದ ಕಣ್ಣಿಗೆ ಭೇದ ಗೋಚರವಾಗಬಹುದು. ಇಂದು ಕಾಣುವ ದೇವದತ್ತನಲ್ಲಿ ನಿನ್ನೆ ಕಂಡ ದೇವದತ್ತನ ಅಭೇದ ಕಾಣುತ್ತದೆ, ಅವನೇ ಇವನೆಂದು ಪ್ರತ್ಯಭಿಜ್ಞೆ ಬರುತ್ತದೆ. ನಿನ್ನೆಯ ಇಂದಿನ ಶರೀರಗಳಲ್ಲಿ ಬದಲಾವಣೆಯಾದರೂ ನಿನ್ನೆಯ ಶರೀರದಲ್ಲಿದ್ದ ಚೇತನನಲ್ಲಿ ಏನು ಆಸೆ ಆಕಾಂಕ್ಷೆಗಳಿದ್ದುವೋ ಅವೇ ಈಗಿನ ಶರೀರದಲ್ಲಿರುವ ಚೇತನನಲ್ಲಿ ಕಂಡುಬರುತ್ತವೆ, ಅವುಗಳಿಗೆ ವಿರೋಧಿಯಾದ ನಡೆನುಡಿಗಳೊಂದೂ ಕಾಣಿಸುವುದಿಲ್ಲ. ಈ ಚಿಹ್ನೆಗಳಿಂದ ನಿನ್ನೆಯ ಇಂದಿನ ಶರೀರಗಳಲ್ಲಿ ಚೇತನನೊಬ್ಬನೇ ಎಂದು ನಿಶ್ಚಯವಾಗುತ್ತದೆ, ಇಬ್ಬರಲ್ಲಿ ಭೇದ ಸಂಶಯ ಬರುವುದಿಲ್ಲ. ವಿಷ್ಣುಮಿತ್ರ ಯಜ್ಞದತ್ತ ಆತ್ಮರೂ ಹೀಗೇ ಒಬ್ಬರಾಗಿದ್ದರೆ ಅಭೇದವ್ಯಾಪಕವಾದ ಈ ಚಿಹ್ನೆಗಳೂ ಕಂಡುಬರುತ್ತಿದ್ದುವು. ಕಂಡುಬರುತ್ತಿಲ್ಲ ಎಂದರೆ ಅವರು ಒಬ್ಬರೆ ಅಲ್ಲ, ಬೇರೆಯೆ. ಅಭೇದ ಚಿಹ್ನೆಗಳಿರುತ್ತಿದ್ದರೆ ಅಭೇದ ಕಾಣುತ್ತಿತ್ತು, ಅವು ಕಾಣುತ್ತಿಲ್ಲ ಎಂಬುದು ಅಭೇದರೂಪವಾದ ಪ್ರತಿಯೋಗಿಯ ಯೋಗ್ಯಾನುಪಲಬ್ಧಿ. ಅದರ ಸಹಕಾರವಿರುವುದರಿಂದ ಸ್ವಸಂಯುಕ್ತವಿಶೇಷಣತಾ ಸಂಬಂಧದಿಂದ ವಿಷ್ಣುಮಿತ್ರ ಯಜ್ಞದತ್ತಾತ್ಮರಲ್ಲಿ ಭೇದರೂಪವಾದ ಅಭಾವವು ಚಕ್ಷುಸ್ಸಿಗೆ ಪ್ರತ್ಯಕ್ಷಗೋಚರವಾಗುತ್ತದೆ. ಭೇದ ಪ್ರತ್ಯಕ್ಷಕ್ಕೆ ಅಧಿಕರಣ ಪ್ರತ್ಯಕ್ಷ ಬೇಕೆಂದಿಲ್ಲ. ಆಕಾಶದಲ್ಲಿ ರೂಪಾಭಾವ ಪ್ರತ್ಯಕ್ಷದಂತೆ ರೂಪವದ್‌ಭೇದ ಪ್ರತ್ಯಕ್ಷವೂ ಬರುವುದು ಕಂಡಿದೆ. ಚೇಷ್ಟಾ ಲಿಂಗದಿಂದ ವಿಷ್ಣುಮಿತ್ರ ಯಜ್ಞದತ್ತ ಶರೀರಗಳಲ್ಲಿ ವಿಷ್ಣುಮಿತ್ರಯಜ್ಞದತ್ತಾತ್ಮರು ಅನುಮಾನ ಸಿದ್ಧರಾಗಿದ್ದಾರೆ. ಆದರಿಂದ ಅವರಲ್ಲಿ ಭೇದವು ಪ್ರತ್ಯಕ್ಷ ಕಂಡುಬರಬಹುದು. ಪರಸ್ಪರ ಭೇದವಿಶಿಷ್ಟ ತತ್ತದಾತ್ಮವಿಶಿಷ್ಟ ಶರೀರಗಳು ಲೌಕಿಕ ಪ್ರತ್ಯಕ್ಷದಿಂದ ಸಿದ್ಧವಾಗುವಾಗ ವಿಶೇಷಣತಾವಚ್ಛೇದಕವಾದ ಭೇದವೂ ಅಲೌಕಿಕ ಸನ್ನಿಕರ್ಷದಿಂದ ಭಾನವಾಗುತ್ತದೆ ಎಂದು ಒಪ್ಪಬೇಕು. ಏಕೆಂದರೆ ಅಭೇದ

ಸಂಶಯವೆಂದೂ ಬರುವುದಿಲ್ಲ. ಹೀಗಾಗಿ ಪರನಿಗೆ ಪರಜೀವಭೇದವೂ ಪ್ರತ್ಯಕ್ಷವೆ. ಆದರೆ ಭೇದಾಂಶದಲ್ಲಿ ಆ ಪ್ರತ್ಯಕ್ಷವು ಲೌಕಿಕತ್ವ ಶೂನ್ಯವಾಗಿದೆ. ಅಥವಾ ಇಲ್ಲಿ ಹೇಳಿದ ದೇವದತ್ತನು ಯೋಗಿ ಎಂದಿಟ್ಟುಕೊಳ್ಳಬೇಕು. ಅವನಿಗೆ ಯಜ್ಞದತ್ತ ವಿಷ್ಣುಮಿತ್ರಾತ್ಮರ ಭೇದವು ಯೋಗಜಧರ್ಮಸನ್ನಿಕರ್ಷದಿಂದ ಪ್ರತ್ಯಕ್ಷ ಗೋಚರವಾಗಬಹುದು. ಈಶ್ವರಪ್ರತ್ಯಕ್ಷದಂತೆ ಯೋಗಿಪ್ರತ್ಯಕ್ಷವೂ ಭೇದದಲ್ಲಿ ಪ್ರಮಾಣ. ಪ್ರತಿಯೊಬ್ಬರಿಗೂ ತಮ್ಮಲ್ಲಿ ಇತರರ ಭೇದವು ಲೌಕಿಕ ಪ್ರತ್ಯಕ್ಷಗೋಚರವೆ. 'ಇತ್ಯಾದ್ಯೂಹ್ಯಂ' ಎಂದು ಇದನ್ನು ಹೇಳಿದ್ದಾರೆ.

**೬. ಬ್ರಹ್ಮಾನನುಸಂಹಿತತ್ವ ವಿಶೇಷಣ ಸಾರ್ಥಕ**

'ಬ್ರಹ್ಮನು ಜೀವನಿಗಿಂತ ಭಿನ್ನ, ಜೀವಾನುಭೂತವಾದ ದುಃಖವನ್ನು ಬ್ರಹ್ಮನು ಅನುಭವಿಸುವುದಿಲ್ಲವಾದ್ದರಿಂದ'. ಎಂಬ ಅನುಮಾನದಲ್ಲಿ ದುಃಖಾನುಭವವಿಲ್ಲದಿರುವುದೇ ಹೇತು. ದುಃಖದಲ್ಲಿ 'ಜೀವಾನುಭೂತ'ವೆಂದು ಮತ್ತು 'ಬ್ರಹ್ಮಾನನುಭೂತ'ವೆಂದು ವಿಶೇಷಣಗಳು ಸ್ವರೂಪಸಂಕೀರ್ತನ. ಹೇತುವಿನಲ್ಲಿ ಘಟಕವಲ್ಲ, ಆದರೂ ಅದನ್ನು ಹೇಳಿದ್ದು, ಐಕ್ಯವಿದ್ದರೆ ಜೀವನು ಅನುಭವಿಸುವುದು, ಬ್ರಹ್ಮನು ಅನುಭವಿಸದಿರುವುದು ಕೂಡಲಾರದೆಂದು ಅನುಕೂಲತರ್ಕವನ್ನು ಸೂಚಿಸುವುದಕ್ಕಾಗಿ. ವಸ್ತುತಃ ಅನುಕೂಲತರ್ಕದ ಉತ್ಥಾಪನ ದ್ವಾರಾ ವ್ಯಾಪ್ತಿಗ್ರಹಣೋಪಯೋಗಿ ಯಾದ್ದರಿಂದ ಹೇತುಶರೀರದಲ್ಲಿ ನಿವೇಶ ಮಾಡುವುದು ಯುಕ್ತವೆ. ಅನುಪಯೋಗಿಯಾದ ವಿಶೇಷಣ ಮಾತ್ರ ವ್ಯರ್ಥವಾಗುತ್ತದೆ. ಹೇತುಶರೀರದಲ್ಲಿ ಅದಕ್ಕೆ ನಿವೇಶನವಿಲ್ಲ ಎಂದು ನವ್ಯಮತವಿದೆ.

ದ್ವಿತೀಯಾನುಮಾನದಲ್ಲಿ ಘಟಾದಿ ಅನ್ವಯ ದೃಷ್ಟಾಂತವಾಗಬಹುದು. ಆದರೂ ಅದು ಶಿಷ್ಯರಿಗೆ ಊಹಿಸಿಕೊಳ್ಳಲು ಸುಲಭವೆಂದು ಬಿಟ್ಟಿದ್ದಾರೆ. ಮತ್ತು ಪೂರ್ವೋತ್ತರ ಅನುಮಾನಗಳಂತೆ ಇಲ್ಲಿಯೂ ವ್ಯತಿರೇಕ ವ್ಯಾಪ್ತಿಯನ್ನು ಹೇಳುವುದು ಉಚಿತವೆಂಬ ಅಭಿಪ್ರಾಯವಿದೆ. ಅಥವಾ ಅನನುಸಂಧಾನವೆಂಬ ಹೇತು ಅಸತ್ತಿನಲ್ಲಿಯೂ ಇದೆ. ಧರ್ಮಿಸತ್ತಾ ಇಲ್ಲದಿರುವುದರಿಂದ ಧರ್ಮಿಸತ್ತಾ ಘಟಿತವಾದ ಸಾಧ್ಯ ಅಲ್ಲಿ ಅಪ್ರಸಿದ್ಧವಾಗುವುದರಿಂದ ಸಾಧ್ಯವಿಲ್ಲ, ವ್ಯಭಿಚಾರ. ಆದರಿಂದ ಹೇತುವಿನಲ್ಲಿ ಚೇತನತ್ವ ವಿಶೇಷಣ ಹಾಕಬೇಕಾಗುವುದರಿಂದ ಘಟಾದಿ ಅನ್ವಯದೃಷ್ಟಾಂತದಲ್ಲಿ ಹೇತು ಬರುವುದಿಲ್ಲವೆಂದು ಅಭಿಪ್ರಾಯ

**೭. ಸುಖದುಃಖ ಭೋಗವೆಂದರೇನು?**

ದುಃಖಾದಿಗಳು ಅಂತಃಕರಣಧರ್ಮ, ಜೀವನು ಅವುಗಳನ್ನು ತನ್ನವೆಂದು ಹೇಗೆ ಅನುಸಂಧಾನ ಮಾಡುತ್ತಾನೆ? ಯದ್ಯಪಿ ಜೀವನು ತನ್ನ ಕೈಯಲ್ಲಿಲ್ಲದ ಘಟವನ್ನು ತನ್ನದೆಂದು ಅನುಸಂಧಾನಮಾಡುತ್ತಾನೆ. ಆದರೂ ದುಃಖಾದಿ ಸ್ವಾಮಿತ್ವವು ಜೀವನಿಗಿಂತ ಮುಖ್ಯವಾಗಿ ಬ್ರಹ್ಮನಿಗೇ ಇರುವುದರಿಂದ ಬ್ರಹ್ಮನೇ ಸ್ವೀಯತ್ವೇನ ಅನುಸಂಧಾನ ಮಾಡಬೇಕಾಗುತ್ತದೆ.

ಇದಕ್ಕೆ ಸಮಾಧಾನ ಹೀಗೆ— ದುಃಖಾದಿ ಅನುಸಂಧಾನ, ಭೋಗ, ಎಂದರೆ ಸ್ವೀಯತ್ವೇನ

ತಿಳಿಯುವುದೇ ಅಲ್ಲ. ತತ್ತ್ವಯುಕ್ತವಾಗಿ ನೀಚೋಚ್ಚತ್ವಗಳು ಬರಬೇಕು. 'ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ' ಎಂದು ಸೂತ್ರಭಾಷ್ಯ (3.1.17)ದಲ್ಲಿದೆ.

ನೀಚೋಚ್ಚತಾ ಬ್ರಹ್ಮನಲ್ಲಿ ಏಕೆ ಇಲ್ಲ, ಜೀವನಲ್ಲಿ ಏಕೆ ಇದೆ? ದುಃಖಿಯು ನೀಚ ಅಧಮ, ಸುಖಿಯು ಉಚ್ಚ, ಉತ್ತಮ ಎಂದು ಲೋಕದಲ್ಲಿ ಕಂಡಿದೆ. ಈಶ್ವರನು ಕ್ಷರಾಕ್ಷರ ಪುರುಷರಿಗಿಂತ ಉತ್ತಮ, ಪುರುಷೋತ್ತಮನೆನಿಸಿರುವುದು ಅಧಿಕ ಸುಖಿಯಾದ್ದರಿಂದ. ಮಾಯಾವಾದಿಯೂ ಇದನ್ನು ಒಪ್ಪುತ್ತಾನೆ. ಆದರೆ ಸರ್ವೇಶ್ವರನಾದ ಕೃಷ್ಣನು ಸರ್ವದುಃಖಸ್ವಾಮಿ, ಸರ್ವದುಃಖವನ್ನು ತನ್ನವೆಂದು ತಿಳಿಯುವುದರಿಂದ ಬಹಳ ನೀಚನೆನಿಸಬೇಕಾಗುವುದು. ಮಾಯಾವಾದಿಯು ಈ ಉಚ್ಚ ನೀಚತ್ವಗಳು ಆವಿದ್ಯಕವಾದ್ದರಿಂದ ಮಿಥ್ಯೆಯಾದ್ದರಿಂದ ಪ್ರಶ್ನೆ ಮಾಡಬಾರದು ಎನ್ನಬಹುದು. ಆದರೆ ನಾವು ಮಾಯಾವಾದಿಯೊಂದಿಗೆ ವಾದ ಮಾಡುವುದಿಲ್ಲ. ಅವನೊಂದಿಗೆ ವಾದ ವ್ಯರ್ಥ. ದುರ್ಘಟತ್ವ ಅವಿದ್ಯೆಗೆ ಭೂಷಣವೆನ್ನುವವನೊಂದಿಗೆ ವಾದಮಾಡಿ ಪ್ರಯೋಜನವಿಲ್ಲ. ಸತ್ಯ ಪ್ರಪಂಚವಾದಿಯಾದ ಭಾಸ್ಕರಾದ್ವೈತಿಯೊಡನೆ ವಾದ ಮಾಡುತ್ತೇವೆ. 'ಮಾಯಾವಾದಿನಾ ಸರ್ವಸ್ಯ ಕಲ್ಪಿತತ್ವಾಂಗೀಕಾರಾತ್ ಕಾಲ್ಪನಿಕೀ ವ್ಯವಸ್ಥಾ ಘಟೇತಾಪಿ। ನ ತು ಭಾಸ್ಕರಸ್ಯ। ಅತಸ್ತಂ ಪ್ರತೀದಂ ದುಃಖಾನುಸಂಧಾನಾದ್ಯಾಪಾದನಂ' ಎಂದು ಟೀಕೋಕ್ತಿ ಇದೆ. ವಸ್ತುತಃ ಸರ್ವಾಭೇದವಾದಿಯಾದ ಮಾಯಾವಾದಿಯೂ ವ್ಯಾವಹಾರಿಕ ಭೇದದಿಂದ ವ್ಯವಸ್ಥೆಯನ್ನು ಹೇಳಲೇಬೇಕು. ಅವನು ಹೇಳ ಬಹುದು— ಜೀವನಿಗೆ ಅಂತಃಕರಣ ವೃತ್ತಿ, ಈಶ್ವರನಿಗೆ ಮಾಯಾವೃತ್ತಿ ಎಂದು ವ್ಯವಸ್ಥೆ. ಅಂತಃಕರಣ ವೃತ್ತಿಯೇ ನೀಚೋಚ್ಚತ್ವಗಳಿಗೆ ಪ್ರಯೋಜಕ, ಈಶ್ವರನಿಗೆ ಅದರಿಂದ ನೀಚೋಚ್ಚತ್ವಗಳಿಲ್ಲ ಎಂದು. ಆದರೆ ಅಂತಃಕರಣವೃತ್ತಿಯಿಂದ ಸರ್ವಜ್ಞನಾದ ಯೋಗಿಗೆ ಎಲ್ಲರ ಎಲ್ಲ ದುಃಖಗಳ ಅನುಸಂಧಾನ ವಿರುವುದರಿಂದ ಅವನು ಎಲ್ಲರಿಗಿಂತ ಪರಮ ನೀಚನೆನಿಸಬೇಕಾದೀತು. ವಸ್ತುತಃ ದುಃಖಾದಿಗಳು ತತ್ವವಾದಿ ಮಾಯಾವಾದಿಗಳಿಬ್ಬರಿಗೂ ಸಾಕ್ಷಿವೇದ್ಯವಾಗಿವೆ. ಅಂತಃಕರಣ ವೇದ್ಯವಲ್ಲ.

ಆದರಿಂದ ನೀಚೋಚ್ಚತಾಗಳೆಂದರೆ ಕ್ಷಪಣಕ ಪರೀಕ್ಷಾದಲ್ಲಿ ಸುಧಾಗ್ರಂಥದಲ್ಲಿ ಹೇಳಿದಂತೆ ಚೇತನ ಸ್ವರೂಪದಲ್ಲಿಯೇ ತಾತ್ಕಾಲಿಕವಾಗಿ ಭಿನ್ನಾಭಿನ್ನವಾಗಿ ಉಂಟಾಗುವ ಅಲ್ಪವಿಕಾರಗಳೆನ್ನಬೇಕು. ನಿರ್ವಿಕಾರವಾದ ಚೇತನ ಸ್ವರೂಪದಲ್ಲಿಯೂ ಅಲ್ಪವಾದ ಈ ವಿಕಾರ ಒಪ್ಪಿದರೆ ಜೀವಸ್ವರೂಪ ನಾಶಭಯವಿಲ್ಲ. ತೂಲಪಿಂಡದಲ್ಲಿ ಉಂಟಾಗುವ ಸಂಕೋಚ ವಿಕಾಸಗಳಂತೆ ಈ ವಿಕಾರಗಳು ಎಂದು ಶ್ರೀರಾಘವೇಂದ್ರಸ್ವಾಮಿಗಳು ತತ್ವಪ್ರಕಾಶಿಕಾ ಭಾವದೀಪದಲ್ಲಿ ಹೇಳಿದ್ದಾರೆ. ಗುರ್ವರ್ಥದೀಪಿಕಾದಲ್ಲಿ ಶ್ರೀವಾದಿರಾಜರು 'ಸುಖ' 'ದುಃಖ' ಶಬ್ದಾರ್ಥ ವಿವೇಚನ ಪೂರ್ವಕವಾಗಿ ಈ ನೀಚೋಚ್ಚತಾ ಶಬ್ದಾರ್ಥವಿವರಣೆ ನೀಡಿದ್ದಾರೆ. 'ಸು' ಸುಷ್ಠು 'ಖ' ಇಂದ್ರಿಯಗಳಿರಲು ಪ್ರಯೋಜಕವಾದ ಗುಣವು 'ಸುಖ'. 'ದುಃ' ದುಸ್ಥವಾಗಿ 'ಖ' ಇಂದ್ರಿಯಗಳಿರಲು ಪ್ರಯೋಜಕವಾಗುವ ಗುಣ 'ದುಃಖ' ಇಂದ್ರಿಯಗಳಲ್ಲಿ ಉತ್ತರಕಾರ್ಯಾನುಕೂಲತ್ವಕ್ಕೆ ಪ್ರಯೋಜಕವು ಸುಖ. ತದಭಾವಕ್ಕೆ ಪ್ರಯೋಜಕ ದುಃಖ. ಈ ಅನುಕೂಲತ್ವ ತದಭಾವರೂಪ ವಿಕಾರಗಳೇ ಉಚ್ಚತ್ವ ನೀಚತ್ವಗಳು. ಸರ್ವಶಕ್ತನಾದ

ಸರ್ವೇಶನಾದ ಈಶ್ವರ ಸದಾ ಸರ್ವಕಾರ್ಯಾನುಕೂಲವಾದ ಸದಾ ಮಹಾ ಉಚ್ಚತ್ವವುಳ್ಳ ಇಂದ್ರಿಯಗಳುಳ್ಳವನು. ಆದರಿಂದ ಅವನಲ್ಲಿ ತಾತ್ಕಾಲಿಕವಾಗಿ ಭಿನ್ನಾಭಿನ್ನವಾಗಿ ಉಂಟಾಗುವ ಅಲ್ಪವಾದ ಈ ವಿಕಾರಗಳಿಲ್ಲ. ಆದರಿಂದ ಜೀವನು ದುಃಖಭೋಕ್ತನಾದರೂ ಈಶ್ವರನು ದುಃಖಭೋಕ್ತನಲ್ಲ.

**೮. ಪರಸ್ಪರ ಸುಖಾದಿ ಅನನುಸಂಧಾನ ಭೇದಕ್ಕೆ ಪ್ರಯೋಜಕ**

ಪರಸ್ಪರ ಸುಖಾದಿ ಅನನುಸಂಧಾನವು ಭೇದಕ್ಕೆ ಅಪ್ರಯೋಜಕವೆಂದು ಇಂದ್ರಾರ್ಜುನರ ದೃಷ್ಟಾಂತದಿಂದ ಪೂರ್ವಪಕ್ಷಿ ಶಂಕಿಸುತ್ತಾನೆ. ಇಂದ್ರನ ಶಚೀಭೋಗಾದಿಜನ್ಯಸುಖಾನುಸಂಧಾನ ಅರ್ಜುನನಿಗೆ ಇಲ್ಲ. ಆದರೂ ಇಂದ್ರಾರ್ಜುನರಿಗೆ ಅಭೇದ ಸರ್ವಸಮ್ಮತ, ಭೇದವಿಲ್ಲ.

ಈ ಪ್ರಶ್ನೆಗೆ ಸಮಾಧಾನ— ಅರ್ಜುನನು ಇಂದ್ರಾವತಾರ. ಇಂದ್ರನ ಜೀವತ್ವಾಪಾದಕವಾದ ಅಂತಃಕರಣೋಪಾಧಿಯಿಂದಲೇ ಅರ್ಜುನನು ವಿಶಿಷ್ಟನಾಗಿದ್ದಾನೆ. ಇಂದ್ರಶರೀರದಲ್ಲಿ ಇಂದ್ರನು ನಡೆಸಿದ ಉಪಾಸನಾದಿ ಜನ್ಯ ಮಹಾಫಲವಾದ ಸುಖಾದಿ ಭೋಕ್ತೃತ್ವವು ಅರ್ಜುನನಿಗೆ ಇದೆ. ಆದರೆ ಶಚೀಭೋಗಾದಿ ಅಲ್ಪಸುಖಭೋಗ ಮಾತ್ರ ಅಘಟಿತಘಟಕ ಈಶ್ವರಶಕ್ತಿ ವಿಶಿಷ್ಟವಾದ ಮಾನುಷಾನ್ನಾದಿ ಉಪಭೋಗ ರೂಪ ವಿಶೇಷಕಾರಣದಿಂದ ಅರ್ಜುನನಿಗೆ ಇಲ್ಲವಾಗಿದೆ. ಅವನಲ್ಲಿ ಇಂದ್ರನಲ್ಲಿರುವ ಅಲ್ಪಸುಖದ ಅನನುಸಂಧಾನ ಕಂಡಿದೆ. ಇದು ಸೋಪಾಧಿಕವ್ಯಭಿಚಾರ. ವಿಶೇಷಕಾರಣರೂಪ ಉಪಾಧಿ ಪ್ರಯುಕ್ತವಾಗಿದೆ. ಇದು ಭೇದಾನುಮಾನಕ್ಕೆ ಬಾಧಕವಾಗುವುದಿಲ್ಲ. ಸಂಧ್ಯಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ—

ಉತ್ಸರ್ಗತೋಽಪಿ ಯತ್ ಪ್ರಾಪ್ತಮಪವಾದ ವಿವರ್ಜಿತಂ ।
ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥

'ಸ್ವಭಾವತಃ ಅವ್ಯಭಿಚಾರಿ ಎಂದು ನಿಶ್ಚಿತವಾದ ಹೇತುವು ವಿಶೇಷಕಾರಣದಿಂದ ವ್ಯಭಿಚಾರಿಯಾದರೂ ಪ್ರಮಾಣವೇ ಆಗುತ್ತದೆ' ಎಂದು. ಸ್ವರಸ ವ್ಯಭಿಚಾರದಂತೆ ಸೋಪಾಧಿಕ ವ್ಯಭಿಚಾರವೂ ವ್ಯಾಪ್ತಿ ವಿಘಟಕವೆ ತಾನೆ? ಹಾಗಿದ್ದರೂ ಅದು ದೋಷವಾಗುವುದಿಲ್ಲ ಎನ್ನುವುದಾದರೆ ಸ್ವರಸ ವ್ಯಭಿಚಾರವೇಕೆ ದೋಷ? ಎಂದರೆ ಇದರ ಅಭಿಪ್ರಾಯ ಹೀಗೆ— 'ವ್ಯಾಪ್ತಿ' ಎಂದರೆ ಕೇವಲ ಸಹಚಾರವಲ್ಲ, ಹೇತುವು ಸ್ವಾಭಾವಿಕವಾಗಿ ಸಾಧ್ಯದ ಸಹಚಾರಕ್ಕೆ ಯೋಗ್ಯವಾಗಿರುವುದೇ ವ್ಯಾಪ್ತಿ. ಸದ್ಧೇತುವಿಗೆ ಸಾಧ್ಯ ಸಹಚಾರ ಯೋಗ್ಯತೆ ಸ್ವಭಾವಸಿದ್ಧವಾಗಿದೆ. ಅನುಕೂಲತರ್ಕದಿಂದ ಈ ಯೋಗ್ಯತೆ ನಿಶ್ಚಯವಾಗುತ್ತದೆ. ಉದಾ: ಅನ್ನಭೋಜನಕ್ಕೆ ತೃಪ್ತಿ ಜನನ ಯೋಗ್ಯತೆ. ಮಂತ್ರ ಔಷಧಾದಿ ಬಲವತ್ತಾದ ಕಾರಣಗಳಿಂದ ಕೆಲವೆಡೆ ಸಹಚಾರ ಭಗ್ನವಾದರೂ ಸಹಚಾರ ಯೋಗ್ಯತೆಯೆ ಇಲ್ಲವೆಂದಾಗುವುದಿಲ್ಲ. ಏಕೆಂದರೆ ಅದು ಸ್ವಭಾವ. ಸ್ವಭಾವವು ಈಶ್ವರಾಧೀನ. ಹಾಗಾದರೆ ಈಶ್ವರನೆ ಸಾಕು, ನಡುವೆ ಈ ಸ್ವಭಾವವೇಕೆ? ಎನ್ನಬಾರದು, ಈಶ್ವರನು ದೃಷ್ಟದ್ವಾರಾ

ಕಾರಣವಾಗುವುದೇ ಹೆಚ್ಚಾಗಿ ಕಂಡಿದೆ. ಇಲ್ಲದಿದ್ದರೆ ದಂಡಶಕ್ತಿ ಈಶ್ವರಾಧೀನವಾಗಿರುವಾಗ ಈಶ್ವರನೇ ಸಾಕು, ದಂಡ ಬೇರೆ ಏಕೆ ಬೇಕು? ಎನ್ನಬಹುದು. ಧೂಮತ್ವವೇ ವಹ್ನಿಸಹಚಾರ ಯೋಗ್ಯತೆ ಏಕಾಗಬಾರದೆಂದರೆ ವಹ್ನಿಸಹಚಾರಯೋಗ್ಯತೆ ಆಲೋಕಕ್ಕೂ ಇದೆ. ಅದರಿಂದ ಧೂಮತ್ವ ನ್ಯೂನವೃತ್ತಿಯಾಯಿತು. ಹಾಗಾದರೆ ಸಲ್ಲಿಂಗದಲ್ಲಿ ಸಾಧ್ಯ ಸಹಚಾರ ಯೋಗ್ಯತೆ ನಿಯಮೇನ ಇರುವಾಗ ಕದಾಚಿತ್ ಭ್ರಮಜನಕವಾಗಕೂಡದು ಎನ್ನಬಾರದು. ಪೃಥಿವೀತ್ವರೂಪ ಸಲ್ಲಿಂಗವೇ ಕದಾಚಿತ್ ಉತ್ಪತ್ತಿಕ್ಷಣಾವಚ್ಛಿನ್ನ ಘಟದಲ್ಲಿ ಗಂಧಭ್ರಮಜನಕವಾಗಬಹುದು.

ಅಪವಾದ ವಿಷಯ ಭಿನ್ನತ್ವವನ್ನು ವ್ಯಾಪ್ಯತಾವಚ್ಛೇದಕ ಕೋಟಿಯಲ್ಲಿ ನಿವೇಶ ಮಾಡಿದರೆ ಎಲ್ಲ ಗೊಂದಲ ಪರಿಹಾರವಾಗದೆ? ಎಂದರೆ, ಅಪವಾದ ವಿಷಯಗಳು ಅತೀತ ವರ್ತಮಾನ ಕಾಲದವುಗಳು ಲೆಕ್ಕವಿಲ್ಲದಷ್ಟಿರುವುದರಿಂದ ವ್ಯಾಪ್ತಿಗ್ರಹಣಕಾಲದಲ್ಲಿ ಅವುಗಳ ಉಪಸ್ಥಿತಿ ಬಾರದಿರುವುದರಿಂದ ತದ್ಭಿನ್ನತ್ವವನ್ನು ನಿಶ್ಚಯಿಸುವುದು ಅಸಾಧ್ಯ. ಸರ್ವಜ್ಞನಿಗೆ ಮಾತ್ರ ಸಾಧ್ಯ. ಹೀಗಾಗಿ ಅಸರ್ವಜ್ಞರಿಗೆ ವ್ಯಾಪ್ತಿಗ್ರಹಣವೇ ಆಗಲಾರದು. ಇಷ್ಟಾಪತ್ತಿಯನ್ನು ಇಲ್ಲಿ ಹೇಳಲಾಗದು. ಹಾಗೆ ಹೇಳಿದರೆ 'ಅನ್ನವು ತೃಪ್ತಿಜನಕ'ವೆಂಬ ವ್ಯಾಪ್ತಿಜ್ಞಾನದಿಂದ ತೃಪ್ತಿಜನಕವೆಂದು ನಿಶ್ಚಯಿಸಿ ಉಣಲು ಪ್ರವೃತ್ತಿ ಮಾಡುವವರೆಲ್ಲರೂ ಭ್ರಾಂತರೆಂದಾದೀತು. ಅವರು ಬಲವದನಿಷ್ಟಾಜನಕ ಇಷ್ಟಸಾಧನವೆಂದು ನಿಶ್ಚಯಿಸಿಯೇ ಅನ್ನ ಉಣಲು ಪ್ರವೃತ್ತರಾಗುತ್ತಾರೆ. ಆದರೆ ಅದು ದೃಷ್ಟಿದೋಷದಿಂದ ಮರಣರೂಪ ಬಲವದನಿಷ್ಟ ಜನಕವಾಗಿರಬಹುದು. ಮಂತ್ರೌಷಧಿ ಪ್ರಭಾವದಿಂದ ತೃಪ್ತಿರೂಪ ಇಷ್ಟಸಾಧನವಾಗದಿರಬಹುದು. ಆದರಿಂದ ಈ ಜನರೆಲ್ಲರೂ ಭ್ರಾಂತರೆಂದಾದಾರು ಎನ್ನುವುದು ಇಷ್ಟಾಪತ್ತಿ ಎನ್ನಲಾಗದು.

ಅನಂತವಾದ ಅಪವಾದ ವಿಷಯಗಳ ಭೇದಕೂಟ ವಿಶಿಷ್ಟತ್ವನ್ನು ವ್ಯಾಪ್ಯತಾವಚ್ಛೇದಕ ಕೋಟಿಯಲ್ಲಿ ನಿವೇಶ ಮಾಡಿದರೆ ಮಹಾಗೌರವ. ನಿವೇಶಮಾಡದಿದ್ದರೇ ಅತಿಲಾಘವ. ಇದು, ಪ್ರಮಾಣಬಲದಿಂದ ಸಹಚಾರ ಯೋಗ್ಯತಾ ನಿಶ್ಚಯವಾಗಿರುವ ಸ್ಥಳದಲ್ಲಿ ಮಾತ್ರ. ಸ್ವರಸವ್ಯಭಿಚಾರ ಸ್ಥಳದಲ್ಲಿ ತತ್ತದ್‌ಭೇದಕೂಟ ವಿಶಿಷ್ಟತ್ವವನ್ನು ನಿವೇಶಮಾಡಲೇಬೇಕು.

**೯. ದ್ವಾಸುಪರ್ಣಾದಿ ಶ್ರುತಿಯಲ್ಲಿ ಭೇದಶಬ್ದವಿದೆ**

'ದ್ವಾಸುಪರ್ಣಾ' 'ದ್ವೇಬ್ರಹ್ಮಣೀ' ಎಂದು ಮುಂತಾಗಿ ಶ್ರುತಿಗಳಲ್ಲಿ 'ದ್ವಿ' ಶಬ್ದವಿದೆ. ಆದರೆ 'ಭೇದ' ಶಬ್ದವಿಲ್ಲ. ಅವು ಹೇಗೆ ಭೇದವಿಷಯದಲ್ಲಿ ಪ್ರಮಾಣ? ಎಂದರೆ, ದ್ವಿತ್ವವು ಭೇದವ್ಯಾಪ್ಯವಾದ್ದರಿಂದ ಭೇದದಲ್ಲಿ ಪ್ರಮಾಣ ಎನ್ನುವಂತಿಲ್ಲ. ಅದು ಅನುಮಾನವಾದೀತು, ಆಗಮವಲ್ಲ. ಎಂದು ಪೂರ್ವಪಕ್ಷಿ ಹೇಳುತ್ತಾನೆ. ವಸ್ತುತಃ ದ್ವಿಶಬ್ದ ಇಲ್ಲಿ ಎಲ್ಲ ಕಡೆ ದ್ವಿತ್ವಸಂಖ್ಯಾ ವಾಚಕವಲ್ಲ. 'ಪರಸ್ಪರ ಭೇದ ವಿಶಿಷ್ಟ' ಎಂಬ ಅರ್ಥದಲ್ಲಿದೆ ಅನ್ಯಥಾ 'ಸುಪರ್ಣೌ' 'ಬ್ರಹ್ಮಣೀ' ಎಂದು ದ್ವಿವಚನಗಳು ಕೇವಲ ದ್ವಿತ್ವಸಂಖ್ಯಾನುವಾದವಾಗಬೇಕಾದೀತು. ವಸ್ತುತಃ ದ್ವಿಶಬ್ದವು ಭೇದವಿಶಿಷ್ಟ ಬೋಧಕವಾಗುವುದು ನಿರೂಢ ಲಕ್ಷಣಾವೃತ್ತಿಯಿಂದ. ಅಥವಾ,

'ದ್ವಿಶಬ್ದೋ ದ್ವಿತ್ವಸಂಖ್ಯಾಯಾಂ ಭೇದೇ ಚಾಪಿ ಪ್ರಯುಜ್ಯತೇ'। ಎಂಬ ನಾನಾರ್ಥ ರತ್ನಮಾಲಾನುಸಾರ ರೂಢಿಯಿಂದಲೇ ಭೇದಬೋಧಕ 'ದ್ವೈತ' ಶಬ್ದ ಘಟಕವಾದ ದ್ವಿಶಬ್ದ ಭೇದವದರ್ಥವಾಚಕವಾಗಿರುವುದು ಅನಾದಿ ವ್ಯವಹಾರ ಸಿದ್ಧವೇ ಆಗಿದೆ. ಅದರಿಂದಲೇ ದ್ವಿಶಬ್ದ ಭಾವಪ್ರಧಾನ, ದ್ವಿತ್ವ, ಅಂದರೆ ಭೇದ ಅರ್ಥ. 'ದ್ವಿ' ದ್ವಿತ್ವದಿಂದ ಭೇದದಿಂದ 'ಇತ' ಯುಕ್ತವಾದುದು 'ದ್ವಿತ' ಸ್ವಾರ್ಥೇ ಅಣ್ ಪ್ರತ್ಯಯ ಬಂದರೆ 'ದ್ವೈತ' ಭಿನ್ನ ಎಂದರ್ಥ.

## ೧೦. ಚಂದ್ರಭೇದಾರೋಪ ಯುಕ್ತವಲ್ಲ

'ಕಿಮಿದಂ ಪ್ರತೀಯಮಾನತ್ವಂ? ಪ್ರಮಾವಿಷಯತ್ವಮಪ್ರಮಾವಿಷಯತ್ವಂ ವಾ? ಆದ್ಯೇ ತವಾಸಿದ್ಧೇಃ ದ್ವಿತೀಯೇ ಮಮಾಸಿದ್ಧೇಃ' ಎಂದು ಚಂದ್ರಭೇದವನ್ನು ಸತ್ಯವೆಂದಿಟ್ಟುಕೊಂಡು ಅಸಿದ್ಧಿ ದೋಷವನ್ನು ಹೇಳುತ್ತಾರೆ. ಚಂದ್ರಭೇದವೇಕೆ ಸತ್ಯ? ಪೂರ್ವಪಕ್ಷಿ ಚಂದ್ರಭೇದಾ ರೋಪವನ್ನು ಸಮರ್ಥಿಸಿ ಚಂದ್ರಾಂತರಾರೋಪವನ್ನು ನಿರಾಕರಿಸಿದ್ದಾನೆ. ಅದಕ್ಕೆ ಉತ್ತರ ಹೇಳಬೇಕಾಗಿತ್ತು. 'ಯತ್ ಸ್ವರೂಪತ ಏವ ಕಲ್ಪಿತಂ ತನ್ಮಿಥ್ಯಾ । ಯಥಾಂಗುಲ್ಯವಷ್ಟಂಭನಿಮಿತ್ತೋಽ- ಪರಶ್ಚಂದ್ರಮಾಃ' ಎಂದು ವಿಷ್ಣುತತ್ವವಿನಿರ್ಣಯ ಟೀಕಾದಲ್ಲಿ ಬೌದ್ಧಸಮ್ಮತವಾದ ಚಂದ್ರಾಂತರಾರೋಪವನ್ನು ಹೇಳಿ ಆರೋಪಿತ ಚಂದ್ರಾಂತರ ಮತ್ತು ವಾಸ್ತವಚಂದ್ರರಿಗೆ ಭೇದ ಸತ್ಯವಾದ್ದರಿಂದ ದೃಷ್ಟಾಂತವಾದ ಚಂದ್ರಭೇದದಲ್ಲಿ ಸಾಧ್ಯವಾದ ಮಿಥ್ಯಾತ್ವವಿಲ್ಲ ಎಂದಿದ್ದಾರೆ. ಇಲ್ಲಿಯೂ ಚಂದ್ರಾಂತರಾರೋಪವನ್ನು ಸಾಧನೆ ಮಾಡಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಹೇಳಬೇಕಾಗಿತ್ತು. ಆದರೆ ಭೇದತ್ವ ಹೇತುವಿಗೆ ಅಸಿದ್ಧಿ ಹೇಳಬೇಕಾಗಿದೆ. ಅಸಿದ್ಧಿಯು ಭೇದಾರೋಪ ಪಕ್ಷದಲ್ಲಿಯೂ ಹೇಳಲು ಬರುತ್ತದೆ. ಭೇದತ್ವೇನ ಪ್ರಮಾವಿಷಯತ್ವ ಅವನ ರೀತಿಯಿಂದಲೇ ಭೇದದಲ್ಲಿ ಬರುವುದಿಲ್ಲ ಎಂಬ ಅಭಿಪ್ರಾಯದಿಂದ ಚಂದ್ರಾಂತರಾರೋಪ ಸಮರ್ಥನೆ ಮಾಡಲಿಲ್ಲ.

ವಸ್ತುತ ಪೂರ್ವಪಕ್ಷಿ ಹೇಳಿದಂತೆ ಚಂದ್ರಭೇದಾರೋಪಯುಕ್ತವಲ್ಲ. ಅಂಗುಲಿಚಲನದಿಂದ, ಒಂದು ಚಂದ್ರನಲ್ಲಿ ಕ್ರಿಯೆ, ಇನ್ನೊಂದು ಚಂದ್ರನಲ್ಲಿ ಕ್ರಿಯಾಭಾವ ಕಾಣಬೇಕಾದರೆ ಎರಡರಲ್ಲಿ ಭೇದ ಸತ್ಯ. 'ಇಲ್ಲಿ ಒಬ್ಬನೇ ಚಂದ್ರ, ಇನ್ನೊಬ್ಬನಿಲ್ಲ' ಎಂದು ಬಾಧಬುದ್ಧಿಯು ಭೇದವನ್ನು ನಿಷೇಧ ಮಾಡದೆ ಭಿನ್ನನಾದ ಚಂದ್ರನನ್ನೇ ನಿಷೇಧ ಮಾಡುತ್ತದೆ. ಎರಡು ವೃಕ್ಷಗಳಲ್ಲಿ ಒಂದು ಮಾತ್ರ ಮಾವು, ಇನ್ನೊಂದು ಹಲಸು ಎಂದು ಬಾಧಬುದ್ಧಿ ಮಾವು ಹಲಸುಗಳ ಸ್ವರೂಪ ನಿಷೇಧ ಮಾಡದೆ ಅವುಗಳ ಅಭೇದವನ್ನು ಮಾತ್ರ ನಿಷೇಧಮಾಡುವಂತೆ ಚಂದ್ರ ಚಂದ್ರಾಂತರಗಳಲ್ಲಿ ಭೇದ ನಿಷೇಧಕಾಣುವುದಿಲ್ಲ, 'ಅಭೇದವೇ ಹೊರತು ಭೇದವಿಲ್ಲ' ಎನ್ನುವುದಿಲ್ಲ. ಈ ಪ್ರದೇಶದಲ್ಲಿರುವ ಚಂದ್ರನೊಬ್ಬನೇ ಸತ್ಯ, ಸಮೀಪದಲ್ಲಿ ಕಾಣುವ ಇನ್ನೊಬ್ಬ ಚಂದ್ರ ಸತ್ಯನಲ್ಲ ಎಂದೇ ಕಾಣುತ್ತದೆ. ಚಂದ್ರಾಂತರ ನಿಷೇಧವೇ ಕಾಣುತ್ತದೆ.

ಯದ್ಯಪಿ ಚಂದ್ರಾಂತರಾರೋಪ ಪಕ್ಷದಲ್ಲಿ ಅದಕ್ಕೆ ಅಧಿಷ್ಠಾನ ಯಾವುದೆಂಬ ಪ್ರಶ್ನೆ ಬರುತ್ತದೆ.

ರಜತ ತಾದಾತ್ಮ್ಯಾರೋಪಕ್ಕೆ ಶುಕ್ತಿಯಂತೆ ಚಂದ್ರಾಂತರಾರೋಪ ಸ್ಥಳದಲ್ಲಿ ಸತ್ಯಚಂದ್ರನಿಲ್ಲ. ಮತ್ತು 'ಚಂದ್ರಾಂತರ' ಅಂದರೆ, ಭೇದವಿಶಿಷ್ಟಚಂದ್ರನ ತಾದಾತ್ಮ್ಯವನ್ನು ಭಿನ್ನನಾದ ಸತ್ಯಚಂದ್ರನಲ್ಲಿ ಆರೋಪಿಸುವುದೂ ಅಶಕ್ಯ. ಬೌದ್ಧನಂತೆ ಅದ್ವೈತಿ ನಿರಧಿಷ್ಠಾನಭ್ರಮವನ್ನು ಅಂಗೀಕರಿಸಿಲ್ಲ. ಅವನಿಗೆ ಅಧಿಷ್ಠಾನವನ್ನು ತೋರಿಸಬೇಕು ಹೇಗೆ? ಇದಕ್ಕೆ ಹೀಗೆ ಹೇಳಬೇಕು— ಅಧಿಷ್ಠಾನದಲ್ಲಿಯೇ ಆರೋಪ ಎಂದು ನಿಯಮವಿಲ್ಲ. ಕನ್ನಡಿಯಲ್ಲಿ ಪ್ರತಿಬಿಂಬಾ ರೋಪ ಕಂಡಿದೆ. ಕನ್ನಡಿ ಅಧಿಷ್ಠಾನವಲ್ಲ. ಅಧಿಷ್ಠಾನವಾದ ಬಿಂಬ ಎದುರಿಗೆ ದೂರದಲ್ಲಿರುತ್ತದೆ. ಆ ಬಿಂಬ ಹೇಗೆ ಅಧಿಷ್ಠಾನವೆಂದು ಅದ್ವೈತಿಯೇ ಹೇಳಬೇಕು. ವಸ್ತುತಃ ಆರೋಪಜನಕ ಕರಣಸನ್ನಿಕರ್ಷಾಶ್ರಯವು ಅಧಿಷ್ಠಾನ. ರಜತಾರೋಪಜನಕ ಚಕ್ಷುಃಸನ್ನಿಕರ್ಷಾಶ್ರಯ ಶುಕ್ತಿ. ಹಾಗೇ ಚಂದ್ರಾಂತರೋಪಜನಕ ಚಕ್ಷುಃ ಸನ್ನಿಕರ್ಷಕ್ಕೆ ಸತ್ಯಚಂದ್ರ ಆಶ್ರಯ. ಅವನೇ ಅಧಿಷ್ಠಾನ. ಅವನು ಆರೋಪಸ್ಥಳದಲ್ಲಿಲ್ಲದಿದ್ದರೂ ಅವನಲ್ಲಿಯೇ ಚಕ್ಷುಃ ಸನ್ನಿಕರ್ಷವು ಅಂಗುಲ್ಯವಷ್ಟಂಭರೂಪದೋಷ ಸಹಕಾರದಿಂದ ಚಂದ್ರಾಂತರಾರೋಪ ಮಾಡುತ್ತದೆ. ಅದರಿಂದಲೇ ರಜತದಲ್ಲಿ ಕಾಣುವ ಸತ್ಯತ್ವ ಹೇಗೆ ಶುಕ್ತಿಗತವೋ ಹಾಗೇ ಚಂದ್ರಾಂತರದಲ್ಲಿ ಕಾಣುವ ಸತ್ಯತ್ವವು ಸತ್ಯಚಂದ್ರಗತವೇ ಆಗಿದೆ. ರಜ್ಜು ಸರ್ಪ ಸ್ಥಳದಲ್ಲಿ ಸರ್ಪದಲ್ಲಿ ಕಾಣುವ ಭಯಜನಕತ್ವ ರಜ್ಜುವಿನಲ್ಲಿಲ್ಲದಿದ್ದರೂ ಸಮಸ್ಯೆ ಇಲ್ಲ. ಏಕೆಂದರೆ ಅಲ್ಲಿ ಭಯಜನಕತ್ವ ವಿಶಿಷ್ಟ ಸರ್ಪವೇ ರಜ್ಜುವಿನಲ್ಲಿ ಆರೋಪಿತ. ಪ್ರಕೃತದಲ್ಲಿ ಹಾಗೆ ಭೇದವಿಶಿಷ್ಟ ಚಂದ್ರ ಆರೋಪಿತನಲ್ಲ. ಭೇದ ವಾಸ್ತವ ಎಂಬುದು ಬಾಧ ಬುದ್ಧಿಯಿಂದ ನಿರ್ಣೀತವಾಗುತ್ತಿದೆ.

**೧೧. ಜಗತ್ತಿನಲ್ಲಿ ಪೃಥವೀತ್ವಾದಿ ಜಾತಿಸಾಂಕರ್ಯ**

' 'ಜಗತ್ತು ಸ್ವಾಂತರ್ಭೇದಹೀನವಾದ ಪದಾರ್ಥಾಂತರ ಎಂದರೆ ಅದರಲ್ಲಿ ಪೃಥಿವೀತ್ವಾದಿಗಳಿಗೆ ಸಾಂಕರ್ಯಪ್ರಸಂಗ' ಎಂದು ದೋಷ ಹೇಳಿದುಅ

ದು ಅಭ್ಯುಚ್ಚಯ ಯುಕ್ತಿ. ಕಲ್ಲು ಕಬ್ಬಿಣ ಮುಂತಾದವುಗಳಿಂದಾಗುವ ಕಟ್ಟಡದಲ್ಲಿ ಪೃಥಿವೀತ್ವಾದಿ ಜಾತಿಗಳ ಸಾಂಕರ್ಯವನ್ನು ಸಹಿಸಿಕೊಳ್ಳುವಂತೆ, ಜಗತ್ತಿನಲ್ಲಿಯೂ ಸಾಂಕರ್ಯವನ್ನು ಏಕೆ ಸಹಿಸಿಕೊಳ್ಳಬಾರದು? ಎಂದರೆ, ಪ್ರಮಾಣಸಮ್ಮತವಾದ ಕಟ್ಟಡಗಳಂಥ ಬೇರೆ ಪದಾರ್ಥದಲ್ಲಿ ಜಾತಿಸಾಂಕರ್ಯ ಸಹ್ಯವೆ. ಜಗತ್ತು ಹಾಗೆ ಬೇರೆ ಪದಾರ್ಥ ಎನ್ನುವುದು ಪ್ರಮಾಣ ಸಮ್ಮತವಲ್ಲ. ಅದರಿಂದ ಸಾಂಕರ್ಯ ಸಹ್ಯವಲ್ಲ ಎಂದು ಅಭಿಪ್ರಾಯ.

■

# ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರದಿಂದ ಇತ್ತೀಚಿನ ಪ್ರಕಟನಗಳು.

## ಸಂಸ್ಕೃತ ಗ್ರಂಥಗಳು

1. ರಾಘವೇಂದ್ರ ವಿಜಯ – ಮೂರು ವ್ಯಾಖ್ಯಾನಗಳ ಸಹಿತ
2. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳೀ – ಸಮಗ್ರ ಸಂಪುಟ
3. ವಿಷ್ಣುತತ್ವ ನಿರ್ಣಯ ಟೀಕಾ (ಶ್ರೀವಿಜಯೀಂದ್ರತೀರ್ಥ ವಿರಚಿತ)
4. ಶೃತ್ಯರ್ಥಸಾರ (ಶ್ರೀವಿಜಯೀಂದ್ರತೀರ್ಥ ವಿರಚಿತ)
5. ಶ್ರೀವೇಂಕಟೇಶ ಮಹಾತ್ಮೆ – ಎರಡು ವ್ಯಾಖ್ಯಾನಸಹಿತ (ಭವಿಷೋತ್ತರ ಪುರಾಣಾಂತರ್ಗತ)
6. ತರ್ಕಸಂಗ್ರಹ ಶಾಬ್ದಬೋಧ – ವಿದ್ವಾನ್ ರಾಜಾ ಎಸ್. ಗಿರಿ ಆಚಾರ್ಯರು

## ಕನ್ನಡ ಗ್ರಂಥಗಳು

1. ತತ್ತ್ವಪ್ರಕಾಶಿಕಾ ಭಾವದೀಪ – ಕನ್ನಡ ಅನುವಾದ ಸಹಿತ ಸಂಪುಟಗಳು
2. ತರ್ಕತಾಂಡವ ವಿಶ್ವರೂಪ – 8, 9 ಸಂಪುಟಗಳು
3. ಸ್ಮೃತಿಮುಕ್ತಾವಳಿ–
   ಕಾಲನಿರ್ಣಯಪ್ರಕರಣ, ಷೋಡಶಪ್ರಕರಣ, ಶ್ರಾದ್ಧಪ್ರಕರಣ.

## ತೆಲುಗು ಗ್ರಂಥಗಳು

1. ರಾಘವೇಂದ್ರವಿಜಯ – ತೆಲುಗು ಅನುವಾದ ಸಹಿತ
2. ರಾಮಚಾರಿತ್ರ್ಯಮಂಜರೀ – ತೆಲುಗು ಅನುವಾದ ಸಹಿತ